॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ, ೫೨

# ಶ್ರೀ ಗಣೇಶ ಪುರಾಣಂ

## ಸಂಪುಟ ೨

ಅನುವಾದಕ :

ಆಸ್ಥಾನ ವಿದ್ವಾನ್, ಹಾನಗಲ್

**ಯಜ್ಞೇಶ್ವರ ಶಾಸ್ತ್ರೀ**

ಮೈಸೂರು.




ಶ್ರೀ ಮಲ್ಲಿಕಾರ್ಜುನ ಪ್ರೆಸ್, 561, ರಾಮಚಂದ್ರ ಅಗ್ರಹಾರ

ಮೈಸೂರು.

1957

॥ ಶ್ರೀ ಮಹಾಗಣಪತಿ ಪರಬ್ರಹ್ಮಣೇ ನಮಃ ॥



ಯುಗಪತ್ಸ್ವಗಂಡಚುಂಬನಲೋಲೌ ಪಿತರೌ ನಿರೀಕ್ಷ್ಯ ಹೇರಂಬಃ ।
ತನ್ಮುಖಮೇಲನಕುತುಕೀ ಸ್ವಾನನಮುಪನೀಯ ಪರಿಹಸನ್ ಪಾಯಾತ್ ॥

ಶ್ರೀ ಮಂಗಲಮೂರ್ತಯೇ ನಮಃ

# ಗೌತಮಾದಿ ಮುನಿವೃಂದ ವಿರಚಿತ
# ಗಣಪತಿ ಸ್ತೋತ್ರಮ್

ಕಮಲಾಕಾಂತಹೃದಯ, ಹೃದಯಾನಂದವರ್ಧನ ।
ಕಮಲಾಕಾಂತನಮಿತ, ಕಮಲಾಸುರನಾಶನ ॥೧॥

ಕಮಲಾಸೇವಿತಪದ, ಜಯ, ತ್ವಂ ಕಮಲಾಪ್ರದ ! ।
ಕಮಲಾಸನವಂದ್ಯೇಶ, ಕಮಲಾಕರಶೀತಲ ॥೨॥

ಕಮಲಾಂಕಸು-ಪಾದಾಬ್ಜ, ಕಮಲಾಂಕಿತಸತ್ಕರ ।
ಕಮಲಾಬಂಧುತಿಲಕ, ಭಕ್ತಾನಾಂ ಕಮಲಾಪ್ರದ ॥೩॥

ಕಮಲಾಸೂನುರಿಪುಜ, ಕಮಲಾಸೂನುಸುಂದರ ।
ಕಮಲಾಪಿತೃರತ್ನಾನಾಂ ಮಾಲಯಾ ಪರಿಶೋಭಿತ ॥೪॥

ಕಮಲಾಸುರಬಾಣಾನಾಂ ಕಮಲೇನ ನಿವಾರಕ ।
ಕಮಲಾಕ್ರಾಂತಕಮಲಕೋಶಜಿತ್ಕರಪಂಕಜ ॥೫॥

ಕಮಲಾಪತಿಹಸ್ತಸ್ಥಪದ್ಮಕೋಶನಿಭೇಕ್ಷಣ ।
ಸರ್ವಹೃತ್ಕಮಲಾನಂದ ಜಯ ಸರ್ವಾಘನಾಶನ ॥೬॥

ಕಮಲಾಂಕುಶಹಸ್ತಸ್ಥ ಜಯ ವಿಘ್ನಹರಾವ್ಯಯ ॥೭॥

ದ್ವಾಪರಯುಗಕ್ಕೆ ಸಂಬಂಧಿಸಿದ ಅವತಾರದ ರೂಪ, ಸನ್ನಿವೇಶ, ಸಿಂದುರ ದೈತ್ಯನ ಉಪಟಳ ಇವು ಸ್ವಲ್ಪ ಮಟ್ಟಿಗೆ ಸಂಪುಟದ ಕೊನೆಯ ಒಂದೆರಡು ಅಧ್ಯಾಯಗಳಲ್ಲಿ ರೂಪಗೊಂಡಿವೆ. ಈ ಸಂಪುಟದಲ್ಲಿ ಬಂದಿರುವ ಅತ್ಯುತ್ತಮ ಸ್ತೋತ್ರಗಳ ಪೈಕಿ ಒಂದನ್ನು ಓದುಗರಿಗೆ ನಿತ್ಯ ಪಾರಾಯಣೋಪಯೋಗಿಯಾಗಿರಲೆಂಬ ಉದ್ದೇಶ್ಯದಿಂದ ಸಂಪುಟದ ಆದಿಯಲ್ಲೇ ಪ್ರತ್ಯೇಕ ಪುಟದಲ್ಲಿ ಮುದ್ರಿಸಿದೆ.

ವಿಶಾಲ ಮೈಸೂರು ದೇಶಕ್ಕೆ ಅಧಿಪತಿಗಳಾದ ಮಹಾಪ್ರಭುಗಳಂತಹ ಕಲ್ಪವೃಕ್ಷವನ್ನು ಆಶ್ರಯವನ್ನಾಗಿ ಮಹಾಗಣಪತಿ ಅನುಗ್ರಹಿಸಿದ್ದರಿಂದ ಇಂತಹ ಅಪೂರ್ವ ಗ್ರಂಥವನ್ನು ಅನುವದಿಸುವ ಸು-ಸನ್ನಿವೇಶ ಸೌಭಾಗ್ಯಗಳು ನನಗೆ ದೊರೆತುದರಿಂದ ನನ್ನನ್ನು ಕೃತಾರ್ಥನೆಂದು ಭಾವಿಸಿಕೊಳ್ಳಲು ಹೆಮ್ಮೆ ಪಡುತ್ತೇನೆ. ಈ ಸಂಪುಟವು ಶ್ರೀ ಗಣೇಶ ಚತುರ್ಥಿಯ ವೇಳೆಗೆ ಸಿದ್ಧವಾದುದೂ ದೈವಸಂಕಲ್ಪವೇ ಸರಿ.

ಸಕಲ ಪರಿವಾರ ಪರಿವೃತರಾದ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜ ಒಡೆಯರ್ ಬಹದೂರ್ ಜಿ.ಸಿ.ಬಿ, ಜಿ.ಸಿ.ಎಸ್.ಐ. ಮಹಾಪ್ರಭುಗಳು ದೀರ್ಘಾಯುಷ್ಮಂತರಾಗಿ ಸಮಸ್ತ ವಿಭವಗಳೊಡನೆ ಮೆರೆಯುವಂತೆ ಅನುಗ್ರಹಿಸಿ ಕಾಪಾಡಬೇಕೆಂದು ಮಹಾಗಣಪತಿಯನ್ನೂ ಶ್ರೀ ಸದ್ಗುರುಗಳನ್ನೂ ಹೃತ್ಪೂರ್ವಕವಾಗಿ ಪ್ರಾರ್ಥಿಸಿ, ಈ ಸಂಪುಟವನ್ನು ಮಹಾಪ್ರಭುಗಳಿಗೆ ರಾಜಭಕ್ತಿಯೊಡನೆ ಸಮರ್ಪಿಸುತ್ತೇನೆ.

ಮೈಸೂರು
೧೮೮೦ ನೆಯ ಹೇಮಲಂಬ
ಸಂವತ್ಸರ ಭಾದ್ರಪದ ಶುಕ್ಲ ೪
ಸೌಮ್ಯವಾಸರ ತಾ॥ ೨೮-೮-೧೯೫೭.

**ಹಾನಗಲ್ಲ ಯಜ್ಞೇಶ್ವರ ಶಾಸ್ತ್ರೀ**

॥ ಶ್ರೀ ಗಣೇಶಾಯ ನಮಃ ॥

# ವಿಷಯಾನುಕ್ರಮಣಿಕೆ

## (೭ ನೆಯ ಸಂಪುಟ)

### ೯೯ ನೆಯ ಅಧ್ಯಾಯ :—

ಮಯೂರೇಶ್ವರನು ತನ್ನ ಒಂಭತ್ತನೆಯ ವರ್ಷದಲ್ಲಿ ನಡೆಸಿದ ಅದ್ಭುತ ಸಾಹಸ ಕಾರ್ಯಗಳನ್ನು ವಿವರಿಸಲು ಬ್ರಹ್ಮದೇವನು ಆರಂಭಿಸಿದುದು. ಗಣೇಶ್ವರನು ಒಂದು ದಿನ ತನ್ನ ಆಯುಧಗಳನ್ನೆಲ್ಲ ಧರಿಸಿಕೊಂಡು ಮಯೂರಾರೂಢನಾಗಿ ಆಟವಾಡುವುದಕ್ಕೆ ಹೊರಟುದು. ದೇವನ ಅಲಂಕಾರದ ವರ್ಣನೆ. ಅವನ ಸ್ನೇಹಿತರಲ್ಲಿ ಕೆಲವರು ಛತ್ರ – ಚಾಮರಾದಿಗಳನ್ನು ಹಿಡಿದು, ಮತ್ತೆ ಕೆಲವರು ಜಯಶಬ್ದಗಳಿಂದ ಹೊಗಳುತ್ತ ಮೆರೆವಣಿಗೆ ಹೊರಟು ಕೊನೆಗೆ ಒಂದು ಸರಸ್ಸಿಗೆ ಬಂದುದು. ಸರಸ್ಸಿನ ವರ್ಣನೆ. ಬಾಲಕರು ಸರಸ್ಸಿನಲ್ಲಿ ಸ್ನಾನಮಾಡಿದ ಹುಡುಗಾಟಿಗೆಯ ವರ್ಣನೆ. ಅದರ ತೀರ ಪ್ರದೇಶದಲ್ಲಿದ್ದ ಮಾವಿನ ಮರವನ್ನು ಮಯೂರೇಶನೇರಿ ಪರಿಪಕ್ವ ಫಲಗಳನ್ನು ಕಿತ್ತು ಹುಡುಗರಿಗೆ ಹಂಚಿದುದು. ಹುಡುಗರು ಆಟವಾಡುತ್ತಲಿದ್ದ ಸಮಯದಲ್ಲಿ ಆ ಸ್ಥಳಕ್ಕೆ ದೈತ್ಯನೊಬ್ಬನು ಕುದುರೆಯಂತೆ ರೂಪವನ್ನು ಮಾರ್ಪಡಿಸಿಕೊಂಡು ಬಂದುದು. ಕುದುರೆಯ ಶಕ್ತಿ, ಆಕಾರ ಇತ್ಯಾದಿಗಳ ವರ್ಣನೆ. ಕುದುರೆಯು ಮಾವಿನ ಕೊಂಬೆಗಳನ್ನು ಹಿಡಿವೆಳೆದು ಮೇಲಿದ್ದ ಹುಡುಗರೆಲ್ಲ ಬೀಳುವಂತೆ ಮಾಡಲು, ಕೆಲವರು ಓಡಿ ಹೋದುದು. ಗಣೇಶನು ನೀರಿನೊಳಗೆ ಬಿದ್ದು ಮೇಲಕ್ಕೇಳದುದನ್ನು ಕಂಡು ಬಾಲಕರು ರೋದಿಸಿದ ವರ್ಣನೆ. ದೈತ್ಯನಿಗೂ ಗಣೇಶನಿಗೂ ಜಲ ಮಧ್ಯೇ ನಡೆದ ಹೋರಾಟದ

ವರ್ಣನೆ. ಕುಮರೆಯ ರೂಪೀ ಅಸುರನು ಮೃತನಾಗಲು ಮಯೂರೇಶನು ಅವನನ್ನು ನೀರಿನಿಂದ ಹೊರಕ್ಕೆಸೆದುದು ಬಾಲಕರು ಗಣಪತಿಯನ್ನು ಸ್ತುತಿಸಿದುದು. ಮತ್ತೆ ಬಾಲಕರು ಜಲಕ್ರೀಡೆಯನ್ನಾಡಿದ ವಿವರಣೆ. ದೇವನು ಅನಂತಭುಜಗಳುಳ್ಳವನಾಗಿ ಮಾರ್ಪಟ್ಟು ಬಾಲಕರ ಮೇಲೆ ನೀರನ್ನೆರಚಿ ಮುಗ್ಧಗೊಳಿಸಿದುದು. ದೇವನು ತೋರಿದ ವಿಶ್ವರೂಪದ ವರ್ಣನೆ. ಆ ವೇಳೆಗೆ ಅಲ್ಲಿಗೆ ನಾಗಕನ್ಯೆಯರು ಬಂದುದು. ಅವರ ರೂಪಾದಿಗಳ ವರ್ಣನೆ. ದೇವ-ನಾಗಕನ್ಯೆಯರ ಸಂಭಾಷಣೆ. ನಾಗಕನ್ಯೆಯರು ಅವನನ್ನು ಪಾತಾಳ ಲೋಕಕ್ಕೆ ಕರೆದೊಯ್ದುದು. ಬಾಲಕರ ಶೋಕ- ಅವರು ವಿಧಿ ಇಲ್ಲದೆ ಊರಿಗೆ ಹಿಂದಿರುವಾಗ ಭಗಾಸುರನನ್ನು ನೋಡಿದುದು. ಅವನ ಅದ್ಭುತಾಕಾರದ ವರ್ಣನೆ. ಗುಹೆಯಂತಿದ್ದ ಅವನ ಬಾಯಿಯಲ್ಲಿ ಮಾರ್ಗವೆಂಬ ಭ್ರಮೆಯಿಂದ ಬಾಲಕರು ಹೋದುದು. ತಾವು ವಿಪದ್ಗ್ರಸ್ತರಾದೆವೆಂದರಿತು ದುಃಖಿಸಿದುದು. ಆಗ ಮಯೂರರಾಜನು ಅಲ್ಲಿಗೆ ಬಂದು ಅವರನ್ನೆಲ್ಲ ಈಚೆಗೆ ಕರೆದು ತಂದುದು. ಕತ್ತಲಾದರೂ ಮಕ್ಕಳು ಮನೆಗೆ ಬಾರದ್ದರಿಂದ ಅವರ ಮಾತಾಪಿತೃಗಳು ದುಃಖಿಸಿದುದು. ಅವರ : ಪರದಾಟ. ಆಗ ದೇವನು ಆಯಾ ಬಾಲಕರಂತೆ ರೂಪಗೊಂಡು ಅವರನ್ನು ಸಮಾಧಾನಪಡಿಸಿದುದು. ಬಹಳ ಹೊತ್ತು ಮನೆಗೆ ಬಾರದಿದ್ದುದಕ್ಕೆ ಪಾರ್ವತಿಯು ಗುಣೇಶನನ್ನು ಸಲಿಗೆಯಿಂದ ಆಕ್ಷೇಪಿಸಿ, ಅವನಿಗೆ ಭೋಜನವನ್ನಿಟ್ಟುದು. ೧–೨೫

**೧೦೦ ನೆಯ ಅಧ್ಯಾಯ :—**

ನಾಗಕನ್ಯೆಯರು ವಿನಾಯಕನನ್ನು ಕರೆದುಕೊಂಡು ತಮ್ಮ ಲೋಕಕ್ಕೆ ತೆರಳಿ ಅವನಿಗೆ ಆದರೋಪಚಾರ ಪೂಜಾದಿಗಳನ್ನು ಸಲ್ಲಿಸಿ ವರ್ಣಿಸಿದುದು. ಗಣಪತಿ-ನಾಗಕನ್ಯೆಯರ ಸಂಭಾಷಣೆ. ಕನ್ಯೆಯರು ಗಣಪತಿ

ಯೊಡನೆ ತಮ್ಮ ತಂದೆ ವಾಸುಕಿಯು ಸಮಿಾಪಕ್ಕೆ ಬಂದುದು- ನಾಗಲೋಕದ ವೈಭವ ಹಾಗೂ ವಾಸುಕಿಯ ಸೊಕ್ಕಿನ ವರ್ಣನೆ ; ಮನೆಗೆ ಬಂದ ಮಯೂರೇಶ್ವರನನ್ನು ವಾಸುಕಿಯು ಗರ್ವದಿಂದ ಗೌರವಿಸದಿರಲು, ದೇವನು ಅವನ ಹೆಡೆಯ ಮೇಲೆ ಹತ್ತಿ ಅವನ ಶಿರೋರತ್ನವನ್ನು ಕೈಗೆ ತೆಗೆದುಕೊಂಡುದು. ಅದರಿಂದ ಕುಪಿತನಾದ ಸರ್ಪರಾಜನು ತನ್ನ ಶಿರವನ್ನು ಕಂಪಿಸಿ ಪೃಥಿವೀ, ಪರ್ವತಗಳು, ಸಮುದ್ರಗಳು, ಸ್ವರ್ಗಲೋಕಗಳು, ರಸಾತಲ ಎಲ್ಲವನ್ನೂ ನಡುಗಿಸಿ, ಗಣಪತಿಯ ಮೇಲೆ ಆಕ್ರೋಶವನ್ನು ತೋರಿಸಿದುದು. ಆಗ ದೇವನು ಅದನನ್ನು ಸ್ವಲೀಲೆಯಿಂದಲೇ ಮರ್ದಿಸಿ ತನ್ನ ಕಂಠದಲ್ಲಿ ಮಾಲೆಯಂತೆ ಧರಿಸಿದುದು. ಅಂದಿನಿಂದ ದೇವನಿಗೆ " ಸರ್ಪಭೂಷಣ " ಎಂದು ಹೆಸರು ಬಂದುದು. ವಾಸುಕಿಯನ್ನು ಸೋಲಿಸಿದ ಸಂಗತಿ ಆದಿಶೇಷನಿಗೆ ತಿಳಿಯಲು, ಅವನು ಕುಪಿತನಾಗಿ ತನ್ನ ವಿಷಜ್ವಾಲೆಯಿಂದ ಲೋಕಗಳನ್ನು ಸುಡಲಾರಂಭಿಸಿ ತನ್ನ ಪರಿವಾರದೊಂದಿಗೆ ದೇವನನ್ನಾಕ್ರಮಿಸಲು, ಗಣಪತಿಯು ತನ್ನ ವಾಹನವಾದ ಮಯೂರನಿಗೆ ಅನುಗ್ರಹಿಸಿ ಅವನನ್ನು ಸರ್ಪಗಳೊಂದಿಗೆ ಹೋರಾಟಕ್ಕೆ ಕಳಿಸಿದುದು. ಮಯೂರದ ಹಾವಳಿಯ ವರ್ಣನೆ. ಅದನ್ನು ನೋಡಿ ಶೇಷನು ವಿಷವಾಯುವಿನಿಂದ ಶಿಖಂಡಿಯನ್ನು ಮೂರ್ಛೆಗೊಳಿಸಿ, ತಾನು ಮಯೂರೇಶನ ಮೇಲೆ ಯುದ್ಧಕ್ಕೆ ಹೋದುದು. ದೇವನು ವಿರಾಡ್ರೂಪವನ್ನು ಧರಿಸಿ ಶೇಷನ ಹೆಡೆಯ ಮೇಲೇರಿ ಕುಣಿದಾಡಿದುದು. ದೇವನ ಭಾರವನ್ನು ತಡೆಯಲಾರದೆ, ಶೇಷನು ನಿರ್ವಿಣ್ಣನಾಗಲು, ಒಡನೆಯೇ ಅವನನ್ನು ಹಿಡಿದು ದೇವನು ತನ್ನ ಸೊಂಟಕ್ಕೆ ಸುತ್ತಿಕೊಂಡುದನ್ನು ಕಂಡು ಇತರ ನಾಗಗಳು ಯುದ್ಧಕ್ಕೆ ಬಂದುದು. ಆಗ ಗಣಪತಿಯು ಅವನ್ನೆಲ್ಲ ಸೋಲಿಸಿ, ತನ್ನ ಪ್ರತ್ಯವಯವಗಳಲ್ಲೂ ಇರಿಸಿಕೊಂಡು ಕುಣಿದುದು. ಸೋತು ಹೋದ ಶೇಷನು ದೇವನ ಮಹಿಮೆಯನ್ನರಿತು.

ಅವನನ್ನು ವರ್ಣಿಸುತ್ತ ಕ್ಷಮೆಯನ್ನು ಯಾಚಿಸಿದುದು. ಆಗ ಗಣಪತಿಯು ಶೇಷನ ಬಂಧನದಲ್ಲಿ ಕೊಳೆಯುತ್ತಲಿದ್ದ ಸಂಪಾತಿ, ಜಟಾಯು, ಶ್ಯೇನ ಇವರನ್ನೆಲ್ಲ ಬಿಡುಗಡೆಮಾಡಿಸಿದುದು, ಪಕ್ಷಿಗಳು ದೇವನನ್ನು ವರ್ಣಿಸಿದುದು. ಅನಂತರ ಶಿಖಂಡಿಯನ್ನೇರಿ ದೇವನು ನಾಗಕನ್ಯೆಯರೊಡನೆ ಭೂಮಿಗೆ ಬಂದುದು ದಾರಿಯಲ್ಲಿ ಕಂಡ ಭಗಾಸುರನನ್ನು ತನ್ನ ಪರಶುವಿನಿಂದ ಕೊಂದುದು. ದೈವೀ ಮಾಯಾವಿಮೋಹಿತರಾದ ಬಾಲಕರು ದೇವನನ್ನು ಕಾಣದೆ, ರುದಿಸಿದುದು. ದೇವನ ಕೃಪೆಯಿಂದ ಭಗಾಸುರನು ಮೃತನಾಗಲು ತಾವು ಪಾರಾದೆವೆಂಬುದನ್ನು ತಿಳಿಯಲು ಬಾಲಕರು ದೇವನನ್ನಾಲಿಂಗಿಸಿ ವರ್ಣಿಸಿದುದು. ಎಲ್ಲ ಮಿತ್ರರೊಡನೆ ಮಯೂರೇಶನು ಮನೆಗೆ ಹಿಂದಿರುಗುವಾಗ ಉಂಟಾದ ಶಬ್ದವನ್ನು ಕೇಳಿ ಮುನಿಗಳು "ಇದೇನೆಂದು" ತಿಳಿಯಲು ಹೊರಕ್ಕೆ ಬಂದುದು. ತಮ್ಮ ಮಕ್ಕಳನ್ನೇ ಹೋಲುವ ಮತ್ತೊಂದು ಮಕ್ಕಳ ಗುಂಪು ಬರುತ್ತಿರುವುದನ್ನು ಕಂಡು ಚಕಿತರಾದುದು. ನಿಜವಾದ ಬಾಲಕರು ಮನೆಗೆ ಬಂದ ಕೂಡಲೆ, ಬಾಲಕರ ರೂಪೀ ದೇವನ ವಿಶ್ವರೂಪ ಅಂತರ್ಹಿತವಾದುದು. ೨೬–೪೪

## ೧೦೧ ನೆಯ ಅಧ್ಯಾಯ :—

ಗಣಪತಿಗೆ ಹತ್ತನೆಯ ವರ್ಷ ನಡೆಯುತ್ತಿರುವಾಗ ಒಂದು ದಿನ ಪರಶಿವನು ಗಿರಿಜಾದಿ ಪರಿವಾರದವರೊಂದಿಗೆ ಸುಖವಾಗಿ ಕುಳಿತಿರುವಾಗ ಗೌತಮಾದಿ ಮುನಿಗಳು ಅಲ್ಲಿಗೆ ಬಂದು ವಂದಿಸಿ "ನೀನು ನಿನ್ನ ಮಗನೊಂದಿಗೆ ಬಂದು ಇಲ್ಲಿ ವಾಸಮಾಡಲಾರಂಭಿಸಿದಂದಿನಿಂದಲೂ ದೈತ್ಯರು ಇಲ್ಲಿಗೆ ಪದೇ ಪದೇ ಬರಲಾರಂಭಿಸಿದ್ದಾರೆ. ಇದರಿಂದ ನಮ್ಮ ತಪಶ್ಚರಣೆಗೆ ತುಂಬ ತೊಂದರೆಯಾಗುತ್ತಲಿದೆ. ಆದುದರಿಂದ ನೀನು ಮತ್ತೆ ಎಲ್ಲಿಗಾದರೂ ಹೋಗಿ ನೆಲೆಸು. ಇಲ್ಲವೇ ನಾವೇ ಎಲ್ಲಿಗಾದರೂ ಹೋಗಿ ಬಿಡುತ್ತೇವೆ

ಅನುಜ್ಞೆಯನ್ನು ಕೊಡು' ಎಂದು ಪ್ರಶ್ನಿಸಿದರು. ಮಯೂರೇಶನು ದೈತ್ಯರ ಪೀಡೆಯನ್ನು ಪರಿಹರಿಸಿ ದುದನ್ನು ಎತ್ತಿ ಹೇಳಿ 'ಆದರೂ ನಿಮಗೆ ತೊಂದರೆ ಯಾದೀತು. ನೀವು ಇಲ್ಲಿಯೇ ಸುಖದಿಂದ ಇರಿ. ನಾನೇ ಎಲ್ಲಿಗಾದರೂ ಹೋಗುವೆನು' ಎಂದು ಶಿವನು ನುಡಿದುದನ್ನುಕೇಳಿ ಮುನಿಗಳು ಈಶ್ವರನನ್ನೂ, ಗಣ ಪತಿಯನ್ನೂ ಜಯಕಾರಗಳಿಂದ ಗೌರವಿಸಿ ತಮ್ಮತಮ್ಮ ಆಶ್ರಮಗಳಿಗೆ ತೆರಳಿದುದು. ದೇವನು ದೇವಿಯೊಡನೆ ನಂದಿಯನ್ನೇರಿ ಗಣಗಳೊಂದಿಗೆ ಹೊರಟುದು. ಗಣ ಪತಿಯೂ ಬರ್ಹಿಯನ್ನೇರಿ ಮುಂದೆ ಹೊರಟುದು. ಪ್ರಯಾಣವು ಮೆರವಣಿಗೆಯ ರೂಪವನ್ನು ತಾಳಿ ವರ್ಣನೆ. ಮುನಿಗಳೂ ತತ್ಪತ್ನಿಯರೂ ಅವರನ್ನು ಹಿಂಬಾಲಿಸಿದುದು. ಸ್ವಲ್ಪದೂರ ಹೋದ ಬಳಿಕ ಶಿವನು ಆಗಂತುಕರನ್ನೆಲ್ಲ ಅವರವರ ಸ್ಥಳಕ್ಕೆ ಹಿಂದಿರುಗಿಸಿ ತಾನು ದಕ್ಷಿಣ ದಿಗಭಿಮುಖನಾಗಿ ಹೊರಟಾಗ, ಕಮ ಲಾಸುರನು ಪರಿವಾರದೊಂದಿಗೆ ಇವರಿಗೆದುರಾದುದು. ಈ ಅಂಶ ಪ್ರಮಥರಿಗೆ ಮೊದಲು ಗೊತ್ತಾಗಲು ಅವರು ಶಿವನಿಗೆ ಸಂಗತಿಯನ್ನು ತಿಳಿಸಿದುದು. ಮುಂದೆ ಹೊರ ಟಿದ್ದ ಮುನಿಗಳು ಈ ಸುದ್ದಿಯನ್ನು ಕೇಳಿ ಎಡವಿಬಿದ್ದು 'ನಮ್ಮನ್ನು ಹೇಗಾದರೂ ಮಾಡಿ ರಕ್ಷಿಸು' ಎಂದು ಗಣಪತಿಯನ್ನು ಬೇಡಿದುದು. ಜನಕನು ಶಿವನ ಅನು ಮತಿಯನ್ನು ಪಡೆದು ತಾನೊಬ್ಬನೇ ಯುದ್ಧಕ್ಕೆ ಹೊರ ಟಾಗ, ಶಿವನು ತನ್ನ ತ್ರಿಶೂಲವನ್ನು ಮಗನಿಗೆ ಕೊಟ್ಟು, ಗಣಗಳೂ ನೆರವಿಗೆ ಹೋಗುವಂತೆ ಹೇಳಿ, ಯುದ್ಧವನ್ನು ನೋಡಲು ತಾನೂ ವೃಷಾರೂಢನಾಗಿ ಶಿವೆಯೊಡನೆ ಮಗನನ್ನು ಹಿಂಬಾಲಿಸಿದುದು. ಗಣೇಶನು ತನ್ನ ಯೋಗಶಕ್ತಿಯಿಂದ ಅಪರಿಮಿತ ಸೇನೆಯನ್ನು ನಿರ್ಮಿಸಿ ಕೊಂಡು ಯುದ್ಧವನ್ನಾರಂಭಿಸಿದುದು. ಯುದ್ಧದ ವರ್ಣನೆ. ಕಮಲಾಸುರನ ಆವೇಶಕ್ಕೆ ಪ್ರಮಥರೆಲ್ಲರೂ ಬಲಿಯಾಗಲು, ಗಣಪತಿಯು ಸ್ವತಃ ಯುದ್ಧಕ್ಕೆ ಮುನ್ನುಗ್ಗಿದುದು.

ರೇಶ್ವರದು ಮತ್ತು ಬಾಲಕರೊಂದಿಗೆ ಆಟದಲ್ಲಿ ವ್ಯಗ್ರ
ನಾದುದು. ೭೫–೮

## ೧೦೪ ನೆಯ ಅಧ್ಯಾಯ

ನಾನೊಂದು ನಲ, ಮಯೂರೇಶ್ವರನ ಮಹಿಮೆಯನ್ನು ತಿಳಿಯುವುದಕ್ಕಾಗಿ ಗುಪ್ತವೇಷದಿಂದ ಅಲ್ಲಿಗೆ ತೆರಳಿದೆನೆಂದು ಬ್ರಹ್ಮದೇವನು ಪೂರ್ವ ಸಂಗತಿಯನ್ನು ಹೇಳಲುಪಕ್ರಮಿಸಿದುದು. ಬ್ರಹ್ಮಕೃತ ಮಯೂರೇಶ ಸ್ತೋತ್ರ. ತನ್ನ ಕಮಂಡಲೂದಕದಿಂದ ದೇವನನ್ನು ಅಭಿಷೇಚಿಸಿ, ವನಮಾಲೆಯನ್ನು ಅವನ ಕಂಠಕ್ಕೆ ಹಾಕಿ 'ವನಮಾಲೀ' ಎಂಬ ಹೆಸರನ್ನಿಟ್ಟುದು. ಪ್ರದಕ್ಷಿಣೆ ಬರುವಾಗ ಬ್ರಹ್ಮನ ಕಾಲಿಗೆ ತಗುಲಿ ಕಮಂಡಲು ಜಲವೆಲ್ಲ ಉರುಳಿ ಹೋದುದು. ದೇವನು ಆ ಜಲಕ್ಕೆ ನದಿಯಾಗುವಂತೆ ಪ್ರೇರಿಸಿ 'ಕಮಂಡಲು ಭವಾ' ಎಂದು ಹೆಸರನ್ನಿಟ್ಟು ಅದಕ್ಕೂ, ಬ್ರಹ್ಮಕೃತ ಸ್ತೋತ್ರಕ್ಕೂ ಅನೇಕ ಮಹಿಮೆಗಳುಂಟಾಗುವಂತೆ ಅನುಗ್ರಹಿಸಿದುದು. ಮುನಿಗಳೂ, ಅವರ ಪತ್ನಿಯರೂ ಬ್ರಹ್ಮನೊಡನೆ ಆ ತೀರ್ಥದಲ್ಲಿ ಮಿಂದುದು. ಬ್ರಹ್ಮನು ದೈವ ಮಾಯಾಮೋಹಿತನಾಗಿ ತನ್ನ ಸೃಷ್ಟಿಯನ್ನು ಉಪಸಂಹರಿಸಿ ಗುಪ್ತವಾಗಿ ಕುಳಿತುದು. ಈ ಮರ್ಮವನ್ನರಿತ ಗಜಾನನನು ತನ್ನ ಯೋಗಮಾಯಾ ಶಕ್ತಿಯಿಂದ ಮತ್ತೊಂದು ಸೃಷ್ಟಿಯನ್ನು ನಿರ್ಮಿಸಿದುದು. ದೈವಕೃತ ಸೃಷ್ಟಿ ವೈಖರಿಯ ವರ್ಣನೆ. ಇದನ್ನು ಕಂಡು ನಾಚಿದ ಬ್ರಹ್ಮದೇವನು ದೇವನಲ್ಲಿ ಕ್ಷಮೆಯನ್ನು ಬೇಡಿ ಸ್ತುತಿಸಿದುದು. ದೇವನು ತನ್ನ ಸೃಷ್ಟಿ ಚಮತ್ಕಾರವನ್ನು ತೋರಿಸುವುದಕ್ಕಾಗಿ ಬ್ರಹ್ಮನನ್ನು ನಾಸಾದ್ವಾರಾ ಉದರದೊಳಗೆ ಸೆಳೆದುಕೊಂಡುದು. ಅಲ್ಲಡಗಿದ್ದ ಅನಂತ ಕೋಟಿ ಬ್ರಹ್ಮಾಂಡಗಳನ್ನು ಕಂಡು ಸೋಜಿಗಗೊಂಡ ಪರಮೇಷ್ಠಿಯು ದೇವನನ್ನು ಭಕ್ತಿಯಿಂದ ಸ್ತುತಿಸಲು, ಮತ್ತೆ ಮೊದಲಿದ್ದಂತೆಯೇ ಎಲ್ಲವೂ ರೂಪಗೊಂಡುದು. ದೇವನು ತಾನು ವೈಷಮ್ಯ

ನೈರ್ಘೃಣ್ಯರಹಿತನೆಂಬುದನ್ನು ಮನದಟ್ಟುವಂತೆ ಬ್ರಹ್ಮನಿಗೆ ತಿಳಿಹೇಳಿದ ಬಳಿಕ ಅವನಿಗೆ ಎಲ್ಲವೂ ಅರಿವಾಗಲು, ದೇವನ ಅನುಜ್ಞೆಯನ್ನು ಪಡೆದು ಸ್ವಸ್ಥಾನಕ್ಕೆ ಹರ್ಷದಿಂದ ತೆರಳಿದುದು. ೪೯—೧೧೯

೧೦೫ ನೆಯ ಅಧ್ಯಾಯ :—

ಭಾದ್ರಪದ ಶುದ್ಧ ಚತುರ್ಥಿಯ ದಿವಸ ಗಣೇಶನ ಮೂರ್ತಿಯನ್ನು ಮಾಡಿ ಪೂಜಿಸಲು ಮುನಿಬಾಲಕರು ಮೃದುವಾದ ಮಣ್ಣನ್ನು ತಂದು ಮೂರ್ತಿಗಳನ್ನು ಮಾಡಿ ಪೂಜಿಸಿದ ವಿಧಾನದ ವರ್ಣನೆ. ಗಣಪತಿಯ ಜನ್ಮದಿನೋತ್ಸವವನ್ನು ಗೌರಿಯು ಆಚರಿಸುತ್ತಿರುವಷ್ಟರಲ್ಲಿ ವಿಶ್ವದೇವ ಎಂಬ ದೈತ್ಯನೊಬ್ಬನು ಮಹಾವಿಷ್ಣುವಿನ ರೂಪದಿಂದ ಅಲ್ಲಿಗೆ ಬಂದುದು. "ಇವನು ನಿಜವಾದ ಅತಿಥಿ" ಎಂದು ಭ್ರಮಿಸಿದ ಭ್ರಮರಾಂಬೆಯು ಕುಶಲ ಪ್ರಶ್ನೆಯನ್ನು ಮಾಡಿದುದು. ವಿಶ್ವದೇವನು ಚಿರಪರಿಚಿತನಂತೆ ವರ್ತಿಸಿ, ಭೋಜನವನ್ನು ಬೇಡಿದುದು. ದೇವಿಯು ಅದನ್ನು ಸಂತೋಷದಿಂದ ಒಪ್ಪಿಕೊಂಡು ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಅರ್ಚಿಸಿ, ಭಕ್ಷ್ಯ, ಭೋಜ್ಯಗಳಿಂದ ಆತಿಥ್ಯವನ್ನಿಟ್ಟುದು. "ತಾನು ವಿಷ್ಣು ಭಕ್ತನಾದುದರಿಂದ ಅವನನ್ನು ಸಂಪರ್ಶಿಸಿದಲ್ಲದೆ ಭೋಜನವನ್ನು ಮಾಡಲಾರೆನೆಂ'ಬ ನೆಪವನ್ನು ಹೂಡಿ ಪೀಡಿಸಲು, ಮಯೂರೇಶನೇ ಮಾಧವನಾಗಿ ಮಾರ್ಪಟ್ಟುದು. ದೇವನ ದಿವ್ಯರೂಪದ ವರ್ಣನೆ. ವಿಶ್ವದೇವನು ಗಣಪತಿಯನ್ನು ಗೋವಿಂದನೆಂದು ತಿಳಿದು ಸ್ತುತಿಸಿದುದು. ದೇವನು ತಾನು ಭಕ್ತನಾದ ವಿಶ್ವದೇವನಿಗೋಸ್ಕರ ಕ್ಷೀರಸಾಗರದಿಂದ ಇಲ್ಲಿಗೆ ಬಂದುದಾಗಿಯೂ, ಭಕ್ತರಿಗಾಗಿ ತಾನು ನಾನಾ ರೂಪಗಳನ್ನು ಧರಿಸಬೇಕಾಗುವುದೆಂಬುದಾಗಿಯೂ ತಿಳಿಸಿ, ಅದನ್ನು ನಿದರ್ಶನಕ್ಕೆ ತಂದುಕೊಡುವುದಾಗಿ ಅವನಿಗೆ ಆಶ್ವಾಸನವನ್ನಿತ್ತುದು. ಒಮ್ಮೆ ಭಾದ್ರಪದ ಚತುರ್ಥೀ

ಮಹೋತ್ಸವವು ಎಲ್ಲರ ಮನೆಗಳಲ್ಲೂ ನಡೆಯುತ್ತಿದ್ದುದು. ಜನರಾಚರಿಸಿದ ವ್ರತದ ವರ್ಣನೆ. ಆ ವೇಳೆಗೆ ವಸಿಷ್ಠ ಪೌತ್ರರಾದ ಪರಾಶರ ಮಹರ್ಷಿಗಳು ಅಲ್ಲಿಗೆ ಬಂದುದು. ತಾನೂ ಸಹ ಎಲ್ಲರಂತೆ ನಾಲ್ಕು ವರ್ಷ ವಯಸ್ಸಿನ ಗಣಪತಿಯ ಮೂರ್ತಿಯನ್ನು ನಿರ್ಮಿಸಿ ಮಣ್ಣು, ತರಗು ಇವನ್ನೇ ಪೂಜಾಸಾಮಗ್ರಿಗಳಂತೆ ಸಮರ್ಪಿಸಿ 'ನಿವೇದನವನ್ನು ಭಕ್ಷಿಸೆ'ಂದು ಭಕ್ತಿಯಿಂದ ದೇವನನ್ನು ಬೇಡಿದುದು. ಆಗ ದೇವನು ಮಣ್ಣಿನ ಮೂರ್ತಿ ಸಚೇತನವಾಗುವಂತೆಯೂ ಮತ್ತು ಪರಾಶರನಿತ್ತ ಮಣ್ಣಿನ ನಿವೇದಿತ ವಸ್ತುಗಳನ್ನು ಸ್ವಾಭಾವಿಕ ಪಕ್ವಾನ್ನಗಳನ್ನಾಗಿ ಮಾರ್ಪಡಿಸಿ ಅವನ್ನು ಭಕ್ಷಿಸುವಂತೆಯೂ ಪ್ರೇರಿಸಿದನು. ವಿಶ್ವದೇವನು ತನ್ನ ಆರಾಧ್ಯ ದೈವವಾಗಿ ಕಂಡುಬರುತ್ತಿರುವ ಗಣಪತಿಯ ಮೂರ್ತಿಯನ್ನು ಕುರಿತು 'ಇದೇನು, ಮಣ್ಣನ್ನು ತಿನ್ನುತ್ತಿರುವೆ?' ಎಂದು ಪ್ರಶ್ನಿಸಲು "ಭಕ್ತರು ಭಕ್ತಿಯಿಂದ ಸಮರ್ಪಿಸಿದುದೆಲ್ಲ ನನಗೆ ಮಿಷ್ಟಾನ್ನ" ಎಂದು ತಿಳಿಹೇಳಲು "ಭಕ್ತನಾರು?" ಎಂದು ವಿಶ್ವದೇವನು ಮತ್ತೆ ಪ್ರಶ್ನಿಸಲು, ಅವನನ್ನು ಮನೆ ಮನೆಗೂ ಕರೆದೊಯ್ದು ಅಲ್ಲಿನ ಪೂಜಾ ವಿಧಾನಗಳನ್ನು ತೋರಿಸಿದುದು. ವಿಶ್ವದೇವನಿಗೆ ಎಲ್ಲೆಡೆಯಲ್ಲೂ "ಮಯೂರೇಶನು ತನ್ನೊಂದಿಗೆ ಇದ್ದಂ"ತೆ ಕಂಡುಬರಲು 'ಇವನು ನನ್ನ ಸ್ವಾಮಿಯಲ್ಲ' ಎನ್ನುತ್ತಿರುವಷ್ಟರಲ್ಲಿ ನಾರಾಯಣನು ಕಾಣುವನು. ಅವನನ್ನು ವಂದಿಸಿ ಏಳುವಷ್ಟರಲ್ಲಿ ಅವನು ಮಯೂರೇಶನಾಗಿ ಕಂಗೊಳಿಸುವನು. ಆಗ ವಿಶ್ವದೇವನು ದೇವನ ಹಿಡಿತದಿಂದ ತನ್ನ ಕೈಯನ್ನು ಕೊಸರಿಕೊಂಡು "ಇವನು ನನ್ನ ಸ್ವಾಮಿಯಲ್ಲ" ಎಂದು ಮತ್ತೊಂದು ಮನೆಗೆ ಹೋದುದು. "ಇವನು ವಿಷ್ಣು" ಎಂದು ನಂಬಿ ನಮಸ್ಕರಿಸಲು ಹೋದಾಗ ಅವನು ಗಣಪತಿಯಾಗುವನು. ಒಮ್ಮೆ ಗರುಡಾರೂಢನಾಗಿ ತೋರಿದರೆ, ಮತ್ತೊಮ್ಮೆ ಶೇಷಶಾಯಿ

ಯಾಗಿ ತೋರುವನು. ಅಂತೂ ವಿಶ್ವದೇವನಿಗೆ ಯಾವುದೊಂದೂ ಸರಿಯಾಗಿ ತಿಳಿಯದಾದುದು. ಹೀಗೆ ಸುತ್ತಿ ಬರುತ್ತಿರುವಾಗ ಪರಾಶರರಿದ್ದಲ್ಲಿಗೆ ಬರಲು "ಇವನೇ ನನ್ನ ಭಕ್ತ" ಎಂದು ದೇವನು ನಿರ್ದೇಶಿಸಿದುದು. ಅಲ್ಲಿ ಮೃಣ್ಮಯ ವಸ್ತುಗಳಿದ್ದುದನ್ನೂ, ಅದನ್ನು ಸಂತೋಷದಿಂದ ಭುಜಿಸುತ್ತಲಿದ್ದ ದೇವನು ಕ್ಷಣ:ಕ್ಷಣಕ್ಕೂ ಒಂದೊಂದು ರೂಪದಿಂದ ಕಂಡು ಬರುತ್ತಲಿದ್ದುದನ್ನೂ ಕಂಡ ಬಳಿಕ ಭೇದ ಬುದ್ಧಿಯನ್ನು ತ್ಯಜಿಸಿ ಸರ್ವಾತ್ಮಭಾವದಿಂದ ದೇವನನ್ನು ಸ್ತುತಿಸುತ್ತ ಅವನ ಆಜ್ಞೆಯನ್ನು ಪಡೆದು ತನ್ನ ಆಶ್ರಮಕ್ಕೆ ತೆರಳಿದುದು. ೧೧೦-೧೩೨

## ೧೦೬ ನೆಯ ಅಧ್ಯಾಯ :—

ಗಣಪತಿಗೆ ಹದಿಮೂರನೆಯ ವರ್ಷ ನಡೆಯುತ್ತಿದ್ದಾಗಿನ ಕಥೆಯನ್ನು ಬ್ರಹ್ಮನು ಹೇಳಲು ಉಪಕ್ರಮಿಸಿದುದು. ಒಂದು ದಿನ ಮಯೂರೇಶನು ತಂದೆ ಪರಶಿವನ ಬಳಿ ಬಂದು ವಂದಿಸಿದುದು. ಮಹೇಶ್ವರನ ರೂಪದ ವರ್ಣನೆ. ಗಣಪತಿಯು ಶಿವನ ಜಡೆಯಲ್ಲಿದ್ದ ಚಂದ್ರ ಬಿಂಬವನ್ನು ತೆಗೆದುಕೊಂಡು ಬಾಲಕರೊಡನೆ ಆಟಕ್ಕೆ ಹೊರಟು ಹೋದುದು. ಆ ವೇಳೆಗೆ "ಮಂಗಲ" ಎಂಬ ದೈತ್ಯನು ಆ ಬಾಲಕರಿದ್ದ ಸ್ಥಳಕ್ಕೆ ಬಂದುದು. ಸೂಕರಾಕಾರದ ಅವನ ಭೀಕರ ರೂಪದ ವರ್ಣನೆ. ಅವನನ್ನು ಕಂಡು ಬೆದರಿದಬಾಲಕರು ಓಡಿಹೋದುದು. ಗಣಪತಿಯು ಆ ಹಂದಿಯ ಕೋರೆಹಲ್ಲುಗಳೆರಡನ್ನೂ ಬಲವಾಗಿ ಹಿಡಿದು ಎರಡು ಭಾಗವಾಗುವಂತೆ ಸೀಳಿ ದೂರ ಬಿಸುಟುದು. ರಾಕ್ಷಸನು ತಾನು ಧರಿಸಿದ್ದ ಕೃತ್ರಿಮ ವಾರಾಹ ರೂಪವನ್ನು ತ್ಯಜಿಸಿ, ರಾಕ್ಷಸೀ ದೇಹದಿಂದಲೇ ಮೃತನಾಗಿ ಬಿದ್ದುದು. ಅದರ ಪರಿಣಾಮದ ವರ್ಣನೆ. ಎಲ್ಲರೂ ದೇವನನ್ನು ಸ್ತುತಿಸಿದುದು. ಇತ್ತ ಪರಶಿವನು ಬಹಿರ್ಮುಖನಾದಾಗ ತಲೆಯಲ್ಲಿದ್ದ ಚಂದ್ರನನ್ನು: ಕಾಣದೆ, ಕಾವಲಿದ್ದ

ಪ್ರಮಥರನ್ನು ಗದರಿಸಿ ಕದ್ದವನನ್ನು ತನ್ನೆದುರಿಗೆ ಕರೆದು ತರಬೇಕೆಂದು ಆಜ್ಞೆಯನ್ನೀಯಲು "ಪ್ರಾಯಃ ಮಯೂರೇಶನು ತೆಗೆದುಕೊಂಡು ಹೋಗಿರಬಹುದೆಂ"ಬ ತಮ್ಮ ಶಂಕೆಯನ್ನು ದೇವನೆದುರು ಅರಿಕೆ ಮಾಡಲು "ಚಂದ್ರನನ್ನಾಗಲಿ, ಚಂದ್ರನನ್ನು ಕದ್ದವನು ಯಾರೇ ಆದರೂ ಅವನನ್ನಾಗಲಿ ಹಿಡಿದು ತರದಿದ್ದರೆ ನಿಮ್ಮನ್ನು ಸುಟ್ಟುಬಿಡುವೆನೆಂದು ಗದರಿಸಲು ಅವರು ಮಯೂರೇಶನನ್ನು ಕರೆದು ತರಲು ಪ್ರಯತ್ನಿಸಿದುದು. ಅವರನ್ನು ಗಣಪತಿಯು ಗದರಿಸಿ ತನ್ನ ಶ್ವಾಸವಾಯುವಿನಿಂದ ಹಾರಿಸಲು, ಅವರು ಪರಮೇಶ್ವರನೆದುರು ಬಂದು ತುಪು ತುಪು ಬಿದ್ದುದು. ಶಿವನು ಕೋಪದಿಂದ ಉಮೆಯ ಮಗನನ್ನು ಹಿಡಿದು ತರಲೇಬೇಕೆಂದು ಆಗ್ರಹಗೊಳ್ಳಲು ಪ್ರಮಥರು ಅವನನ್ನು ಹಿಡಿದು ತರಲು ಮತ್ತೆ ಯತ್ನಿಸಿದುದು. ದೇವನು ಅಂತರ್ಹಿತನಾಗಿ ಮನೆ ಮನೆಗೂ ಹೋಗಿ ಹುಡುಕುವಂತೆ ಮಾಡಿದುದು. ಕೆಲ ಸಮಯ ಕಾಣುವುದು, ಅವರು ಸಮೀಪಕ್ಕೆ ಬಂದಕೂಡಲೇ ಅದೃಶ್ಯನಾಗುವುದು ಹೀಗೆ ಬಹು ಬಗೆಯಿಂದ ಪೀಡಿಸಲು, ಅವರು ನಿರ್ವಿಣ್ಣರಾದುದು. ಆಗ ಗಣಪತಿಯು ದಯೆಯಿಂದ ಅವರಿಗೆ ಅಧೀನನಾಗಲು ಅವರು ಅವನನ್ನು ಬಂಧಿಸಿ ಎತ್ತಿಕೊಂಡು ಹೋಗಲೆತ್ನಿಸಿದುದು. ಆದರೆ ಅವನ ಭಾರವನ್ನು ಹೊರಲಾರದೆ ದೇವನ ಸಮೀಪಕ್ಕೆ ಬಂದು ಸುದ್ದಿಯನ್ನು ತಿಳಿಸಿದುದು. ಆಗ ನಂದಿಯನ್ನು ಶಿವನು ಪ್ರೇರಿಸಲು ಅವನು ತನ್ನ ಪೌರುಷವನ್ನು ಹೊಗಳಿಕೊಳ್ಳುತ್ತ ಕೋಪದಿಂದ ಈ ಕಾರ್ಯಸಾಧನೆಗಾಗಿ ಹೊರಟುದು. ಮತ್ತು ಗಣಪತಿಯು ತನ್ನ ಸಂಗಡ ಬಾರದಿದ್ದರೆ ಬಲಾತ್ಕಾರದಿಂದ ಕರೆದೊಯ್ಯುವುದಾಗಿ ಒತ್ತಾಯಮಾಡಬೇಕಾದೀತೆಂದು ಎಚ್ಚರಿಸಿದುದು. ಅದರಿಂದ ಕ್ಷುಭಿತನಾದ ಗಣಪತಿಯು ನಂದಿಯನ್ನು ತನ್ನ ಶ್ವಾಸೋಚ್ಛ್ವಾಸ ಚಕ್ರಕ್ಕೆ ಸಿಲುಕಿಸಿ. ಶಿವನ ಪಾದಗಳ ಮೇಲೆ ಬೀಳು

ವಂತೆ ಒಮ್ಮೆಲೆ ಬಿಸುಟುದು. ಮತ್ತು ತಾನೂ ಹೋಗಿ ಸಮೀಪದಲ್ಲೇ ಯಾರಿಗೂ ಅರಿವಾಗದಂತೆ ನಿಂತು ಚಂದ್ರಖಂಡವನ್ನು ಶಿವನ ತಲೆಯಲ್ಲಿರಿಸಿದುದು. ಶಿವನು ತನ್ನ ಮಗನ ಮಹಿಮೆಯನ್ನರಿತು ಗಣಗಳ ಪ್ರಾರ್ಥನೆಯಂತೆ ಅವನನ್ನು ಗಣಗಳಿಗೆಲ್ಲ ಅಧಿಪತಿಯನ್ನಾಗಿ ಮಾಡಿದುದು. ಅಂದಿನಿಂದ ಅವನನ್ನು ಎಲ್ಲರೂ ಗಣರಾಜನೆಂದು ಗಣಿಸಿದುದು. ೧೩೩–೧೪೮

## ೧೦೭ ನೆಯ ಅಧ್ಯಾಯ :—

ಗಜಾನನನಿಗೆ ಹದಿನಾಲ್ಕನೆಯ ವರ್ಷ ನಡೆಯುತ್ತಿದ್ದಾಗ ಗೌತಮಾದಿಗಳು ಗಿರಿಜೆಯ ಗೃಹಕ್ಕೆ ಬಂದುದು. ಅವರಿಗೆ ಗಿರಿಜೆಯು ಆತಿಥ್ಯವನ್ನು ಸಲ್ಲಿಸಿದ ಬಳಿಕ "ವಿಘ್ನಗಳಿಗಾಗಿ ಭಯಪಟ್ಟು ತ್ರಿಸಂಧ್ಯಾ ಕ್ಷೇತ್ರವನ್ನು ಬಿಟ್ಟು ಇಲ್ಲಿಗೆ ಬಂದಾಗ್ಯೂ ವಿಘ್ನಗಳು ಇಲ್ಲಿಯೂ ಬರುತ್ತಿರುವುದರಿಂದ ಇದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಉಪದೇಶಿಸಬೇಕೆಂ"ದು ಪ್ರಾರ್ಥಿಸಲು "ಇಂದ್ರಯಾಗ"ವನ್ನು ಮಾಡೆಂದು ಮುನಿಗಳು ಹೇಳಿದುದು ದೇವಿಯು ಅದರಂತೆ ಸಕಲ ಸನ್ನಾಹಗಳನ್ನೂ ಏರ್ಪಡಿಸಿಕೊಂಡು ಅನುಷ್ಠಾನವನ್ನಾರಂಭಿಸಿದುದು. ಯಜ್ಞ ವಿಧಾನದ ವರ್ಣನೆ. ಬಾಲಕರು ಆಟವನ್ನು ಮುಗಿಸಿಕೊಂಡು ಯಜ್ಞವಾಟಿಗೆ ಅಭಿಮುಖವಾಗಿ ಬರುತ್ತಿರಲು, ಕಲ–ವಿಕಲರೆಂಬ ದೈತ್ಯರು ಸೊಕ್ಕಿದ ಕಾಡುಕೋಣಗಳ ರೂಪದಿಂದ ಬಂದುದು. ಅವರ ಭೀಕರ ರೂಪ, ಧ್ವನಿಗಳ ವರ್ಣನೆ ಅವು ಗಣಪತಿಯನ್ನು ಕೊಲ್ಲುವ ಉದ್ದೇಶ್ಯದಿಂದ ಪರಸ್ಪರ ಗುದ್ದಾಡಲಾರಂಭಿಸಿದುದು. ಕೋಣಗಳ ಕರ್ಕಶ ಶಬ್ದದಿಂದ ದಿಗ್ವಿದಿಕ್ಕುಗಳು ಪ್ರತಿಧ್ವನಿಗೈದುದು. ಒಂದನ್ನೊಂದು ಸೋಲಿಸುತ್ತಿರಲು ಈ ಭೀಕರ ಕದನವನ್ನು ನೋಡಲಾರದೆ, ಮುನಿ ಬಾಲಕರು ಓಡಿ ನಡೆದುದು. ಇದನ್ನು ನೋಡಿ ನವಿಲಿನ ಒಡೆಯ; ದೇವನು ಅವೆರಡರ ಬಾಲಗಳನ್ನು ನೇರಿಸಿ ಹಿಡಿದೆತ್ತಿ ಗರಗರ ತಿರುಗಿಸಿ ಅಂತರಿಕ್ಷಕ್ಕೆಸೆದುದು.

ಕಲ-ವಿಕಲರ ವಧೆ. ಬಾಲಕರು ದೇವನನ್ನು ಸ್ತುತಿಸಿದುದು. ದೇವನು ಯಜ್ಞವಾಟಿಗೆ ಬಂದು ಇಂದ್ರ ಯಜ್ಞವನ್ನು ಧ್ವಂಸಗೊಳಿಸಿದುದು. ಇದರಿಂದ ಕುಪಿತನಾದ ದೇವೇಂದ್ರನು ದೇವತೆಗಳಿಗೆ ತಮ್ಮ ತಮ್ಮ ಕೆಲಸಗಳನ್ನು ಮಾಡದೇ ನಿಲ್ಲಿಸಿಬಿಡುವಂತೆ ಆಜ್ಞೆಯನ್ನಿತ್ತುದು. ಯಾವ ಯಾವ ದೇವತೆಗಳು ತಮ್ಮ ಕಾರ್ಯಗಳನ್ನು ನಿಲ್ಲಿಸಿದರೋ ಆಯಾ ದೇವತೆಯ ರೂಪವನ್ನು ಗಜಾನನನು ಧರಿಸಿಕೊಂಡು ಲೋಕವ್ಯವಹಾರವನ್ನು ನಡೆಸಿದುದು. ಆಗ ಇಂದ್ರನು ಶರಣಾಗತನಾದುದು, ತತ್ಕೃತ ಸ್ತೋತ್ರ. ದೇವನು ಅವನನ್ನು ಕ್ಷಮಿಸಿ ಊರಿಗೆ ಕಳಿಸಿದುದು ೧೪೯-೧೬೪

## ೧೦೪ ನೆಯ ಅಧ್ಯಾಯ :—

ಗಜಾನನನಿಗೆ ಹದಿನೈದನೆಯ ವರ್ಷ ನಡೆಯುತ್ತಿರುವಾಗ ಒಂದು ದಿನ ಬಾಲಕರೊಂದಿಗೆ ಅವನು ಸ್ನಾನಕ್ಕಾಗಿ ಬ್ರಹ್ಮಕಮಂಡಲು ನದಿಗೆ ಹೋದುದು. ಸ್ನಾನಾದಿಗಳು ಮುಗಿದನಂತರ ಎಲ್ಲರೂ ಗಣನಾಯಕನನ್ನು ಷೋಡಶೋಪಚಾರಗಳಿಂದ ಮನಸ್ಸಿನಲ್ಲೇ ಅರ್ಚಿಸಿದುದು, ಪೂಜಾವಿಧಾನ ವರ್ಣನೆ. ಆ ವೇಳೆಗೆ ಅಲ್ಲಿಗೆ ವ್ಯಾಘ್ರರೂಪಿಯಾದ ಅಸುರನು ಬಂದುದು. ಅವನ ಭೀಕರಾಕೃತಿಯ ವರ್ಣನೆ. ಅವನನ್ನು ನೋಡಿ ಬಾಲಕರು ಪಲಾಯನ ಮಾಡಲು, ವ್ಯಾಘ್ರನು ದೇವನ ಮೇಲೆ ಜಿಗಿದುದು. ಕೂಡಲೇ ಮಯೂರೇಶನು ತಾನೊಂದು ಶಾರ್ದೂಲನಾಗಿ ವ್ಯಾಘ್ರವನ್ನಟ್ಟಿಕೊಂಡು ಹೋದುದು. ವ್ಯಾಘ್ರವು ಹೆದರಿ ಒಂದು ಪೊದೆಯಲ್ಲಿ ಅಡಗಿ ಕುಳಿತಾಗ ಶಾರ್ದೂಲ ಮೇಲಿನಿಂದ ಅದರ ಮೇಲೆ ಬಿದ್ದು, ತನ್ನ ಎರಡು ಕೈಗಳಿಂದಲೂ ಅದರ ಬಾಯಿಯನ್ನು ಭದ್ರವಾಗಿ ಹಿಡಿದುಕೊಂಡು ಈಚೆಗೆ ಎಳೆದು ತಂದು ಮೂಗು, ಕಿವಿ, ಮುಂಗಾಲು ಬಾಲ ಇವನ್ನು ಕತ್ತರಿಸಿ “ ಇನ್ನುಮೇಲೆ ಯಾರಿಗೂ ಮುಖವನ್ನು ತೋರಿಸಬೇಡ ” ಎಂದು ಹೇಳಿ ಓಡಿಸಿ

ದುದು. " ನಿನಗೂ ಹೀಗೆಯೇ ಮಾಡದಿರುವೆನೇ ? " ಎನ್ನುತ್ತಲೇ ರಾಕ್ಷಸನು ತನ್ನ ಮನೆಗೆ ಓಡಿಹೋದುದು. ಮಯೂರೇಶ್ವರನನ್ನು ಹುಡುಕುತ್ತಲಿದ್ದ ಬಾಲಕರು ಶ್ರಾಂತರಾಗಿ ಒಂದು ಗಿಡದಡಿ ದಕ್ಷಿಣದಿಕ್ಕಿಗೆ ಕಾಲು ಗಳನ್ನು ಹಾಕಿಕೊಂಡು ಮಲಗಿದ್ದಾಗ, ಯಮನು ಕೋಪದಿಂದ ಅವರನ್ನು ತನ್ನ ಪುರಿಗೆ ಎಳೆದೊಯ್ದುದು. ಅನಂತರ ಮುನಿಗಳು ಬಂದು ದೇವನನ್ನು ಕುರಿತು " ನಮ್ಮ ಬಾಲಕರೆಲ್ಲಿ "ಎಂದು ಪ್ರಶ್ನಿಸಿದಾಗ ದೇವನು ವಿಷಯವನ್ನು ಊಹಿಸಿ ಯಮಪುರಿಗೆ ಹೊರಟುದು. ದೇವನು ತನ್ನ ಲೋಕಕ್ಕೆ ಬಂದಿರುವ ಸಂಗತಿ ತಿಳಿದರೂ ರವಿಜನು ಅವನನ್ನು ಆದರಿಸದೆ ತನ್ನ ಮಹಿಮೆಯನ್ನು ಅವನೆದುರು ಹೊಗಳಿಕೊಂಡುದು. ಅವನನ್ನು ದೇವನು ತೆಗಳಿ ಅವನ ಹೆಗಲನ್ನೇರಿ ಕುಳಿತುಕೊಳ್ಳಲು ಆತನ ಹೊರೆಯನ್ನು ಹೊರಲಾರದೆ ಯಮನು ಕೋಣದಿಂದ ಕೆಳಕ್ಕುರುಳಿದುದು. ಆಗ "ದೇವನ ಪರಾಕ್ರಮವೆಷ್ಟಿದೆ" ಎಂಬುದರಿವಾಗಲು, ದೇವನಿಗೆ ಶರಣು ಬಂದು ಅವ ನನ್ನು ಸ್ತುತಿಸಿ ಬಾಲಕರನ್ನು ಹಿಂದಿರುಗಿ ಕೊಟ್ಟುದು. ಬಾಲಕರು ದೇವನೊಂದಿಗೆ ಹಿಂದಿರುಗಿದಾಗ ಮೆರ ವಣಿಗೆ ಏರ್ಪಟ್ಟುದು. ಅದರ ವೈಭವದ ವರ್ಣನೆ. ದೇವನು ಆ ಬಾಲಕರನ್ನು ಅವರವರ ವಶಕ್ಕೆ ಒಪ್ಪಿ ಸಲು, ಸಂಗಡ ಬಂದಿದ್ದ ಯಮದೇವನು ದೇವನ ಅನು ಮತಿಯಂತೆ ತನ್ನ ಲೋಕಕ್ಕೆ ತೆರಳಿದುದು. ದೇವನೂ ಸಂತಸದಿಂದ ತನ್ನ ಮನೆಗೆ ಬಂದುದು. ೧೬೫–೧೭೬

**೧೦೯ ನೆಯ ಅಧ್ಯಾಯ :—**

ಪರಮೇಶ್ವರನು ಸುಖಾಸೀನನಾಗಿ ಕುಳಿತಾಗ ಪಾರ್ವ ತಿಯು ಮಾತನಾಡುತ್ತ ಗಣಪತಿಗೆ ಮದುವೆಯನ್ನು ಮಾಡಿಬಿಡಬೇಕೆಂದು ಬೇಡಿದುದು. ದೇವನು ಅದಕ್ಕೆ ಸಂತೋಷಿಸಿ ಕನ್ಯೆಯ ಬಗ್ಗೆ ಚಿಂತಿಸುತ್ತಿರಲು, ಆ ವೇಳೆಗೆ ನಾರದರು ಅಲ್ಲಿಗೆ ಬಂದುದು. ದೇವಿಯು ಅವನೆದುರು ಮದುವೆಯ ವಿಚಾರವನ್ನು

ಪ್ರಸ್ತಾಪಿಸಲು, ಸಿದ್ಧಿ-ಬುದ್ಧಿಯರನ್ನು ಗಣಪತಿಗೆ ಕೊಡಲಿರುವ ಬ್ರಹ್ಮನ ಸಂಕಲ್ಪವನ್ನು ತಿಳಿಸಿ, ತಾನೂ ಅದಕ್ಕಾಗಿಯೇ ಬಂದುದಾಗಿ ಹೇಳಿದುದು· ಸಿದ್ಧಿ-ಬುದ್ಧಿಯರ ರೂಪ-ಲಾವಣ್ಯಗಳ ವರ್ಣನೆ ಆಗ ಪಾರ್ವತೀ - ಪರಮೇಶ್ವರರು ತಮ್ಮ ಪರಿವಾರ ದೊಂದಿಗೂ, ನಾರದನೊಂದಿಗೂ ದಿಬ್ಬಣ ಹೊರ ಟುದು. ದಿಬ್ಬಣದ ವರ್ಣನೆ. ಅವರು ಗಂಡಕೀ ನಗರದ ಸಮೀಪಕ್ಕೆ ಬರುವ ವೇಳೆಗೆ ಅಲ್ಲಿ ರಕ್ಷಣೆಗಾಗಿ ಕಾವಲಿದ್ದ ಏಳು ಕೋಟಿ ರಾಕ್ಷಸರು ಇವರನ್ನು ತಡೆದು ಪೂರ್ವೋತ್ತರಗಳನ್ನು ವಿಚಾರಿಸಿದುದು. ಅಷ್ಟರಲ್ಲಿ ವಿಕೃತನು ಮುಂದೆ ಬಂದು ಹಿಂದೆ ಗಣ ಪತಿಯಿಂದ ತನಗಾದ ಅಪಮಾನಕ್ಕೆ ಪ್ರತೀಕಾರ ವನ್ನು ಮಾಡಲು ತನ್ನ ಸಹೋದ್ಯೋಗಿಗಳನ್ನು ಉತ್ತೇಜಿಸಿದುದು. ಇದನ್ನು ಕೇಳಿದ ಮಯೂ-ರೇಶನು ಕುಪಿತನಾಗಿ ಮುನಿಬಾಲಕರಿಗೆ ಹುಲ್ಲನ್ನು ಹಿಡಿದು ಹೋರಾಡುವಂತೆ ಪ್ರೇರಿಸಿದುದು ರಾಕ್ಷಸ ರೊಂದಿಗೆ ಮುನಿಬಾಲಕರಾಡಿದ ಯುದ್ಧ ವೈಖರಿಯು ವರ್ಣನೆ. ಬಾಲಕರು ಜಯಿಸಿದುದನ್ನು ಕಂಡು ಪರ ಶಿವನು ಎಲ್ಲರ ಪರವಾಗಿ ದೇವನನ್ನು ಸ್ತುತಿಸಿದುದು. ೧೭೭–೧೯೦

**೧೧೦ ನೆಯ ಅಧ್ಯಾಯ :—**

ಜಯಶಾಲಿಯಾದ ಮಯೂರೇಶನು ವಿಭವದಿಂದ ಎಲ್ಲ ರೊಂದಿಗೆ ಲಗ್ನಕ್ಕೆ ಪ್ರಯಾಣ ಹೊರಟುದು. ಲಗ್ನದ ಪೌರೋಹಿತ್ಯ ನಿರ್ವಾಹಕ್ಕಾಗಿ ಗೌತಮಾದಿಗಳು ಅವರೊಡನೆ ಬಂದುದು. ಗಂಡಕೀನಗರದ ಸಮೀ ಪದಲ್ಲಿ ತಂಗಿದ್ದ ಮಯೂರೇಶ್ವರನು ಸಭೆಯನ್ನು ನಡೆಸಿ " ಸಿಂಧು ದೈತ್ಯನ ನಿಗಡ ಬಂಧನದಲ್ಲಿ ಬದ್ಧ ರಾದ ದೇವತೆಗಳನ್ನು ಬಿಡುಗಡೆ ಮಾಡಿದ ಬಳಿಕ ಮದುವೆಯ ಪ್ರಯತ್ನ " ಎಂದು ನುಡಿಯಲು ಅದನ್ನು ಎಲ್ಲರೂ ಸಮ್ಮತಿಸಿ, ಸಂಧಾನಕ್ಕಾಗಿ ಮೊದಲು

ನಂದಿಯನ್ನು ಸಿಂಧುವಿನ ಬಳಿಗೆ ಕಳಿಸಲು ನಿಶ್ಚಯಿಸಿದುದು. ನಂದಿಕೇಶ್ವರನು ತನ್ನ ಸಾಹಸವನ್ನು ಅವರಿಗೆ ತಿಳಿಸಿ, ಸಂಧಾನ ಕಾರ್ಯವನ್ನು ಸಾಮಾದ್ಯುಪಾಯಗಳಿಂದ ಸಾಧಿಸುವುದಕ್ಕಾಗಿ ಅಸುರನ ಮಂದಿರಕ್ಕೆ ತೆರಳಿದುದು. ೧೯೧–೨೦೧

**೧೧೧ ನೆಯ ಅಧ್ಯಾಯ :—**

ನಂದಿಯು ಸಿಂಧುದೈತ್ಯನ ಸಭಾಮಂಟಪವನ್ನು ಪ್ರವೇಶಿಸಿ ಎಲ್ಲರನ್ನೂ ನೋಡಿದುದು- ಸಭೆಯ ವರ್ಣನೆ. ನಂದಿಯನ್ನು ನೋಡಿ ಸಭಿಕರು ಅಚ್ಚರಿಗೊಂಡುದು. ಕೆಲವರು ಅವನು ಶತ್ರುಪಕ್ಷೀಯನೆಂದೂಹಿಸಿ ಅವನ ಮೇಲೆ ಕಿಡಿ ಕಾರಿದುದು. ಆಗ ದೈತ್ಯರಾಜನು ಸಂಜ್ಞೆಯಿಂದಲೆ ಆಸನವನ್ನು ಕೊಟ್ಟು ಆದರಿಸಿ "ವಿಷಯವೇನು ?" ಎಂಬುದನ್ನು ತಿಳಿಯಲು ತಾನು ಕುತೂಹಲಗೊಂಡ ಅಂಶವನ್ನು ತನ್ನ ಮುಖಮುದ್ರೆಯಿಂದ ಸೂಚಿಸಿದುದು. ಮಹಾಸೂಕ್ಷ್ಮಮತಿಯಾದ ನಂದಿಯು ಗಂಭೀರವಾಣಿಯಿಂದ ತಾನು ಆ ಸಭೆಯಲ್ಲಿ ಕಂಡ ನ್ಯೂನತೆಯನ್ನು ಸ್ಪಷ್ಟವಾಗಿ ವಿವರಿಸಿದುದು. ಆಗ ದೈತ್ಯನು ತನ್ನ ಅವಜ್ಞತೆಯನ್ನರಿತು ನಂದಿಯ ಗುಣಗಣಗಳನ್ನು ವರ್ಣಿಸುತ್ತ 'ಅವನು ಯಾರು, ಯಾರ ಕಡೆಯವನು, ಪ್ರಕೃತ ತನ್ನ ಬಳಿಗೆ ಬರಲು ಕಾರಣವೇನೆ'ಂಬುದನ್ನು ಪ್ರಶ್ನಿಸಿದನು. ಆಗ ನಂದಿಕೇಶ್ವರನು ತನ್ನ ಉತ್ಪತ್ತಿಯನ್ನೂ ತನ್ನಶಕ್ತಿ–ಸಾಹಸಗಳನ್ನೂ ತಾನು ಕೈಗೊಂಡ ದೇವಸೇವಾವೃತ್ತಿಯನ್ನೂ ಮಯೂರೇಶ್ವರನ ಮಹಿಮೆ ಮತ್ತು ಅಸುರನಿಗೆ ಹೇಳಿ ಕಳಿಸಿದ ಸಂದೇಶ ಇವನ್ನು, ಸಂದೇಶದಂತೆ ನಡೆಯದಿದ್ದರೆ ಮುಂದೆ ಮಯೂರೇಶ್ವರನು ಕೈಗೊಳ್ಳಲಿರುವ ಬಲಪ್ರಯೋಗ ಸಂಗತಿಯನ್ನೂ ವಿವರಿಸಿ, ಬದ್ಧರಾದ ದೇವತೆಗಳನ್ನು ಬಿಡುಗಡೆ ಮಾಡಿ ದೈವಾನುಗ್ರಹಕ್ಕೆ ಪಾತ್ರನಾಗು'ವಂತೆ ಬೋಧಿಸಿದುದು. ಮಯೂರೇಶ್ವರನು ಹಿಂದೆ ನಡೆಸಿದ ದೈತ್ಯವಧೆಯ ಕಥೆಯನ್ನು ವಿವರಿಸಿ ದೇವನ ಆಜ್ಞೆಯನ್ನು ಮಾರು

ವುದು ಶ್ರೇಯಸ್ಕರವಲ್ಲವೆಂದು ಅಸುರನನ್ನು ಎಚ್ಚರಿಸಿದುದು. ಇವನ ಮಾತುಗಳನ್ನು ಕೇಳಿ ಅಭಿಮಾನಿಯಾದ ಸಿಂಧುದೈತ್ಯನು ನಂದಿಯ ನಡತೆಯನ್ನು "ಅಧಿಕ ಪ್ರಸಂಗತನ" ಎಂದು ಹೇಳುತ್ತ "ತನಗೆ ಯಾರಿಂದಲೂ ಭಯವಿಲ್ಲವೆಂದೂ, ಶಕ್ತಿ ಇದ್ದರೆ ಯಾರು ಬೇಕಾದರೂ ತನ್ನ ಮೇಲೆ ಯುದ್ಧವನ್ನು ಹೂಡಬಹುದೆಂದೂ, ತನ್ನನ್ನು ಸೋಲಿಸಿದ ಮೇಲೆಯೇ ದೇವತೆಗಳನ್ನು ಬಿಡಿಸಬಹುದೆ"ಂದೂ ಹೇಳಿ "ನೀನು ದೂತನಾಗಿರದಿದ್ದರೆ ನಿನ್ನಂತಹ ಪರಿಪುಷ್ಟ ಎತ್ತನ್ನು ನೇಗಲಿಗೆ ಉಪಯೋಗಿಸುತ್ತಿದ್ದೆ'ನೆಂದೂ ನಂದಿಯನ್ನು ಧಿಕ್ಕರಿಸಿದುದು. ನಂದಿಯು ದೈತ್ಯನ ಅವಿವೇಕಕ್ಕೆ ಪರಿತಪಿಸಿ ಅನೇಕ ರೀತಿಯಿಂದ ಬುದ್ಧಿವಾದವನ್ನು ಹೇಳಿ "ನಾನೇ ನಿನ್ನನ್ನು ತುಂಡರಿಸಿ, ದೇವತೆಗಳನ್ನು ಬಿಡಿಸಿಕೊಂಡು ಹೋಗುತ್ತಲಿದ್ದೆ. ಆದರೆ. ದೇವನ ಆಜ್ಞೆ ಇಲ್ಲದ್ದರಿಂದ ಸುಮ್ಮನಿರಬೇಕಾಗಿದೆ" ಎಂದು ಕೋಪದಿಂದ, ನುಡಿದು ಬಹಳ ಬಿರುಸಿನಿಂದ ಉಸಿರನ್ನು ಬಿಟ್ಟು, ದೈತ್ಯರನ್ನೆಲ್ಲ ಕೆಳಕ್ಕೆ ಕೆಡಹಿ ಸಿಂಧುವಿನ ಅನುಮತಿಗೂ ಕಾಯದೇ, ಹಿಂದಿರುಗಿ ಹಾರಿ ಬಂದು, ಸಿಂಧುವಿನ ದೌಷ್ಟ್ಯವನ್ನು ದೇವನೆದುರಿಗೆ ಹೇಳಿದುದು. "ಯುದ್ಧ ಪ್ರಸಂಗ ಒದಗಿತಲ್ಲ" ಎಂದು ಹರ್ಷಿಸಿದ ಮಯೂರೇಶ್ವರನು "ಯಾರಿಗೆ ಯುದ್ಧಕ್ಕೆ ಬರಲಿಷ್ಟವಿದೆಯೋ, ಎಲ್ಲರೂ ಹೊರಡಬಹುದೆ"ಂದು ಆಹ್ವಾನವನ್ನಿತ್ತುದು. "ಪ್ರಕೃತ ನಮಗಿಲ್ಲೇನು ಕೆಲಸ ? ಮದುವೆಯ ವೇಳೆಗೆ ಬಂದರೆ ಸಾಕು" ಎಂದು ತಮ್ಮ ತಮ್ಮಲ್ಲೇ ನಿಶ್ಚಯಿಸಿಕೊಂಡು ಮುನಿಗಳು ತಮ್ಮ ಪಾಡಿಗೆ ತಾವು ಆಶ್ರಮಗಳಿಗೆ ಹಿಂದಿರುಗಿದುದು. ೨೦೨—೨೧೪

## ೧೧೨ ನೆಯ ಅಧ್ಯಾಯ :—

ಮಯೂರೇಶ್ವರನು ತನ್ನ ವಾಹನವಾದ ಮಯೂರವನ್ನೇರಿ ವಿಶಿಷ್ಟ ಆಯುಧಾದಿ ಪರಿಕರದೊಡನೆ ಗರ್ಜಿಸುತ್ತ

ಯುದ್ಧಕ್ಕೆ ಹೊರಟುದು. ಪರಶಿವನೂ ಉತ್ತೇಜನಗೊಂಡು ಗರ್ಜಿಸುತ್ತ ವೃಷಾರೂಢನಾಗಿ ಯುದ್ಧರಂಗಕ್ಕೆ ತೆರಳಲು ಮಯೂರೇಶನನ್ನು ಅನುಸರಿಸಿ ಪ್ರಯಾಣ ಮಾಡಿದುದು. ಹಿಂದುಗಡೆಯಿಂದ ಏಳುಕೋಟಿ ಪ್ರಮಥಗಣದವರು ತಮ್ಮ ನಾಯಕರನ್ನು ಹಿಂಬಾಲಿಸಿದುದು. 'ನಾನೂ, ವೀರಭದ್ರ ಮುಂತಾದವರು ಮೊದಲು ಮುಂದೆ ಹೋಗುತ್ತೇವೆ. ಅನಂತರ ಬೇಕಾದರೆ ನೀವು ಬನ್ನಿ. ಅವಸರಪಟ್ಟು ಮುಂದೆ ನುಗ್ಗುವುದು ಬೇಡ" ಎಂದು ನಂದಿಯ ಎಚ್ಚರಿಸಲು. ದೇವನು ಅವನ ಪೌರುಷವನ್ನು ಪ್ರಶಂಸಿಸಿ "ತಾನು ಮುಂದೆ ಹೋಗುವುದಾಗಿಯೂ, ತನ್ನನ್ನು ಬಾಕಿಯವರೆಲ್ಲ ಅನುಸರಿಸಿ ಬರಬೇಕೆಂದೂ" ಆಜ್ಞೆಯನ್ನಿತ್ತುದು. ಅದರಂತೆ ವೀರ್ಯಶಾಲಿಗಳಾದ ಭೂತರಾಜ, ಪುಷ್ಪದಂತ, ಇವರಿಬ್ಬರೂ ಏಳುಕೋಟಿ ಪ್ರಮಥ ಸೈನ್ಯದೊಂದಿಗೆ ಮುಂದೆ ಹೊರಟುದು. ಅವರ ವೇಷ-ಭೂಷಣ, ವೀರಶ್ರೀ, ಅವರ ಯುದ್ಧವೈಖರಿ ಇತ್ಯಾದಿಗಳ ವರ್ಣನೆ. ಸಂಕುಲ ಯುದ್ಧ, ಅದರ ಪರಿಣಾಮ. ಪರಾಜಿತರಾದ ದೈತ್ಯರ ಪೈಕಿ ಉಳಿದವರು ತಮಗುಂಟಾದ ಸೋಲಿನ ಸಂಗತಿಯನ್ನು ಸಿಂಧುವಿಗೆ ತಿಳಿಸಿದುದು. ಇದನ್ನು ಕೇಳಿದ ದೈತ್ಯನು ಬಹಳ ಕೋಪದಿಂದ ಶತ್ರುಗಳ ವಿಷಯದಲ್ಲಿ ತನಗಿದ್ದ ತಿರಸ್ಕಾರ ಭಾವವನ್ನು ವ್ಯಕ್ತಪಡಿಸಿ ತಾನೇ ಯುದ್ಧಕ್ಕೆ ಹೊರಡಲನುವಾಗಲು ಮಂತ್ರಿ–ಸೇನಾನಿಗಳು ಮುಂದೆ ಬಂದು ಶತ್ರುಗಳ ಬಗ್ಗೆ ಹೆಚ್ಚಿನ ಕ್ರೋಧವನ್ನು ತೋರಿಸುತ್ತ ಯುದ್ಧಕ್ಕೆ ಹೊರಡಲು ಅನುಮತಿಯನ್ನು ಬೇಡಿದುದು. ಅದನ್ನು ಸಿಂದು ಸಮ್ಮತಿಸಲು, ಅವರೂ ಸಹ ಹಯಾರೂಢನಾದ ಅಸುರನನ್ನು ಹಿಂಬಾಲಿಸಿದುದು. ೨೧೫–೨೨೩

**೧೧೩ ನೆಯ ಅಧ್ಯಾಯ :—**

ಪದಾತಿಗಳು ತಮ್ಮ ನಡಿಗೆಯಿಂದ ಭೂಮಿಯನ್ನು ಕಂಪನಗೊಳಿಸುತ್ತ ಯುದ್ಧಭೂಮಿಗೆ ಹೋದುದು. ಅವರ

ಭೀಕರಾಕೃತಿಯು, ವೇಷ–ಭೂಷಣಗಳ ಹಾಗೂ ಶಸ್ತ್ರಾಸ್ತ್ರಗಳ ವರ್ಣನೆ. ಗಜಾಶ್ವಸೇನೆಯ ವರ್ಣನೆ. ಮುಂದೆ ಹೋಗುತ್ತಲಿದ್ದ ಭೂತರಾಜ, ಪುಷ್ಪದಂತರು ಇದನ್ನು ಕಂಡು ಸಿಂಧುವೇ ಸ್ವಯಂ ಯುದ್ಧಕ್ಕೆ ಬಂದುಬಿಟ್ಟಿದ್ದಾನೆಂಬ ಅಂಶವನ್ನು ಮಯೂರೇಶನಿಗೆ ಅರುಹಿದುದು. ಅಷ್ಟರಲ್ಲಿ ದೈತ್ಯಸೇನೆಯು ಮೇಲೇರಿ ಬಂದುದನ್ನು ನೋಡಿ ದೇವನು ಹರ್ಷಿಸಿ, ತನ್ನ ವಾಹನ ವಾದ ಮಯೂರವನ್ನೇರಿ ಮುಂದೆ ಹೊರಟುದು. ದೇವನು ಧರಿಸಿದ್ದ ಶಸ್ತ್ರಾಸ್ತ್ರಗಳ, ಹಾಗೂ ದೇವನನ್ನು ಹಿಂಬಾಲಿಸಿದವರ ಸನ್ನಾಹೋತ್ಸಾಹಗಳ ವರ್ಣನೆ. ನಂದಿಯು ಮಯೂರೇಶನನ್ನು ವಂದಿಸಿ ಅಂತರಿಕ್ಷಕ್ಕೆ ನೆಗೆದು, ತನ್ನ ತೀಕ್ಷ್ಣ ಕೊಂಬುಗಳಿಂದ ತಿವಿಯುತ್ತಾ ಶತ್ರುಗಳ ಶಿರಗಳನ್ನು ಕತ್ತರಿಸಿದುದು. ತದೀಯರು ಅವನ ಶೌರ್ಯವನ್ನು ಪ್ರಶಂಸಿಸಿದುದು. ತನ್ನ ಕುದುರೆ, ಶ್ವೇತಚ್ಛತ್ರಗಳು ನಾಶವಾಗಲು, ಸಿಂಧು ಬೇರೊಂದಶ್ವ ವನ್ನೇರಿ ಕುಳಿತು, ತನ್ನ ವೀರ ಯೋಧರನ್ನು ಕುರಿತು 'ನಿಮ್ಮ ಪರಾಕ್ರಮವೆಲ್ಲ ಎಲ್ಲಿಗೆ ಹೋಯಿತು ?' ಎಂದು ಗದರಿಸಲು ಕೌಸ್ತುಭ, ಮೈತ್ರರೆಂಬ ಅಮಾ ತ್ಯರಿಬ್ಬರು ಮುಂದೆ ಬಂದು ಅಸುರನನ್ನು ವಂದಿಸಿ ತಾವಿರುವಾಗ ಚಿಂತಿಸಬೇಕಾದುದಿಲ್ಲವೆಂದು ಸಮಾ ಧಾನಪಡಿಸಿ ಯುದ್ಧಕ್ಕೆ ಹೊರಟುದು. ಅವರು ಹೋರಾಡಿದ ಬಗೆ. ವೀರಭದ್ರ, ಷಡಾನನರು ಅಮಾ ತ್ಯರೊಂದಿಗೆ ಯುದ್ಧಕ್ಕೆ ಬಂದುದು. ಅವರು ಬಿರುಸಿ ನಿಂದ ಯುದ್ಧವನ್ನು ಮಾಡಿದುದರ ವರ್ಣನೆ. ಅದರ ಪರಿಣಾಮ. ಸಿಂಧುವಿನ ಸೈನ್ಯಕ್ಕೆ ಜಯವು ದೊರೆ ತುದು. ರಾತ್ರಿ ಯುದ್ಧ ನಡೆದುದು. ಮತ್ತೆ ದೇವ ಸೇನೆಯವರು ದೈತ್ಯರ ಮೇಲೆ ಎರಗಿ ಬಂದುದು. ಅದನ್ನು ಕಂಡ ದೈತ್ಯಾಮಾತ್ಯರಾದ ಮೈತ್ರ-ಕೌಸ್ತು ಭರು ಪ್ರಾಣಗಳನ್ನು ಪಣವಿಟ್ಟು ಹೋರಾಡಿದುದು. ಕೌಸ್ತುಭನ ಶಸ್ತ್ರಾಘಾತಕ್ಕೆ ಷಡಾನನನು ಮೂರ್ಛೆ ಗೊಳ್ಳಲು, ವೀರಭದ್ರನು ಮುಂದೆ ಬಂದು, ಮೈತ್ರ-

ಕೌಸ್ತುಭರಿಬ್ಬರನ್ನೂ ಕೊಂದುದು. ದೈತ್ಯಸೇನೆಯು ಸೋತು ಓಡಿಹೋದುದು. ಸಿಂಧುದೈತ್ಯನು ಅಮಾತ್ಯರು ಮರಣ ಹೊಂದಿದುದಕ್ಕಾಗಿ ದುಃಖಿಸಿದುದು. ೨೨೪–೨೩೭

## ೧೧೪ ನೆಯ ಅಧ್ಯಾಯ :—

ಕೌಸ್ತುಭ-ಮೈತ್ರರು ಮರಣ ಹೊಂದಿದ ಸಂಗತಿಯನ್ನು ಇತರ ವೀರರು ವರ್ಣಿಸಿದುದು. ದೈತ್ಯರಾಜನು ಮೃತರನ್ನು ಪ್ರಶಂಸಿಸುತ್ತ ಇದಕ್ಕೆ ಪ್ರತೀಕಾರವಾಗಿ ಶತ್ರುವಿನೊಡನೆ ಚಕ್ರಯುದ್ಧವನ್ನು ಮಾಡುವುದಾಗಿ ಪ್ರತಿಜ್ಞೆಯನ್ನು ಮಾಡಿ ಅಶ್ವಾರೂಢನಾಗಿ ಯುದ್ಧಕ್ಕೆ ಹೊರಟುದು. ದೈತ್ಯಸೇನೆಯ ಆರ್ಭಟದ ವರ್ಣನೆ. ಇತ್ತ ದೇವಸೇನೆಯಲ್ಲಿ ಪ್ರಮುಖರಾದ ನಂದೀ, ಪುಷ್ಪದಂತ, ಭೂತರಾಜ, ವಿಕಟ, ಚಪಲ, ಷಡಾನನ, ವೀರಭದ್ರರು ತಮ್ಮ ವಶದಲ್ಲಿರುವ ಸೇನಾಪಡೆಯೊಂದಿಗೆ ಬಂದು ಏಳು ವ್ಯೂಹಗಳನ್ನು ನಿರ್ಮಿಸಲು, ಅತ್ತ ದೈತ್ಯಸೇನೆಯಲ್ಲೂ ಗಂಧಾಸುರ, ಮದನಕಾಂತ, ವೀರಧ್ವಜ, ಮಹಾಕಾಯ, ಶಾರ್ದೂಲ, ಧೂರ್ತ ಎಂಬ ಏಳು ಜನ ವೀರರು ತಾವೂ ಪ್ರತಿಯಾಗಿ ವ್ಯೂಹಗಳನ್ನು ನಿರ್ಮಿಸಿಕೊಂಡು ಯುದ್ಧವನ್ನು ಆರಂಭಿಸಿದುದು. ಯಾರು ಯಾರು ಯಾರ್ಯಾರೊಂದಿಗೆ ಹೇಗೆ ಹೇಗೆ ಯುದ್ಧವನ್ನು ಮಾಡಿದರೆಂಬುದರ ವರ್ಣನೆ. ಚಪಲನಿಂದ ಶಾರ್ದೂಲನು ಏಟುತಿಂದು ಮೂರ್ಛಿತನಾಗಿ ಮತ್ತೆ ಎದ್ದು ಚಪಲನನ್ನು ಕೆಡಹಿದುದು. ಅವರ ವೀರಗರ್ಜನೆಗಳು. ಕೋಲಾಹಲದಲ್ಲಿ ವೀರರು ತಮ್ಮವರನ್ನೇ ಹೊಡೆಯಲುದ್ಯುಕ್ತರಾದುದು. ರಕ್ತದ ನದಿಯು ಹರಿದುದು. ಅದರ ಭೀಕರ ರೂಪದ ವರ್ಣನೆ. ರಕ್ತ ಮಾಂಸಗಳ ಆಸೆಗೆ ಬಲಿ ಬಿದ್ದು ಭೂತ-ಪ್ರೇತಗಳು, ಶ್ವಾಪದ-ಪಕ್ಷಿಗಳು ಅಲ್ಲಿ ಮುತ್ತಿದುದು. ದೈತ್ಯ ಸೇನೆಯು ಸೋತು ಓಡಿಹೋಗುತ್ತಿ

ರಲು, ಷಡಾನನನು ಅವರನ್ನು ಹಿಂದಟ್ಟಿಕೊಂಡು ಹೋಗಿ ಹೀಯಾಳಿಶುತ್ತ ಸವೆಬಡಿದುದು. ದೈತ್ಯ ಸೇನೆಯವರೆಲ್ಲ ಈ ನಿಂದಾವಚನ, ಏಟುಗಳಿಗೆ ಕುಪಿತ ರಾಗಿ ಷಣ್ಮುಖನನ್ನು ಒಮ್ಮೆಲೇ ಆಕ್ರಮಿಸಿದುದು, ಹಿರಣ್ಯಗರ್ಭಾದಿಗಳು ಷಡಾನನನ ನೆರವಿಗೆ ಸೈನ್ಯ ದೊಂದಿಗೆ ಬಂದು ದೈತ್ಯಸೇನೆಯನ್ನು ಸೋಲಿಸಿ ದುದು. ಎಲ್ಲರೂ "ಮಯೂರೇಶ್ವರನಿಗೆ ವಿಜಯ ವಾಗಲಿ" ಎಂದು ಜಯಘೋಷವನ್ನು ಮಾಡಿದುದು. ೨೩೮—೨೫೧

೧೧೫ ನೆಯ ಅಧ್ಯಾಯ :—

ತನ್ನ ಸೇನೆಯು ಸೋತುಹೋದ ಸಂಗತಿಯನ್ನು ತಿಳಿದು ಸಿಂಧುದೈತ್ಯನು ಚಿಂತಾಕ್ರಾಂತನಾದುದು. ಕ್ರಮೇಣ ಕೋಪ ಉಂಟಾಗಿ ಮಯೂರೇಶನನ್ನು ಕೊಂದೇ ಬರು ವೆನೆಂದು ಪ್ರತಿಜ್ಞೆಯನ್ನು ಮಾಡಿ, ಅಶ್ವಾರೂಢನಾಗಿ ಶಸ್ತ್ರಾಸ್ತ್ರಗಳೊಡನೆ ಬಿರುಸಿನಿಂದ ಯುದ್ಧಕ್ಕೆ ಹೊರಟುದು. ಇವನು ಹೊರಟ ರಭಸಕ್ಕೆ ಉಂಟಾದ ಉತ್ಪಾತಗಳು. ರಾಕ್ಷಸನು ಬಂದಕೂಡಲೇ ದೇವಸೇನೆ ಯಲ್ಲಿ ಕ್ಷೋಭೆಯನ್ನುಂಟುಮಾಡಿದುದು. ಇವನ ಪರಾಕ್ರಮಕ್ಕೆ ನಂದೀ, ಭೂತರಾಜ, ಪುಷ್ಪದಂತ. ಹಿರಣ್ಯಗರ್ಭ ಮೊದಲಾದ ವೀರರು ಬಲಿಯಾಗಿ ಮೂರ್ಛಿತರಾದುದು. ಇವರೆಲ್ಲರನ್ನೂ ಹಿಂದಕ್ಕೆ ಸರಿಸಿದ ಬಳಿಕ, ನೇರವಾಗಿ ಅಸುರನು ಮಯೂರೇಶನ ಮೇಲೆ ಯುದ್ಧವನ್ನಾರಂಭಿಸಿದುದು. ನಾಯಕರಿಬ್ಬರೂ ಕದ ನಕ್ಕೆ ನಿಂತಕೂಡಲೇ, ಸಿಂಧು ದೇವನನ್ನು ಅವಹೇಳನ ಮಾಡಿದುದು. ಅದಕ್ಕೆ ಪ್ರತಿಯಾಗಿ ಗಣಪತಿಯು ಸಿಂಧುವನ್ನು ಹೀಯ್ಯಾಳಿಸಲು, ದೈತ್ಯನು ರೊಚ್ಚಿಗೆದ್ದು ಬಾಣಗಳನ್ನು ಬಿಟ್ಟುದು. ಗಣಪತಿಯು ಪ್ರತಿ ಬಾಣ ಗಳನ್ನು ಪ್ರಯೋಗಿಸಿ, ದೈತ್ಯನ ಅಸ್ತ್ರಗಳನ್ನು ಭಂಗ ಪಡಿಸಿದುದು. ಸೂರ್ಯನಿತ್ತ ಅಸ್ತ್ರ, ಮಯೂರೇಶನು ಪ್ರಯೋಗಿಸಿದ ಪರಶು ಇವೆರಡೂ ಅಂತರಿಕ್ಷದಲ್ಲಿ ಘೋರವಾಗಿ ಕದನವನ್ನು ಮಾಡಿದುದು. ಕೊನೆಗೆ

ಪರಶು ದೈತ್ಯನ ಕಿರೀಟವನ್ನು ಕೆಡಹಿ, ಕಿವಿಗಳನ್ನು ಕೊಯ್ದುದು. ಇದರಿಂದ ವ್ಯಥಿತನೂ, ಕ್ರುದ್ಧನೂ ಆದ ಸಿಂಧು "ನಿನ್ನ ಸೊಂಡಿಲನ್ನೂ ಕೊಯ್ಯುವೆನೆ"ೆಂದು ಪ್ರತಿಜ್ಞೆಯನ್ನು ಮಾಡಿ ಶಸ್ತ್ರವನ್ನು ಹಿರಿದು, ಮಯೂರೇಶನ ಸಮೀಪಕ್ಕೆ ಧಾವಿಸಿ ಬಂದುದು. ಆಗ ದೇವನು ವಿಶ್ವರೂಪವನ್ನು ಧರಿಸಿ ಎಲ್ಲೆಲ್ಲೂ ತಾನೇ ಕಾಣುವಂತೆ ಮಾರ್ಪಟ್ಟಿದ್ದು. ಅದನ್ನು ನೋಡಿ ದೈತ್ಯನು ನಾಚಿಕೊಂಡು ತನ್ನ ಮಂದಿರಕ್ಕೆ ಹೊರಡಲು, :ದೇವನು ಅಲ್ಲೂ ಕಂಡು ಬಂದುದು. ಈ ಅದ್ಭುತವನ್ನು ಕಂಡು ಭಯಗೊಂಡ ಸಿಂಧು ಮುಖವನ್ನು ಮುಚ್ಚಿಕೊಂಡು ತನ್ನ ಊರಿಗೆ ಓಡಿ ಹೋದುದು. ೨೫೨ - ೨೬೫

## ೧೧೬ ನೆಯ ಅಧ್ಯಾಯ :—

ದೇವನು ಜಯಶಾಲಿಯಾದುದನ್ನು ಕೇಳಿ ಮುನೀಶ್ವರರೂ, ಪಾರ್ವತೀ ಪರಶಿವರೂ ಅಲ್ಲಿಗೆ ಬಂದುದು. ಪಾರ್ವತಿಯು ಮಗನನ್ನು ಬಾಯಿತುಂಬ ಹೊಗಳಿ ಮೈತಡವಿದುದು. ಪರಮೇಶ್ವರನು ಗಣಪತಿಯ ಗುಣಗಣವನ್ನು ಬಣ್ಣಿಸಿ ಹೇಳಿ, ದೇವಿಯನ್ನು ಸಮಾಧಾನ ಪಡಿಸಿದುದು. ಅದನ್ನೇ ಸಮರ್ಥಿಸುತ್ತ ಗಣಪತಿಯು ತನಗೆ ಯಾರಿಂದಲೂ ಅಪಾಯವಿಲ್ಲವೆಂದು ಹೇಳಿ, ಯುದ್ಧದಲ್ಲಿ ಮಡಿದ ತನ್ನಸೈನಿಕರಿಗಾಗಿ ದುಃಖಿಸುವೆನೆಂದು ಹೇಳಿದುದು. ಮುನಿಗಳು ತಾವೂ ಯುದ್ಧರಂಗಕ್ಕೆ ಬಂದು ಮೃತರನ್ನು ಬದುಕಿಸಲು ಯಾವುದಾದರೊಂದು ಉಪಾಯವನ್ನು ಆಲೋಚಿಸೋಣವೆಂದು ಹೇಳಿ ದೇವನೊಡನೆ ಹೊರಟುದು. ರಣಭೂಶಾಯಿಗಳ ಪರಿಶೋಚನೀಯ ಪರಿಸ್ಥಿತಿಯ ವರ್ಣನೆ. ದೇವನು ಕರುಣೆಯಿಂದ 'ಇವರೆಲ್ಲ ಬದುಕುವಂತಾಗಬೇಕಾದರೆ, ಏನನ್ನು ಮಾಡಬೇಕು' ಎಂದು ಷಡಾನನನನ್ನು ಪ್ರಶ್ನಿಸಿದುದು. ಆಗ ಕುಮಾರನು ಗಣಪತಿಯನ್ನು ತತ್ತ್ವತಃ ವರ್ಣಿಸಿ, ಹಿಂದೆ ತ್ರಿಪುರನಿಗೂ ಶಿವನಿಗೂ

ನಡೆದ ಯುದ್ಧ ಸಂದರ್ಭದಲ್ಲಿ ಮಡಿದ ದೇವವೀರರನ್ನು ಬದುಕಿಸಲು ದ್ರೋಣಾಚಲದಿಂದ ಮೃತಸಂಜೀವಿನಿಯನ್ನು ತರಿಸಿತ್ತೆಂದು ಸೂಚಿಸಿ, ಈಗಲೂ ಅದನ್ನೇ ಮಾಡಬಹುದಾಗಿ ಹೇಳಲು, 'ಈ ಯುದ್ಧ ಸಂದರ್ಭದಲ್ಲಿ ಅದಕ್ಕೆ ವ್ಯವಧಾನವೆಲ್ಲಿದೆ?' ಎಂದು ಹೇಳಿ ದೇವನು ತನ್ನ ಯೋಗಮಾಯೆಯನ್ನು ಬೀರಿ ಎಲ್ಲರನ್ನೂ ಅದರ ಪ್ರಭಾವದಿಂದ ಪುನರುಜ್ಜೀವನಗೊಳಿಸಿದುದು. ಪುನರುಜ್ಜೀವಿತರಾದವರು ದೇವನನ್ನು ಸ್ತುತಿಸಿದುದು. ಆಗ ದೇವನು ವೀರರನ್ನು ಉತ್ತೇಜಿಸುವಂತೆ ಮಾತನಾಡಿ, ಅವರೊಂದಿಗೆ ಪರಶಿವನ ಸನ್ನಿಧಿಗೆ ಬಂದುದು. ಗಾಯಗೊಂಡವರೆಲ್ಲರೂ ಗಣಪತಿಯ ಅನುಗ್ರಹದಿಂದ ತಾವು ಪುನರುಜ್ಜೀವನಗೊಂಡುದನ್ನು ದೇವನಿಗೆ ಅರುಹಿದುದು.

### ೧೧೭ ನೆಯ ಅಧ್ಯಾಯ :—

ಸಿಂಧು ಹಾಸಿಗೆಯ ಮೇಲೆ ಮಲಗಿ ತನಗುಂಟಾದ ಪರಾಜಯಕ್ಕಾಗಿ ವ್ಯಥಿಸುತ್ತಿರಲು, ಅವನ ಹೆಂಡತಿ ದುರ್ಗೆಯು ಬಂದು ಉಪಚರಿಸಿ, ಈಶ್ವರನ ಮಹಿಮೆಯನ್ನು ಕೊಂಡಾಡುತ್ತ, ಗೋ-ಬ್ರಾಹ್ಮಣ-ಸುರರನ್ನು ದ್ವೇಷಿಸಬಾರದಾದುದರಿಂದ ದೇವತೆಗಳನ್ನು ಬಿಡುಗಡೆ ಮಾಡಿ ಮಯೂರೇಶನಿಗೆ ಒಪ್ಪಿಸಬೇಕೆಂದು ಬೋಧಿಸಿದುದು. ಪ್ರಾಸಂಗಿಕವಾಗಿ ಮಾನವತೆಗೆ ಹೆಗ್ಗುರುತಾದ ಸದ್ಗುಣಗಳನ್ನು ನಿರೂಪಿಸಿದುದು. ಇದು ರಕ್ಕಸನಿಗೆ ಹಿಡಿಸದಿರಲು, ತನ್ನ ಮೂಗಿಗೆ ನೇರವಾಗಿ ತಾನೂ ನೀತಿಯನ್ನು ಬೋಧಿಸಲಾರಂಭಿಸಲು, ಒಮ್ಮೆಲೇ ತನಗೊದಗಿದ ಅಪಮಾನ ಪ್ರಸಂಗ ನೆನಪಾಗಲು, ಯುದ್ಧಸನ್ನದ್ಧನಾಗಿ ಕಿವಿಗಳು ಕಾಣದಂತೆ ಶಿರಸ್ತ್ರಾಣದಿಂದ ಮುಚ್ಚಿಕೊಂಡು ಸೇನಾನಿಗಳೊಡನೆ ಮುಂದಿನ ಕಾರ್ಯವನ್ನು ಆಲೋಚಿಸಲು ಸಭಾಮಂದಿರಕ್ಕೆ ಬಂದುದು.

**೧೧೮ ನೆಯ ಅಧ್ಯಾಯ :—**

ಯುದ್ಧಾವೇಶದಿಂದ ಕೂಡಿದ ಸಿಂಧು ನಡೆದ ಸಂಗತಿಯನ್ನು ತನ್ನ ವೀರರೆದುರು ತಿಳಿಸಲು ವೀರರು ಇದಕ್ಕೆ ತಾವು ಪ್ರತೀಕಾರವನ್ನು ಮಾಡುವುದಾಗಿ ಹೇಳಿ, ಆ ಪೈಕಿ ದೈತ್ಯನ ಶಾಲಕರಾದ ಕಲ-ವಿಕಲರನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೊರಟರು. ಅವರ ವೈಭವ-ಆವೇಶಗಳ ವರ್ಣನೆ. ಅವರು ಸಂಗಡ ಕರೆದೊಯ್ದ ಸೇನೆಯ ವರ್ಣನೆ. ಅವರು ಯುದ್ಧಭೂಮಿಗೆ ಬಂದಕೂಡಲೇ ಪರಿವಾರ ಪರಿವೃತನಾದ ಮಯೂರೇಶನನ್ನು ಕಂಡುದು. ಆಗ ದೇವಸೇನೆಯ ಪ್ರಮುಖರು ನೀತಿಜ್ಞನೊಬ್ಬನನ್ನು ಶತ್ರುಸೈನ್ಯದ ಬಲಾಬಲಗಳನ್ನು ತಿಳಿದುಬರಲು ಕಳಿಸಿದುದು. ಅವನು ಅವರ ಬಲವನ್ನೂ, ಸೇನಾ ಸಿದ್ಧತೆಯನ್ನೂ ಅವರು ತಮ್ಮವರೊಡನೆ ಹೋರಾಡಿದುದನ್ನೂ ಬಣ್ಣಿಸಲು ಜಯಶಾಲಿಗಳಾದ ದೇವಸೇನೆಯವರು ಸ್ವ-ಶಿಬಿರಕ್ಕೆ ಬಂದುದು- ೨೯೨-೩೦೨

**೧೧೯ ನೆಯ ಅಧ್ಯಾಯ**

ವೀರಭದ್ರನಿಂದ ಕಲ-ವಿಕಲರು ಹತರಾದುದನ್ನು ಕೇಳಿ ಸಿಂಧುದೈತ್ಯನು ಅತಿಯಾಗಿ ಚಿಂತಿಸಿದುದು. ಆಗ ಅಸುರನ ಮಕ್ಕಳಾದ ಧರ್ಮಾಧರ್ಮರು ತಂದೆಯ ಸಮೀಪಕ್ಕೆ ಬಂದು ಯುದ್ಧಕ್ಕೆ ಹೋಗಲು ತಮಗೆ ಅಪ್ಪಣೆಯನ್ನು ಕೊಡಬೇಕೆಂದು ಹೇಳಿ. ತಮ್ಮ ಬಲ-ಪರಾಕ್ರಮಗಳನ್ನು ಹೊಗಳಿಕೊಂಡುದು. ಅದರಿಂದ ಸಂತುಷ್ಟನಾದ ಸಿಂಧು ಅವರಿಬ್ಬರಿನ್ನೂ ಆಶೀರ್ವದಿಸಿ ರಣಕ್ಕೆ ಕಳಿಸಿದುದು. ಅವರಿಬ್ಬರೂ ಹತ್ತಾರು ಕೋಟಿಯಷ್ಟು ಬಲಿಷ್ಠ ಸೇನೆಯನ್ನು ಸಂಗಡ ಕರೆದುಕೊಂಡು ಯುದ್ಧಕ್ಕೆ ಬಂದುದು. ಅವರ ವಿಭವ, ಸೇನಾರಚನೆ ಇತ್ಯಾದಿಗಳ ವರ್ಣನೆ. ಇವರಿಗೂ ದೇವಸೇನೆಯವರಿಗೂ ನಡೆದ ಘನ-ಘೋರವಾದ ಯುದ್ಧದ ವರ್ಣನೆ. ಕೊನೆಗೆ ತಾರ್ಕಿಕೇಯನು ಧರ್ಮಾಧರ್ಮರ ಜುಟ್ಟನ್ನು

ಹಿಡಿದು ಶಿರಚ್ಛೇದನವನ್ನು ಮಾಡಿ ಬಿಸುಟಿದುದು. ದೇವಸೈನಿಕರು ಸಂತೋಷಿಸಿ ಜಯಕಾರವನ್ನು ಮಾಡಿದುದು. ವಿಜಯಶಾಲಿಗಳಾದ ವೀರಭದ್ರ, ಷಡಾನನ, ಹಿರಣ್ಯಗರ್ಭ ಮತ್ತು ಭೂತರಾಜ ಇವರನ್ನು ದೇವನು ಶ್ಲಾಘಿಸಿ, ಪ್ರೇಮದಿಂದ ಆಲಿಂಗಿಸಿದುದು. ಸಿಂಧುವಿನ ಮಕ್ಕಳಿಬ್ಬರೂ ಮೃತರಾದ ಸಂಗತಿಯನ್ನು ಶಿವ-ಪಾರ್ವತಿಯರಿಗೆ ವಿವರಿಸಿ ನಿವೇದಿಸಿದುದು.

## ೧೨೦ ನೆಯ ಅಧ್ಯಾಯ :—

ಹತಶಿಷ್ಟರಾದ ದೈತ್ಯಸೈನಿಕರು ಸಿಂಧುವಿನ ಸಮೀಪಕ್ಕೆ ಬಂದು ಅವನ ಮಕ್ಕಳು ಮೃತರಾದ ಸಂಗತಿಯನ್ನು ಹೆದರುತ್ತ ಅಳುತ್ತ ತಿಳಿಸಿದುದು. ಅವರ ಛಿನ್ನ-ಭಿನ್ನ ಪರಿಸ್ಥಿತಿಯನ್ನೂ, ತನ್ನ ಮಕ್ಕಳು ಮೃತರಾದುದನ್ನೂ ನೋಡಿ, ಕೇಳಿ ನಿರ್ವಿಣ್ಣನಾದ ಸಿಂಧುದೈತ್ಯನು ಮಕ್ಕಳ ಗುಣಗಳನ್ನು ವರ್ಣಿಸುತ್ತ ಮನಸ್ವಿಯಾಗಿ ಅತ್ತು, ತನ್ನ ಮಕ್ಕಳನ್ನು ಕೊಂದು ತನಗೆ ದುಃಖವನ್ನುಂಟುಮಾಡಿದ ಶತ್ರುವನ್ನು ನಿಶ್ಶೇಷಮಾಡದೆ ಹಿಂದಿರುಗುವುದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿದುದು. ಆ ವೇಳೆಗೆ ದುರ್ಗೆಗೆ ಸಮಾಚಾರ ತಿಳಿಯಲು ಅವಳು ಅತಿಯಾಗಿ ಅತ್ತುದು. ಹಿರಿಯರೂ, ತಿಳಿದವರೂ ಆ ದಂಪತಿಗಳನ್ನು ಸಮಾಧಾನಪಡಿಸಿ, ಪ್ರತಿಕ್ರಿಯೆಯನ್ನು ಕೈಗೊಳ್ಳುವಂತೆ ಪ್ರೇರಿಸಿದುದು. ಸಿಂಧುವಿನ ಯುದ್ಧದ ಸಡಗರ,ಸೇನಾಚಲನೆ ಇತ್ಯಾದಿಗಳ ವರ್ಣನೆ. ರಾಕ್ಷಸನು ಯುದ್ಧಕ್ಕೆ ಹೊರಟು ನಿಂತ ಸಮಯದಲ್ಲಿ ಅವನ ತಂದೆ; ಚಕ್ರಪಾಣಿಯು ಬಂದು ಯುದ್ಧದಿಂದ ನಿವೃತ್ತನಾಗುವಂತೆಯೂ, ಬದ್ಧರಾದ ದೇವತೆಗಳನ್ನು ಮಯೂರೇಶ್ವರನಿಗೆ ಒಪ್ಪಿಸಿ ಅವನ ಅನುಗ್ರಹಕ್ಕೆ ಪಾತ್ರನಾಗುವಂತೆಯೂ ಬೋಧಿಸಿದುದು. ಇದನ್ನು ಕೇಳಿ ಕುಪಿತನಾದ ಸಿಂಧು ತಂದೆಯನ್ನು ಧಿಕ್ಕರಿಸಿ ಮಾತನಾಡಿ ತಾನು ಯುದ್ಧ ಕರ್ಮದಿಂದ ನಿವೃತ್ತನಾಗಲಾರೆನೆಂದು ಸ್ಪಷ್ಟವಾಗಿ ನುಡಿದು, ತಂದೆಯನ್ನು

ಬಲಾತ್ಕಾರದಿಂದ ಹಿಂದಿರುಗಿಸಿ ತಾನು ಯುದ್ಧೋನ್ಮುಖನಾಗಿ ಹೊರಟುದು. ೩೧೩-೩೨೮

## ೧೨೧ ನೆಯ ಅಧ್ಯಾಯ :—

ವೀರಭದ್ರಾದಿ ಸೇನಾಪ್ರಮುಖರೊಡನೆ ಸುಖವಾಗಿ ಕುಳಿತಿದ್ದ ಮಯೂರೇಶ್ವರನ ಬಳಿಗೆ ದೇವತೆಗಳ ಪೈಕಿ ಕಾವಲಿದ್ದ ಕೆಲವರು ಓಡೋಡಿ ಬಂದು "ಸಾಕ್ಷಾತ್ ಸಿಂಧುವೇ ಮತ್ತೆ ಯುದ್ಧಕ್ಕೆ ಬಂದಿದ್ದಾನೆ. ಅವನನ್ನು ನೋಡಿ "ಕಾಲಮೃತ್ಯುವೇ ಬಂದಿತೆ"ಂದು ನಮ್ಮವರೆಲ್ಲರೂ ಹೆದರಿ ಕುಳಿತಿದ್ದಾರೆ ಎಂದುಸುರಲು ಮಯೂರೇಶ್ವರನು ಹರ್ಷಿತನಾಗಿ ತನ್ನ ಆಯುಧಗಳನ್ನೆಲ್ಲ ಸರಿಪಡಿಸಿಕೊಂಡು ಮಯೂರವನ್ನೇರಿ ಘಟ್ಟಿಯಾಗಿ ಒಮ್ಮೆ ಗರ್ಜಿಸಿದುದು. ಅಣ್ಣನು ಯುದ್ಧಕ್ಕಾಗಿ ಹೊರಟುದನ್ನು ನೋಡಿದ ಷಡಾನನನು ಅವನನ್ನು ತಡೆದು 'ನಾವಿರುವಾಗ ನೀನೇಕೆ ಯುದ್ಧಕ್ಕೆ ಹೋಗಬೇಕು ? ನಮ್ಮ ಶಕ್ತಿ ಕುಂಠಿಸಿದರೆ, ಆಗ ನೀನು ಬರುವೆಯಂತೆ' ಎಂದು ಹೇಳಿ ಚತುರಂಗಸೇನೆಯೊಂದಿಗೆ ಯುದ್ಧಕ್ಕೆ ಹೊರಟುದು. ಇವನು ಯುದ್ಧಭೂಮಿಯನ್ನು ತಲುಪಿದ ಕೂಡಲೇ ರಭಸದಿಂದ ಪರಾಕ್ರಮವನ್ನು ಪ್ರಕಟಿಸಿ ಕೈಗೆ ಸಿಕ್ಕವರನ್ನು ಅವರಿವರೆನ್ನದೆ ತುಂಡರಿಸಿ ಚಲ್ಲಿದನು. ಪರಸ್ಪರ ಮತ್ಸರದಿಂದ ಹೊಡೆದಾಡಲಾರಂಭಿಸಲು, ದೊಡ್ಡದೊಂದು ಕೋಲಾಹಲವೇ ಎದ್ದು, ಅಸೃಙ್ನದಿಯು ಹರಿದುದು. ಯುದ್ಧಭೂಮಿಯ ಭೀಕರ ಸ್ವರೂಪದ ವರ್ಣನೆ. ಷಡಾನನ, ವೀರಭದ್ರ, ಭೂತರಾಜಾದಿಗಳು ಸಾಹಸದಿಂದ ಹೋರಾಡಿ ಸಿಂಧುದೈತ್ಯನ ಚತುರಂಗ ಸೇನೆಯನ್ನು ನಿರ್ನಾಮ ಮಾಡಲು ದೇವಸೈನಿಕರು "ಮಯೂರೇಶನಿಗೆ ವಿಜಯವಾಗಲಿ. ಅವನ ಅನುಗ್ರಹದಿಂದ ನಮ್ಮ ಸೇನೆಗೆ ವಿಜಯವು ಲಭಿಸಿತು' ಎಂದು ಘೋಷಣ ಮಾಡಿದರು. ಇದನ್ನು ಕೇಳಿದ ಸಿಂಧು ರೊಚ್ಚಿಗೆದ್ದು "ಇಷ್ಟವಿದ್ದವರು ನನ್ನೊಡನೆ ಬರಬಹುದು. ನಾನಂತೂ

ಕಂಪಿಸಿಸುದು. ಇವರು ನಗರವನ್ನು ಹೊಕ್ಕು ಒಳಕ್ಕೆ ಬಂದುದನ್ನು ಚಾರರು ಸಿಂಧುವಿಗೆ ತಿಳಿಸಿದುದು. ಇದನ್ನು ಕೇಳಿ ಗಂಡ ಹೆಂಡತಿಯರಿಬ್ಬರೂ ಚಿಂತಾಸಾಗರದಲ್ಲಿ ಮುಳುಗಿದುದು. "ನನ್ನ ಹಿತನುಡಿಯನ್ನು ನಿರಾಕರಿಸಿದುದಕ್ಕೆ ಈಗ ಎಲ್ಲರೂ ಈ ದುಷ್ಫಲವನ್ನು ಉಣಬೇಕಾಗಿದೆ" ಎಂದು ಅವಳು ನುಡಿಯುತ್ತಿರುವಷ್ಟರಲ್ಲಿ ದೇವವೀರರು ಒಳಕ್ಕೆ ನುಗ್ಗಿಬಂದುದು. ಬಹು ಶೃಂಗಾರದಿಂದ ಕೂಡಿದ ಸಭಾಮಂಡಪದ ರತ್ನಮಯ ಶಿಖರಗಳನ್ನು ಮುರಿದು ಚೆಲ್ಲಿದುದು. ಭೃಂಗಿಯು ಸಭಾಮಂಡಪದ ಸೌಂದರ್ಯವನ್ನೆಲ್ಲ ಭಂಗಪಡಿಸಿ, ಅಲ್ಲಿದ್ದ ಅಮೂಲ್ಯ ವಸ್ತುಗಳನ್ನು ಕಿತ್ತು ಅಂಗಳಕ್ಕೆ ಬೀಸಿ ಎಸೆಯುತ್ತಿರಲು, ದೈತ್ಯಸೇನೆಯವರು ಇವರ ಪುಂಡನ್ನಡಗಿಸಲು ಇವರೊಡನೆ ಯುದ್ಧವನ್ನು ಮಾಡಿದುದು. ಮತ್ತು ದೈತ್ಯಸೇನೆಯು ವಿನಾಶವನ್ನು ಹೊಂದಿದುದು. ಆಗ ದೇವವೀರರು ಅಂತಃಪುರಕ್ಕೆ ನುಗ್ಗಿ ಸಿಂಧುವಿನ ಜುಟ್ಟನ್ನು ಹಿಡಿದೆಳೆಯುತ್ತ ತಂದು ರಣಸ್ತಂಭಕ್ಕೆ ಬಿಗಿದು ಹಾಕಲು ಯತ್ನಿಸಿದುದು. ಈ ಅಪಮಾನವನ್ನು ಸಹಿಸಲಾರದೆ, ದೈತ್ಯನು ಪನ್ನಗಾಸ್ತ್ರವನ್ನು ಪ್ರಯೋಗಿಸಲು, ಭೃಂಗಿಯು ಗಾರುಡಾಸ್ತ್ರದಿಂದ ಅದರ ಹಾವಳಿಯನ್ನು ತಪ್ಪಿಸಿದುದು. ಸಿಂಧು ಬಿಟ್ಟ ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದ ತಡೆಗಟ್ಟಿದುದು ಅಂತೆಯೇ ವಾಯ್ವಸ್ತ್ರವನ್ನು ಪರ್ವತಾಸ್ತ್ರದಿಂದ ಭಂಗಗೊಳಿಸಿದ ಮೇಲೆ ಪರಸ್ಪರರು ಮಲ್ಲಯುದ್ಧವನ್ನಾಡಿದುದು. ನಂದಿಯು ಬಂದು ದೈತ್ಯನ ಕಿರೀಟವನ್ನು ಕೆಡಹಲು, ಭೃಂಗಿಯು ಓಡಿ ಬಂದು ರಾಕ್ಷಸನ ಬೆನ್ನಿಗೊಂದು ಬಲವಾದ ಗುದ್ದನ್ನು ಹೊಡೆದುದು. ವೀರಭದ್ರನು ರಕ್ಕಸನ ಭಾರ್ಯೆಯ ಮುಡಿಯನ್ನು ಹಿಡಿದೆಳೆಯುತ್ತಿರಲು, ಭೂತರಾಜನು ಬಂದು ರೋಷದಿಂದ ರಾಕ್ಷಸನನ್ನು ಗುದ್ದಿದುದು. ದುರ್ಗೆಯು ಗಂಡನ ಈ ದುರವಸ್ಥೆ, ತನ್ನ ಅಪಮಾನ ಇತ್ಯಾದಿಗಳನ್ನು ಸಹಿಸಲಾರದೆ

ಕಣ್ಣುಗಳನ್ನು ಮುಚ್ಚಿಕೊಂಡು ತನ್ನ ಮಂದಿರಕ್ಕೆ ಓಡಿ ಹೋದುದು. ಸಿಂಧು ಆವೇಶದಿಂದ ವೀರಭದ್ರನ ಕಾಲುಗಳನ್ನು ಹಿಡಿದೆಳೆದು ಕೆಡಹಿದುದು. ನಂದಿಯನ್ನು ಗುದ್ದಿದುದು. ಭೃಂಗಿಯ ಜಡೆಯನ್ನು ಹಿಡಿದು ಜುಂಗಿಸಿ ನೆಲಕ್ಕುರುಳಿಸಿದುದು, ಭೂತರಾಜನನ್ನೂ ನೆಲಕ್ಕುರುಳಿಸಿ ಮೂರ್ಛೆಗೊಳ್ಳುವಂತೆ ಮಾಡಿದುದು. 'ಈಗಲೇ ಹೋಗಿ ಮಯೂರೇಶನನ್ನು ಕೊಂದುಬಿಡುವೆನು' ಎಂದು ನುಡಿದು ಗರ್ಜಿಸುತ್ತ ಯುದ್ಧ ಭೂಮಿಯನ್ನು ಹೊಕ್ಕುದು. ದೇವವೀರರು ಗಜಾನನನ ಬಳಿಗೆ ಬಂದು ಸಿಂಧುವಿನ ಸೈನ್ಯವನ್ನು ಕೊಂದು ಅವನನ್ನು ಎಳೆದು ರಣಭೂಮಿಗೆ ತಂದುದಾಗಿ ದೇವನೆದುರು ಹೇಳಿದುದು. ಮತ್ತು ಅವನನ್ನು ಈ ಭವಾರ್ಣವದಿಂದ ಶೀಘ್ರದಲ್ಲೇ ತಾರಣಮಾಡಬೇಕೆಂದು ಬೇಡಿಕೊಂಡುದು. ೩೪೬-೩೬೧

**೧೨೩ ನೆಯ ಅಧ್ಯಾಯ :—**

ಸಿಂಧು ಯುದ್ಧಭೂಮಿಗೆ ಬಂದುದನ್ನು ಕೇಳಿ ಮಯೂರೇಶನು ಶಿಖಂಡಿಯನ್ನೇರಿ ಯುದ್ಧಕ್ಕೆ ಬೇಗನೆ ಹೊರಟುದು. ಅವನು ಧರಿಸಿದ ಆಯುಧಗಳ ವರ್ಣನೆ. ಪರಸ್ಪರರನ್ನು ನೋಡಿದುದು. ಸಿಂಹವನ್ನು ನೋಡಿದ ಗಜರಾಜ, ಗರುಡನನ್ನುನೋಡಿದ ಸರ್ಪ, ಮಧು-ಕೈಟಭರನ್ನು ನೋಡಿದ ಮಹಾವಿಷ್ಣು, ತ್ರಿಪುರನು ಶಿವನನ್ನು ನೋಡಿದಂತೆ, ಶುಂಭ–ನಿಶುಂಭರು ಜಗದಂಬೆಯನ್ನು ಕಂಡಂತಾಗಿ ಒಡನೆಯೇ ಹೋರಾಟವನ್ನಾರಂಭಿಸಿಬಿಟ್ಟರು. ಈ ಯೋಧರಿಬ್ಬರ ಆಗಿನ ಕಾಲದ ಸ್ವರೂಪ, ಪರಿಸ್ಥಿತಿಗಳ ವರ್ಣನೆ. ಪರಸ್ಪರರ ಶಸ್ತ್ರಾಸ್ತ್ರಗಳು ಒಂದಕ್ಕೊಂದು ಘಟ್ಟಿಸಿದ್ದರಿಂದ ಅಗ್ನಿಯುದಿಸಿ ಪೃಥಿವೀ ಪರ್ವತ ಇವನ್ನು ದಹಿಸಲಾರಂಭಿಸಿದುದು. ಇವರಿಬ್ಬರ ಕಾಲ್ತುಳಿತದಿಂದ ಭೂಮಿಯು ಕಂಪಿಸಿದುದು. ಸಿಂಧು

ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದ ಕೂಡಲೇ ಅದರಿಂದ ಉದ್ಭವಿಸಿದ ಜ್ವಾಲೆ ರಣಾಂಗಣದಲ್ಲೆಲ್ಲ ಸುತ್ತಾಡಿ ಮಯೂರೇಶ್ವರನನ್ನೂ, ಇತರ ದೇವಸೇನೆಯನ್ನೂ ಸುಡಲಾರಂಭಿಸಿ, ದಿಙ್ಮಾಲೆಗಳಿಗೆಲ್ಲ ವ್ಯಾಪಿಸಿದುದು. ಆಗ ಮಯೂರೇಶನು ತನ್ನ ಪಾಶಾಯುಧವನ್ನು ಮೇಘಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ ಪ್ರತಿಯಾಗಿ ಪ್ರಯೋಗಿಸಿ, ಅಗ್ನಿಜ್ವಾಲೆಯನ್ನು ತಣಿಸಿದುದು. ಪಾಶಾಸ್ತ್ರವು ಇಷ್ಟಕ್ಕೆ ಸುಮ್ಮನಿರದೆ ಪರ್ವತಗಳನ್ನೆಲ್ಲ ಕಿತ್ತುತಂದು ದೈತ್ಯನ ಸೇನೆಯ ಮೇಲೆ ಬೀಳುವಂತೆ ಮಾಡಲು, ದಿಗ್ಭ್ರಾಂತರಾದ ದೈತ್ಯರು 'ಇದು ಪ್ರಲಯಕಾಲವೇ ಸರಿ' ಎಂದು ನಿಶ್ಚಯಿಸಿದುದು. ಸಿಂಧು ದೈತ್ಯನು ವಾಯ್ವಸ್ತ್ರದಿಂದ ಮೇಘಗಳನ್ನು ಚದುರಿಸಲು. ದೇವನು ಕೋಪಗೊಂಡು ತನ್ನ ಕೈಯ್ಯಲ್ಲಿದ್ದ ಕಮಲಾಯುಧವನ್ನು ಪರ್ವತಾಸ್ತ್ರಮಂತ್ರದಿಂದ ಅಭಿಮಂತ್ರಿಸಿ, ದೈತ್ಯನ ಮೇಲೆ ಎಸೆದುದು. ಇದರಿಂದ ದೊಡ್ಡ ದೊಡ್ಡ ಪರ್ವತಗಳು ಬಂದು ಪೃಥವಿಯನ್ನೆಲ್ಲ ಆವರಿಸಿ ಕುಳಿತುದು. ದೈತ್ಯನು ವಜ್ರಾಸ್ತ್ರವನ್ನು ಪ್ರಯೋಗಿಸಿ ಪರ್ವತಗಳನ್ನು ಭೇದಿಸಲಾರಂಭಿಸಲು ಆಗ ಮಯೂರೇಶನು ತನ್ನ ಅಂಕುಶದಲ್ಲಿ ವಜ್ರಾಸ್ತ್ರದ ಮಂತ್ರಶಕ್ತಿಯನ್ನು ಸಂಕ್ರಾಂತಗೊಳಿಸಿ, ದೈತ್ಯನು ಪ್ರಯೋಗಿಸಿದ ವಜ್ರಾಸ್ತ್ರಕ್ಕೆ ಪ್ರತಿಯಾಗಿ ಪ್ರಯೋಗಿಸಿದನು. ಇವೆರಡರ ಸಂಘರ್ಷಣೆಯಿಂದ ಅಗ್ನಿಯುದಿಸಿ ಲೋಕಗಳನ್ನೆಲ್ಲ ದಹಿಸಲಾರಂಭಿಸಿದುದು. ಆಯುಧಗಳು ಒಂದನ್ನೊಂದು ಪರಾಭವಗೊಳಿಸಿದ್ದರಿಂದ ನೆಲಕ್ಕುರುಳಿದ ವಜ್ರಗಳೆಲ್ಲವೂ ಅದೃಶ್ಯವಾದುದು. ಇಷ್ಟಾದರೂ ಕೆಚ್ಚೆದೆಯ ಕ್ರವ್ಯಾದನು ತನ್ನ ಮಂತ್ರಿಗಳನ್ನು ಕುರಿತು "ಈ ಶಸ್ತ್ರಾಸ್ತ್ರಗಳನ್ನು ಎಷ್ಟು ಪ್ರಯೋಗಿಸಿದರೆ ತಾನೇ ಪ್ರಯೋಜನವೇನಿದೆ? ನೋಡುತ್ತಲಿರಿ, ಒಂದೇ ಕ್ಷಣದಲ್ಲಿ ಈ ಬಾಲಕನನ್ನು ಸುಟ್ಟು ಬೂದಿಯನ್ನಾಗಿ ಮಾಡಿಬಿಡುವೆನು." ಎಂದು ನುಡಿದು. ದೇವನ ಮೇಲೆ ಆಕ್ರಮಣವನ್ನು ಮಾಡಿದುದು. ಮಯೂರೇಶನು ಸಿಂಧು

ವನ್ನು ತನ್ನ ಕೈಯಿಂದ ಭದ್ರವಾಗಿ ಹಿಡಿದುಕೊಂಡು ಕೂಡಲೇ ವಿರಾಡ್ರೂಪವನ್ನು ಧರಿಸಿದುದು. ವಿರಾಡ್ರೂಪದ ವರ್ಣನೆ. ಇದನ್ನು ನೋಡಿದ ಸಿಂಧುದೈತ್ಯನು ರವಿಯು ತನಗೆ ವರವನ್ನೀಯುವಾಗ ಸೂಚಿಸಿದ ಸಂಗತಿಯನ್ನು ಸ್ಮರಿಸಿಕೊಂಡು "ಇನ್ನು ಇವನೊಂದಿಗೆ ಯುದ್ಧವನ್ನು ಮಾಡುವುದು ಬೇಡ. ದೈವದ ಇಚ್ಛೆ ಹೇಗಿದೆಯೋ, ಅದರಂತೆ ಆಗಿಹೋಗಲಿ' ಎಂದು ನಿಶ್ಚಯಿಸಿದುದು. ಮತ್ತೆ ದೇವನ ಕಡೆ ತಿರುಗಿ ನೋಡಲು ವಿರಾಡ್ರೂಪಿಯಾಗಿದ್ದ ಮಯೂರೇಶನು ಹ್ರಸ್ವಾಕಾರನಾಗಿಯೂ, ಷಡ್ಭುಜಮಂಡಿತನಾಗಿಯೂ ಇರುವುದು ತೋರಿಬರಲು ಆಶ್ಚರ್ಯಚಕಿತನಾದುದು.

ಆಗ ದೇವೇಶನು ಮಯೂರದಿಂದ ಕೆಳಕ್ಕಿಳಿದು ಶುದ್ಧಾಚಮನವನ್ನುಮಾಡಿ ಮಹಾ ಮಂತ್ರ ಜಪದಿಂದ ಪರಶುವನ್ನು ಅಭಿಮಂತ್ರಿಸಿ ಸಿಂಧುವಿನ ಅಮೃತ ಪೂರ್ಣನಾಭಿಗೆ ಗುರಿ ಇಟ್ಟು ಪ್ರಯೋಗಿಸಲು ಆ ಪರಶು ತನ್ನ ಪ್ರಭೆಯಿಂದ ದಿಗ್ದಿದಿಕ್ಕುಗಳನ್ನೆಲ್ಲ ಬೆಳಗುತ್ತ ದೈತ್ಯನ ಕಡೆಗೆ ಧಾವಿಸಿ ಬಂದುದು. ಮೃತ್ಯುವಿನಂತೆ ಬರುತ್ತಿರುವ ಪರಶುವನ್ನು ನೋಡಿ ಸಿಂಧು ಮೈಮರೆಯದೆ ಧನುಸ್ಸನ್ನು ಸಿದ್ಧಗೊಳಿಸಿ ಬಾಣವನ್ನು ಪ್ರಯೋಗಿಸುವಷ್ಟರಲ್ಲಿ ಪರಶು ದೈತ್ಯನ ನಾಭಿಯನ್ನು ಸೀಳಿಬಿಟ್ಟಿತು. ಅಲ್ಲಿದ್ದ ಅಮೃತ ರಸವು ಸಂಪೂರ್ಣವಾಗಿ ಸುರಿದುಹೋಗಲು, ಬಿರುಗಾಳಿಗೆ ಸಿಲುಕಿದ ಬಾಳೆಯ ಗಿಡದಂತೆ ಅಸುರನು ನೆಲಕ್ಕುರುಳಿ ರಕ್ತವನ್ನು ಕಾರುತ್ತ, ಪ್ರಾಣಗಳನ್ನು ಬಿಟ್ಟುದು. ಮತ್ತು ಮಯೂರೇಶ್ವರನ ಪರಮಾನುಗ್ರಹದಿಂದ ಅತ್ಯಂತ ದುರ್ಲಭವಾದ ಸಾಯುಜ್ಯ ಪದವಿಯನ್ನು ಪಡೆದುದು. ಇದನ್ನು ನೋಡುತ್ತಲಿದ್ದವರೆಲ್ಲರೂ ಚಕಿತರಾದುದು. ಅದುವರೆಗೂ ವಿಮಾನಾರೂಢರಾಗಿದ್ದವರೆಲ್ಲರೂ ಕೆಳಕ್ಕಿಳಿದು ಬಂದುದು. ಅಂತರಿಕ್ಷದಿಂದ ಪುಷ್ಪವೃಷ್ಟಿ ಸುರಿದುದು. ಬಿರುಗಾಳಿ ನಿಂತು ಶುದ್ಧವಾದ ವಾತಾವರಣವೇರ್ಪಟ್ಟುದು.

ದಿಕ್ಕುಗಳು ಪ್ರಸನ್ನವಾಗಿ ಗಂಧರ್ವರು ಮಧುರವಾಗಿ ಗಾನಮಾಡಿದುದು. ಅಪ್ಸರೆಯರು ನರ್ತಿಸಿದುದು. ಷಡಾನನಾದಿ ವೀರರು ಸಂತೋಷದಿಂದ ಮಯೂರೇಶನನ್ನು ಸ್ತುತಿಸಿ ಪ್ರಾರ್ಥಿಸಿದುದು. ಶಿವ-ಪಾರ್ವತಿಯರು ಆ ಸ್ಥಳಕ್ಕೆ ಬಂದು ಗಣಪತಿಯನ್ನು ಆಲಿಂಗಿಸಿದುದು. ಶಿವನು ತನ್ನ ಮಗನ ಅದ್ಭುತ ಕೃತ್ಯವನ್ನು ಹೊಗಳಿದುದು. ದೇವತೆಗಳು ದೇವನಿಗೆ ನಮಸ್ಕರಿಸಿ ಆ ಸ್ತೋತ್ರಕ್ಕೆ ಅನೇಕ ಮಹಿಮೆಗಳುಂಟಾಗುವಂತೆ ಅನುಗ್ರಹಿಸಿದುದು ಅನಂತರ ದೇವನ ಅನುಮತಿಯನ್ನು ಪಡೆದು ಸ್ವ-ಸ್ಥಾನಗಳಿಗೆ ತೆರಳಿದುದು. ಅನಂತರ ಮಯೂರೇಶನು ತುಷ್ಟನಾಗಿ ತನ್ನ ನಿವಾಸಕ್ಕೆ ತೆರಳಿದುದು. ೩೬೨—೩೭೮

## ೧೨೪ ನೆಯ ಅಧ್ಯಾಯ :—

ಸಿಂಧುದೈತ್ಯನ ಪತನವಾದ ಬಳಿಕ ಹತಶಿಷ್ಟರಾದ ಕೆಲವು ಮಂದಿ ದೈತ್ಯರು ರಣರಂಗದಲ್ಲೇ ಉಳಿದಿದ್ದುದು. ಅವರು ಗಂಡಕೀನಗರಕ್ಕೆ ಬರುವಷ್ಟರಲ್ಲಿ ಉಗ್ರಾ, ದುರ್ಗಾ ಮತ್ತು ಚಕ್ರಪಾಣಿಗಳು ಅಗಾಧವಾದ ಚಿಂತೆಗೊಳಗಾಗಿ ಕುಳಿತಿದ್ದರು. ಎಲ್ಲಿ ನೋಡಿದರೂ ಅಂತು ಅವರಿಗೆ ಅಶುಭ ಚಿನ್ಹೆಗಳು ತೋರಿಬಂದುದರಿಂದ ಬಹಳಮಟ್ಟಿಗೆ ಉದ್ವಿಗ್ನರಾಗಿದ್ದರು. ಅಪಶಕುನಗಳ ವಿವರಣೆ, ಆ ವೇಳೆಗೆ ದೂತರು ಅಳುತ್ತ ಬಂದು ಸಿಂಧುವಿನ ಮರಣದ ಸಂಗತಿಯನ್ನು ಸಂಕಟದಿಂದ ತಿಳಿಸಿದುದು. ಅಶನಿಪಾತದಂಥ ಈ ಸುದ್ದಿಯನ್ನು ಕೇಳಿ ದೈತ್ಯನ ಸಂಬಂಧಿಗಳೆಲ್ಲ ಮೂರ್ಛಿತರಾದರು. ಮೂರ್ಛೆ ತಿಳಿದೆದ್ದ ಬಳಿಕ ಎಲ್ಲರೂ ದೈನ್ಯದಿಂದ ಅತ್ತುದು. ಉಗ್ರೆಯು ಕರುಳು ಕಿತ್ತು ಬರುವಂತೆ ಅತ್ತುದು. ದುರ್ಗೆಯು ಅವನ ಗುಣಗಳನ್ನು ಹಾಡಿ ಹಾಡಿ ಅತ್ತುದು. ಹಿರಿಯರು ಬಂದು ಸಮಾಧಾನವನ್ನು ಹೇಳಿದುದು. ಮೃತನ ಔರ್ಧ್ವದೈಹಿಕ ಕರ್ಮವನ್ನು ಮಾಡಿ ಬರುವುದಕ್ಕಾಗಿ ರಣಭೂಮಿಗೆ ಎಲ್ಲರೂ

ತೆರಳಿದುದು. ಮಗನ ಮೃತ ದೇಹವನ್ನು ನೋಡಿದ ಕೂಡಲೇ ಗಳಿತ ದೇಹಿಗಳೂ ಪುತ್ರವತ್ಸಲರೂ ಆದ ಉಗ್ರ ಚಕ್ರಪಾಣಿಯರು ಸಕರುಣವಾಗಿ ರೋದಿಸಿದುದು. ತಿಳಿದವರು ಅನೇಕ ಉದಾಹರಣೆಗಳನ್ನು ಹೇಳಿ ಮುಂದಿನ ಕರ್ತವ್ಯಕ್ಕೆ ಅವರನ್ನು ಪ್ರಚೋದಿಸಿದುದು. ಸಿಂಧುವಿನ ದೇಹಸಂಸ್ಕಾರ. ದುರ್ಗೆಯು ಸಹಗಮಿಸಿದುದು. ಅನಂತರ ಚಕ್ರಪಾಣಿಯು ನಾಗರಿಕರೊಂದಿಗೆ ಮಯೂರೇಶನ ಬಳಿಗೆ ಬಂದುದು. ದೇವನು 'ವರವನ್ನು ಬೇಡೆ'ನಲು ತನ್ನ ಮನೆಗೆ ಬರಬೇಕೆಂದು ಪ್ರಾರ್ಥಿಸಿದುದು. ದೇವನು ಅದನ್ನು ಸಂತೋಷದಿಂದ ಒಪ್ಪಿ ಹೊರಟುದು. ಮೆರವಣಿಗೆಯ ಹಾಗೂ ಪುರಾಲಂಕಾರದ ವರ್ಣನೆ. ೩೭೯-೩೯೪

**೧೨೫ ನೆಯ ಅಧ್ಯಾಯ :—**

ಚಕ್ರಪಾಣಿಯು ಸಭಾಸ್ಥಾನವನ್ನು ಸಜ್ಜುಗೊಳಿಸಿದ್ದು. ದೇವನು ನಗರದ ಸೌಂದರ್ಯವನ್ನು ದೃಷ್ಟಿಸಿ ನೋಡುತ್ತ ಪುರವನ್ನು ಪ್ರವೇಶಿಸಿದುದು. ಆ ವೇಳೆಗೆ ಚಕ್ರಪಾಣಿಯು ನಿಗಡಬದ್ಧರಾಗಿದ್ದ ದೇವತೆಗಳನ್ನೆಲ್ಲ ಬಿಡುಗಡೆ ಮಾಡಿ ದೇವನೆದುರು ತಂದು ನಿಲ್ಲಿಸಿದುದು. ದೇವತೆಗಳೂ, ದೇವೋತ್ತಮರೂ ಮುಂದೆ ಬಂದು ದೇವನನ್ನು ಪ್ರೇಮದಿಂದ ಆಲಿಂಗಿಸಿದುದು. ಅಲ್ಲಿ ನೆರೆದಿದ್ದ ಶೈವರು, ವೈಷ್ಣವರು. ಸೌರಿಗಳು, ಎಲ್ಲರೂ ಮಯೂರೇಶನನ್ನು ತಮ್ಮ ಆರಾಧ್ಯ ದೇವತಾ ರೂಪದಿಂದ ನೋಡಿ ಅವನಿಗೆ "ಜಯ"ವನ್ನು ಕೋರಿದರು. ಬಾಲಕ-ಬಾಲಿಕೆಯರು, ಪ್ರೌಢ-ಪ್ರೌಢೆಯರು, ಸ್ತ್ರೀ-ಪುರುಷರು ವೃದ್ಧ-ತರುಣರು ಎಲ್ಲರೂ ದೇವನನ್ನು ಭಕ್ತಿಯಿಂದ ಪೂಜಿಸಿದುದು. ಚಕ್ರಪಾಣಿಯು ತನ್ನನ್ನು ಧನ್ಯನೆಂದು ಹೇಳಿಕೊಂಡು ಮಯೂರೇಶನನ್ನು ಪೂಜಿಸಿದುದು. ಇಂದ್ರನು ಇದನ್ನು ಸಹಿಸದೆ "ನಾವೆಲ್ಲ ಉತ್ತಮರು ಇಲ್ಲಿರುವಾಗ ನಮ್ಮೆದುರಿಗೆ ಮಯೂರೇಶನನ್ನರ್ಚಿಸಿದ್ದು ಮೂರ್ಖತನವೆಂ"ದು ಚಕ್ರಪಾಣಿ

ಯನ್ನು ಅಧಿಕ್ಷೇಪಿಸಿದುದು. ಚಕ್ರಪಾಣಿಯ ಸದುತ್ತರ. ಆ ವೇಳೆಗೆ ಅತ್ಯದ್ಭುತವಾದ ಶಬ್ದವೊಂದುಂಟಾಗಲು ದೇವತೆಗಳೆಲ್ಲ ಹೆದರಿ ಮೂರ್ಛೆಗೊಂಡುದು. ಭೂಮಿ ಕಂಪಿಸಿ ಕೋಟ್ಯಧಿಕ ಸೂರ್ಯರ ಬೆಳಕು ಬಿದ್ದುದು. ಎಲ್ಲರೂ ಅತ್ತಕಡೆ ತಿರುಗಿ ನೋಡುವಷ್ಟರಲ್ಲಿ ದಶ ದೋರ್ದಂಡವಿರಾಜಿತನಾದ ಮಹಾ ಗಣಪತಿಯನ್ನು ಕಂಡುದು. ದೇವನು ತನ್ನ ವಿಶ್ವರೂಪವನ್ನು ತೋರಿಸಿದುದು. ಆಗ ಎಲ್ಲರೂ ಭ್ರಮರಹಿತರಾಗಿ ಐಕ್ಯಜ್ಞಾನವನ್ನು ಪಡೆದು ದೇವನನ್ನು ಭಕ್ತಿಯಿಂದ ಪೂಜಿಸಿದುದು. ಚಕ್ರಪಾಣಿಯು ಹೃಷ್ಟನಾಗಿ ಸ್ತುತಿಸಿದುದು. ಆ ಅದ್ಭುತವನ್ನೆಲ್ಲ ನೋಡಿ ಸಂತುಷ್ಟರಾದ ನಾರದ ಮಹರ್ಷಿಗಳು ಮುಂದೆ ಬಂದು ತಂದೆಯಾದ ಕಮಲಾಸನನನ್ನು ಕುರಿತು "ಸಿದ್ಧಿ-ಬುದ್ಧಿಯರನ್ನು ಮಯೂರೇಶ್ವರನಿಗೆ ಕೊಟ್ಟು ಲಗ್ನ ಮಾಡುವುದಕ್ಕೆ ಶಿವ-ಪಾರ್ವತಿಯರನ್ನು ಒಪ್ಪಿಸಿದ್ದೇನೆ. ಆದುದರಿಂದ ಸುಲಕ್ಷಣೆಯರಾದ ಅವರಿಬ್ಬರನ್ನೂ ಈ ದೇವನಿಗೆ ಕೊಟ್ಟು ಈಗಲೇ ವಿವಾಹವನ್ನು ನಡೆಸು" ಎಂದು ಪ್ರಾರ್ಥಿಸಲು, ದೇವತೆಗಳು ಬ್ರಹ್ಮನ ಬಳಿ ಏಕಾಂತವಾಗಿ ಹೋಗಿ ಅವನ ಮಕ್ಕಳನ್ನು ತಮಗಾಗಿ ಯಾಚಿಸಲು, ಬ್ರಹ್ಮದೇವನು ಅವರಿಬ್ಬರ ಕೈಗಳಲ್ಲೂ ರತ್ನಮಾಲಿಕೆಯನ್ನು ಕೊಟ್ಟು, "ಯಾರು ನಿಮ್ಮ ಮನಸ್ಸಿಗೊಪ್ಪುವರೋ ಅಂಥವರನ್ನು ವರಿಸಬಹುದೆ"ಂದು ಹೇಳಿದುದು. ಅವರಿಬ್ಬರೂ ಮುಂದೆ ಬಂದು ಗಣಪತಿಯ ಕೊರಳಿಗೆ ಹಾರಗಳನ್ನು ಹಾಕಿ ಎಲ್ಲರನ್ನೂ ನಿರಾಶೆಗೊಳಿಸಿದುದು. ಅನಂತರ ವಿಧಿವಿಹಿತವಾಗಿ ಗಣಪತಿಗೆ ವಿವಾಹ ನಡೆದುದು. ತಾವು ಬಂಧಮುಕ್ತರಾದುದಕ್ಕೆ ದೇವನಿಗೆ ದೇವತೆಗಳು ಕೃತಜ್ಞತೆಯನ್ನು ಸಲ್ಲಿಸಿ ಅವನ ಅಪ್ಪಣೆ ಪಡೆದು, ತಮ್ಮ ತಮ್ಮ ಸ್ಥಳಗಳಿಗೆ ತೆರಳಿದುದು. ಪಾರ್ವತಿಯು ಸೊಸೆಯರಿಬ್ಬರನ್ನೂ ಗಣಪತಿಯೊಂದಿಗೆ ತನ್ನ ತೊಡೆಗಳ ಮೇಲೆ ಕುಳ್ಳಿರಿಸಿಕೊಂಡು ಗಂಡನೊಂದಿಗೆ ಹರ್ಷಿಸಿದುದು. ಅಧ್ಯಾಯದ ಫಲಶ್ರುತಿ. ೩೯೫-೪೦೪

## ೧೨೬ ನೆಯ ಅಧ್ಯಾಯ :—

ವಿವಾಹಮಂಗಲಕಾರ್ಯವು ಸಾಂಗವಾಗಿ ನೆರವೇರಿದ ಬಳಿಕ ಮಯೂರೇಶ್ವರನು ಒಂದು ದಿನ ತನ್ನ ವಾಹನವಾದ ಶಿಖಂಡಿಯನ್ನೇರಿ ತನ್ನ ಪುರಿಗೆ ಪ್ರಯಾಣ ಬೆಳೆಸಲು ಸನ್ನದ್ಧನಾದನು. ಸಂಗಡಿಗರೆಲ್ಲರೂ ತಮ್ಮ ತಮ್ಮ ವಾಹನಗಳನ್ನೇರಿ ದೇವನನ್ನು ಹಿಂಬಾಲಿಸಿದರು. ಗಂಡಕೀನಗರದ ನಿವಾಸಿಗಳೆಲ್ಲರೂ ದೇವನೊಡನೆ ಹೊರಡಲನುವಾದ ಕೂಡಲೆ ಸ್ತ್ರೀಯರು ಬಾಲಕರು ಈ ಸನ್ನಿವೇಶವನ್ನು ಆನಂದದಿಂದ ಒಪ್ಪಿಕೊಂಡು ತಾವೂ ಹೊರಟುದು. ಉತ್ಸವದ ವರ್ಣನೆ. ಇವರು ಊರಿನಾಚೆ ಇದ್ದ ರಣಭೂಮಿಯನ್ನು ಸಮೀಪಿಸುವಷ್ಟರಲ್ಲಿ ಸ್ಕಂದಾದಿಗಳು 'ರಣದಲ್ಲಿ ಮಡಿದ ದೇವಸೇನೆಯುವರೆಲ್ಲ ಮಯೂರೇಶ್ವರನ ಕೃಪಾಕಟಾಕ್ಷವೀಕ್ಷಣಮಾತ್ರದಿಂದಲೇ ಪುನರುಜ್ಜೀವನಗೊಂಡರು' ಎಂಬ ಅಂಶವನ್ನು ಅರುಹಲು, ಅದನ್ನರಿತು ಎಲ್ಲರೂ ಆಶ್ಚರ್ಯದಿಂದ ಮಯೂರೇಶನನ್ನು ಹೊಗಳಿದುದು. ಒಂದುಯೋಜನದಷ್ಟು ದೂರ ದಾರಿ ನಡೆದಾದ ಮೇಲೆ ದೇವನು ಒಂದೆಡೆ ನಿಂತು " ನಾಗರಿಕರೊಂದಿಗೆ ಗಂಡಕೀನಗರಕ್ಕೆ ಹಿಂದಿರುಗಿ ಹೋಗು"ವಂತೆ ಚಕ್ರಪಾಣಿಯನ್ನು ಪ್ರೇರಿಸಿದುದು. ಅವರೆಲ್ಲರೂ ಅತಿ ಕಷ್ಟದಿಂದ ಹಿಂದಿರುಗಿ ದೇವನ ಗುಣಗಳನ್ನು ಗಾನ ಮಾಡುತ್ತಲೇ ತಮ್ಮ ನಗರಕ್ಕೆ ಬಂದುದು. ಚಕ್ರಪಾಣಿಯು ಗಣಪತಿ ಪಂಚಾಯತನಕ್ಕೆ ಪ್ರತ್ಯೇಕವಾಗಿ ಮಂದಿರಗಳನ್ನು ಸುಂದರವಾಗಿ ಕಟ್ಟಿಸಿ ಅಲ್ಲಿ ಆಯಾ ದೇವತಾಮೂರ್ತಿಗಳನ್ನು ಶಾಸ್ತ್ರೋಕ್ತವಿಧಿಯಿಂದ ಪ್ರತಿಷ್ಠಿಸಿ ಪ್ರತಿದಿನ ಪೂಜೆಯನ್ನು ಮಾಡುತ್ತಲಿದ್ದುದು, ಇತ್ತ ಮಯೂರೇಶನು ತನ್ನ ಪುರಿಗೆ ಬಂದಕೂಡಲೇ ಅದರ ರೂಪರೇಷೆಗಳು ಸಂಪೂರ್ಣವಾಗಿ ಮಾರ್ಪಟ್ಟಿದನ್ನು ಕಂಡು ಗಣದವರು ಚಕಿತರಾದುದು. ಪುರಿಯ ವರ್ಣನೆ. ದೇವನು ಸಭಾ

ಮಂಟಪವನ್ನು ಹೊಕ್ಕು ಸುತ್ತ ಏರ್ಪಟ್ಟ ಸನ್ನಿವೇಶಗಳನ್ನು ವೀಕ್ಷಿಸಿದುದು. ಗಣಪತಿಯ ಸ್ಥಾಪನೆ, ಪೂಜಾಕ್ರಮಾದಿಗಳ ವಿಧಿನಿರೂಪಣೆ. ಹೀಗೆಯೇ ಕೆಲ ಕಾಲ ಕಳೆಯಲು, ಒಮ್ಮೆ ಮಯೂರೇಶನು ತನ್ನವರೆಲ್ಲರನ್ನೂ ಸಮೀಪಕ್ಕೆ ಕರೆದು ಸರಳವಾದ ಧ್ವನಿಯಿಂದ "ನಾನು ಅವತರಿಸಿದ ಉದ್ದಿಶ್ಯಗಳೆಲ್ಲವೂ ಮುಗಿದವು. ದುಷ್ಟ ದಾನವರನ್ನೆಲ್ಲ ಕೊಂದು ಭೂಭಾರವನ್ನಿಳುಕಿದ್ದಾಗಿದೆ. ಸಿಂಧುವಿನ ಬಂಧನದಲ್ಲಿದ್ದ ದೇವತೆಗಳು ಮುಕ್ತರಾದರು. ಶ್ರೌತ-ಸ್ಮಾರ್ತ ಕರ್ಮಗಳು ಇನ್ನು ಮೇಲೆ ನಿರ್ಬಾಧಕವಾಗಿ ನಡೆಯಲು ಯಾವ ಅಡಚಣೆಯೂ ಇರುವುದಿಲ್ಲ. ಇನ್ನು ನೀವು ಅನುಮತಿಯನ್ನು ಕೊಟ್ಟರೆ, ನಾನು ಆನಂದಧಾಮಕ್ಕೆತೆರಳುವೆನು"ಎನಲು, ಎಲ್ಲರೂ ಕಣ್ಣೀರಿನ ಕೋಡಿಯನ್ನು ಹರಿಸಿದ್ದು. ದೇವತೆಗಳ ಪ್ರಾರ್ಥನೆ. ಪಾರ್ವತಿಯು ರೋದಿಸಿದುದು. "ದ್ವಾಪರದಲ್ಲಿ ಪುನಃ ನಿನಗೆ ಮಗನಾಗಿ ಜನಿಸುವೆನೆಂ"ದು ದೇವನು ಆಶ್ವಾಸನವನ್ನಿತ್ತುದು. ಕುಮಾರಸ್ವಾಮಿಯು ತಾನೂ ಅವನೊಡನೆ ಬರುವುದಾಗಿ ಹಠ ಹಿಡಿದುದು. ದೇವನು ತನ್ನ ವಾಹನವಾದ ಶಿಖಂಡಿಯನ್ನು ತಮ್ಮನಿಗೆ ಕೊಟ್ಟು "ಮಯೂರಧ್ವಜ" ಎಂದು ಅವನನ್ನು ಕೂಗಿದುದು, ಮಯೂರವನ್ನೇರಿದ ಕುಮಾರನನ್ನು ನೋಡುವುದರಲ್ಲಿ ಎಲ್ಲರೂ ಆಸಕ್ತರಾಗಿದ್ದಾಗ ದೇವನು ಅಂತರ್ಹಿತನಾದುದು. ಆಗ ದೇವನ ಸಾಕಾರ ರೂಪಕ್ಕೆ ಬದಲಾಗಿ ಅವನನ್ನು ಹೃದಯದಲ್ಲಿರಿಸಿಕೊಂಡು ಎಲ್ಲರೂ ಧ್ಯಾನಿಸಿದುದು. ಬ್ರಹ್ಮದೇವನು ಮರಳಿನಿಂದ ದೇವನ ಮೂರ್ತಿಯನ್ನು ಮಾಡಿ ಅರ್ಚಿಸಿದುದು. ಆ ಪಟ್ಟಣ ಪುಣ್ಯತಮ ಕ್ಷೇತ್ರವಾಗಲೆಂದು ಎಲ್ಲರೂ ಹೃತ್ಪೂರ್ವಕವಾಗಿ ಹರಸಿದುದು. ಪೂಜಾನಂತರ ದೇವತೆಗಳು ಮುನಿಗಳು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದುದು. ಈ ಚರಿತ್ರೆಯ ಶ್ರವಣದಿಂದುಂಟಾಗುವ ಮಹಿಮಾವರ್ಣನೆ ಅರ್ಥಾತ್ ಫಲಶ್ರುತಿ. "ಗಣಪತಿಯ

ಇಷ್ಟು ಮಹಿಮೆಗಳನ್ನು ಹೇಳಿದುದಾಯಿತು. ಶ್ರೀ ಗಜಾನನನ ದಿವ್ಯ ಚರಿತ್ರೆಯನ್ನು ಮತ್ತೆ ನನ್ನ ಮುಖ ದಿಂದ ನೀನು ಕೇಳುವೆ' ಎಂದು ಬ್ರಹ್ಮನು ವ್ಯಾಸರಿಗೆ ಆಶ್ವಾಸನವನ್ನಿತ್ತುದು. ೪೦೫-೪೨೮

## ೧೨೭ ನೆಯ ಅಧ್ಯಾಯ :—

ದೇವನಿಗೆ "ಗಜಾನನ" ಎಂದು ಹೆಸರು ಬರಲು ಕಾರಣ ವೇನು ? ಇಲಿಯಂತಹ ಚಿಕ್ಕ ಪ್ರಾಣಿಯನ್ನೇಕೆ ವಿಶ್ವಾತ್ಮನು ತನ್ನ ವಾಹನವನ್ನಾಗಿ ಮಾಡಿಕೊಂಡನು?' ಇತ್ಯಾದಿಗಳನ್ನು ತನಗೆ ವಿವರವಾಗಿ ತಿಳಿಸಬೇಕೆಂದು ವ್ಯಾಸರು ಬ್ರಹ್ಮದೇವನನ್ನು ಪ್ರಶ್ನಿಸಿದುದು. ಬ್ರಹ್ಮ ದೇವನು ಆ ಎಲ್ಲ ಚರಿತ್ರೆಯನ್ನು ಹೇಳುವುದಾಗಿ ಒಪ್ಪಿ ಕೊಂಡು, ಒಮ್ಮೆ ಪರಶಿವನು ತನ್ನ ಮನೆಗೆ ಬಂದಾಗ ತಾನು ನಿದ್ರೆಯಲ್ಲಿದ್ದುದಾಗಿಯೂ, ನಡುವೆ ಎಚ್ಚರ ವಾದುದರಿಂದ ತಾನು ಆಕಳಿಸಿದಾಗ ಕ್ರೂರಿಯಾದೊಬ್ಬ ಮನುಜನು ಜನಿಸಿಬಂದುದನ್ನು ನೋಡಿ ಅವನನ್ನು ಮಗನೆಂದು ಸ್ವೀಕರಿಸಿ, "ನೀನು ಸಿಟ್ಟಿನಿಂದ ಯಾರನ್ನು ಆಲಿಂಗಿಸುವೆಯೋ, ಅವನು ಕೂಡಲೇ ದಗ್ಧನಾಗಿ ಹೋಗಲಿ" ಎಂದು ವರವನ್ನಿತ್ತುದು. ಅದರ ಸಾಕ್ಷಿ ನನಗೇ ತಟ್ಟುವಂತಾದಾಗ ಭಗವಾನ್ ನಾರಾಯಣನ ಬಳಿಗೆ ನಾನು ಧಾವಿಸಿ ಹೋದೆನು. ೪೨೫-೪೪೦

## ೧೨೮ ನೆಯ ಅಧ್ಯಾಯ :—

ಅವನನ್ನು ಉಪಾಯಾಂತರದಿಂದ ದೇವನು ಪರಮೇ ಶ್ವರನ ಬಳಿಗೆ ಕಳಿಸಿದುದು. ಸಿಂದೂರನು ಪಾರ್ವ ತಿಯನ್ನು ಕದ್ದೊಯ್ದಾಗ ಪರಶಿವನು ಬಂದು ಅವಳನ್ನು ಬಿಡಿಸಲೆತ್ನಿಸುತ್ತಿರಲು, ದೈತ್ಯನು ಅವನನ್ನು ಆಲಿಂಗಿಸಲು ಉಜ್ಜುಗಿಸಿದುದು. ಆ ವೇಳೆಗೆ ಪಾರ್ವತಿಯು ಮನಸಾ ಮಯೂರೇಶನನ್ನು ಧ್ಯಾನಿ ಸಲು, ಅವನು ಬ್ರಾಹ್ಮಣನ ರೂಪದಿಂದ ಅಲ್ಲಿಗೆ ಬಂದು, ತನ್ನ ಪರಶುವಿನಿಂದ ಸಿಂದುರನನ್ನು ಹಿಂದಕ್ಕೆ

ತಳ್ಳಿ, "ಯಾರು ಶೂರನೋ, ಅವರು ಪಾರ್ವತಿಯನ್ನು ತೆಗೆದುಕೊಳ್ಳಬಹುದೆ"ಂದು ಸಮಯವನ್ನು ಮಾಡಿ ತಾನು ಸಂಧಿಯನ್ನು ಸಾಧಿಸುತ್ತ ಕುಳಿತುದು. ಸೋಮಶೇಖರ, ಸಿಂಧುರರ ಯುದ್ಧದ ವರ್ಣನೆ. ಸಿಂದುರನು ಮತ್ತೆ ಮಹೇಶ್ವರನನ್ನು ಅಪ್ಪಿಕೊಳ್ಳಲು ಬಂದಾಗ ಮಯೂರೇಶ್ವರನು ತನ್ನ ನಿಶಿತ ಪರಶುವನ್ನು ಸಿಂದುರನಿಗೆ ಅಭಿಮುಖವಾಗಿ ಯಾರಿಗೂ ಕಾಣದಂತೆ ಇರಿಸಿ, ಅವನ ಹೊಟ್ಟೆಗೆ ಗಾಯವನ್ನು ಮಾಡಿದುದು. ಅಸುರನು ಕ್ಷೀಣಶಕ್ತಿಯಾದಾಗ ತ್ರಿಪುರಹರನು ತನ್ನ ತ್ರಿಶೂಲದಿಂದ ಅವನನ್ನು ತಿವಿದು ಹಿಂದಕ್ಕೆ ಸರಿಸಿದುದು. ಆಗ ಬ್ರಾಹ್ಮಣರೂಪೀ ಬೆನಕನು 'ಪಾರ್ವತಿಯು ನಿನಗೆ ಸೇರತಕ್ಕವಳಲ್ಲ. ಅವಳ ಆಶೆಯನ್ನು ಬಿಡು ' ಎಂದು ಉಪದೇಶಿಸಿ ಹಿಂದಿರುಗಿಸಿದುದು. ಪಾರ್ವತಿಯು ತನ್ನ ಪರಿಚಯವನ್ನಪೇಕ್ಷಿಸಿದಾಗ ತನ್ನ ಪೂರ್ಣ ಪರಿಚಯವನ್ನು ಅವಳಿಗೆ ಹೇಳಿ, ಮಯೂರೇಶ್ವರನ ರೂಪದಿಂದ ಅಭಿವ್ಯಕ್ತನಾದುದು. ಮತ್ತು ಈ ಸಿಂದುರಾದಿ ದೈತ್ಯರನ್ನು ನಿಗ್ರಹಿಸಲಿಕ್ಕೆ 'ಗಜಾನನ' ಎಂಬ ಹೆಸರಿನಿಂದ ಪುನಃ ನಿನಗೆ ಮಗನಾಗಿ ಜನಿಸುವೆನು ಎಂದು ಮತ್ತೊಮ್ಮೆ ಸೂಚಿಸಿ ಅಂತರ್ಹಿತನಾದುದು. ದೇವನು ಅಂತರ್ಹಿತನಾಗಲು, ದೇವಿಯು ಶೋಕಿಸಿದುದು. ಪರಮೇಶ್ವರನು ಅವಳನ್ನು ಸಮಾಧಾನಪಡಿಸಿ ವೃಷಾರೂಢನಾಗಿ ಗಿರಿಜೆಯೊಡನೆ ಕೈಲಾಸಪರ್ವತಕ್ಕೆ ಬಂದುದು. ೪೪೧–೪೬೨

**೧೨೯ ನೆಯ ಅಧ್ಯಾಯ :—**

ಆನಂತರ ಸಿಂದುರ ದೈತ್ಯನು ಭೂಲೋಕಕ್ಕೆ ಹೋಗಿ ಗರ್ಜಿಸಿ ಎಲ್ಲರನ್ನೂ ಭಯಪಡಿಸಿ ರಾಜರೊಡನೆ ಯುದ್ಧವನ್ನು ಮಾಡಿ ಅವರನ್ನೆಲ್ಲ ಸೋಲಿಸಿದುದು. ದೇವತೆಗಳು ಸಹ ಎದುರಿಸಲು ಹೆದರುತ್ತಿದ್ದಾಗ ಅಂತಹ ಸಿಂದುರನನ್ನು ರಾಜರು ಹೇಗೆ ಎದುರಿಸಿದರು? ಎಂದು ವ್ಯಾಸರು ಪ್ರಶ್ನಿಸಿದುದು. ವಿಧಿ ಇಲ್ಲದೇ

ಅಸುರನೊಂದಿಗೆ ಹೋರಾಡಿ ಎಲ್ಲರೂ ಸೋತುಹೋದ ರೆಂದು ಬ್ರಹ್ಮನು ಉತ್ತರವನ್ನು ಹೇಳಿದುದು. ಎಲ್ಲೆಲ್ಲೂ ರಾಕ್ಷಸರದೇ ಉಪಟಳ ಹೆಚ್ಚಾದುದರಿಂದ ವೈದಿಕ ಕರ್ಮಗಳೆಲ್ಲ ನಿಂತುಹೋದುದು. ಆಗ ದೇವ ತೆಗಳು ಬೃಹಸ್ಪತಿಯ ಬಳಿಗೆ ಬಂದು ಮುಂದೆ ಹೇಗೆ ಮಾಡಬೇಕೆಂಬುದಕ್ಕೆ ಆಲೋಚನೆಯನ್ನು ಕೇಳಿದುದು. 'ಇವನನ್ನು ನಿಗ್ರಹಿಸಲಿಕ್ಕೆ ದೇವತೆಗಳಿಗಾರಿಗೂ ಸಾಧ್ಯ ವಿಲ್ಲದ್ದರಿಂದ ಈ ಕಾರ್ಯವನ್ನು ಸಾಧಿಸಲಿಕ್ಕೆ ವಿನಾಯ ಕನನ್ನೇ ಪ್ರಾರ್ಥಿಸಬೇಕೆಂದೂ, ಅವನು ಅವತರಿಸಿ ದುಷ್ಟ ದಾನವರನ್ನೆಲ್ಲ ನಿಗ್ರಹಿಸುವನೆಂದೂ' ಸೂಚಿಸಿ ದುದು. ಅದರಂತೆ ದೇವತೆಗಳು ಮಯೂರೇಶನನ್ನು ಭಕ್ತಿಯಿಂದ ಸ್ತುತಿಸಿದುದು. ಅನಂತರ ಕಠಿಣವಾದ ರೀತಿಯಲ್ಲಿ ತಪಸ್ಸನ್ನಾಚರಿಸಿದುದು. ಅದಕ್ಕೆ ದೇವನು ಮೆಚ್ಚಿ ಅವರಿಗೆ ದರ್ಶನವನ್ನಿತ್ತು, ತಾನು ಪಾರ್ವತಿಯ ಗರ್ಭದಲ್ಲಿ ಗಜಾನನ ಎಂಬ ಹೆಸರಿನಿಂದ ಜನಿಸಿ ದುಷ್ಟ ದೈತ್ಯರನ್ನು ಕೊಲ್ಲುವುದಾಗಿ ಅಭಯವನ್ನಿತ್ತು ಅವರು ರಚಿಸಿ ಪಾಡಿದ ಸ್ತೋತ್ರಕ್ಕೆ 'ದುಃಖಪ್ರಶಮನಸ್ತೋತ್ರ' ಎಂಬ ಶುಭನಾಮವನ್ನಿರಿಸಿ ಅನೇಕ ಮಹಿಮೆಗಳನ್ನು ಅನುಗ್ರಹಿಸಿ ಅಂತರ್ಹಿತನಾದುದು. ಹೀಗೆಯೇ ಕೆಲವು ಕಾಲ ಕಳೆದ ಬಳಿಕ ಪಾರ್ವತಿಯು ಪರಶಿವನ ಅನುಗ್ರಹದಿಂದ ಗರ್ಭವನ್ನು ಧರಿಸಿದುದು. ಗರ್ಭದ ತಾಪವನ್ನು ತಾಳಲಾರದೆ ಶೀತಳ ಪ್ರದೇಶಕ್ಕೆ ಕರೆದೊ ಯ್ಯಬೇಕೆಂದು ಪ್ರಾರ್ಥಿಸಲು, ಶಿವನು ಗಣಗಳೊಡನೆ ಹೊರಟು 'ಪರ್ಯಲೀ' ಎಂಬ ಪ್ರಶಾಂತ ಪ್ರದೇಶವನ್ನು ಅವಳ ವಿಶ್ರಾಂತಿಗಾಗಿ ಏರ್ಪಡಿಸಿ ತಾನು ತಪಶ್ಚರ್ಯೆ ಗಾಗಿ ಹಿಮಾಚಲಕ್ಕೆ ಪ್ರಯಾಣ ಬೆಳೆಸಿದುದು.

ಪರ್ಯಲೀ ವನದ ಸೌಂದರ್ಯದ ವರ್ಣನೆ. ಪ್ರಮಥಗಣಗಳು ಪರಶಿವನ ಆಜ್ಞೆಯಂತೆ ಅಗಜೆಯ ರಕ್ಷಣೆಯಲ್ಲಿ ನಿರತರಾದುದು. ೪೬೩-೪೭೬

## ೧೩೦ ನೆಯ ಅಧ್ಯಾಯ :—

ಪಾರ್ವತಿಯ ಗರ್ಭಕ್ಕೆ ನವಮಾಸಗಳು ತುಂಬಿದ ಬಳಿಕ ಒಂದು ಶುಭಮುಹೂರ್ತದಲ್ಲಿ ಗಂಡುಶಿಶುವನ್ನು ಪ್ರಸವಿಸಿದಳು. ಶಿಶು ಜನಿಸುವಾಗ ಕಿರೀಟ, ಕೇಯೂರಾದಿಗಳನ್ನು ಧರಿಸಿದ್ದುದು. ಆ ಅದ್ಭುತ ರೂಪದ ವರ್ಣನೆ. ಅದನ್ನು ನೋಡಿ ದೇವಿ ಗಾಬರಿಪಟ್ಟುದು. ಆಗ ಶಿಶು ತಾನು'ಮಯೂರೇಶನೆಂದೂ, ಭೂಭಾರವನ್ನಿಳುಹಲಿಕ್ಕೆ ಗಜಾನನನಾಗಿ ಈಗ ಅವತರಿಸಿರುವೆನೆಂದೂ ಹೇಳಿ, ಹಿಂದಿನ ಸಂದರ್ಭಗಳನ್ನು ನೆನಪುಮಾಡಿಕೊಟ್ಟನು. ದೇವಿಯು ಇದನ್ನು ಕೇಳಿ ಹಿಂದಿನದೆಲ್ಲ ಸನ್ನಿವೇಶಗಳನ್ನು ಸ್ಮರಿಸಿಕೊಂಡು ದೇವನಿಗೆ ನಮಸ್ಕರಿಸಿ ಸ್ತುತಿಸಿದುದು. ಅನಂತರ ದೇವನು ತನ್ನ ಆ ರೂಪವನ್ನು ಪ್ರಕೃತ ಅವತಾರಿಕ ರೂಪಕ್ಕೆ ಬದಲಾಯಿಸಲು "ನನ್ನ ಮಯೂರೇಶನೆಲ್ಲಿ" ಎಂದು ದೇವಿಯು ಶೋಕಿಸಿದುದು. ಆ ವೇಳೆಗೆ ಪರಶಿವನು ಬಂದು "ಇವನೇ ಮಯೂರೇಶನು. ಇದು ಈ ಅವತಾರದ ರೂಪ" ಎಂದು ಹೇಳಿ ಸಮಾಧಾನಪಡಿಸಿದುದು. ದೇವನ ಅನೇಕಾವತಾರಗಳ ವರ್ಣನೆ. ಶಿವನಾಡಿದ ಮಾತುಗಳನ್ನು ಕೇಳಿ ಬಾಲರೂಪೀ ಗಣಪತಿಯು ತನ್ನ ಸ್ವರೂಪವನ್ನು ತತ್ತ್ವತಃ ತಿಳಿದ ಶಿವನನ್ನು ಶ್ಲಾಘಿಸಿ, "ಪುತ್ರಾರ್ಥಿಗಳಾಗಿ ನಿಮ್ಮಂತೆ ತಪಿಸಿದ ಮಾಹಿಷ್ಮತೀ

ರಾಜ; ವರೇಣ್ಯ, ಪುಷ್ಪಿಕೆಯರಿಗೂ ಮಗನಾಗಿ ಜನಿಸುವುದಾಗಿ ನಾನು ವರವನ್ನು ಕೊಟ್ಟಿರುವುದರಿಂದ ನನ್ನನ್ನು ಈಗಲೇ ಅಲ್ಲಿಗೆ ಕರೆದೊಯ್ದು ಪುಷ್ಪಿಕೆಯ ಬಳಿ ಇರಿಸಬೇಕೆಂದು ” ಸೂಚಿಸಿದುದು. ೪೭೭ ೪೮೮

## ೧೩೧ ನೆಯ ಅಧ್ಯಾಯ :—

‘ ಈ ಬಾಲಕನನ್ನು ಮಾಹಿಷ್ಮತೀ ನಗರಕ್ಕೆ ಹೇಗೆ ಕರೆದೊಯ್ಯುವುದು ’ ಎಂದು ಪರಶಿವನು ಚಿಂತಾಕ್ರಾಂತನಾಗಿರಲು, ನಂದಿಕೇಶ್ವರನು ಮುಂದೆ ಬಂದು ತಾನು ಆ ಕೆಲಸವನ್ನು ಮಾಡುವುದಾಗಿ ಹೇಳಿ, ಶಿವನ ಆಜ್ಞೆಯನ್ನು ಬೇಡಿದುದು. ಪರಮೇಶ್ವರನು ಅದನ್ನು ಸಂತೋಷದಿಂದ ಒಪ್ಪಿ ಸ್ಥಳ ಪರಿಚಯವನ್ನು ವಿವರವಾಗಿ ಮಾಡಿಕೊಟ್ಟು, ಕಾರ್ಯವನ್ನು ಸಾಧಿಸಿಕೊಂಡು ಬರಲು ಆಜ್ಞೆಯನ್ನಿತ್ತುದು. ನಂದಿಯು ಬಾಲಕನನ್ನು ಶೀಘ್ರಗತಿಯಿಂದ ಕರೆದೊಯ್ದು ಪುಷ್ಪಿಕೆಯ ಬಳಿ ಯಾರಿಗೂ ತಿಳಿಯದಂತೆ ಇರಿಸಿ, ಶಿವನ ಸನ್ನಿಧಿಗೆ ಬಂದು, ಮಾರ್ಗದಲ್ಲಿ ತನಗೊದಗಿದ್ದ ವಿಘ್ನ-ಅದರ ಪರಿಹಾರ ಇತ್ಯಾದಿಗಳನ್ನೊಳಗೊಂಡ ವಿಶಿಷ್ಟ ಸಂಗತಿಯನ್ನೂ ಅರಿಕೆಮಾಡಿದುದು. ದೇವನು ಹರ್ಷದಿಂದ ನಂದಿಕೇಶ್ವರನನ್ನು ಆಲಿಂಗಿಸಿ ಶ್ಲಾಘಿಸಿದುದು. ಅನಂತರ ನಂದಿಯು ನಗನಂದಿನಿಯ ಬಳಿ ಬಂದು ತನ್ನ ಎಲ್ಲ ಸಂಗತಿಗಳನ್ನೂ ವಿವರಿಸಿದುದು. ದೇವಿಯು ತನ್ನ ಮಗನ ಮಹಿಮೆಯನ್ನು ಕೇಳಿ ಹರ್ಷಿಸಿ, ನಂದಿಯನ್ನು ಶ್ಲಾಘಿಸಿದುದು. ಮತ್ತು ನಂದಿಯನ್ನು ಕಳಿಸಿ

ಕೊಟ್ಟು ತಾನು ವಿಶ್ರಾಂತಿಯನ್ನು ಪಡೆದುದು. ೪೮೯-೪೯೩

**೧೩೨ ನೆಯ ಅಧ್ಯಾಯ :—**

ಸಿಂದುರನು ಒಮ್ಮೆ ತನ್ನ ಸಭಾಸ್ಥಾನದಲ್ಲಿ ಕುಳಿತು 'ತನ್ನೊಡನೆ ಯುದ್ಧವನ್ನಾಡುವವರೇ ದಿಕ್ಕಿಲ್ಲವೆಂದು ತನ್ನ ಪೌರುಷವನ್ನು ಸಭಿಕರೆದುರು ಬಡಬಡಿಸುತ್ತಿರಲು 'ಏಕೆ ವೃಥಾ ಜಂಭವನ್ನು ಕೊಚ್ಚಿಕೊಳ್ಳುವೆ? ನಿನ್ನನ್ನು ಯುದ್ಧದಲ್ಲಿ ಕೊಲ್ಲತಕ್ಕವನೊಬ್ಬನು ಪಾರ್ವತಿಯ ಗರ್ಭದಲ್ಲಿ ಜನಿಸಿ, ವರೇಣ್ಯನ ಮನೆಯಲ್ಲಿ ಶುಕ್ಲಪಕ್ಷದ ಚಂದ್ರನಂತೆ ಬೆಳೆಯುತ್ತಿರುವನು' ಎಂದು ಅಶರೀರವಾಣಿ ನುಡಿಯಲು, ದೈತ್ಯನು ಮನಸ್ಸು ಅಳುಕಿದವನಾಗಿ ಪ್ರತೀಕಾರವನ್ನು ಮಾಡಲು ಮೇಲಕ್ಕೆ ನೆಗೆದು ಗಿರಿಜಾಲಯಕ್ಕೆ ಬಂದುದು. ರಾಕ್ಷಸನು ಹಾರಿ ಬರುವಾಗ ಉಂಟಾದ ಉತ್ಪಾತಗಳ ವರ್ಣನೆ. ಕೈಲಾಸದಲ್ಲಿ ಶಿವನು ಅಸುರನಿಗೆ ಕಾಣದಿರಲು, ಭೂಮಿಗೆ ಬಂದು ಹುಡುಕಿದುದು. ಪರ್ಯಲೀ ಎಂಬ ಅರಣ್ಯದಲ್ಲಿ ಅವರಿರುವುದನ್ನರಿತು ದೇವಿಯು ಪವಡಿಸಿದ್ದ ಸೂತಿಕಾಗೃಹಕ್ಕೆ ನುಗ್ಗಿ ನೋಡಿದುದು. ಅಲ್ಲೂ ಶಿಶು ಕಾಣದಿರಲು 'ತನ್ನ ಮೃತ್ಯುಗರ್ಭಳಾದ ಇವಳನ್ನೇ ಕೊಂದು ಬಿಡುವೆನೆಂ'ದು ತೀರ್ಮಾನಿಸಿ ಖಡ್ಗವನ್ನೆತ್ತುವಷ್ಟರಲ್ಲಿ ಶಿಶು ಕಂಡು ಬರಲು, ಅದರ ಕಡೆ ಗಮನಕೊಟ್ಟು ಅದನ್ನು ಸಮುದ್ರದಲ್ಲಿ ಬಿಸುಟುವುದಕ್ಕಾಗಿ ಕೈಯಲ್ಲಿ ಹಿಡಿದುಕೊಂಡು ಓಡಿದುದು. ವಿರಾಟ್ಪುರುಷನು ತನ್ನ ದೇಹವನ್ನು ಅತಿಯಾಗಿ ಬೆಳೆಸಿದ್ದರಿಂದ ಅದರ ಭಾರವನ್ನು ಹೊರಲಾರದೆ ಅದನ್ನು ಅಲ್ಲಿಯೇ

ಬಿಸುಟುದು. ಆ ಶಿಶು ಉರುಳುತ್ತ ಬಂದು ರೇವಾ ನದಿಯಲ್ಲಿ ಬಿದ್ದುದು. ಅಂದಿನಿಂದ ಆ ನದಿಯ ತೀರ ಪವಿತ್ರ ಕ್ಷೇತ್ರವೆನಿಸಿದುದು. ಅದರ ಮಹಿಮೆಯ ವರ್ಣನೆ. ದೇವನ ದೇಹಜನ್ಯ ರಕ್ತದಿಂದ ನದಿಯ ಸುತ್ತಲೂ ಇದ್ದ ಕಲ್ಲುಗಳು ಕೆಂಪು ವರ್ಣವುಳ್ಳವಾಗಿ ಗಣಪತಿಯ ಪ್ರತೀಕಗಳೆಂದು ಪ್ರಖ್ಯಾತಿಯನ್ನು ಪಡೆದುದು. 'ತನ್ನ ಶತ್ರು ಸತ್ತು ಹೋದನೆ'ಂದು ದೈತ್ಯನು ತಿಳಿಯುವಷ್ಟರಲ್ಲಿ ಆ ಕುಂಡದಿಂದ ಅತ್ಯದ್ಭುತಾಕಾರದ ವ್ಯಕ್ತಿಯೊಂದು ಹೊರಹೊಮ್ಮಿದುದು. ಅದರ ಕರಾಳ ರೂಪದ ವರ್ಣನೆ. ಸಿಂದೂರನು 'ಇವನ ಗಣನೆ ನನಗಿದೆಯೇ ?' ಎಂಬ ಸೊಕ್ಕಿನಿಂದ ಅವನನ್ನು ಕೊಲ್ಲುವುದಕ್ಕಾಗಿ ಖಡ್ಗವನ್ನು ಹಿರಿದು ಸಮೀಪಕ್ಕೆ ಹೋಗಲು, ಆ ಪುರುಷನು ಅಂತರಿಕ್ಷಕ್ಕೆ ಹಾರಿ 'ನಿನ್ನ ಭಾಗದ ಯಮು ಬೆಳೆಯುತ್ತಿರುವನು. ಅವನು ನಿನ್ನನ್ನು ಖಂಡಿತವಾಗಿಯೂ ಕೊಲ್ಲುವನು' ಎಂದು ಕಟುವಾಗಿ ನುಡಿದು, ಅಂತರ್ಹಿತನಾಗಲು 'ಅವನು ನನಗೆ ಗೋಚರಿಸಲಿ, ಕೂಡಲೇ ಅವನನ್ನು ಕೊಂದು ಬಿಡುವೆನು' ಎಂದು ಗೊಣಗುತ್ತ ಮನೆಗೆ ತೆರಳಿದುದು. ಇತ್ತ ಪಾರ್ವತೀದೇವಿಗೆ ಇದಾವ ಸಂಗತಿ ಗೊತ್ತಿರದಿದ್ದರೂ 'ಇಲ್ಲಿ ದೈತ್ಯರ ಕಾಟ ಆರಂಭವಾದಂತಿರುವುದರಿಂದ ಕೈಲಾಸಗಿರಿಗೇ ಹೊರಟು ಹೋಗೋಣ' ಎಂದು ಶಿವನೆದುರು ಹೇಳಲು, ಶಂಕರನು ಸಂತೋಷಿಸಿ, ಅವಳೊಡನೆ ವೃಷಭವನ್ನೇರಿ ಗಣಗಳೊಂದಿಗೆ ಕೈಲಾಸಗಿರಿಗೆ ಪ್ರಯಾಣವನ್ನು ಬೆಳೆಸಿದುದು. ತನ್ನ ಮನೆಗೆ

ಬಂದ ಬಳಿಕ ಪಾರ್ವತಿಗೆ ನೆಮ್ಮದಿ ಎನಿಸಿದುದು.
ಮುಂದಿನ ಸಂಪುಟದ ಆದಿಮ ಶ್ಲೋಕ. ೪೯೭–೫೯೦

# ಪರಿಶಿಷ್ಟ


| | |
|---|---|
| ಪರಾಶರ | ೫೧೦ |
| ಬೃಂದೆ | ೫೧೧ |
| ಕೃಪ | ೫೧೩ |
| ದ್ರೌಣಿ | ೫೧೪ |
| ಪಂಚ ಮಹಾಯಜ್ಞಗಳು | ೫೧೫ |
| ಸರ್ವಸಹಾ, ಅರಿಷ್ಟಗೃಹ, ರೇವಾ, ನರ್ಮದಾ | ೫೧೬ |

|| ಶ್ರೀ ಗಣೇಶಾಯ ನಮಃ ||

ಶ್ರೀ ಸರಸ್ವತ್ಯೈ ನಮಃ || ಶ್ರೀ ಗುರುಭ್ಯೋ ನಮಃ ||

# ಶ್ರೀ ಗಣೇಶ ಪುರಾಣಮ್

## ೭ ನೆಯ ಸಂಪುಟ

---

## ಅಥೈಕೋನ ಶತತಮೋಽಧ್ಯಾಯಃ

**ಕ ಉವಾಚ :—**

**ಅದ್ಭುತಂ ಕೃತವಾನ್ನರ್ಷೇ ನವಮೇಽಸೌ ಗಣೇಶ್ವರಃ ||**
**ಶಿಖಂಡಿನಂ ಸಮಾರುಹ್ಯ ಚತುರಾಯುಧಭೂಷಿತಃ ||೧||**

---

|| ಶ್ರೀ ಮಂಗಲಮೂರ್ತಯೇ ನಮಃ ||

**೯೯ ನೆಯ ಅಧ್ಯಾಯ.**

ಬ್ರಹ್ಮಾ :—

ವತ್ಸ, ವ್ಯಾಸ ! ಮುಂದಿನ ಕಥೆಯನ್ನು ಸಾವಧಾನ ಮನಸ್ಕನಾಗಿ ಕೇಳು. ಗಣಪತಿಗೆ ಅರ್ಥಾತ್ ಮಯೂರೇಶ್ವರನಿಗೆ ಎಂಟು ವರ್ಷಗಳು ಕಳೆದು ಒಂಭತ್ತ ನೆಯ ವರ್ಷ ನಡೆಯಲಾರಂಭವಾಯಿತು. ಈ ವಯಸ್ಸಿನಲ್ಲಿ ಅವನು ಅತ್ಯದ್ಭುತ ವಾದ ಕಾರ್ಯವನ್ನು ನಡೆಸಿದನು. ಒಂದು ದಿವಸ ಪ್ರಾತರಾನ್ಹಿಕಾದಿಗಳನ್ನೆಲ್ಲ ಯಥಾಕ್ರಮವಾಗಿ ಮುಗಿಸಿಕೊಂಡು ತನ್ನ ಆಯುಧ ಚತುಷ್ಟಯವನ್ನೂ ಕೈಗಳಲ್ಲಿ ಧರಿಸಿ ಮಯೂರವನ್ನೇರಿ ಕುಳಿತನು. || ೧ ||

ಬಾಲಾಃ ಸ್ಕಂಧಾ೯ ದಾರಯಂತೋ ನಿಪೇತುಃ ಕೇಽಪಿ ತಜ್ಜಲೇ ।
ಏವಂ ಕ್ರೀಡತ್ಸು ಬಾಲೇಷು ದೈತ್ಯೋಽಗಾದಶ್ವರೂಪವಾ೯ ॥೮॥

ಯಸ್ಯ ಪಾದಪ್ರಹಾರೇಣ ಚೂರ್ಣತಾಂ ಯಾಂತಿ ಪರ್ವತಾಃ ।
ಯಸ್ಯ ಹೇಷಿತಶಬ್ದೇನ ಕಂಪತೇ ಭುವನತ್ರಯಮ್ ॥೯॥

ಪುಚ್ಛಚಾಂಚಲ್ಯತೋ ಜೀವಾ೯ ಹಂತಿ ಸ್ಕಂಧಂ ಜಘರ್ಷ ಹ ।
ಯಸ್ಮಿಂಶ್ಚೋತೇಽಸ್ಯ ಶಬ್ದೇನ ಕಂಪಿತೇ ಪತಿತಾರ್ಭಕೇ ॥೧೦॥

---

ಬಾಲಕರಿಗೆ ಹಣ್ಣುಗಳನ್ನು ಕಿತ್ತುಕೊಡೋಣವೆಂಬ ಕುತೂಹಲದಿಂದ ಸರಸರನೆ ಮರವನ್ನು ಏರಿದನು. ಕೆಳಕ್ಕೆ ಬಿದ್ದಿದ್ದ ಹಣ್ಣುಗಳನ್ನೇ ತೆಗೆದುಕೊಂಡು ಹಣ್ಣುಗಳ ಗೊಂಚಲುಗಳಿಗೆ ಹೊಡೆಯುತ್ತ ಹುಡುಗರು ಅವನ್ನು ಕೆಡವಿದರು. ಮತ್ತೆ ಕೆಲವರು ತಾವೂ ಗಿಡವನ್ನೇರಿ ಹೆಚ್ಚಾಗಿ ಹಣ್ಣುಗಳನ್ನು ಸಂಗ್ರಹಿಸೋಣವೆಂದು ಮರವನ್ನೇರಿದರು. ಇವರೆಲ್ಲ ಕಾಯಿಗಳನ್ನು ಕೊಯ್ದು ಕೆಳಗೆ ನಿಂದಿದ್ದ ಬಾಲಕರಿಗೆ ಹೊಡೆದರು. ಈ ಏಟುಗಳನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಹುಡುಗರು ಓಡತೊಡಗಿದರು. ॥೭॥

ಮರವನ್ನೇರಿದ್ದ ಹುಡುಗರು ಮರದ ಚಿಕ್ಕ ಪುಟ್ಟ ಕೊಂಬೆಗಳನ್ನೆಲ್ಲ ಮುರಿದು ಮುರಿದು ಬಿಸಾಡಿದರು. ಕೆಲವರು ಮರದ ಮೇಲಿರುವಂತೆಯೇ ಸರೋವರದ ಜಲಕ್ಕೆ ಧುಮ್ಮಿಕ್ಕಿದರು. ಹುಡುಗರು ಈ ರೀತಿಯಾಗಿ ಮನಸ್ವೀ ಆಟವಾಡುತ್ತಲಿರುವಾಗ ಕುದುರೆಯಂತೆ ಆಕಾರವನ್ನು ಧರಿಸಿದ್ದ ಒಬ್ಬ ದೈತ್ಯನು ಬಾಲಕರಿದ್ದ ಈ ಸ್ಥಳಕ್ಕೆ ಬಂದನು. ॥೮॥

ಅವನ ಖುರ (ಗೊರಸು) ಪುಟಾಘಾತಕ್ಕೆ ಪರ್ವತಗಳೆಲ್ಲ ಪುಡಿಪುಡಿಯಾಗುತ್ತಲಿದ್ದವು ಅವನ ಹೇಷಿತರವ (ಕೆನತ) ಕ್ಕೆ ಭುವನತ್ರಯವೂ ಕಂಪಿಸಿಹೋಗುತ್ತಲಿದ್ದಿತು. ॥೯॥

ಅಶ್ವವು ಉದ್ದವಾದ ತನ್ನ ಬಾಲವನ್ನು ಒಮ್ಮೆ ಕೊಡವಿತೆಂದರೆ ಅನೇಕ ಜೀವರಾಶಿಗಳು ಮೃತಿಯನ್ನೈದುತ್ತಿದ್ದವು. ಇಂತಹ ಅಶ್ವರೂಪಿಯಾದ ದೈತ್ಯನು ಮಾವಿನ ಮರದ ಸಮೀಪಕ್ಕೆ ಬಂದು ತನ್ನ ಮೂತಿಯನ್ನೆತ್ತಿ ಅದರ ಕೊಂಬೆಗಳನ್ನು ಹಿಡಿದೆಳೆಯಲಾರಂಭಿಸಿದನು. ಮರದ ಮೇಲೇರಿ ಕುಳಿತ ಬಾಲಕರು ವೃಕ್ಷಚಲನೆ

**ಕೇಚಿತ್ಪಲಾಯಿತಾ ಬಾಲಾಃ ಕೇಚಿದ್ಭಗ್ನಾಶ್ಚ ಮಸ್ತಕೇ ।**
**ಕೇಚಿನ್ನಿಪತಿತಾಶ್ಚಾಶು ಗುಣೇಶೇ ಪತಿತೇ ಜಲೇ ॥೧೧॥**

**ನಿಮಗ್ನೇ ದ್ವಿ-ಮುಹೂರ್ತೇಽಸ್ಮಿನ್ ಪ್ರಾರುದನ್ಮುನಿಬಾಲಕಾಃ ।**
**ಬಾಲಕಾ ಊಚುಃ :—**
**ಕಿಂ ವಕ್ತವ್ಯಮುಮಾಯೈ ಚ ದರ್ಶನೀಯಂ ಮುಖಂ ಕಥಮ್ ? ॥೧೨॥**

**ಶಂಕರೋಽಪಿ ರುಷಾವಿಷ್ಟೋ ಭಸ್ಮಸಾನ್ನಃ ಕರಿಷ್ಯತಿ ।**
**ಅಗಾಧೇಽಸ್ಮಿನ್ ಜಲೇ ಮಗ್ನಂ ಪ್ರವೇಷ್ಟುಂ ಚ ನ ಶಕ್ನುಮಃ ॥೧೩॥**

ಯಿಂದಲೂ ಕುದುರೆಯ ಕೆನೆತದ ಭಯಂಕರ ಧ್ವನಿಯಿಂದಲೂ ಬೆದರಿ ಕೆಲವರು ಇದ್ದಕ್ಕಿದ್ದಂತೆಯೇ ಉರುಳುರುಳಿ ನೆಲಕ್ಕೆ ಬಿದ್ದರು. ॥೧೧॥

ಕೆಳಕ್ಕೆ ಬಿದ್ದರೂ ಪೆಟ್ಟಾಗದೆ ಇದ್ದ ಕೆಲವು ಬಾಲಕರು ಕುದುರೆಯ ಕಣ್ಣಿಗೆ ಕಾಣದಂತೆ ತಪ್ಪಿಸಿಕೊಂಡು ಓಡಿ ನಡೆದರು. ಕೆಲವು ಅಜಾಗರೂಕ ಬಾಲಕರು ಅಸುಗೆಟ್ಟು ಬೀಳುವಾಗ ಹೇಗೆ ಹೇಗೋ ಬಿದ್ದುದರಿಂದ ತಲೆಗಳನ್ನು ಒಡೆದುಕೊಂಡರು. ಗುಣೇಶನು ನೀರಿನೊಳಕ್ಕೆ ಬಿದ್ದುದನ್ನು ನೋಡಿ ಮತ್ತೆ ಕೆಲವು ಬಾಲಕರು ತಾವೂ ತುಪು ತುಪು ಕೆಳಕ್ಕೆ ಹಾರಿಕೊಂಡರು. ಎರಡು ಮುಹೂರ್ತಗಳು ಕಳೆದರೂ ನೀರಿನಲ್ಲಿ ಮುಳುಗಿದ ಗಣಪತಿಯು ನೀರಿನಿಂದ ಮೇಲಕ್ಕೆ ಏಳಲೇ ಇಲ್ಲ. ಆಗ ಹುಡುಗರು ಘಾಬರಿಗೊಂಡರು. ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ಘಟ್ಟಿಯಾಗಿ ಅಳಲಾರಂಭಿಸಿದರು. ಮತ್ತು ಅಳುತ್ತಲೇ ಹೀಗೆಂದು ಒಬ್ಬರಿಗೊಬ್ಬರು ಹೇಳಿಕೊಂಡರು.

ಬಾಲಕರು :—

ಅಯ್ಯೋ! ಉಮಾದೇವಿಯು ಗಣಪತಿಯ ಬಗ್ಗೆ ಪ್ರಶ್ನಿಸಿದರೆ ಏನೆಂದು ಉತ್ತರವನ್ನು ಹೇಳೋಣ? ನಾವು ಮುಖವನ್ನು ಹೇಗೆ ತೋರಿಸೋಣ? ॥೧೨॥

ಗಣಪತಿಯು ನಮ್ಮ ಸಂಗಡ ಆಟವಾಡಲಿಕ್ಕೆಂದು ಬಂದು ನೀರಿನಲ್ಲಿ ಮುಳುಗಿ ಹೋದ ಸಂಗತಿಯೇನಾದರೂ ಶಂಕರನಿಗೆ ತಿಳಿದುಬಿಟ್ಟರೆ ನಮ್ಮ ಅವಸ್ಥೆಯು ಮುಗಿದಂತೆಯೇ ಸರಿ. ಅವನು ಕೋಪಗೊಂಡರೆ ನಮ್ಮನ್ನೆಲ್ಲ ದಹಿಸಿ ಬೂದಿಯನ್ನಾಗಿ ಮಾಡಿಬಿಟ್ಟಾನು. ಗಣಪತಿಯೋ ಸರೋವರದ ನಡುಭಾಗದಲ್ಲೇ ಬಿದು

ಮಾತಾ ಪಿತಾ ಪಾಲಯಿತಾ ಭ್ರಾತಾ ತ್ರಾತಾ ಸಖಾ ಚ ನಃ ।

ಕ ಉವಾಚ :—

ಏವಂ ಶೋಚತ್ಸು ಬಾಲೇಷು ಮಯೂರೇಶೋ ದಧಾರ ತಮ್ ॥೧೪॥

ಕರ್ಣಯೋರ್ಜಲಮಧ್ಯೇ ತು ಚಕರ್ಷ ಬಲವಾನ್ವಿಭುಃ ।
ಆರುರೋಹ ಬಲಾದ್ದೈತ್ಯಂ ಭಾರೇಣಾಮಜ್ಜಯರ್ನ ಮುಹುಃ ॥೧೫॥

ಸ ದೈತ್ಯೋ ನಿರ್ಗಮನ್ನೇತ್ರಾನ್ಮುಖಾದ್ಬಹುಜಲಂ ಮುಹುಃ ।
ಜಲಪೂರ್ಣಶ್ರುತಿ-ಶ್ವಾಸೋಽತ್ಯಜತ್ಪ್ರಾಣಾನ್ ಮಹಾರವಃ ॥೧೬॥

---

ಬಿಟ್ಟಿದ್ದಾನೆ. ನಾವೇನಾದರೂ ಪ್ರಯತ್ನಿಸಿ ನೀರಿನಲ್ಲಿಳಿದು ಅವನನ್ನು ಮೇಲಕ್ಕೆ ತ್ತೋಣವೆಂದರೆ ಆ ಸ್ಥಳದಲ್ಲಿ ಅಗಾಧವಾದ ನೀರು ಇದೆ. ಗಣಪನಂತೆ ನಾವೂ ಮುಳುಗಿ ಸತ್ತರೆ ಪ್ರಯೋಜನವಾದರೂ ಏನು? ಆದುದರಿಂದ ನೀರಿನಲ್ಲಿಳಿಯಲಿಕ್ಕೆ ನಮಗಾರಿಗೂ ಸಾಧ್ಯವೇ ಇಲ್ಲ. ॥೧೩॥

ಗಣಪತಿಯು ನಮಗೆಲ್ಲ ತಾಯಿ, ತಂದೆ, ರಕ್ಷಕ, ಸೋದರ, ಆಪದುದ್ಧಾರಕ ಹೆಚ್ಚಿನದಾಗಿ ಪರಮಾಪ್ತ ಮಿತ್ರನೂ ಆಗಿದ್ದನಲ್ಲವೇ?

ಬ್ರಹ್ಮಾ:—

ಬಾಲಕರು ಈ ರೀತಿಯಾಗಿ ಅಳುತ್ತಿರುವಷ್ಟರಲ್ಲಿ ಕುದುರೆಯೊಂದಿಗೆ ಜಲದಲ್ಲಿ ಬಿದ್ದು ಮುಳುಗಿ ಹೋಗಿದ್ದ ಗಣಪತಿಯು ಮೇಲಕ್ಕೆದ್ದು ಅಶ್ವರೂಪಿಯಾದ ಆ ದೈತ್ಯನ ಕಿವಿಗಳನ್ನು ಸಾಹಸದಿಂದ ಹಿಡಿದುಬಿಟ್ಟನು. ॥೧೪॥

ದರದರನೆ ನಡುನೀರಿನೊಳಗೆ ಬಲವಾಗಿ ಎಳೆದಾಡಿದನು. ಅದರ ಕತ್ತನ್ನು ಬಗ್ಗಿಸಿ ಹಿಡಿದು ಟಣ್ಣನೆ ಅದರ ಮೇಲೆ ಏರಿ ಕುಳಿತನು. ತನ್ನ ದೇಹದಲ್ಲಿ ಭುವನದ ಭಾರವನ್ನೆಲ್ಲ ಸಂಕ್ರಾಂತಿಗೊಳಿಸಿ ಕುದುರೆಯನ್ನು ನೀರಿನೊಳಕ್ಕೆ ಪದೇ ಪದೇ ಅದುಮಿದನು. ॥೧೫॥

ದೈತ್ಯನಿಗೆ ಸಾಕು ಸಾಕಾಗಿ ಹೋಯಿತು. (ಕುದುರೆಯು ಎಷ್ಟೇ ಬಲಿಷ್ಠವಾದರೂ, ಈಜಬಲ್ಲುದಾದರೂ ಅದರ ಕಿವಿಗಳಲ್ಲಿ ಮಾತ್ರ ನೀರು ತುಂಬಬಾರದು. ನೀರೇನಾದರೂ ಕುದುರೆಯ ಕಿವಿಗಳಿಗೆ ಹೊಕ್ಕರೆ ಅದಕ್ಕೆ ಮರಣಪ್ರಾಯ ದುಃಖ-

**ಏಕಹಸ್ತೇನ ಧೃತ್ವಾ ತಂ ಡೋಲಯಿತ್ವಾ ಜಲಾದ್ಬಹಿಃ ।**
**ಮಯೂರೇಶಸ್ತತೋ ಬಾಲಾ ಜಹೃಷುರ್ನನೃತುರ್ಭೃಶಮ್ ॥೧೬॥**

**ಭುವಿ ತೇ ಶತಧಾ ಜಾತಂ ದದೃಶುರ್ದೈತ್ಯಪುಂಗವಮ್ ।**
**ಪ್ರಶಶಂಸುರ್ಮಯೂರೇಶಂ ಮಹಾಬಲ-ಪರಾಕ್ರಮಮ್ ॥೧೮॥**

**ತ ಊಚುಸ್ತಂ ತದಾ ದೇವಂ**

**ಬಾಲಕಾ ಊಚುಃ :—**

**ಮೃತಂ ಮತ್ವಾ ರುದಾಮಹೇ ।**
**ತಾವದೇವ ಹಿ ದೃಷ್ಟೋಽಸಿ ಹತದೈತ್ಯೋ ಬಹಿರ್ಗತಃ ॥೧೯॥**

---

ವುಂಟಾಗುವುದೆಂದು ಅಶ್ವಲಕ್ಷಣ ಶಾಸ್ತ್ರದಲ್ಲಿ ಹೇಳಿದೆ.) ಕಣ್ಣು-ಬಾಯಿಗಳಿಂದ ಮೇಲೆ ಮೇಲೆ ನೀರನ್ನು ಕಾರತೊಡಗಿದನು. ಇದರಿಂದ ಆ ದೈತ್ಯನ ಶ್ವಾಸೋಚ್ಛ್ವಾಸಗಳು ಒಮ್ಮೆಲೇ ನಿಂತುಹೋದವು. ಘಟ್ಟಿಯಾಗಿ ಒಮ್ಮೆ ಅರಚಿ ಪ್ರಾಣಗಳನ್ನು ತ್ಯಜಿಸಿಬಿಟ್ಟನು. ॥೧೬॥

ಆಗ ದೇವೋತ್ತಮ, ಮಯೂರೇಶ್ವರನು ತನ್ನ ಒಂದು ಕೈಯಿಂದ ಅಶ್ವರೂಪಿಯಾದ ದೈತ್ಯನ ಮೃತ ಕಳೇಬರವನ್ನು ಹಿಡಿದೆತ್ತಿ ತೂಗಾಡಿ ಆಚೆಗೆ ಬೀಸಿ ಎಸೆದನು. ಈ ಅದ್ಭುತವನ್ನು ನೋಡಿದೊಡನೆಯೇ ಬಾಲಕರೆಲ್ಲರೂ ಬಹಳ ಹರ್ಷಗೊಂಡು ಮನಸ್ವಿಯಾಗಿ ಕುಣಿದಾಡಿದರು. ॥೧೭॥

ನೆಲಕ್ಕೆ ಬಿದ್ದ ರಭಸಕ್ಕೆ ದೈತ್ಯನ ದೇಹವು ಸಾವಿರಾರು ಚೂರುಗಳಾಗಿ ಅತ್ತಿತ್ತ ಚದುರಿ ಬಿದ್ದವು. ಇದನ್ನು ನೋಡಿದ ಮೇಲಂತೂ ಬಾಲಕರ ಆಶ್ಚರ್ಯಕ್ಕೂ ಉತ್ಸಾಹಕ್ಕೂ ಮಿತಿಯೇ ಉಳಿಯಲಿಲ್ಲ. ಎಲ್ಲರೂ ಒಮ್ಮನದಿಂದ ಮಯೂರೇಶನನ್ನು ಸುತ್ತುವರಿದು ಆತನ ಬಲ-ಪರಾಕ್ರಮಗಳನ್ನು ಬಾಯಿ ತುಂಬ ಹೊಗಳಿದರು. ॥೧೮॥

ಅನಂತರ ಬಾಲಕರು ದೇವನನ್ನು ಕುರಿತು ತಾವು ಗಣಪತಿಯ ಬಗ್ಗೆ ಇದುವರೆಗೂ ತಿಳಿದುಕೊಂಡಿದ್ದ ತಪ್ಪು ಭಾವನೆಯನ್ನು ವಿವರಿಸಲಾರಂಭಿಸಿದರು.

ಬಾಲಕರು :—

ಸ್ವಾಮಿನ್, ಮಯೂರೇಶ್ವರ! ಅಶ್ವರೂಪಿಯಾದ ರಾಕ್ಷಸನ ಕೈಗೆ ಸಿಕ್ಕಿಬಿದ್ದು

ಕ ಉವಾಚ :—

ಪುನಸ್ತೇ ಜಲಮಾವಿಶ್ಯ ಪ್ರಾಸಿಂಚನ್ನಂಜಲೀನ್ಮಿಥಃ ।
ಏಕಮುತ್ಯಾ ಚ ಸರ್ವೇ ತೇ ಪ್ರಾಸಿಂಚರ್ಗಣನಾಯಕಮ್ ॥೨೦॥

ವರ್ಷಾಕಾಲೇ ಯಥಾ ಮೇಘಾ ಧರಣೀಂ ಪರ್ವತಾನಪಿ ।
ಷಡ್ಭುಜೈಃ ಪರಿಷಿಂಚರ್ಸನ್ನಪರ್ಯಾಪ್ತೋಽಭವದ್ಯದಾ ॥೨೧॥

---

ನೀನು ಮೃತನೇ ಆಗಿಹೋದೆ ಎಂದು ನಾವು ತಿಳಿದುಕೊಂಡಿದ್ದೆವು. ಆದುದರಿಂದಲೇ ಈ ಅಶುಭವನ್ನು ಊಹಿಸಿದೊಡನೆಯೇ ನಮಗೆ ತಡೆಯಲಾರದಷ್ಟು ದುಃಖವು ಉಂಟಾಯಿತು. ಪರಿಹಾರೋಪಾಯ ಯಾವುದೂ ತಿಳಿಯದ್ದರಿಂದ ರೋದನವನ್ನೇ ಆಶ್ರಯಿಸಿದೆವು. ಅಷ್ಟರಲ್ಲೇ ನೀನು ಮೇಲೆದ್ದು ಬಂದುದನ್ನೂ, ದೈತ್ಯನನ್ನು ನಿಗ್ರಹಿಸಿ ಬಿಸುಟುದನ್ನೂ ನೋಡಿದೆವು. ನಿನ್ನನ್ನು ನೋಡಿದುದರಿಂದ ಮನಸ್ಸಿಗೆ ಬಹಳ ಮಟ್ಟಿಗೆ ನೆಮ್ಮದಿ ಎನಿಸಿದೆ. ॥೧೯॥

ಬ್ರಹ್ಮಾ :—

ವ್ಯಾಸ ! ಎಷ್ಟೆಂದರೂ ಹುಡುಗರು. ಕಷ್ಟಬಂದಾಗ ನರಳುವುದು, ಸ್ವಲ್ಪ ಹಗುರೆನಿಸಿದರೆ ಕೂಡಲೇ ಮಂಗಚೇಷ್ಟೆಗೆ ಹೊರಡುವುದು. ಇದೇ ಹುಡುಗರ ಸ್ವಭಾವ. ಪೂರ್ವಾಪರ ವಿವೇಚನೆಯೇ ಇರುವುದಿಲ್ಲ. ಒಂದು ಕ್ಷಣದ ಹಿಂದೆ ಅನುಭವಿಸಿದ ವಿಪತ್ತಿನ ಕಲ್ಪನೆಯನ್ನೂ ಮನಸ್ಸಿಗೆ ತಾರದೇ ಒರಟು ಧೈರ್ಯದಿಂದ ಪುನಃ ನೀರಿಗೆ ಇಳಿದರು. ಬೊಗಸೆಗಳಿಂದ ನೀರನ್ನು ತುಂಬಿಕೊಂಡು ಇತರ ಬಾಲಕರ ಮೇಲೆ ಸ್ವೇಚ್ಛೆಯಾಗಿ ಎರಚಾಡಲಾರಂಭಿಸಿದರು. ಹೀಗೆ ಆಟವಾಡುತ್ತಿರುವಾಗ ಬಾಲಕರೆಲ್ಲರೂ ಒಂದಾಗಿ ಮಹಾಗಣಪತಿಯ ಮೇಲೆ ನೀರನ್ನೆರಚ ತೊಡಗಿದರು. ॥೨೦॥

ಗಣಪತಿಯೂ ಸಹ ತನ್ನ ಆರು ಭುಜಗಳಿಂದಲೂ ಬಾಲಕರಿಂದ ಬೀಳುವ ನೀರಿನ ಏಟುಗಳನ್ನು ತಡೆಯುತ್ತ ಪ್ರತಿಭಟಿಸಲಾರಂಭಿಸಿದನು. ಮಳೆಗಾಲದಲ್ಲಿ ತುಂಬುಮೇಘಗಳು ಧಾರಾಕಾರವಾಗಿ ವೃಷ್ಟಿಯನ್ನು ಸುರಿಸಿ, ಭೂಮಿಯನ್ನೂ, ಪರ್ವತಗಳನ್ನೂ ನೆನೆಸುವಂತೆ ಜೀವನ ಪ್ರತಿಘಾತವಿದ್ದಿತಾದರೂ ಹುಡುಗರು ಅನೇಕರಿದ್ದುದರಿಂದ ಇವನ ಸಾಹಸ ಕೆಂದದಂತಾಗಲು ॥೨೧॥

**ತದಾಸಂಖ್ಯಭುಜೈರ್ವಾರಿ ಚಿಕ್ಷೇಪ ಬಾಲಕೇಷು ಸಃ |**
**ತದಾಶ್ಚರ್ಯಂ ತು ತೇ ದೃಷ್ಟ್ವಾ ಪರಸ್ಪರಮಥಾಬ್ರುವನ್ ||೨೨||**

**ಬಾಲಕಾ ಊಚುಃ :—**
**ಷಡ್ಭುಜೋಽಯಂ ಕಥಮಭೂದನಂತಭುಜಮಂಡಿತಃ |**
**ಮಂದೀಭೂತಾ ಮುನಿಸುತಾಃ ಕ್ವ ದ್ವಿಹಸ್ತಾ ವಯಂ ವಿಭೋ ||೨೩||**

**ಅಸಂಖ್ಯಭುಜವೀರ್ಯೌಜೋ ಕ್ವ ಚ ತ್ವಂ ಭುವನೇಶ್ವರ |**
**ಕ ಉವಾಚ :—**
**ಪುನಸ್ಸರ್ವೇ ಸಿಷಿಂಚುಸ್ತೇ ಮಯೂರೇಶಂ ರುಷಾನ್ವಿತಾಃ ||೨೪||**

ಮಯೂರೇಶ್ವರನು ಒಡನೆಯೇ ತನ್ನ ಮಹಿಮಾತಿಶಯದಿಂದ ಎಣಿಸಲಾರದಷ್ಟು ಭುಜಗಳನ್ನು ರೂಪಗೊಳಿಸಿ, ತನ್ಮೂಲಕ ಬಾಲಕರನ್ನು ಎದುರಿಸಿದನು. ಆ ಅದ್ಭುತವನ್ನು ನೋಡಿದ ಕೂಡಲೇ ಹುಡುಗರೆಲ್ಲ ದಂಗುಬಡಿದು ಹೋದರು. ಹುಡುಗರೇಕೆ ? ಎಂತಹ ಮತಿವಂತನಾದರೂ ಆಶ್ಚರ್ಯಪಡತಕ್ಕದ್ದೇ ಸರಿ. ಹುಡುಗರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ತಮ್ಮ ತಮ್ಮಲ್ಲೇ ಹೀಗೆಂದು ಮಾತನಾಡಿಕೊಂಡರು. ||೨೨||

ಬಾಲಕರು :—

ಇವನಿಗೆ ಕೇವಲ ಆರಲ್ಲವೇ ಭುಜಗಳಿದ್ದುದು? ಅದು ಹೇಗೆ ಒಮ್ಮೆಲೇ ಎಣಿಸಲಾರದಷ್ಟು ಭುಜಗಳು ಬಂದಿದ್ದಾವು ? "ಮಯೂರೇಶ್ವರ, ವಿಭೋ ! ನಾವೋ ಎರಡೆರಡೇ ಭುಜಗಳಿರತಕ್ಕವರು. ನೀನೇನಪ್ಪ ! ಸ್ವಭಾವತಃ ಆರು ಭುಜಗಳುಳ್ಳವನಾದರೂ ಎಷ್ಟು ಭುಜಗಳನ್ನು ಬೇಕಾದರೂ ಹೊಂದಬಲ್ಲೆ. ನಿನ್ನ ಈ ಸಾಹಸವನ್ನು ನೋಡಿ ನಾವು ಮಂಕರಾಗಿ ಹೋಗಿದ್ದೇವೆ. ಎಷ್ಟೆಂದರೂ ನಾವು ಮುನಿಬಾಲಕರಲ್ಲವೇ? ನೀನು ಜಗನ್ಮಾತಾಪಿತೃಗಳ ಕುಮಾರ ಸ್ವಯಂ ಜಗದೀಶ್ವರ. ನಿನ್ನ ಎದುರು ನಾವು ನಿಲ್ಲಬಲ್ಲೆವೇ ? " ||೨೩||

ಬ್ರಹ್ಮಾ:-

ಎಂದು ವ್ಯಂಗ್ಯೋಕ್ತಿಗಳಿಂದ ಜರಿದರು, ಮತ್ತು ಹ್ಯಾವಗೊಂಡು ತಾವೂ

**ಸೋऽನಂತರೂಪಸ್ತಾನ್ ಸರ್ವಾನ್ ಸಿಷೇಚೇ ಗಣನಾಯಕಃ ।**
**ಏಕೈಕಸ್ಯಾಗ್ರತೋ ಭೂತ್ವಾ ಷಡ್ಭುಜೋ ನಿಜತೇಜಸಾ ॥೨೫॥**

**ತಾವಚ್ಛಿಖಂಡಿನಿಷ್ಠೋऽಸೌ ಚತುರಾಯುಧಭೂಷಿತಃ ।**
**ಪ್ರಣೇಮುಸ್ತೇऽಂಜಲಿಪುಟಂ ಬದ್ಧ್ವಾ ದೇವಂ ಗುಣೇಶ್ವರಮ್ ॥೨೬॥**

**ಪಶ್ಯಂತಸ್ತನ್ಮುಖೇ ವಿಶ್ವಂ ಸದೇವಾಸುರಮಾನುಷಮ್ ।**
**ಗಂಧರ್ವ ಯಕ್ಷ ರಕ್ಷಾಂಸಿ ಸರಿದಬ್ಧಿದ್ರುಮಾನಪಿ ॥೨೭॥**

---

ಮಯೂರೇಶನಿಗಿಂತ ರಭಸದಿಂದ ಗಣಪತಿಯ ಮೇಲೆ ನೀರನ್ನೆರಚ ತೊಡಗಿದರು. ಇವರೆಲ್ಲರೂ ಕೇವಲ ಬಾಲಕರಾಗಿದ್ದರೂ ಇವರ ಸಾಹಸಗಳು ಅಬಾಲಸದೃಶ ವಾಗಿದ್ದವು. ॥೨೪॥

ಇವರ ಚಲ್ಲಾಟಕ್ಕೆಲ್ಲ ಗಣಪತಿಯು ಹೆದರಿಯಾನೇ? ಮತ್ತಿಷ್ಟು ಉತ್ಸಾಹ ಗೊಂಡನು ಮತ್ತು ಎದುರಾಳಿಗಳಷ್ಟೇ ಭಿನ್ನ ಭಿನ್ನ ರೂಪಗಳನ್ನು ಯೋಗಶಕ್ತಿಯಿಂದ ತೆಗೆದುಕೊಂಡು ಆರಾರು ಭುಜಗಳಿಂದ ಮುನಿಬಾಲಕರ ಮೇಲೆ ನೀರನ್ನೆರಚಲಾರಂಭಿ ಸಿದನು. ಎಂದರೆ ಒಬ್ಬೊಬ್ಬ ಮುನಿಬಾಲಕನ ಎದುರೂ ಒಬ್ಬೊಬ್ಬ ಗಣಪತಿಯು ಕಾಣಬಂದನು. ॥೨೫॥

ತಾನು ಎಷ್ಟೆಷ್ಟು ರೂಪಗಳನ್ನು ಸ್ವೀಕರಿಸಿದನೋ ಅಷ್ಟಷ್ಟು ಮಯೂರ (ನವಿಲು) ಗಳನ್ನೂ ಸೃಜಿಸಿ ಅವುಗಳ ಮೇಲೆ ಕುಳಿತಂತೆ ಭಾಸವಾದನು. ವಿಶ್ವ ವಿಧಾಯಕನಿಗೆ ತಾನು ಬಯಸಿದ ರೂಪಗಳನ್ನು ಸ್ವೀಕರಿಸುವುದು ಅತಿಶಯವೇ? ಅಥವಾ ಕಷ್ಟ ಸಾಧ್ಯವೇ? 'ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿಃ' ಎಂದು ತಿಳಿದ ವರು ಹೇಳುವುದು ವ್ಯಾಸ! ಸುಳ್ಳಲ್ಲ. ವಿಶ್ವಕರ್ಮನಿತ್ತ ನಾಲ್ಕು ಬಗೆಯ ಆಯುಧ ಗಳನ್ನು ಧರಿಸಿದ ಅನೇಕ ಮಯೂರೇಶರ ಸಮಾನರೂಪಗಳನ್ನು ಕಂಡಕೂಡಲೇ ಬಾಲಕರು ಯಾವ ಮಾತನ್ನೂ ಆಡದೇ, ಯಾವ ಬಗೆಯ ಪ್ರತಿಭಟನೆಯನ್ನೂ ಮಾಡದೇ ದೇವನಿಗೆ ಸಾಷ್ಟಾಂಗವೆರಗಿ ಅಂಜಲಿಗಳನ್ನು ಕಟ್ಟಿಕೊಂಡು ನಿಂತರು ಮತ್ತು ದೇವನ ಮುಖ ಕಮಲವನ್ನೇ ದಿಟ್ಟಿಸಿ ನೋಡತೊಡಗಿದರು. ॥೨೬॥

ಕನ್ನಡಿಯಂತೆ ಸ್ವಚ್ಛವಾಗಿದ್ದ ದೇವನ ಮುಖದಲ್ಲಿ ಮುನಿಬಾಲಕರಿಗೆ ಚರಾ-

**ಸರ್ವಂ ಚರಾಚರಂ ವಿಶ್ವಂ ಸದೇವಾಸುರಮಾನುಷಮ್ ।**
**ಪ್ರಾರ್ಥಯಾಮಾಸುರಥ ತೇ ದೃಷ್ಟ್ವೇತ್ಥಂ ತೇ ಭಯಾತುರಾಃ ॥೨೮॥**

**ಬಾಲಕಾ ಊಚುಃ :—**

**ನ ವಿದಾಮ ಸ್ವಮಾತ್ಮಾನಂ ಪರಂ ವಾ ನಾಪಿ ಕಿಂಚನ ।**
**ಏಕರೂಪೋ ಭವ ವಿಭೋ! ಕೃಪಾಂ ಕೃತ್ವಾಖಿಲೇಶ್ವರ ! ॥೨೯॥**

---

ಚರಾತ್ಮಕವಾದ ಈ ಜಗತೀತಲವೇ ಕಾಣಬರಲಾರಂಭಿಸಿತು. ಎಂದರೆ ಇಪ್ಪತ್ತೊಂದು ಬಗೆಯ ಸ್ವರ್ಗಗಳು ಸ್ಪಷ್ಟವಾಗಿ ಕಂಡವು. ಗಂಧರ್ವರು ಗಾನಾಸಕ್ತರಾಗಿದ್ದುದು, ಯಕ್ಷರು ನಿಧಿಗಳನ್ನು ಸಂರಕ್ಷಿಸುತ್ತಲಿದ್ದುದು, ರಾಕ್ಷಸರು ಉನ್ಮತ್ತತೆಯಿಂದ ಇತರರನ್ನು ಪೀಡಿಸುತ್ತಲಿದ್ದುದು, ವೇಗವಾಗಿ ಹರಿವ ನದಿಗಳು, ನದನದಿ ನಿಧಿಯಾದ ಸಮುದ್ರಗಳು, ಅನೇಕ ದೊಡ್ಡ ದೊಡ್ಡ ಮರಗಳು ಕಂಡುಬಂದವು. ॥೨೭॥

ಹೆಚ್ಚೇನು ? ಸಕಲ ಚರಾಚರಾತ್ಮಕವಾದ ಇಡೀ ಈ ಪ್ರಪಂಚಗಳೇ ಕಾಣಬರತೊಡಗಿದವು. ಎಂದ ಮೇಲೆ ದೇವತೆಗಳು, ಅಸುರರು, ಮಾನವರು ಮೊದಲಾದ ಜೀವ ಜಂತುಗಳೂ ತೋರಿದವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕೇನು ? ಬಾಲಕರು ಈ ಅದ್ಭುತ ದೃಶ್ಯವನ್ನು ನೋಡಿರುವುದಂತೂ ಒತ್ತಟ್ಟಿಗಿರಲಿ ಅವರಿವರು ಹೇಳುವ ಕಥೆಗಳನ್ನು ಸಹ ಒಮ್ಮೆಯಾದರೂ ಕೇಳಿದವರಲ್ಲ. ಇದನ್ನು ಕಂಡ ಕೂಡಲೇ ಭಯವಿಹ್ವಲರಾಗಿ 'ಹೇಗಾದರೂ ಈ ದೃಶ್ಯ ಮರೆಯಾದರೆ ಸಾಕು' ಎಂದು ಭಾವಿಸಿ ಗಣಪತಿಯನ್ನು ಕುರಿತು ಹೀಗೆಂದು ಪ್ರಾರ್ಥಿಸಲಾರಂಭಿಸಿದರು. ॥೨೮॥

ಬಾಲಕರು :—

ಮಹರಾಯ, ಮಯೂರೇಶ್ವರ ! ನೀನು ಹೇಗೆ ಬೇಕಾದರೂ ಆಗಬಲ್ಲೆಯಪ್ಪ. ಇದನ್ನು ನಾವೂ ಈಗ ಸಂಪೂರ್ಣವಾಗಿ ಮನಗಂಡಂತಾಗಿದೆ. ಇದಕ್ಕೂ ಹೆಚ್ಚು ಪರೀಕ್ಷೆ ಬೇಕಾಗಿಯೇ ಇಲ್ಲ. ಇತ್ತ ಸ್ವಲ್ಪ ನೋಡಪ್ಪ ! ನಮ್ಮ ಸ್ಥಿತಿ ಏನಾಗಿದೆ, ಬಲ್ಲೆಯ ? 'ನಾವಾರು, ಪರಕೀಯರಾರು ?' ಎಂಬುದನ್ನು ಸಹ ತಿಳಿಯುವಷ್ಟು ವಿವೇಕ ನಮಗೆ ಉಳಿದಿರುವುದಿಲ್ಲ. ಈ ಸ್ಥಿತಿಯಲ್ಲೇ ನಾವು ಹೆಚ್ಚು ಕಾಲ ಇರಲಾರೆವು.

**ದೃಷ್ಟ್ವಾ ತೇ ವದನಂ ಚೇತೋ ವಿಹ್ವಲಂ ನೋಽಭಿಜಾಯತೇ ||೩೪||**

**ವಿಶ್ರಾಂತಂ ಕುರು ಚೇತೋ ನಃ ಸ್ವಾಂಗಸಂಗಾನ್ನೃಪೋತ್ತಮ ! |**

**ದೇವ ಉವಾಚ :—**

**ಅಹಂ ಶಿವಸುತೋ ನಾಮ್ನಾ 'ಮಯೂರೇಶ' ಇತಿ ಸ್ಫುಟಮ್ ||೩೫||**

**ವಿಖ್ಯಾತೋ ಮುನಿಪುತ್ರೈಸ್ತು ಮಜ್ಜಿತೋ ಬಲವತ್ತರೈಃ |**

**ದೃಷ್ಟವಾನ್ ಪಾದಕಮಲಂ ಭವತೀನಾಂ ಪ್ರಸಂಗತಃ ||೩೬||**

**ಬಾಲಾ ಊಚುಃ :—**

**ಅಸ್ಮದ್ಗೃಹೇ ಕ್ಷಣಂ ಸ್ಥಿತ್ವಾ ವಿಶ್ರಾಮಂ ಕರ್ತುಮರ್ಹಸಿ |**

---

ವರೆಗೆ ಬಂದಿರುವೆ? ನಿನ್ನ ಮುಖಾರವಿಂದವನ್ನು ನೋಡಿದೊಡನೆಯೇ ನಮ್ಮಲ್ಲಿ ಕಾಮವಿಕಾರ ಉಂಟಾಯಿತು. ನಾವು ಬಹಳ ವಿಹ್ವಲರಾಗಿದ್ದೇವೆ. ||೩೪||

ಮದನಾಗ್ನಿಯ ಜ್ವಾಲೆಗೆ ಸಿಲುಕಿ ಬೆಂದು ಬಳಲಿ ಹೋದ ನಮ್ಮ ತನು-ಮನಗಳನ್ನು ನಿನ್ನ ಅಂಗಸಂಗದಿಂದ ಪುರುಷಶ್ರೇಷ್ಠ ! ತಣಿಯುವಂತೆ ಮಾಡು.

ಗಣೇಶ :—

ಪ್ರಮದೆಯರೇ! ನಾನು ನಿಟಿಲಾಕ್ಷನ ಮಗನು. "ಮಯೂರೇಶ್ವರ" ಎಂದು ನನ್ನ ಹೆಸರು. ಈ ಹೆಸರು ಸರ್ವತ್ರ ಪ್ರಸಿದ್ಧವಾಗಿದೆ. ||೩೫||

ಈ ಮುನಿಬಾಲಕರು ನನ್ನ ಸಂಗಡಿಗರು. ಇವರೊಂದಿಗೆ ಎಂದಿನಂತೆ ಆಟವಾಡಲು ಹೊರಹೊರಟವನು ಅಕಸ್ಮಾತ್ ಈ ಸರೋವರಕ್ಕೆ ಬಂದೆನು. ಈ ಮುನಿಬಾಲಕರೆಲ್ಲ ಸೇರಿ ಬಲಾತ್ಕಾರದಿಂದ ನನ್ನನ್ನು ಈ ನೀರಿನಲ್ಲಿ ಮುಳುಗಿಸಿದರು. ಪ್ರಸಂಗವಶಾತ್ ಮಹಿಮಾನ್ವಿತೆಯರಾದ ನಿಮ್ಮ ಪಾದಕಮಲಗಳನ್ನು ಇಲ್ಲಿ ಕಂಡೆನು. ||೩೬||

ಬಾಲಿಕೆಯರು :—

ಪ್ರಿಯತಮ! ನೀನು ನಮ್ಮ ಮನೆಗೆ ಬಂದು ಕೆಲಕಾಲ ಅಲ್ಲಿಯೇ ಇದ್ದು ವಿಶ್ರಾಂತಿಯನ್ನು ಪಡೆ.

**ದೇವ ಉವಾಚ :—**

**ಪಾರ್ವತೀ ಮದ್ವಿಯೋಗೇನ ಪರಿತಪ್ಯೇದ್ಭೃಶಂ ಯತಃ ||೩೭||**

**ಅತೋ ನಾಯಾಮಿ ವಸ್ಸ್ಥಾನಂ ಗಚ್ಛಂತು ನಾಗಕನ್ಯಕಾಃ ! |**

**ಕ ಉವಾಚ :—**

**ಏವಂ ವದತಿ ತಸ್ಮಿಂಸ್ತು ಧೃತ್ವಾ ನಿನ್ಯುರ್ಗೃಹಂ ತು ತಾಃ ||೩೮||**

**ತಮುದ್ದೃಷ್ಟ್ವಾ ಪುನಶ್ಶೋಕಂ ವ್ಯಥುರ್ಮುನಿಸುತಾಸ್ತದಾ |**

**ಬಾಲಕಾ ಊಚುಃ :—**

**ಕಥಂ ಕಠಿಣತಾಂ ಯಾತೋ ದಯಾಲುಸ್ಸ ಗುಣೇಶ್ವರಃ ? ||೩೯||**

---

ದೇವ :—

ನಾಗಕನ್ಯೆಯರೆ ! ನಾನು ನಿಮ್ಮೊಡನೆ. ಬಂದುಬಿಟ್ಟರೆ ನನ್ನ ತಾಯಿ ; ಪಾರ್ವತೀದೇವಿಯು ನನ್ನ ಅಗಲಿಕೆಯನ್ನು ಸಹಿಸಲಾರದೆ ಬಹಳ ಪರಿತಪಿಸಿಯಾಳು. ||೩೭||

ಆದುದರಿಂದ ನಾನು ನಿಮ್ಮ ಇಷ್ಟದಂತೆ ನಿಮ್ಮ ಮನೆಗೆ ಈಗ ಬರುವುದಿಲ್ಲ. ನಿಮ್ಮ ಪಾಡಿಗೆ ನೀವು ನಿಮ್ಮ ನಿಮ್ಮ ಮನೆಗಳಿಗೆ ಹೊರಡಿ.

ಬ್ರಹ್ಮ : –

ದೇವನಾಡಿದ ನಿರಾಕರಣೆಯ ಈ ಮಾತುಗಳನ್ನು ಕೇಳಿದೊಡನೆಯೇ ನಾಗ ಕನ್ಯೆಯರಿಗೆ ಆಶಾಭಂಗವಾಯಿತು. ಅವರ ಅಂತರಂಗದಲ್ಲಿ ಅನಂಗನು ತಾಂಡವವನ್ನಾಡತೊಡಗಿದನು. ಆಗ ಅವರು ಯಾವ ಮಾತನ್ನೂ ಆಡದೇ ಮಯೂರೇಶ್ವರನನ್ನು ಬಲಾತ್ಕಾರದಿಂದ ಹಿಡಿದುಕೊಂಡು ತಮ್ಮ ಮನೆಗಳಿಗೆ ಹೊರಟುಹೋದರು. ||೩೮||

ಇತ್ತ ಬಾಲಕರು ದೇವನನ್ನು ಕಾಣದೇ ಬಹಳ ವಿಹ್ವಲರಾಗಿ ದೀನವಾಣಿಯಿಂದ ಪರಸ್ಪರ ಹೀಗೆಂದು ಮಾತನಾಡಿಕೊಂಡರು.

ಬಾಲಕರು :—

ಇದೇನು ? ದಯಾಳುವಾದ ಗುಣೇಶನು ಈಚೀಚೆಗೆ ನಮ್ಮ ವಿಷಯದಲ್ಲಿ ಇಷ್ಟು ನೈಷ್ಠುರ್ಯವನ್ನು ತೋರಿಸಲಾರಂಭಿಸಿದನಲ್ಲ ? ಮುಂದೇನು ಗತಿ ? ||೩೯||

ಅಮೃತಸ್ರಾವಿಕಿರಣೋ ನ ಚಂದ್ರ ಉಷ್ಣತಾಂ ವ್ರಜೇತ್ ।
ನ ಪಿತಾ ತ್ಯಜತೇ ಬಾಲಾನ್ ಅಪರಾಧಯುತೇ ಸತಿ ॥೪೦॥

ಕ್ವ ಗತೋಽಸಿ ? ವಿನಾ ತ್ವಾಂ ಹಿ ಗಮಿಷ್ಯಂತಿ ಹಿ ನೋಽಸವಃ ।
ಕ ಉವಾಚ :—
ಕೇಚಿನ್ನಿಪತಿತಾ ಭೂಮೌ ಕೇಚಿದ್ಭಾಲಂ ನಿಜಘ್ನಿರೇ ॥೪೧॥

ಕೇಚಿದ್ಯಯುಸ್ಸ್ವಾಶ್ರಮಂ ತೇ ಪಥಿ ತಸ್ಯ ಪದಾಂಬುಜೇ ।
ದೃಷ್ಟ್ವಾ ನೇಮೂರುದಂತಸ್ತೇ ದದೃಶುಸ್ತೇ ಭಗಾಸುರಮ್ ॥೪೨॥

---

ತನ್ನ ಕಿರಣಗಳಿಂದ ಅಮೃತವನ್ನು ಸೇಚಿಸಿ ಸ್ಥಾವರ-ಜಂಗಮ ಜೀವಿಗಳನ್ನೆಲ್ಲ ತನುಗೊಳಿಸಬಲ್ಲ ಚಂದ್ರಮನು ಎಂದಿಗಾದರೂ ಪ್ರಖರಕಿರಣನಾದಾನೆಯೇ ? ಮಕ್ಕಳು ಎಷ್ಟೇ ದುಷ್ಟಸ್ವಭಾವದವರಾಗಿದ್ದು ಸಹಸ್ರಾರು ಅಪರಾಧಗಳನ್ನೆಸಗಿದಾಗ್ಯೂ ದಯಾಳುವಾದ ತಂದೆಯು ಅವರನ್ನು ತ್ಯಜಿಸುವನೇ ? ॥೪೦॥

ಭಗರ್ವ, ಗುಣೇಶ್ವರ ! ನಮ್ಮೆಲ್ಲರ ಕಣ್ಣುಗಳನ್ನೂ ಮರೆಸಿ ಎಲ್ಲಿಗೆ ಹೋದೆ ? ನಿನ್ನ ಅಗಲಿಕೆಯನ್ನು ನಾವು ತಡೆಯಲಾರೆವಲ್ಲ ? ನಮ್ಮ ಪ್ರಾಣಗಳೇ ಹೋಗುತ್ತಿರುವವಲ್ಲ ?

ಬ್ರಹ್ಮ :—
ಹೀಗೆಂದು ಹಲುಬುತ್ತ ಬಾಲಕರಲ್ಲಿ ಕೆಲವರು ನೆಲಕ್ಕುರುಳಿ ಹೊರಳಾಡ ತೊಡಗಿದರು. ಮತ್ತೆ ಕೆಲವರು ಅಂಗೈಗಳಿಂದ ತಮ್ಮ ಹಣೆಯನ್ನು ಘಟ್ಟಿಸಿಕೊಳ್ಳಲಾರಂಭಿಸಿದರು. ॥೪೧॥

ಇತರ ಬಾಲಕರು ತೀರಾ ನಿರಾಶೆಯನ್ನು ಹೊಂದಿ ಗುಣೇಶನ ಹೆಜ್ಜೆಗಳ ಗುರುತನ್ನೇ ಅನುಸರಿಸುತ್ತ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ಹೀಗೆ ಹೋಗುವಾಗ ದೇವನ ಪಾದದ ಗುರುತಿಗೆ ನಮಸ್ಕರಿಸುತ್ತಲಿದ್ದರು. ಪ್ರತಿಯೊಬ್ಬನೂ ಬಾಯಿ ತುಂಬ ಗುಣೇಶನನ್ನು ಹೊಗಳುತ್ತಲೇ ನಡೆದಿದ್ದನು. ವ್ಯಗ್ರರಾಗಿ ಹೋಗುತ್ತಲಿದ್ದ ಈ ಬಾಲಕರು ಮಾರ್ಗಮಧ್ಯೆ ಭಗಾಸುರನೆಂಬ ದೈತ್ಯನೊಬ್ಬನನ್ನು ಕಂಡರು. ॥೪೨॥

ಮೂರ್ಧಜಾಘಾತತೋ ಯಸ್ಯ ಭಾನಿ ಭೂಮೌ ನಿಪೇತಿರೇ ।
ಶತಯೋಜನಪಾದಾಬ್ಜೋ ಭೂಮಾವಾಸ್ಯಂ ಪ್ರಸಾರ್ಯ ಸಃ ॥೪೩॥

ತೇಷಾಂ ಮಾರ್ಗೇ ಪ್ರಸುಷ್ವಾಪ ತತಸ್ತೇ ಶಿಶವೋ ಯಯುಃ ।
ಧ್ಯಾಯಂತಸ್ತಂ ಮಯೂರೇಶಂ ಶೋಚಂತಃ ಪಥಿ ವಿಹ್ವಲಾಃ ॥೪೪॥

ಉದರೇ ತಸ್ಯ ತೇ ಯಾತಾ ಆಪಗಾ ಜಲಧೀನಿವ ।
ಭ್ರಾಂತಾಃ ಪರಸ್ಪರಂ ಚಕ್ರುರ್ವಾರ್ತಾ ನಾನಾವಿಧಾಸ್ತತಃ ॥೪೫॥

---

ಅವನ ಆಕೃತಿಯನ್ನಷ್ಟು ವ್ಯಾಸ! ವರ್ಣಿಸುವೆನು, ಕೇಳು. ಅವನ ತಲೆಗೂದಲಿನ ಹೊಡೆತಕ್ಕೆ ಕಸಪರಿಕೆಗೆ ಸಿಕ್ಕ ಕಸವು ಉದುರುವಂತೆ ಅಂತರಿಕ್ಷದಲ್ಲಿರುವ ನಕ್ಷತ್ರಗಳೆಲ್ಲ ಉದುರಿ ಭೂಮಿಗೆ ಬೀಳುತ್ತಿದ್ದವು. ಅವನ ಪಾದವು ನೂರುಯೋಜನಗಳ ವ್ಯಾಸ ಉಳ್ಳದ್ದು. ಭಯಂಕರಾಕಾರದ ಆ ರಾಕ್ಷಸನು ಕಮರಿಯಂತಹ ತನ್ನ ಬಾಯಿಯನ್ನು ಅಗಲಿಸಿಕೊಂಡು ಬಾಲಕರು ನಡೆದು ಬರುವ ಮಾರ್ಗದಲ್ಲೇ ಆಹಾರವನ್ನು ನಿರೀಕ್ಷಿಸುತ್ತ ಮಲಗಿದ್ದನು. ॥೪೩॥

ಪಾಪ! ಚಿಕ್ಕ ಮಕ್ಕಳಿಗೆ ಈ ಸಂಗತಿ ಹೇಗೆ ತಿಳಿದೀತು ? ಅಲ್ಲದೇ ಗುಣೇಶನ ವಿಯೋಗದಿಂದ ಮೊದಲೇ ಕಂಗೆಟ್ಟಿದ್ದಾರೆ. ಪರಸ್ಪರ ಅವನ ಗುಣಾತಿಶಯವನ್ನೇ ಗಾನಮಾಡುತ್ತ ತದೇಕಚಿತ್ತರಾಗಿ ಬರುತ್ತಲಿದ್ದಾರೆ. ಮಯೂರೇಶ್ವರನು ಕಾಣೆಯಾದುದರಿಂದ ಅವರಿಗುಂಟಾಗಿದ್ದ ವಿಹ್ವಲತೆಯನ್ನು ಬಣ್ಣಿಸಲಾರೆ. ಅಂತೂ ಅವರು ನಡೆದು ಮುಂದೆ ಬಂದೇ ಬಿಟ್ಟರು. ॥೪೪॥

ಹರಿವ ನದಿಗಳು ಓಡೋಡುತ್ತ ಬಂದು ಸಮುದ್ರಕ್ಕೆ ಧುಮುಕುವಂತೆ ಈ ಬಾಲಕರು ಭಗಾಸುರನ ಉದರದೊಳಗೆ ಬಂದು ಬಿದ್ದು ಬಿಟ್ಟರು. ಒಮ್ಮೆಲೇ ಅವರ ಗತಿಗೆ ತಡೆಯುಂಟಾದುದರಿಂದ ಅವರಿಗೆ ಮೈ ಮೇಲೆ ಭಾನ ಉಂಟಾಯಿತು. ಒಬ್ಬರ ಮುಖವನ್ನೊಬ್ಬರು ನೋಡುತ್ತ ಸಂಭ್ರಾಂತರಾಗಿ ಅವರವರಿಗೆ ತೋಚಿದಂತೆ ಎಲ್ಲರೂ ಒಮ್ಮೆಲೇ ಮಾತನಾಡಲಾರಂಭಿಸಿದರು. ॥೪೫॥

**ಬಾಲಕಾ ಊಚುಃ :—**

**ಮಯೂರೇಶೋ ಗತಃ ಕ್ವಾಪಿ ವಯಂ ಕುತ್ರ ವ್ರಜಾಮಹೇ ।**
**ನ ಜಾನೀಮೋ ದಿಶಂ ಸರ್ವೇ ನೋ ದೃಶ್ಯಂತೇ ಗೃಹಾಣಿ ಚ ॥೪೬॥**

**ಇಂದ್ರಿಯಾಣಾಮಧಿಪತಿರ್ಮನೋ ನೀತಂ ತು ತೇನ ನಃ ।**
**ವಿನಾ ನೋ ಮನಸಾ ಜ್ಞಾನಂ ಕಥಮುತ್ಪತ್ಸ್ಯತೇಽರ್ಭಕಾಃ ॥೪೭॥**

**ಕ್ವ ಮಾತರೋ ಭ್ರಾತರೋ ವಾ ಪಿತರಃ ಕ್ವ ಗುಣೇಶ್ವರಃ ।**

**ಕ ಉವಾಚ :—**

**ಏವಂ ವದತ್ಸು ಬಾಲೇಷು ಮಯೂರೇಶೋಽಖಿಲಾರ್ಥಕೃತ್ ॥೪೮॥**

---

ಬಾಲಕರು :—

ಮಯೂರೇಶನು ಹೋಗಿದ್ದಾನೆಲ್ಲಿಗೆ? ನಾವೀಗ ಎಲ್ಲಿಗೆ ಹೊರಟು ಬಂದಿದ್ದೇವೆ? ನಮಗೇಕೆ ದಾರಿ ತಪ್ಪಿತು? ನಮ್ಮಲ್ಲಿ ಯಾರೊಬ್ಬರಿಗೂ ದಿಕ್ಕೇ ತೋರದಂತಾಗಿದೆಯಲ್ಲ? ಈ ದಾರಿಯು ಇಲ್ಲೇ ಕುಂಠಿತವಾದಂತೆ ತೋರುತ್ತಲಿದೆ. ಹಾಗಿದ್ದರೆ ಗೃಹಾರಾಮ ಕ್ಷೇತ್ರಗಳು ಕಾಣಬೇಡವೇ? ಒಂದೂ ಕಾಣಬೊಲ್ಲದಲ್ಲ? ॥೪೬॥

ಪ್ರಾಯಃ ಹೀಗಿದ್ದರೂ ಇರಬಹುದು. ನಮ್ಮ ಗುಣೇಶ್ವರನು ನಮ್ಮೆಲ್ಲರ ಮನಸ್ಸುಗಳಿಗೆ ಅಧಿಪತಿಯಾದವನಲ್ಲವೇ? ಅವನು ನಮ್ಮನ್ನಗಲಿ ಹೋಗುವಾಗ ನಮ್ಮ ಮನಸ್ಸುಗಳನ್ನೂ ಸೆಳೆದುಕೊಂಡೇ ಹೋಗಿರಬಹುದು. ಎಂದ ಮೇಲೆ ಮನಸ್ಸೇ ಇಲ್ಲದ ನಮಗೆ 'ಇದು ಹೀಗೆಯೇ ಸರಿ' ಎಂಬ ನಿಷ್ಕೃಷ್ಟ ಜ್ಞಾನವು ಬಾಲಕರೇ? ಹೇಗೆ ಉದಿಸೀತು. ಆದುದರಿಂದಲೇ ನಮಗೆಲ್ಲವೂ ವ್ಯತ್ಯಸ್ತವಾಗಿಯೇ ತೋರುತ್ತಲಿದೆ. ॥೪೭॥

ಅಯ್ಯೋ! ನಮ್ಮ ತಾಯಂದಿರೆಲ್ಲಿಗೆ ಹೋದರು? ಅಣ್ಣ-ತಮ್ಮಂದಿರೆಲ್ಲಿ? ನಮ್ಮ ಜನಕರೆಲ್ಲಿಗೆ ಹೊರಟು ಹೋದರು? ಎಲ್ಲಕ್ಕೂ ಹೆಚ್ಚಿನದಾಗಿ ನಮ್ಮ ಸರ್ವಸ್ವನಾದ ಮಯೂರೇಶ್ವರನು ನಮ್ಮನ್ನು ಅಗಲಿ ಎಲ್ಲಿಗೆ ಹೋದನು?

ಬ್ರಹ್ಮಾ :-

ಎಂದು ಬಾಲಕರು ಬಗೆಬಗೆಯಾಗಿ ದೀನಸ್ವರದಿಂದ ಪಲುಬಲಾರಂಭಿಸಿದರು.

ಆವಿರಾಸೀತ್ತತ್ಪುರತಃ ಚತುರಾಯುಧಭೂಷಿತಃ ।

ಗುಣೇಶ ಉವಾಚ :—

ಮಾ ಶೋಚಂತು ಭವದ್ದುಃಖಂ ಜ್ಞಾತ್ವಾಹಂ ಶೀಘ್ರಮಾಗತಃ　　॥೪೯॥

ಕ ಉವಾಚ :—

ಭಗಾಸುರೋದರಗತಾನಾತ್ಮನೋ ವಿದುರರ್ಭಕಾಃ ।

ನಿದ್ರಯಾ ಮೋಹಯಾಮಾಸ ಮುನಿಪುತ್ರಾನ್ ಗುಣೇಶ್ವರಃ　　॥೫೦॥

---

ಅಲ್ಪಶಕ್ತಿಯುಳ್ಳ ಮಾನವನ ದೃಷ್ಟಿಗೆ ವಿಭುವನ್ನು ನೋಡುವ ಸಾಮರ್ಥ್ಯವಿಲ್ಲವೆಂದ ಮಾತ್ರಕ್ಕೆ ಸರ್ವಜ್ಞನೂ, ಸಕಲಾರ್ಥಪ್ರದಾತನೂ ಆದ ಭಗವಾನ್ ಮಯೂರೇಶ್ವರನಿಗೆ ಇದು ಪರೋಕ್ಷವಾದೀತೇ? ಭಗವಂತನು ಭಕ್ತರು ದುಃಖಿಸುತ್ತಿರುವುದನ್ನು ಎಂದಿಗಾದರೂ ಸಹಿಸಿಯಾನೇ? ಒಡನೆಯೇ ಮಯೂರೇಶ್ವರನು ॥೪೮॥

ತನ್ನ ನಾಲ್ಕು ಬಗೆಯ ದಿವ್ಯಾಯುಧಗಳನ್ನೂ ಧರಿಸಿ ಬಾಲಕರೆದುರು ಆವಿರ್ಭವಿಸಿ ನಿಂದು ಹೀಗೆಂದು ಅವರನ್ನು ಸಮಾಧಾನಪಡಿಸಿದನು.

ಗಣೇಶ :—

ಪ್ರಿಯ ಬಾಲಕರೇ! ಶೋಕಿಸಬೇಡಿ. ಇದೋ, ನಾನು ಬಂದಿರುವೆನು. ಕಣ್ಣು ತೆರೆದು ನೋಡಿ. ನೀವು ಅಳುತ್ತಿರುವುದನ್ನೂ ವಿಪದ್ಗ್ರಸ್ತರಾದುದನ್ನೂ ತಿಳಿದು ನಿಮಗಾಗಿ ಧಾವಿಸಿ ಬಂದಿರುವೆನು. ॥ ೪೯ ॥

ಬ್ರಹ್ಮಾ :—

ಈ ಮಾತನ್ನು ಕೇಳಿದನಂತರ ತಾವು ಭಗಾಸುರನ ಹೊಟ್ಟೆಯನ್ನು ಪ್ರವೇಶಿಸಿದುದು, ತನ್ಮೂಲಕ ಘೋರವಾದ ವಿಪತ್ತಿಗೆ ಗುರಿಯಾದುದು ಬಾಲಕರಿಗೆ ಅರಿವಾಯಿತು. ಈ ತಿಳಿವು ಹೆಚ್ಚು ಕಾಲ ಹಾಗೆಯೇ ಉಳಿದರೆ ಮತ್ತಷ್ಟು ಭಯಪಟ್ಟಾರೆಂದು ಭಾವಿಸಿ ಗುಣೇಶ್ವರನು ಆ ಮುನಿಪುತ್ರರನ್ನು ನಿದ್ರೆಯಿಂದ ವ್ಯಾಮೋಹಗೊಳಿಸಿ ಯಾವುದರ ಅರಿವೂ ಅವರಿಗುಂಟಾಗದಂತೆ ಮಾಡಿಬಿಟ್ಟನು. ॥ ೫೦ ॥

**ದೈತ್ಯದೇಹಾಂತರಗತೋ ವವೃಧೇ ವಾಮನೋ ಯಥಾ ।**
**ವಿಪಾಟ್ಯ ದೇಹಂ ತಸ್ಯಾಶು ಶಕಲೇ ದ್ವೇ ವ್ಯಧಾದ್ವಿಭುಃ ॥೫೧॥**

**ತತೋಽಸ್ತಮಿತ ಆದಿತ್ಯೇ ನಾಗತೇಷ್ವರ್ಭಕೇಷು ಚ ।**
**ಮಾತರಃ ಪಿತರಶ್ಚೈವ ಚಿಂತಾಮಾಪುಶ್ಶುಚಾನ್ವಿತಾಃ ॥೫೨॥**

**ಊಚುಃ ಪರಸ್ಪರಂ ತೇ ತು**

**ಜನಾ ಊಚುಃ :—**

**ಶಿವಾಪುತ್ರೋ ಮಹಾಬಲಃ ।**
**ಬಾಲಾನ್ನೀತ್ವಾ ಗತಃ ಕುತ್ರ ಮೃತೋ ವಾ ಶಿಶುಭಿಸ್ಸಹ ॥೫೩॥**

ಬಹು ಹಿಂದೆ ಬಲಿಚಕ್ರವರ್ತಿಯನ್ನು ನಿಗ್ರಹಿಸುವುದಕ್ಕೆ ವಾಮನನಾಗಿ ಅವತರಿಸಿದ ಮಹಾವಿಷ್ಣು ಒಮ್ಮೆಲೆ ಭೂಮ್ಯಂತರಿಕ್ಷಗಳನ್ನೂ ವ್ಯಾಪಿಸುವಂತೆ ಹೇಗೆ ಬೆಳೆದು ನಿಂತನೋ ಅದರಂತೆ ಭಗಾಸುರನ ಉದರವನ್ನು ಪ್ರವೇಶಿಸಿದ ಮಯೂರೇಶ್ವರನೂ ಮಿತಿಮೀರಿ ಬೆಳೆದು ನಿಂತನು. ಮತ್ತು ಒಡನೆಯೇ ಅವನ ದೇಹವನ್ನು ಎರಡು ಹೋಳಾಗುವಂತೆ ಸೀಳಿಬಿಸುಟನು ॥ ೫೧ ॥

ಅಷ್ಟರಲ್ಲಿ ಸೂರ್ಯನಾರಾಯಣನು ಅಸ್ತಮಿಸಿದನು. ಅತ್ತ ಬಾಲಕರ ಜನನೀ-ಜನಕರು 'ಇಷ್ಟು ಹೊತ್ತಾದರೂ ಆಟವಾಡಲಿಕ್ಕಾಗಿ ಹೊರಕ್ಕೆ ಹೋಗಿದ್ದ ಬಾಲಕರು ಬರಲಿಲ್ಲವಲ್ಲ? ಏನಾಗಿರಬಹುದು? ಎಂದು ಚಿಂತಿಸಲಾರಂಭಿಸಿದರು. ಚಿಂತೆಯು ಬಲವಾದಂತೆಲ್ಲ ಹುಡುಗರು ಹಿಂದಿರುಗುವ ಕಾಲ ಮೀರುತ್ತಿದ್ದುದರಿಂದ 'ಇನ್ನು ಬರುವ ಸಂಭವವಿಲ್ಲ' ಎಂಬ ಕಲ್ಪನೆ ಬಂದು ಶೋಕರೂಪವಾಗಿ ಪರಿಣಮಿಸಿತು. ॥೫೨॥

ಆಗ ಪರಸ್ಪರರನ್ನು ನೋಡುತ್ತ ಹೀಗೆಂದು ಮಾತನಾಡಿಕೊಂಡರು.

ಜನರು :—

ಪರಶಿವೆಯ ಪುತ್ರನೇನೋ ಬಲಿಷ್ಠನೇ ಹೌದು, ನಮ್ಮ ಹುಡುಗರು ಅವನ ಸಂಗಡಲೇ ಹೋಗಿದ್ದಾರೆಂದ ಬಳಿಕ ನಾವೇನೂ ಯೋಚಿಸ ಬೇಕಾಗಿಲ್ಲ. ಆದರೆ ಎಲ್ಲಿಗೆ ಹೋಗಿರಬಹುದು? ಅವನಿಗೇ ಯಾವುದಾದರೂ ವಿಪತ್ತು ಒದಗಿಬಿಟ್ಟಿದ್ದರೆ ಗತಿ ಏನು? ಈ ಬಾಲಕರೊಂದಿಗೆ ಅವನೂ ಸತ್ತೇ ಹೋದನೋ ಏನೋ? ॥೫೩॥

ಜೀವಂಶ್ಚೇದಾಗತಸ್ಸ ಸ್ಯಾತ್ಸಾಯಂಕಾಲೇ ಬುಭುಕ್ಷಿತಃ ।
ಕ ಉವಾಚ :—
ಕೇಚಿತ್ಪ್ರಾಣಾರ್ ವಿನಾ ತೈಸ್ತು ತತ್ತ್ಯಜುರ್ಮಾತರೋಽಪಿ ಚ ॥೫೪॥

ಕೇಚಿದೂಚುರುಮಾಯೈ ತದ್ವೃತ್ತಂ ಸರ್ವಂ ನಿವೇದ್ಯತಾಮ್' ।
ಕೇಚಿತ್ತೇಷು ವನಂ ಯಾತಾ ಬಭ್ರಮುರ್ವನಪರ್ವತಾರ್ ॥೫೫॥

ನಾಪುಸ್ತಂ ಚ ಸ್ವಕಾರ್ ಬಾಲಾರ್ ಖಿನ್ನಾಃ ಪ್ರಾಪುರ್ಗೃಹಾರ್ ಪುನಃ ।
ನಾನಾ ಕೋಲಾಹಲಂ ಚಕ್ರುರ್ಜನನ್ಯಃ ಪಿತೃ-ಸೋದರಾಃ ॥೫೬॥

---

ಅವನು ಮೃತ್ಯುವಶನಾಗಿರಬಹುದೆಂದೇಕೆ ಕಲ್ಪಿಸುವುದೆಂಬುವಂತೆಯೂ ಇಲ್ಲ, ಅವನು ಬದುಕಿಯೇ ಇದ್ದಿದ್ದರೆ ಸಂಜೆಯ ವೇಳೆಗೆ ಎಲ್ಲಿದ್ದರೂ ಮನೆಗೆ ಬರಲೇ ಬೇಕಾಗಿತ್ತು. ಅವನಿಂದ ಹಸಿವನ್ನು ತಡೆಯುವುದಕ್ಕಾಗುವುದಿಲ್ಲ.

ಬ್ರಹ್ಮಾ :—

ಕೆಲವು ತಾಯಂದಿರಂತೂ 'ಮಕ್ಕಳ ವಿಯೋಗವನ್ನು ಸಹಿಸಲಾರದೇ ಪ್ರಾಣಗಳನ್ನು ಇಟ್ಟು ಕೊಳ್ಳಲಾರೆವೆ'ಂದು ಹಟತೊಟ್ಟರು. ॥೫೪॥

'ಉಮಾದೇವಿಗೆ ಈ ಎಲ್ಲ ವೃತ್ತಾಂತವನ್ನೂ ಮೊದಲು ತಿಳಿಸಿ ಬರಬೇಕು' ಎಂದು ಅವರಲ್ಲಿ ಕೆಲವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಕೆಲವರಂತೂ ಯಾವುದನ್ನೂ ಆಲೋಚಿಸದೇ ನೆಟ್ಟಗೆ ಅರಣ್ಯಕ್ಕೆ ಓಡಿಹೋಗಿ ಅಲ್ಲೆಲ್ಲ ಹುಡುಕಾಡಿದರು. ಗುಡ್ಡಗಳನ್ನೆಲ್ಲ ಏರಿ ನೋಡಿದರು. ಗುಹೆ, ಸಂದಿ–ಮೂಲೆಗಳನ್ನೆಲ್ಲ ಶೋಧಿಸಿದರು. ॥೫೫॥

ಆದರೆ ಏನು? ಜನರಿಗೆ ತಮ್ಮ ಮಕ್ಕಳು ಸಿಕ್ಕಲೇ ಇಲ್ಲ. ಬಹಳ ಖಿನ್ನರಾಗಿ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಬಂದರು. ಇವರು ಹುಡುಗರೊಂದಿಗೆ ಬಾರದ್ದನ್ನು ಕಂಡ ಮೇಲಂತೂ ಅವರ ಹೆಂಡಂದಿರು, ಅಣ್ಣ–ತಮ್ಮಂದಿರು, ಮತ್ತು ಹಿರಿಯರಾದವರು ಎಲ್ಲರೂ ತಮ್ಮ ಶೋಕವನ್ನು ಬಗೆಬಗೆಯ ಧ್ವನಿಗಳಿಂದ ಹೊರಗೆಡವಲಾರಂಭಿಸಿದರು. ಇವರೆಲ್ಲರ ಆರ್ತನಾದವು ದೊಡ್ಡದೊಂದು ಕೋಲಾಹಲವಾಗಿಯೇ ಪರಿಣಮಿಸಿತು. ॥೫೬॥

ತೇಷಾಮಾಕ್ರಂದಿತಂ ಶ್ರುತ್ವಾ ಕೃಪಾಲುಸ್ಸ ಮಯೂರರಾಟ್ ।
ತತ್ತದ್ರೂಪಂ ಸ್ವಮಾತ್ಮಾನಂ ತತ್ತದ್ಭೂಷಾಸಮನ್ವಿತಮ್ ॥೫೭॥

ತತ್ತದ್ವಾಸಃ ಪರೀಧಾನಂ ತತ್ತಚ್ಛೀಲಗುಣಾನ್ವಿತಮ್ ।
ತತ್ತದಂಗಂ ಚಕಾರಾಶು ವಿವೇಶಾಸೌ ಗೃಹೇ ತತಃ ॥೫೮॥

ಕೃತ್ವಾ ತತ್ತದ್ವಯೋ-ವೇಷಂ ತತ್ತನ್ನಾಮಯುತಂ ಶುಭಮ್ ।
ಜನನ್ಯಸ್ತಾಸ್ಸಮುತ್ಥಾಯ ಬಾಲಾನಾದಾಯ ಸತ್ತ್ವರಾಃ ॥೫೯॥

ಅವರ ಆಕ್ರಂದನದ ಧ್ವನಿಯನ್ನು ಕೇಳಿ ದಯಾಲುವಾದ ಮಯೂರರಾಜನಿಗೆ ಮನಸ್ಸಿನಲ್ಲಿ ಸ್ತ್ರೀಯರ ಬಗ್ಗೆ ಕರುಣೆ ಉತ್ಪನ್ನವಾಯಿತು. ಒಡನೆಯೇ ದೇವನು ಅವರವರ ಮಕ್ಕಳಂತೆಯೇ ತನ್ನ ರೂಪವನ್ನು ಯೋಗಶಕ್ತಿಯಿಂದ ಮಾರ್ಪಡಿಸಿಕೊಂಡನು. ಆ ಬಾಲಕರು ಧರಿಸಿದ್ದ ಆಭರಣಗಳನ್ನೆಲ್ಲ ಧರಿಸಿದನು. ॥೫೭॥

ಅವರಂತೆಯೇ ಬಟ್ಟೆಗಳನ್ನು ಉಟ್ಟು ಹೊದೆದಿದ್ದನು. ಆಯಾ ಬಾಲಕರ ವಿಶಿಷ್ಟ ತರಹದ ಕರಚರಣ ಚೇಷ್ಟೆಗಳನ್ನು ತಾನೂ ಅಭಿನಯಿಸುತ್ತಲಿದ್ದನು. ಸರ್ವಜ್ಞನೂ ಸರ್ವಶಕ್ತನೂ ಆದ ಮಯೂರೇಶ್ವರನಿಗೆ ಯಾವುದು ತಾನೇ ಅಸಾಧ್ಯವಾದೀತು ? ಅಂಗ ವಿನ್ಯಾಸಗಳೂ ಆಯಾ ಬಾಲಕರಂತೆಯೇ ಇದ್ದವು. ಧ್ವನಿಯನ್ನು ಸಹ ಅವರಂತೆಯೇ ಬದಲಾಯಿಸಿಕೊಂಡು ಅವರವರ ಮನೆಗಳಿಗೆ ದೇವನು ವಿರಾಡ್ರೂಪಿಯಾಗಿ ಬಂದನು. ॥೫೮॥

ಹೀಗೆ ಪ್ರವೇಶ ಮಾಡಿದ ಗುಣೇಶನು ಆಯಾ ಹುಡುಗರ ವಯಸ್ಸು, ದೇಹದ ಅಳತೆ ಮತ್ತು ಪುಷ್ಟಿ ಇವಕ್ಕೆ ಮೀರದಂತೆ ಇದ್ದುದರಿಂದ 'ಬಂದವನು ತಮ್ಮ ಹುಡುಗನಲ್ಲ' ಎಂದು ಯಾರೂ ಹೇಳುವಂತಿರಲಿಲ್ಲ. ಗಣಪತಿಯು ಆಯಾ ರೂಪಗಳಿಂದ ಆಯಾ ಮನೆಗಳನ್ನು ಪ್ರವೇಶಿಸಿದುದನ್ನು ಕಂಡ ಕೂಡಲೇ ಆಯಾ ಗೃಹಿಣಿಯರು ತಮ್ಮ ತಮ್ಮ ಮಕ್ಕಳೇ ಬಂದರೆಂದು ನಂಬಿ ಎದ್ದು ಓಡುತ್ತ ಬಂದು ಬಾಲಕರ ರೂಪಿಯಾದ ಮಯೂರೇಶ್ವರನನ್ನು ಎತ್ತಿಕೊಂಡರು. ॥೫೯॥

ಸ್ತನಪಾನಂ ದದುಃ ಪ್ರೀತ್ಯಾ ಪರಮಾನಂದನಿರ್ಭರಾಃ ।
ತತೋ ದದೃಶಿರೇ ಬಾಲಾಃ ಪಿತೃಭಿರ್ಮಾತೃಭಿಸ್ತದಾ ॥೬೦॥

ತಾ ಊಚುಃ

ಜನನ್ಯ ಊಚುಃ:—

'ಕ್ವ ಸ್ಥಿತಾ ರೋಷಾದುಷಃಕಾಲೇ ಗತಾಃ ಕುತಃ ? ।
ನ ಸ್ನಾನಂ ನ ಚ ಭುಕ್ತಂ ವಾ ನ ಚಾನ್ಯದ್ವಾಪಿ ಭಕ್ಷಿತಮ್ ॥೬೧॥

---

ತಾಯಂದಿರ ಹೃದಯ ಉಕ್ಕಿ ಬಂದಿತು. ದೇವನನ್ನು ಎದೆಗವಚಿಕೊಂಡು ಆ ವಿಶ್ವಂಭರ ಮೂರ್ತಿಗೆ ತಮ್ಮ ಸ್ತನ್ಯವನ್ನು ಪಾನಮಾಡಿಸತೊಡಗಿದರು. ತಮ್ಮ ಮಕ್ಕಳೆಂದು ಭಾವಿಸಿ ಭಗವಂತನನ್ನೇ ಎತ್ತಿಕೊಂಡಿದ್ದಾರೆ. ಅವರಿಗೆ 'ಇವನು ಭಗವಂತ' ಎಂಬ ಕಲ್ಪನೆಮಾತ್ರ ಇಲ್ಲ. ಆದಾಗ್ಯೂ ಆ ದಿವ್ಯ ದೇಹಿಯ ಶರೀರ ಸ್ಪರ್ಶವಾದೊಡನೆಯೇ ಒಂದು ಬಗೆಯ ವಿಚಿತ್ರಾನಂದವೂ ತೃಪ್ತಿಯೂ ಉಂಟಾಗಿ ಎಲ್ಲ ತಾಯಂದಿರೂ ಪುಲಕಿತರಾದರು. ಅನಂತರ ಮಕ್ಕಳ ತಾಯಂದಿರು ಹಾಗೂ ಜನಕರು ಎಲ್ಲರೂ ಒಟ್ಟಿಗೆ ದುಃಖವನ್ನು ಮರೆತು ಆನಂದದಿಂದಿದ್ದರು. ॥೬೦॥

ಹೀಗೆ ಕೆಲ ಕಾಲ ಕಳೆದ ಬಳಿಕ ಉಕ್ಕೇರಿದ್ದ ಆನಂದವು (ಇದನ್ನೇ 'ವೈಷಯಿಕಾನಂದ'ವೆನ್ನುವರು. ಎಂದರೆ ಮನುಷ್ಯನ ಮನಸ್ಸು ಯಾವುದಾದರೊಂದು ವಸ್ತುವನ್ನು ಬಯಸಿತೆಂದರೆ ಹೊಯ್ದಾಡಲಾರಂಭವಾಗುವುದು. ಮನಸ್ಸು ಎಲ್ಲಿಯವರೆಗೆ ಚಂಚಲವಾಗಿರುವುದೋ ಅಲ್ಲಿಯವರೆಗೆ ಆನಂದವು ತನ್ನದೇ ಆಗಿದ್ದರೂ ಮನುಷ್ಯನಿಗೆ ತೋರುವುದಿಲ್ಲ. ಮನಸ್ಸಿನ ಬಯಕೆಯನ್ನು ಪೂರಯಿಸುವಂತಹ ವಸ್ತು ದೊರೆಯಿತೆಂದರೆ ಆಗ ಮನವು ಹೊಯ್ದಾಟವನ್ನು ನಿಲ್ಲಿಸಿ ತಟಸ್ಥವಾಗಿರುವುದು. ಆ ಸಮಯದಲ್ಲೇ ಆತ್ಮನ ಪ್ರತಿಬಿಂಬವು ಮನಸ್ಸಿನಲ್ಲಿ ಮೂಡುವುದು. ಅದು ನಿಚ್ಚಳವಾದರೆ ಸ್ವರೂಪಾನಂದವು ಅಭಿವ್ಯಕ್ತವಾಗುತ್ತದೆ. ಇದು ವಿಷಯಲಾಭದಿಂದುಂಟಾಗುವ ಕ್ಷಣಿಕಾನಂದವಾದುದರಿಂದ ಇದನ್ನು 'ವೈಷಯಿಕಾನಂದ'ವೆಂದು ತಿಳಿದವರು ಕರೆಯುತ್ತಾರೆ.) ಸ್ವಲ್ಪ ತಗ್ಗಿದ ಬಳಿಕ ಬಾಲಕರು ಹೇಳದೇ ಕೇಳದೇ ಬಹು ದೀರ್ಘಕಾಲ ಯಾರಿಗೂ ತಿಳಿಯದ ಸ್ಥಳಕ್ಕೆ ಇನ್ನು ಮೇಲೆ ಹೋಗದಂತೆ ಹೆದರಿಸಬೇಕೆಂದು ಸಂಕಲ್ಪಿಸಿ ಕೊಂಚ ಸಿಟ್ಟಿನಿಂದಲೇ "ಇದುವರೆಗೂ ಎಲ್ಲಿಗೆ ಹೋಗಿದ್ದಿರಿ ? ಉಷಃಕಾಲದಲ್ಲೇ ಎದ್ದು

**ಮಯೂರೇಶ್ವರಸಂಗೇನ ನೇದಾನೀಂ ಗಂತುಮರ್ಹಥ ।**
**ಕ ಉವಾಚ :—**
**ಏವಂ ಶಿಕ್ಷಾಪ್ಯ ತಾಞ್ ಬಾಲಾನಾಲಿಂಗ್ಯ ಬುಭುಜುಸ್ಸುಖಮ್ ॥೬೨॥**

**ಶಿವಾಪಿ ಪುರತೋಽಪಶ್ಯನ್ಮಯೂರೇಶಂ ಸಮಾಗತಮ್ ।**
**ಆಲಿಂಗ್ಯ ಪರಿಪಪ್ರಚ್ಛ**
**ದೇವ್ಯುವಾಚ :—**
**ಕಿಂ ಭುಕ್ತಂ ವನಗೋಚರೇ ॥೬೩॥**

**ತ್ವದ್ವಿಯೋಗಜದುಃಖೇನ ಮಯಾ ಕಿಂಚಿನ್ನ ಭಕ್ಷಿತಮ್ ।**
**ಸ್ತನಂ ಪಿಬ ಪಯೋವೃದ್ಧ್ಯಾ ಭೋಜನಂ ಚ ಸಮಾಚರ ॥೬೪॥**

ಹೋದವರಲ್ಲವೇ ನೀವು ? ಸ್ನಾನದ ಪರಿವೆ ಇಲ್ಲ. ಆಹಾರದ ಮೇಲೂ ಗಮನವಿಲ್ಲ ದಂತಹ ಆಟವದಾವುದು ? ಹೊಟ್ಟೆಗಿಲ್ಲದೆ ಹೀಗೆಲ್ಲ ಒಣಗುತ್ತಾರೆಯೇ ? ॥ ೬೧ ॥

ಇನ್ನು ಮೇಲೆ ನೀವು ಆ ಮಯೂರೇಶ್ವರನ ಸಂಗಡ ಎಲ್ಲಿಗೂ ಹೋಗತಕ್ಕದ್ದಲ್ಲ. ತಿಳಿಯಿತೇ ? " ಎಂದು ಬಾಲಕರನ್ನು ಗದರಿಸಿ ಪುನಃ ಅವರನ್ನು ಎದೆಗವಚಿ ಕೊಂಡು ಎಲ್ಲರೊಡನೆ ತಾವೂ ಭುಜಿಸಿ ಸುಖದಿಂದಿದ್ದರು. ॥ ೬೨ ॥

ಇತರ ಮುನಿಗಳ ಕುಟೀರಗಳಿಗೆ ಮುನಿಪುತ್ರರಂತೆ ರೂಪಗೊಂಡು ಪ್ರವೇಶಿಸಿದ ಮಯೂರೇಶ್ವರನು ತನ್ನ ಮನೆಗೆ ಗಣೇಶನಾಗಿಯೇ ಪ್ರವೇಶಿಸಿ ಪಾರ್ವತಿಯ ಎದುರು ಬಂದು ನಿಂದನು. ತನ್ನ ಸುಕುಮಾರನು ಎದುರಿಗೆ ಬಂದು ನಿಂತುದನ್ನು ಕಂಡು ಪಾರ್ವತೀದೇವಿಗೆ ಅತೀವ ಹರ್ಷವುಂಟಾಯಿತು. ಭರದಿಂದ ಬಂದು ಆಲಿಂಗಿಸಿ ಕೊಂಡು ಮುದ್ದಿಸುತ್ತ ಹೀಗೆಂದು ಅವನನ್ನು ಪ್ರಶ್ನಿಸಿದಳು.

ದೇವೀ :—

ಕುಮಾರ ! ಇದುವರೆಗೂ ವನದಲ್ಲಿ ಅಲದೆಯಲ್ಲ ? ಏನನ್ನು ಭುಜಿಸಿದೆ ? ನಿನಗಲ್ಲಿ ಆಹಾರವನ್ನಿತ್ತವರು ಯಾರು ? ॥ ೬೩ ॥

ನಿನ್ನನ್ನು ಕಾಣದೆ ನಾನು ಇದುವರೆಗೆ ಎಷ್ಟರ ಮಟ್ಟಿಗೆ ವ್ಯಥೆ ಪಟ್ಟೆನೆಂಬ ಸಂಗತಿ

**ಕ ಉವಾಚ :—**

**ತತಃ ಸರ್ವಂ ಚಕಾರಾಸೌ ಮಾತೃವಾಕ್ಯಂ ಗುಣೇಶ್ವರಃ ॥೬೫॥**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ವಿಶ್ವರೂಪ ಪ್ರದರ್ಶನ ವರ್ಣನಂ' ನಾಮ್ನೈಕೋನ ಶತತಮೋಽಧ್ಯಾಯಸ್ಸಮಾಪ್ತಃ**

---

ನಿನಗೇನಾದರೂ ಗೊತ್ತಿದೆಯೇ ? ಆ ದುಃಖದಲ್ಲಿ ನಾನು ಹಸಿದು ಬಳಲಿದ್ದರೂ ಯಾವ ಬಗೆಯ ಆಹಾರವನ್ನೂ ಮುಟ್ಟಿರುವುದಿಲ್ಲ. ನನ್ನ ಎದೆಯುಬ್ಬಿ ಹಾಲು ತುಂಬಿ ಬಂದಿದೆ. ಬಾ, ಸ್ತನ್ಯವನ್ನು ಪಾನಮಾಡು. ಅನಂತರ ಭೋಜನವನ್ನು ಮಾಡುವೆಯಂತೆ. ॥ ೬೪ ॥

ಬ್ರಹ್ಮ :—

ತಾಯಿಯ ಮಮತೆಯ ಮಾತುಗಳಿಗೆ ಮನಸೋತ ಮಹಾದೇವೀಸುತನು ಏನನ್ನೂ ತಿಳಿಯದ ಮುಗ್ಧ ಬಾಲಕನಂತೆ ತಾಯಿಯ ಆಣತಿಯನ್ನೆಲ್ಲ ನಡೆಸಿದನು. ॥ ೬೫ ॥

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರ ಖಂಡದಲ್ಲಿ "ವಿಶ್ವರೂಪ ಪ್ರದರ್ಶನ ವರ್ಣನೆ" ಎಂಬಲ್ಲಿಗೆ ತೊಂಭತ್ತೊಂಭತ್ತನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಶತತಮೋಽಧ್ಯಾಯಃ

**ಕ ಉವಾಚ :—**

**ಅನೇಕರೂಪವಾನ್ ದೇವೋ ಮಯೂರೇಶೋಽಖಿಲೇಶ್ವರಃ ।**
**ಅತಿಸುಂದರದೇಹಸ್ಸನ್ನಾಗಕನ್ಯಾಭಿರಾಹೃತಃ ॥೧॥**

**ಗೃಹಂ ಸ್ವಕೀಯಂ ಕ್ರೀಡಾರ್ಥಂ ಪೂಜಿತೋ ಬಹುವಿಸ್ತರಾತ್ ।**
**ಸುಗಂಧತೈಲೋದ್ವರ್ತನ್ಯೈಃ ಸ್ನಾಪ್ಯೋಷ್ಣೈರಪಿ ತಂ ಜಲೈಃ ॥೨॥**

**ದಿವ್ಯವಸ್ತ್ರೈರಲಂಕಾರೈಶ್ಚಂದನೈರಪಿ ಪೂಜ್ಯ ಚ ।**

---

॥ ಶ್ರೀ ಗಣೇಶಾಯ ನಮಃ ॥

## ೧೦೦ ನೆಯ ಅಧ್ಯಾಯ

ಬ್ರಹ್ಮಾ :—

ದೇವರ ದೇವನಾದ ಮಯೂರೇಶ್ವರನು ಅತಿಸುಂದರ ದೇಹಿಯಾಗಿದ್ದುದರಿಂದ ನಾಗಕನ್ಯೆಯರು ಇವನನ್ನು ಎಲ್ಲೆಲ್ಲಿಗೂ ಬಿಡದೇ ಪ್ರೇಮಭರದಿಂದ ಬಿಗಿದಪ್ಪಿಕೊಂಡು ತಮ್ಮ ಲೋಕವಾದ ರಸಾತಲಕ್ಕೆ ಕರೆದೊಯ್ದರು. ॥ ೧ ॥

ತಮ್ಮ ವಿಹಾರಾರ್ಥವಾಗಿ ನಿರ್ಮಿತವಾಗಿದ್ದ ಕ್ರೀಡಾಭವನದಲ್ಲಿ ಅಖಿಲೇಶ್ವರನಾದ ಮಹಾಗಣಪತಿಯನ್ನು ಇರಿಸಿ ಅವನನ್ನು ಬಹು ಪರಿಯಾಗಿ ಆರಾಧಿಸಿದರು. ದಿವ್ಯ-ಸುಗಂಧಿ ತೈಲಗಳನ್ನು ತಂದು ಅಗಜಾಸುತನ ಅಂಗಾಂಗಗಳಿಗೆಲ್ಲ ಲೇಪಿಸಿ ಸುಖೋಷ್ಣ ಸುಗಂಧಿ ಜಲದಿಂದ ಎರೆದರು. ಎಣ್ಣೆಯ ಸ್ನೇಹವನ್ನು ಹೋಗಲಾಡಿಸಲು ಮೃದು-ಸುಗಂಧಿಯಾದ ಸ್ನಾನ ಚೂರ್ಣವನ್ನು ಉಪಯೋಗಿಸಿದರು. ॥ ೨ ॥

ಉಟ್ಟು ಹೊದಿಯಲಿಕ್ಕಾಗಿ ದೇವನಿಗೆ ನಾಗರಮಣಿಯರಿತ್ತ ವಸ್ತ್ರಗಳು ಅಮೋಘ

**ಧೂಪ-ದೀಪೈಶ್ಚ ನೈವೇದ್ಯೈಃ ಫಲ-ತಾಂಬೂಲಕಾಂಚನೈಃ ॥೩॥**

**ಊಚುಃ ಕರಪುಟಂ ಬದ್ಧ್ವಾ**
**ನಾಗಕನ್ಯಕಾ ಊಚುಃ :—**
**ವಯಂ ಧನ್ಯತಮಾ ವಿಭೋ ! ।**
**ಯದ್ದೃಷ್ಟಂ ತೇ ಪದಂ ದೇವ ! ಬ್ರಹ್ಮಾದ್ಯೈರಪಿ ಕಾಂಕ್ಷಿತಮ್ ॥೪॥**

**ನಾಗಲೋಕೋ ಧನ್ಯತಮೋ ಜೀವಿತಂ ನಃ ಸು-ಜೀವಿತಮ್ ।**
**ಆನಂದಹ್ರದಮುಗ್ನಂ ನೋ ಮಾನಸಂ ತಾಪಮತ್ಯಜತ್ ॥೫॥**

---

ಮಾಡುವು. ರತ್ನ ನಿರ್ಮಿತಗಳಾದ ದಿವ್ಯಾಭರಣಗಳನ್ನು ದೇವನ ಆಯಾ ಅವಯವಗಳಿಗೆ ತೊಡಿಸಿದರು. ದೇಹಕ್ಕೆಲ್ಲ ಸುಗಂಧಿ ಚಂದನವನ್ನು ಲೇಪಿಸಿದರು. ಬಗೆಬಗೆಯಾದ ಪೂಜೋಪಕರಣಗಳನ್ನು ಸಂಗ್ರಹಿಸಿ ತಂದು ಮನದಣಿಯುವಂತೆ ಅರ್ಚಿಸಿದರು. ಧೂಪ-ದೀಪಗಳಿಂದ ಆರಾಧಿಸಿ ಪಕ್ವಗಳಾದ ಮಧುರಾನ್ನಗಳನ್ನೂ ಬಗೆಬಗೆಯ ಪಕ್ವ ಫಲ ಗಳನ್ನೂ ದೇವನಿಗೆ ನಿವೇದಿಸಿದರು. ಕರ್ಪೂರ ವೀಳ್ಯವನ್ನು ಸ್ವರ್ಣ ನಾಣ್ಯಗಳೊಂದಿಗೆ ಸಮರ್ಪಿಸಿ ಕೃತಕೃತ್ಯರಾದರು. ॥ ೩ ॥

ಅನಂತರ ತಮ್ಮ ಕರ ಪಲ್ಲವಗಳನ್ನು ಜೋಡಿಸಿಕೊಂಡು ದೇವನೆದುರಿಗೆ ನಿಂದು ವಿನಯದಿಂದ ಹೀಗೆಂದು ವಿಜ್ಞಾಪಿಸಿದರು.

ನಾಗಕನ್ಯೆಯರು —

ವಿಭೋ ! ನಿನ್ನ ಈ ಪದಕಮಲಗಳನ್ನು ಸಂದರ್ಶಿಸಬೇಕೆಂದು ಬ್ರಹ್ಮೇಂದ್ರ ರುದ್ರಾದಿಗಳೂ ಸಹ ತವಕಪಡುತ್ತಲೇ ಇರುವರು. ಅಂತಹ ಚರಣಾರವಿಂದಗಳನ್ನು ಇಂದು ನಾವು ಕಂಡಿರುವೆವಾದುದರಿಂದ ನಮಗಿಂತಲೂ ಧನ್ಯರಾದವರು ಮತ್ತಾರಿದ್ದಾರೆ? ॥ ೪ ॥

ಇಡೀ ಈ ನಾಗಲೋಕವೇ ಇಂದು ಧನ್ಯವಾಯಿತು. ನಮ್ಮ ಜೀವನವು 'ಸು-ಜೀವನ' ಎನಿಸಿತು. ನಾವು ಆನಂದದ ಮಡುವಿನಲ್ಲಿ ಮುಳುಗಿ ಹೋಗಿದ್ದೇವೆ. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪಗಳನ್ನೆಲ್ಲ ನಮ್ಮ ಮನಸ್ಸು ದೂರ ತೊಲಗಿಸಿಬಿಟ್ಟಿದೆ. ॥ ೫ ॥

**ಯದ್ಯತ್ತ ಈಪ್ಸಿತಂ ದೇವ ! ತತ್ತದತ್ರಾಪಿ ಗೃಹ್ಯತಾಮ್ ।**
**ಅತ್ರ ಸ್ಥಿತ್ವಾ ಕತಿದಿನಂ ಪಶ್ಚಾತ್ತ್ವಂ ಗಂತುಮರ್ಹಸಿ ॥೬॥**

**ಮಯೂರೇಶ ಉವಾಚ :—**

**ವಾಂಛಿತಂ ವೋ ವಿಧಾಸ್ಯೇಽಹಂ ಗಿರಿಜಾ ಮಾಂ ಪ್ರತೀಕ್ಷತೇ ।**
**ಮದ್ವಿಯೋಗೇನ ತಪ್ತಾ ಸಾ ನ ಭಕ್ಷಯತಿ ಕಿಂಚನ ॥೭॥**

**ಯೂಯಂ ಕಸ್ಯಾತ್ಮಜಾಸ್ತಸ್ಯ ದರ್ಶನಂ ಚೇದ್ಭವೇನ್ಮಮ ।**

**ಕ ಉವಾಚ :—**

**ತತ ಊಚುರ್ನಾಗಕನ್ಯಾಃ**

---

ಸರ್ವೇಶ್ವರ ! ನಮ್ಮ ಈ ನಾಗಲೋಕದಲ್ಲಿ ಇರುವ ವಸ್ತುಗಳ ಪೈಕಿ ಯಾವುದನ್ನು ಬೇಕಾದರೂ ನೀನು ಸ್ವೀಕರಿಸಬಹುದು. ಸರ್ವವೂ ನಿನ್ನದೇ ಆಗಿದೆ. ಕೆಲವು ದಿವಸಗಳಾದರೂ ನೀನು ನಮ್ಮೊಡನೆ ಆನಂದದಿಂದ ಇಲ್ಲಿಯೇ ವಾಸವಾಗಿದ್ದು ಅನಂತರ ಬೇಕಾದರೆ ನಿನ್ನ ಸ್ಥಳಕ್ಕೆ ಹೋಗುವೆಯಂತೆ. ॥ ೬ ॥

ಮಯೂರೇಶ :—

ಆಗಬಹುದು. ನಿಮ್ಮ ಇಷ್ಟವನ್ನು ನಾನು ನಡೆಸಿಕೊಡುತ್ತಲಿದ್ದೆ. ಆದರೆ ನನ್ನ ಜನನಿ ; ಗಿರಿಜೆಯು ನನಗಾಗಿ ದಾರಿ ಕಾಯುತ್ತಾಳೆ. ನಾನು ಹೋಗದಿದ್ದರೆ ನನ್ನ ವಿಯೋಗದ ದುಃಖವನ್ನು ಸಹಿಸಲಾರದೇ ಬಹಳ ತಪಿಸಿಹೋಗುತ್ತಾಳೆ. ಮತ್ತು ಸ್ವಲ್ಪ ಸಹ ಆಹಾರವನ್ನು ಸ್ವೀಕರಿಸುವುದಿಲ್ಲ. ॥ ೭ ॥

ಅದಿರಲಿ ? ನೀವು ಯಾರ ಮಕ್ಕಳು ? ಈ ಅಂಶವು ನನಗೆ ತಿಳಿಯಲೇ ಇಲ್ಲವಲ್ಲ. ನಿಮ್ಮ ಮನೆಯಲ್ಲಿ ಆತಿಥ್ಯವನ್ನು ಸ್ವೀಕರಿಸಿದ ಬಳಿಕ ನಿಮ್ಮ ಜನನೀ ಜನಕರನ್ನು ನೋಡಬೇಡವೇ ? ಅವರ ದರ್ಶನ ನನಗೆ ಲಭಿಸಬಹುದೇನು ?

ಬ್ರಹ್ಮಾ :—

ಆ ಮಾತಿನಿಂದ ಬಹಳ ಹೃಷ್ಟರಾದ ನಾಗಕನ್ಯೆಯರು ಗುಣೇಶನನ್ನು ಕುರಿತು

**ಬಾಲಿಕಾ ಊಚುಃ:—**

**ವಾಸುಕೇಃ ಪುತ್ರಿಕಾ ವಯಮ್ ॥೮॥**

**ಬ್ರಹ್ಮಾದ್ಯಾ ಮುನಯೋ ದೇವಾ ಯಾಂತಿ ಯಸ್ಯ ಗೃಹಂ ಸದಾ ।**
**ಯಸ್ಯ ಜ್ವಾಲಾ ವಿಷಭವಾ ದಹೇತ್ತ್ರಿಭುವನಂ ವಿಭೋ ! ॥೯॥**

**ಕ ಉವಾಚ :—**

**ಇತ್ಯುಕ್ತ್ವಾ ತಂ ಪುರಸ್ಕೃತ್ಯ ಪಿತರಂ ಪ್ರಾಪುರಂಗನಾಃ ।**
**ರತ್ನಸಿಂಹಾಸನೇ ದೀಪ್ತೇ ತಿಷ್ಠಂತಂ ಪನ್ನಗೈರ್ಯುತಮ್ ॥೧೦॥**

**ಸೂರ್ಯಕೋಟಿನಿಭಂ ರತ್ನಮಾಲಯಾ ಶೋಭಿತಂ ತದಾ ।**
**ಮೂರ್ಧಸ್ಥರತ್ನಕಿರಣೈರ್ಭಾಸಯಂತಂ ದಿಶೋಽಖಿಲಾಃ ॥೧೧॥**

ಕನ್ಯೆಯರು :—

ಭಗವನ್ ! ಸರ್ಪರಾಜನಾದ ವಾಸುಕಿಯ ಪುತ್ರಿಯರು ನಾವು. ॥ ೮ ॥

ಬ್ರಹ್ಮಾದಿ ದೇವೋತ್ತಮರೂ ಸುರರ್ಷಿಗಳೂ ನಮ್ಮ ಜನಕನನ್ನು ಸಂದರ್ಶಿಸುವುದಕ್ಕಾಗಿ ಪದೇ ಪದೇ ನಮ್ಮ ಮನೆಗೆ ಬರುತ್ತಲಿರುವರು. ಮತ್ತು ಆತನ ಸಾಮರ್ಥ್ಯವನ್ನು ವರ್ಣಿಸುವೆವು, ಕೇಳು. ಅವನೊಮ್ಮೆ ಉಸಿರನ್ನು ಬಿಟ್ಟನೆಂದರೆ ಅದರೊಂದಿಗೆ ಹೊರಹೊರಟ ಹಾಲಾಹಲವು ವಿಭೋ ! ತ್ರಿಭುವನವನ್ನೂ ದಹಿಸಿಬಿಡುವುದು. ೯ ॥

ಬ್ರಹ್ಮಾ :—

ಹೀಗೆ ನುಡಿದು ತಮ್ಮ ತಂದೆಯ ಪರಿಚಯವನ್ನು ಮಾಡಿಕೊಡುವುದಕ್ಕಾಗಿ ಗುಣೇಶನನ್ನು ಕರೆದುಕೊಂಡು ನಾಗಕನ್ಯೆಯರು ವಾಸುಕಿಯ ಆಸ್ಥಾನಕ್ಕೆ ಬಂದರು. ಆಗ ಯುವರಾಜನಾದ ವಾಸುಕಿಯು ತನ್ನ ಆಸ್ಥಾನ ಮಂಟಪದಲ್ಲಿ ಬಹಳ ಪ್ರಕಾಶಮಾನವಾದ ರತ್ನ ಸಿಂಹಾಸನದ ಮೇಲೆ ವಿರಾಜಮಾನನಾಗಿ ಕುಳಿತಿದ್ದನು. ವಾಸುಕಿಯ ಕೈ ಕೆಳಗಿನ ಇತರ ಸಣ್ಣ-ಪುಟ್ಟ ಸರ್ಪಗಳು ತಮ್ಮ ತಮ್ಮ ಸ್ಥಾನ-ಮಾನಗಳಿಗೆ ತಕ್ಕಂತಹ ಸ್ಥಳಗಳಲ್ಲಿ ಕುಳಿತು ತಮ್ಮ ರಾಜನನ್ನು ಸೇವಿಸುತ್ತಲಿದ್ದವು ॥ ೧೦ ॥

ಕೋಟಿ ಸೂರ್ಯರು ಒಮ್ಮೆಲೆ ಉದಿಸಿದರೆ ಉಂಟಾಗುವಷ್ಟು ಪ್ರಕಾಶವನ್ನು ಬೀರುವ ರತ್ನದ ಮಾಲಿಕೆಯನ್ನು ವಾಸುಕಿಯು ತನ್ನ ಕೊರಳಲ್ಲಿ ಧರಿಸಿದ್ದನು.

**ತಂ ದೃಷ್ಟ್ವಾ ವಾಸುಕಿಂ ದೇವೋ ಗರ್ವಿತಂ ಬಲವತ್ತರಮ್ ।**
**ಉಡ್ಡೀಯ ತತ್ಫಣಾಸಂಸ್ಥಂ ಮಣಿಂ ಜಗ್ರಾಹ ಸತ್ತ್ವರಮ್ ॥೧೨॥**

**ಯೇನ ಪಾತಾಲವಿವರೇ ನಾಂಧಕಾರೋಽಭವತ್ಕಿಲ ।**
**ಆಂದೋಲಯಾಮಾಸ ಶಿರಃ ಕಂಪಯನ್ ಸಪ್ತಪರ್ವತಾನ್ ॥೧೩॥**

**ಉದಧೀನ್ ಸಪ್ತ ಸ್ವರ್ಗಾಂಶ್ಚ ಪಾತಾಲಾನಿ ರಸಾತಲಮ್ ।**

ಅವನ ತಲೆಯ ಮೇಲಿದ್ದ ದೊಡ್ಡದಾದ ರತ್ನದ ಕಿರಣಗಳು ದಿಕ್ಕುಗಳನ್ನೆಲ್ಲ ಬೆಳಗುತ್ತ ಲಿದ್ದವು. ॥೧೧॥

ಐಶ್ವರ್ಯವಂತರೂ ಅಧಿಕಾರಸಂಪನ್ನರೂ ಸಾಮಾನ್ಯವಾಗಿ ವಿನಯಶೀಲ ರಾಗಿರುವುದಿಲ್ಲ. ಆದುದರಿಂದಲೇ ಅವು ಅವರಿಗೆ ಚಿರಕಾಲ ನಿಲ್ಲಲಾರವು. ಪ್ರಕೃತ ವಾಸುಕಿಯ ಸ್ಥಿತಿಯಾದರೂ ಹೀಗೆಯೇ ಆಗಿದ್ದಿತು. ವಾಸುಕಿಯಲ್ಲಿ ವಿಪುಲವಾದ ಐಶ್ವರ್ಯ ವೈಭವಗಳಿದ್ದವೇ ಹೊರತು ಹುಡುಕಿ ನೋಡಿದರೂ ವಿನಯಗುಣಕ್ಕೆ ಸ್ವಲ್ಪವೂ ಅವಕಾಶವಿರಲಿಲ್ಲ. ತಾನೇ ಸರ್ವಶ್ರೇಷ್ಠನೆಂಬ ಹೆಮ್ಮೆಯಿಂದ ಯಾರನ್ನೂ ಲಕ್ಷಿಸದೇ ಸ್ತಬ್ಧನಾಗಿ ಕುಳಿತಿರುತ್ತಿದ್ದನು. ಅವನಷ್ಟು ಬಲಶಾಲಿಯು ಮತ್ತಾರೂ ಆ ನಾಗಲೋಕದಲ್ಲಿರಲಿಲ್ಲವಾಗಿ ಅವನು ಯಾರಿಗೂ ಅಂಜಬೇಕಾದ ಪ್ರಮೇಯವೂ ಇರಲಿಲ್ಲ. ಅಸ್ತು. ಗುಣೇಶನು ಇವನ ಠೀವಿಯನ್ನೂ ಉದ್ದಾಮತನವನ್ನೂ ನೋಡಿ ಪ್ರಾಣಿ ಮಾತ್ರದಲ್ಲಿ ಬೇರೂರಿರುವ ಅಜ್ಞಾನಕ್ಕಾಗಿ ಮನದಲ್ಲೇ ನಸುನಕ್ಕು ಇದ್ದಕ್ಕಿ-ದ್ದಂತೆಯೇ ಮೇಲಕ್ಕೆ ನೆಗೆದು ವಾಸುಕಿಯ ಫಣದ ಮೇಲಿದ್ದ ಶಿರೋರತ್ನವನ್ನು ತನ್ನ ಪುಟ್ಟ ಕೈಗಳಿಂದ ಬಹುಬೇಗನೆ ಕಿತ್ತು ತೆಗೆದುಕೊಂಡನು. ॥೧೨॥

ಆ ರತ್ನವು ಸಾಮಾನ್ಯವಾದುದೆಂದು ಭಾವಿಸಬೇಡ, ವ್ಯಾಸ! ಅದರ ಪ್ರಭಾವ ದಿಂದ ಪಾತಾಳಲೋಕ ವಾಸಿಗಳೆಲ್ಲರೂ ಅಂಧಕಾರವನ್ನೇ ಅರಿಯದವರಾಗಿದ್ದರು ಗುಣೇಶ್ವರನು ರತ್ನವನ್ನು ಕಿತ್ತು ಈಚೆಗೆ ತೆಗೆದೊಡನೆಯೇ ಅದರ ಯಾತನೆಯನ್ನು ತಾಳಲಾರದೇ ವಾಸುಕಿಯು ತನ್ನ ತಲೆಯನ್ನು ಒಮ್ಮೆ ಕೊಡಹಿದನು. ಇದರಿಂದ ಸಪ್ತ ಕುಲಪರ್ವತಗಳೂ ಚಲಿಸಿಹೋದವು. ॥೧೩॥

ಸಮುದ್ರಗಳೆಲ್ಲ ಉಕ್ಕಿಬಂದವು. ಸ್ವರ್ಗಲೋಕಗಳೂ ಕಂಪನಗೊಂಡವು.

**ಹಸ್ತೇನೈಕೇನ ತಂ ಗೃಹ್ಯ ಮಯೂರೇಶಃ ಸ್ವ-ಲೀಲಯಾ ||೧೪||**

**ವಾಸುಕಿಂ ನಿಜಕಂಠೇ ತಂ ಬಬಂಧ ಸರ್ಪಭೂಷಣಃ |**
**ವಿಖ್ಯಾತಃ ಸ್ವರ್ಗಲೋಕೇಽಭೂಜ್ಜಗರ್ಜಾನಂದತೋ ವಿಭುಃ ||೧೫||**

**ತದ್ಗರ್ಜಿತಂ ಸಮಾಕರ್ಣ್ಯ ಚುಕ್ಷುಭೇ ಭುವನತ್ರಯಮ್ |**
**ತತಃ ಸರ್ಪಗಣಾಃ ಶೇಷಂ ನೀತಂ ವಾಸುಕಿಮಬ್ರುವನ್ ||೧೬||**

**ಸ ಚ ಕ್ರೋಧಸಮಾವಿಷ್ಟೋ ವಿಸ್ತಾರ್ಯ ನಿಖಿಲಾನ್ ಫಣಾನ್ |**
**ವಿಷಾಗ್ನಿಮುತ್ಸೃಜನ್ ದಗ್ಧುಂ ತ್ರೈಲೋಕ್ಯಮುಪಚಕ್ರಮೇ ||೧೭||**

---

ಸಪ್ತಪಾತಾಳಗಳಂತೂ ಕೇಳಬೇಕಾಗಿಯೇ ಇಲ್ಲ. ಗಡಗಡ ನಡುಗಿದವು. ಈ ಎಲ್ಲ ವಿಕಾರಗಳನ್ನು ನೋಡಿ ಮಯೂರೇಶ್ವರನು ತನ್ನ ಒಂದು ಕೈಯಿಂದ ಆ ಸರ್ಪರಾಜನನ್ನು ಹಿಡಿದುಬಿಟ್ಟನು. ಇದಕ್ಕಾಗಿ ಗಣಪತಿಯು ಹೆಚ್ಚಿನ ಆಯಾಸವನ್ನೇನೂ ಹೊಂದಲಿಲ್ಲ. ಎಲ್ಲವೂ ಲೀಲೆಯಿಂದಲೇ ನಡೆದು ಹೋಯಿತು. ||೧೪||

ಕೈಯ್ಯಲ್ಲಿ ಹಿಡಿದಿದ್ದ ವಾಸುಕಿಯನ್ನು ಎತ್ತಿ ತನ್ನ ಕಂಠದಲ್ಲಿ ಬಿಗಿದುಕೊಂಡನು. ಅಂದು ಮೊದಲ್ಗೊಂಡು ಮಯೂರೇಶ್ವರನಿಗೆ "ಸರ್ಪಭೂಷಣ" ಎಂಬ ಅನ್ವರ್ಥವಾದ ನಾಮವು ಉಂಟಾಯಿತು. ಈ ಹೆಸರು ಪಾತಾಲ-ಭೂಲೋಕಗಳಲ್ಲಿ ಪ್ರಚುರವಾದಂತೆ ಸ್ವರ್ಗಲೋಕಗಳಲ್ಲೂ ವಿಶ್ರುತವಾಯಿತು. ಆಗ ಮಯೂರೇಶ್ವರನು ಆನಂದಭರಿತನಾಗಿ ಒಮ್ಮೆ ಉಚ್ಚಸ್ವರದಿಂದ ಗರ್ಜಿಸಿದನು. ||೧೫||

ಈ ಗರ್ಜನೆಯ ಅದ್ಭುತ ಶಬ್ದವನ್ನು ಕೇಳಿ ಭುವನತ್ರಯವೂ ಪ್ರಕ್ಷುಭಿತವಾಯಿತು. ಆಗ ಇತರ ಸರ್ಪಗಳು ನಡುಗುತ್ತಲೇ ಓಡೋಡಿ ಶೇಷನ ಬಳಿಗೆ ಹೋಗಿ ಯುವರಾಜ; ವಾಸುಕಿಯನ್ನು ಮಯೂರೇಶನು ಬಂಧಿಸಿ ಸ್ವಾಧೀನಪಡಿಸಿಕೊಂಡು ಆಭರಣವನ್ನಾಗಿ ಮಾಡಿಕೊಂಡ ಸಂಗತಿಯನ್ನು ಘಾಬರಿ ಘಾಬರಿಯಿಂದಲೇ ಅರಿಕೆಮಾಡಿಕೊಂಡರು. ||೧೬||

ದಾರುಣವಾದ ಈ ಸಂಗತಿಯನ್ನು ಕೇಳಿದಕೂಡಲೇ ಸಹಸ್ರ ಫಣನಾದ ಆದಿಶೇಷನು ಬಹಳ ಕೋಪಗೊಂಡನು. ಕೋಪವು ವೃದ್ಧಿಯಾದಂತೆಲ್ಲ ಒಂದೊಂದಾಗಿಯೇ ಸಾವಿರ ಹೆಡೆಗಳೂ ಕೆದರಿನಿಂತವು. ಎಲ್ಲ ಮುಖಗಳಿಂದಲೂ ಭಯಂಕರ

ಉವಾಚ

**ಶೇಷ ಉವಾಚ :—**

**ಕಃ ಕ್ಷಮೋ ಜೇತುಂ ಮಮ ಬಂಧುಂ ತು ವಾಸುಕಿಮ್ ।**

**ಕ ಉವಾಚ :—**

**ಆವೇಶೇನ ಯಯೌ ರೋಷಾದ್ದಾವಾನಲ ಇವ ಜ್ವಲನ್ ॥೧೮॥**

**ಶೀಘ್ರಂ ಯಾತೋ ಮಯೂರೇಶಂ 'ತಿಷ್ಠ ತಿಷ್ಠೇ'ತಿ ಚಾಬ್ರವೀತ್ ।**
**ತತೋ ನಾಗಕುಲಾನ್ಯಾಶು ತಂ ಶೇಷಮನ್ವಯುಸ್ತದಾ ॥೧೯॥**

**ತತಃ ಪನ್ನಗವೃಂದಂ ತಂ ದೃಷ್ಟ್ವಾ ದೇವೋ ವ್ಯತಿಷ್ಠತ ।**
**ಶಿಖಂಡಿಮಸ್ತಕೇ ಹಸ್ತಂ ನ್ಯಧಾದ್ಯುದ್ಧಾಯ ಪನ್ನಗೈಃ ॥೨೦॥**

---

ವಾದ ವಿಷಜ್ವಾಲೆಯನ್ನು ಉಗುಳಲಾರಂಭಿಸಿದನು ಇದರ ಪರಿಣಾಮವಾಗಿ ಮೂರು ಲೋಕಗಳೂ ದಹಿಸಲಾರಂಭಿಸಿದವು. ॥೧೭॥

ಮತ್ತು ದರ್ಪದಿಂದ ಹೀಗೆಂದು ನುಡಿದನು.

ಆದಿಶೇಷ :—

ನನ್ನ ಸಹೋದರ ; ಯುವರಾಜ ವಾಸುಕಿಯನ್ನು ಸೋಲಿಸುವಷ್ಟು ಸಮರ್ಥ ರಾರಿದ್ದಾರೆ ?

ಬ್ರಹ್ಮಾ:—

ಎಂದು ರೋಷಾವೇಶದಿಂದ ಕೂಗಾಡಿ ಮಯೂರೇಶನನ್ನು ತಡೆಗಟ್ಟಿ ತನ್ನ ತಮ್ಮನನ್ನು ಬಿಡಿಸಿಕೊಳ್ಳುವುದಕ್ಕಾಗಿ ಧಾವಿಸಿ ನಡೆದನು. ಹೀಗೆ ನಡೆದಾಗ ಕಾಡನ್ನು ಸುಡಲಾರಂಭಿಸಿದ ಕಾಡುಕಿಚ್ಚಿನಂತೆ ತೋರಿದನು. ॥೧೮॥

ಸರ ಸರ ಓಡುತ್ತ ಮಯೂರೇಶನ ಬಳಿಗೆ ಬಂದು "ಎಲ್ಲಿಗೆ ಓಡಿ ಹೋಗುವೆ ! ನಿಲ್ಲು, ನಿಲ್ಲು." ಎಂದು ಒಮ್ಮೆ ಗರ್ಜಿಸಿದನು. ತಮ್ಮ ಒಡೆಯನಾದ ಸಹಸ್ರಫಣನು ಹೊರಟುದನ್ನು ನೋಡಿ ಸರ್ಪಕುಲದವರೆಲ್ಲ ಉತ್ಸಾಹಗೊಂಡು ಶೇಷ ನನ್ನು ಅನುಸರಿಸಿ ತಾವೂ ಯುದ್ಧಕ್ಕೆ ಹೊರಟರು. ॥೧೯॥

ತನ್ನನ್ನು ಅಟ್ಟಿಕೊಂಡು ರಾಶಿಗಟ್ಟಲೆ ಧಾವಿಸಿ ಹರಿದು ಬರುತ್ತಿರುವ ದೊಡ್ಡ ಸಣ್ಣ ಪುಟ್ಟ ಮರಿಹಾವುಗಳ ಹಿಂಡನ್ನು ಕಂಡು ದೇವನು ದಿಟ್ಟತನದಿಂದ ನಿಂತಲ್ಲಿ

ಸ ಯಯೌ ತಂ ನಮಸ್ಕೃತ್ಯ ಗ್ರಸನ್ನಿವ ಮಹಾದ್ಭುತಃ ।
ದುಧಾವ ಪಕ್ಷೌ ತದ್ವಾತಾದ್ಭ್ರಾಮಯನ್ ಭುಜಗೋತ್ತಮಾನ್　　॥೨೦॥

ಕಾಂಶ್ಚಿತ್ಸ ಭಕ್ಷಯಾಮಾಸ ಚುಚೂರ್ಣ ಚಾಪರಾನಪಿ ।
ಮಾರಯಾಮಾಸ ಕಾಂಶ್ಚಿತ್ಸ ಭುಜಗಾನ್ ಬಲವತ್ತರಾನ್　　॥೨೨॥

ನಿರೀಕ್ಷ್ಯ ತಂ ಮೃತಾಃ ಕೇಚಿತ್ಪನ್ನಗಾ ಭಯವಿಹ್ವಲಾಃ ।
ದೃಷ್ಟ್ವಾ ಪರಾಕ್ರಮಂ ತಸ್ಯ ಶೇಷಃ ಶ್ವಾಸಮುಪಾಸೃಜತ್　　॥೨೩॥

---

ನಿಂತುಬಿಟ್ಟನು. ಮತ್ತು ತನ್ನ ವಾಹನವಾದ ಮಯೂರದ ತಲೆಯ ಮೇಲೆ ವರದಹಸ್ತವನ್ನಿಟ್ಟು ಅನುಗ್ರಹಿಸಿ ಸರ್ಪಗಳೊಡನೆ ಕಾದಾಡಲು ಹುರಿದುಂಬಿಸಿ ಕಳಿಸಿಕೊಟ್ಟನು. ॥೨೦॥

ಆಗ ಶಿಖಂಡಿ (ಮಯೂರ) ಯು ದೇವನನ್ನು ಭಕ್ತಿ-ವಿನಯಗಳಿಂದ ನಮಸ್ಕರಿಸಿ ಪ್ರಪಂಚವನ್ನೇ ನುಂಗಿಬಿಡುವುದೋ ಎಂಬಂತೆ ಅತ್ಯದ್ಭುತವಾದ ಉಗ್ರರೂಪವನ್ನು ತಾಳಿ ಹಾರುತ್ತ ಹಾವುಗಳ ಮೇಲೆ ಎರಗಿತು. ಇದರ ರೆಕ್ಕೆಗಳ ಬಡಿತದಿಂದುಂಟಾದ ಮಹಾವಾತವು ದೊಡ್ಡದರ್ಜೆಯ ಸರ್ಪಗಳನ್ನು ಸಹ ದಿಗ್ದಿದಿಕ್ಕುಗಳಿಗೆ ಹಾರಿಸಲಾರಂಭಿಸಿತು. ॥೨೧॥

ಮಯೂರವು ಹಾವುಗಳ ಪೈಕಿ ಕೆಲವನ್ನಂತೂ ತಿಂದೇಬಿಟ್ಟಿತು. ಮತ್ತೆ ಕೆಲವನ್ನು ತುಳಿದು ನಸುಗಿಹೋಗುವಂತೆ ಮಾಡಿತು. ಸರ್ಪಗಳು ಎಷ್ಟೇ ಬಲಿಷ್ಠವಾಗಿದ್ದರೂ ಅವನ್ನು ಮಯೂರವು ನಿರ್ಲಕ್ಷ್ಯವಾಗಿ ನೆಲಕ್ಕೆ ಬಡಿದು ಬಡಿದು ಸಾಯಿಸಿತು. ॥೨೨॥

ಮಯೂರದ ದರ್ಶನಮಾತ್ರದಿಂದಲೇ ಭಯದಿಂದ ಎದೆ ನಡುಗಿ ಅನೇಕ ಸರ್ಪಗಳು ಮೃತಿಯನ್ನೈದಿದವು. ಮಯೂರದ ಪರಾಕ್ರಮವನ್ನೂ ಅದಕ್ಕೆ ಬಲಿಯಾಗಿ ತನ್ನ ಅನುಯಾಯಿಗಳನೇಕರು ಮೃತಿಯನ್ನೈದುದನ್ನೂ ಕಂಡು ಸರ್ಪರಾಜನಾದ ಆದಿಶೇಷನು ಬಹಳ ಅಸಹನೆಗೊಂಡು ವಿಷಮಯವಾದ ಉಸಿರನ್ನು ಒಮ್ಮೆ ವೇಗವಾಗಿ ಬಿಟ್ಟನು. ॥೨೩॥

ಶಿಖಂಡೀ ಪತಿತಸ್ತೇನ ಮೂರ್ಚ್ಛಿತೋ ಧರಣೀತಲೇ ।
ಮಯೂರೇಶಂ ತತಃ ಶೇಷೋ ಯಯೌ ಕ್ರೋಧಾದ್ದಹನ್ನಿವ ॥೨೪॥

ತ್ರೈಲೋಕ್ಯಂ ವಿಷವಹ್ನಿಸ್ಥಂ ಸಮಾಲೋಕ್ಯ ಗುಣೇಶ್ವರಃ ।
ವಿರಾಡ್ರೂಪಂ ಸಮಾಸ್ಥಾಯ ರುರೋಹ ತತ್ಫಣೋಪರಿ ॥೨೫॥

ಉಡ್ಡೀಯ ಬಾಲಭಾವೇನ ಗರ್ಜನ್ಮೇಘ ಇವಾಪರಃ ।
ನನರ್ತ ಕರತಾಲೇನ ಪಾದಾಘಾತೇನ ಮರ್ದಯನ್ ॥೨೬॥

---

ವಿಷದ ವೇಗವು ಮಯೂರದ ಅಂಗಾಂಗಗಳನ್ನೆಲ್ಲ ನಿರ್ವೀರ್ಯವನ್ನಾಗಿಮಾಡಿದ್ದರಿಂದ ಶಿಖಂಡಿಯು ಅದನ್ನು ತಡೆದುಕೊಳ್ಳಲಾರದೇ ಹಾಗೆಯೇ ಮುದುಡಿಹೋಗಿ ನೆಲಕ್ಕೆ ಉರುಳಿಬಿದ್ದಿತು. ಅದರ ಮೈಮೇಲೆ ಸ್ಮೃತಿ ಸಹ ಇರಲಿಲ್ಲ. ಅನಂತರ ಶೇಷನು ಮಯೂರೇಶನನ್ನು ನಿಗ್ರಹಿಸುವುದಕ್ಕಾಗಿ ಬಹಳ ಸಿಟ್ಟಿನಿಂದ ಅವನ ಬಳಿಗೆ ಧಾವಿಸಿಹೋದನು. ಅವನು ಹೊರಟ ವೇಗವನ್ನು ನೋಡಿದರೆ ಮಯೂರೇಶನನ್ನು ನಿಮಿಷಮಾತ್ರದಲ್ಲಿ ದಹಿಸಿಯೇಬಿಡುವನೋ ಎಂಬಂತೆ ತೋರುತ್ತಲಿದ್ದಿತು. ॥೨೪॥

ಶೇಷನು ಬಿಟ್ಟ ವಿಷಮಯ ಶ್ವಾಸದಿಂದ ಮೂರು ಲೋಕಗಳೂ ಉರಿದು ಬೂದಿಯಾಗುವ ಪರಿಸ್ಥಿತಿಗೆ ಬಂದುದನ್ನು ನೋಡಿ ಮಯೂರೇಶ್ವರ ; ಗುಣೇಶ್ವರನು ಒಡನೆಯೇ ತಾನು ವಿರಾಡ್ರೂಪವನ್ನು ಸ್ವೀಕರಿಸಿ ಆದಿಶೇಷನ ತೆರೆದ ಹೆಡೆಯ ಮೇಲೆ ಹತ್ತಿನಿಂತನು. ॥೨೫॥

ದೇವನು ಮೇಲಕ್ಕೆ ನೆಗೆದು ಒಮ್ಮೆಲೆ ಅವನ ಫಣದ ಮೇಲೆ ಧುಮಿಕಿದ ಕೂಡಲೇ ಅದರ ವೇಗಕ್ಕೆ ಶೇಷನ ಕಸುವು ಅರ್ಧಕ್ಕರ್ಧ ಕುಸಿದುಹೋಯಿತು. ಆಗ ಗುಣೇಶನು ಇಷ್ಟಕ್ಕೇ ಸುಮ್ಮನಾಗದೇ ಹುಡುಗತನದ ಆಟವನ್ನು ತೋರಿಸುವಂತೆ ನಟಿಸುತ್ತ ಹೆಡೆಯನ್ನು ತುಳಿಯಲಾರಂಭಿಸಿದನು. ಒಂದೊಂದು ತುಳಿತದಿಂದಲೂ ಶೇಷನ ಹೆಡೆಗಳು ನೆಲದವರೆಗೂ ಬಗ್ಗಿ ಹೋಗುವುವು. ಮತ್ತು ನಸುಗಿಹೋದಂತಾಗುತ್ತಿದ್ದವು. ಮಹಾಮೇಘದಂತೆ ದೇವನು ಒಮ್ಮೆ ಗುಡುಗಿದನು. ಇದರಿಂದಲಂತೂ ಸರ್ಪರಾಜನ ಕಿವಿಗಳು ಒಡೆದು ಹೋದಂತಾದವು. ಗುಣೇಶನು ತನ್ನ ಪುಟ್ಟ ಕೈಗಳಿಂದ ತಾಳವನ್ನು ಹಾಕುತ್ತ ಆನಂದವಾಗಿ ಹೆಡೆಯ ಮೇಲೆ ಕುಣಿಯಲಾರಂಭಿಸಿದನು.॥೨೬॥

ಅನಂತಕೋಟಿಬ್ರಹ್ಮಾಂಡಭಾರೇಣ ಪರಿಪೀಡಿತಃ ।
ಏಕಬ್ರಹ್ಮಾಂಡವಾಹೀ ಸ ಕಥಂ ತದ್ಭಾರಮಾವಹೇತ್ ॥೨೭॥

ಬಬಂಧ ಶೇಷಂ ಹಿ ಕಟೌ ರಜ್ಜುಂ ಬಾಲೋ ಯಥಾ ರರ್ಮ ।
ತತಸ್ತೇ ಭುಜಗಾಃ ಸರ್ವೇ ಯೋದ್ಧುಕಾಮಾಸ್ತಮನ್ವಯುಃ ॥೨೮॥

ಹುಂಕಾರೇಣೈವ ತಾನ್ ಸರ್ಪಾನ್ ಪಾತಯಾಮಾಸ ವಿಘ್ನರಾಟ್ ।
ಅಬಧ್ನಾನ್ಮಸ್ತಕೇ ಕಾಂಶ್ಚಿತ್ಕಾಂಶ್ಚಿಚ್ಚ ಕರ್ಣಯೋರ್ವಿಭುಃ ॥೨೯॥

ಪರಿಶ್ರಾಂತಸ್ತದಾಶೇಷಸ್ತಂ ನುನಾವ ಗುಹೇಶ್ವರಮ್ ।

---

ವ್ಯಾಸ! ವಿಚಾರಮಾಡಿನೋಡು. ಶೇಷನೇನೋ ಒಂದು ಬ್ರಹ್ಮಾಂಡದ ಭಾರವನ್ನು ಹೊತ್ತು ನಿಂತವನು. ಆದರೆ ಅನಂತಕೋಟಿ ಬ್ರಹ್ಮಾಂಡಗಳನ್ನು ತನು ದರದಲ್ಲಡಗಿಸಿಕೊಂಡ ವಿಶ್ವಂಭರಮೂರ್ತಿಯ ಭಾರವನ್ನೇನು ಹೊತ್ತಾನು? ದೇವನ ಭಾರಕ್ಕೆ ಸಹಸ್ರ ಫಣನು ವಿಲಿ ವಿಲಿ ಒದೆದಾಡಿ ಹೋದನು. ॥೨೭॥

ಶೇಷನು ನಿಶ್ಶೇಷವೀರ್ಯನಾದುದು ಮಯೂರೇಶನಿಗೆ ಅರಿವಾಯಿತು. ಇನ್ನು ಹೆಚ್ಚು ಕಾಲ ಹಿಸುಕಿದರೆ ಪ್ರಯೋಜನವಿಲ್ಲವೆಂದು ನಿಶ್ಚಯಿಸಿ ಒಮ್ಮೆಲೇ ಕೆಳಕ್ಕೆ ಧುಮಿಕಿದನು. ಮತ್ತು ಹುಡುಗರು ಕೈಗೆ ಸಿಕ್ಕ ಹಗ್ಗವನ್ನು ಸೊಂಟಕ್ಕೆ ಸುತ್ತಿಕೊಳ್ಳು ವಂತೆ ಆದಿಶೇಷನನ್ನು ಹಿಡಿದೆಳೆದು ತನ್ನ ಕಟಿಗೆ ಮೇಖಲೆಯ ಹಾಗೆ ಸುತ್ತಿಕೊಂಡನು. ಮತ್ತು ವಿನೋದದಿಂದ ಆಟವಾಡತೊಡಗಿದನು. ತಮ್ಮ ಸ್ವಾಮಿಯು ಭಂಗಹೊಂದಿ ದನ್ನು ಕಂಡ ಶೇಷನ ಅನುಯಾಯಿಗಳು ಎಲ್ಲರೂ ಸೇರಿ ಮಯೂರೇಶ್ವರನ ಮೇಲೆ ಯುದ್ಧಮಾಡಲು ಮುನ್ನುಗ್ಗಿ ಬಂದರು. ॥೨೮॥

ಹಾವುಗಳು ತನ್ನ ಸಮೀಪಕ್ಕೆ ಬರುವವರೆಗೂ ದೇವನು ಸುಮ್ಮನಿದ್ದು ಅವು ಬಂದ ಕೂಡಲೇ 'ಹುಂ' ಕಾರದಿಂದ ಅವೆಲ್ಲ ಭೂಮಿಗೆ ಬೀಳುವಂತೆ ಮಾಡಿದನು. ಆ ಪೈಕಿ ಕೆಲವು ಸರ್ಪಗಳನ್ನು ಹೂವನ್ನು ಮುಡಿದುಕೊಳ್ಳುವಂತೆ ತಲೆಗೆ ಸುತ್ತಿಕೊಂಡನು. ಕೆಲವನ್ನು ಕರ್ಣಾಭರಣದಂತೆ ಕಿವಿಗಳ ಪಾರ್ಶ್ವಕ್ಕೆ ಸೇರಿಸಿಕೊಂಡನು. ॥೨೯॥

ಇಷ್ಟರಲ್ಲಾಗಲೇ ಸರ್ಪರಾಜನ ವೀರ್ಯವು ಉಡುಗಿ ಹೋಗಿದ್ದಿತು. ಸರಿಯಾದ

**ಶೇಷ ಉವಾಚ :—**

**ನ ಸ್ವರೂಪಂ ವಿದುರ್ದೇವಾ ಬ್ರಹ್ಮಾದ್ಯಾ ಮುನಯೋಽಪಿ ಚ ॥೩೦॥**

**ತ್ವಮೇವ ಸೃಜಸೇ ವಿಶ್ವಂ ಪಾಸಿ ಹಂಸಿ ತ್ವಮೇವ ಹಿ ।**
**ನಾನಾವತಾರಕರ್ತಾ ತ್ವಂ ನಾನಾದೈತ್ಯವಿಮರ್ದನಃ ॥೩೧॥**

**ತ್ವಮೇವ ಸಾಕ್ಷೀ ಸರ್ವಸ್ಯ ಸರ್ವಾಂತರ್ಯಾಮಿತಾಂ ದಧತ್ ।**
**ಸರ್ವತ್ರ ಕಾರಣಂ ತ್ವಂ ಹಿ ಕಾರಣಾನಾಂ ಚ ಕಾರಣಮ್ ॥೩೨॥**

---

ರೀತಿಯಲ್ಲಿ ಉಸಿರನ್ನಾಡಿಸುವುದಕ್ಕೂ ಅವನಿಗೆ ಕಷ್ಟವಾಗಿದ್ದಿತು. ಪೌರುಷವು ಸರ್ವಾತ್ಮನಾ ಕುಂಠಿತವಾದ ಮೇಲಷ್ಟೇ ದೈವದ ಸ್ಮರಣೆ ಪ್ರಾಣಿಗೆ ಉಂಟಾಗುವುದು? ಶೇಷನ ಸೊಲ್ಲು ಜೊಲ್ಲಾಗಿ ಹರಿದುಹೋದುದರಿಂದ 'ಇವನು ದೇವನೇ ಸರಿ' ಎಂಬ ನಿರ್ಣಯಕ್ಕೆ ಬಂದು ಗುಣೇಶ್ವರನನ್ನು ಹೀಗೆಂದು ಸ್ತುತಿಸಲಾರಂಭಿಸಿದನು.

ಶೇಷ :—

ದೇವ! ನಿನ್ನ ಸ್ವರೂಪವೆಂತಹದು? ಎಂಬುದನ್ನು ಯಥಾವತ್ತಾಗಿ ತಿಳಿಯಲು ದೇವೋತ್ತಮರೆನಿಸಿದ ಬ್ರಹ್ಮಾದಿಗಳಿಗಾಗಲೀ, ತಪಸ್ಸಿದ್ಧರೂ, ಸರ್ವಜ್ಞರೂ ಎನಿಸಿದ ಋಷಿಗಳಿಗಾಗಲೀ ಸಾಧ್ಯವಿರುವುದಿಲ್ಲ. ॥೩೦॥

ಪರಮೇಶ್ವರ! ಚಿತ್ರ-ವಿಚಿತ್ರವಾಗಿ ಕಂಡುಬರುತ್ತಿರುವ ಈ ವಿಶ್ವವನ್ನು ಸಂಕಲ್ಪಮಾತ್ರದಿಂದಲೇ ಸೃಜಿಸಿದವನು ನೀನು. ಸೃಷ್ಟವಾದ ಪ್ರಪಂಚವನ್ನು ನೀನೇ ಪಾಲಿಸುವೆ. ಪ್ರಾಣಿಯ ಕರ್ಮಗಳು ಕೊನೆಗೊಂಡವೆಂದಕೂಡಲೇ ಅವು ಇದ್ದಕ್ಕಿದ್ದಂತೆಯೇ ಮೃತವಾಗುವ ಹಾಗೆ ನೀನು ಮಾಡುವೆ. ಲೋಕಕಂಟಕರಾದ ಅನೇಕ ದೈತ್ಯರನ್ನು ಮರ್ದಿಸುವುದಕ್ಕಾಗಿ ನೀನು ನಾನಾ ಬಗೆಯ ಅವತಾರಗಳನ್ನು ಮಾಡತಕ್ಕವನಾಗಿರುವೆ. ॥೩೧॥

ನೀನು ಚರಾಚರಾತ್ಮಕವಾದ ಪ್ರಾಣಿಗಳ ಗುಹಾಶಯದಲ್ಲಿ ನೆಲೆಸಿದ್ದು ಆಯಾ ಪ್ರಾಣಿಗಳು ಮಾಡುವ ಪಾಪ-ಪುಣ್ಯಗಳನ್ನೆಲ್ಲ ಗಮನಿಸುವೆ. ಮತ್ತು ಆಯಾ ಪ್ರಾಣಿಗಳ ಆರಬ್ಧಫಲಕವಾದ ಕರ್ಮಕ್ಕನುಸರಿಸಿ ಅವನ್ನು ಪ್ರೇರಿಸುವೆ. ಆದುದರಿಂದಲೇ ವೇದಶಿರಗಳು ನಿನ್ನನ್ನು 'ಸರ್ವಸಾಕ್ಷೀ, ಸರ್ವಾಂತರ್ಯಾಮಿ' ಎಂದು ಸಾರುತ್ತಿವೆ.

**ಅಜ್ಞಾನಾದಭಿಮಾನೇನ ಯೋದ್ಧುಕಾಮಾನ್ ಕ್ಷಮಸ್ವ ನಃ ।**

**ಕ ಉವಾಚ :—**

**ಸಂಪಾತಿಂ ಚ ಜಟಾಯುಂ ಚ ಶ್ಯೇನಮಾನೀಯ ಸರ್ಪರಾಟ್ ॥೩೩॥**

**ನಿವೇದ್ಯ ಚ ನಮಸ್ಕೃತ್ಯ ಶೇಷಸ್ತೂಷ್ಣೀಂ ಬಭೂವ ಹ ।**

**ತೇಽಪಿ ತಂ ಪ್ರಣಿಪತ್ಯಾಹುಃ**

**ಪಕ್ಷಿಣ ಊಚುಃ :—**

**ದೀನನಾಥಪ್ರಸಾದತಃ ॥೩೪॥**

---

ಸಕಲವಸ್ತುಗಳಲ್ಲೂ ಕಾರಣರೂಪನಾಗಿ ನೀನು ಅಡಗಿರುವೆ. ಕಾರಣಗಳೆನಿಸುವ ವಸ್ತುಗಳಿಗೂ ನೀನು ಪರಮ ಕಾರಣನಾದವನು. ॥೩೨॥

ಸ್ವ-ಪರ ಶಕ್ತಿಯನ್ನರಿಯದವರೂ ದಂಭದಿಂದ ಮೆರೆಯತಕ್ಕವರೂ ಆದ ನಾವು ಅಜ್ಞಾನಕ್ಕೆ ಬಲಿಬಿದ್ದು ದೇವ! ನಿನ್ನ ಮೇಲೆ ಸಮರವನ್ನು ಹೂಡಿದೆವು. ಇದಕ್ಕಾಗಿ ನಮ್ಮನ್ನು ಕ್ಷಮಿಸು.

ಬ್ರಹ್ಮಾ :—

ಎಂದು ಮನಃಪೂರ್ತಿಯಾಗಿ ದೇವನನ್ನು ಸ್ತುತಿಸಿ ಸರ್ಪರಾಜನಾದ ಶೇಷನು ಕ್ಷಮೆಯನ್ನು ಯಾಚಿಸಿದನು. ಮತ್ತು ಕದ್ರುವಿನ ಮಾತಿಗಾಗಿ ಹಿಂದೆ ತಾನು ಸೆರೆ ಹಿಡಿದು ತಂದಿದ್ದ ವಿನತೆಯ ಮಕ್ಕಳು; ಸಂಪಾತಿ, ಜಟಾಯು, ಶ್ಯೇನ ಇವರನ್ನು ಚಾರರ ಮೂಲಕ ಬಂಧನದಿಂದ ಬಿಡಿಸಿ ಸಮೀಪಕ್ಕೆ ಬರಮಾಡಿಕೊಂಡು ॥೩೩॥

ದೇವನಿಗೆ ಸಮರ್ಪಿಸಿದನು. ಮತ್ತು ಭಕ್ತಿ-ವಿನಯಗಳಿಂದ ದೇವನಿಗೆ ನಮಸ್ಕರಿಸಿ ತಲೆಬಾಗಿಸಿಕೊಂಡು ಒಂದೆಡೆ ಸುಮ್ಮನೆ ನಿಂತನು. ಆಗ ಬಂಧವಿಮುಕ್ತಗಳಾದ ಪಕ್ಷಿಗಳು ದೇವನಿಗೆ ಪ್ರಣಮಿಸಿ ಅವನನ್ನು ಬಣ್ಣಿಸುತ್ತ ಹೀಗೆಂದು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದವು.

ಪಕ್ಷಿಗಳು :—

ದೀನನಾಥ! ನಿನ್ನ ಪ್ರಸಾದವಿಶೇಷದಿಂದ ॥೩೪॥

ಬಂಧಾನ್ಮುಕ್ತಾ ಸರ್ಪಕೃತಾನ್ನಮಸ್ತೇ ಪರಮೇಶ್ವರ ! ।

ಕ ಉವಾಚ :—

ಏವಮುಕ್ತ್ವಾ ಮಯೂರೇಶಂ ಬಂಧುಂ ತಂ ಶಿಖಿನಂ ತ್ರಯಃ ॥೩೫॥

ಆಲಿಲಿಂಗುರ್ಮುದಾ ಯುಕ್ತಾಸ್ತದಾ ಗದ್ಗದಭಾಷಿಣಃ ।
ಪಪ್ರಚ್ಛುಃ ಕುಶಲಂ ಮಾತ್ರೇ ತೇ ಚ ಕ್ಷೇಮಮಥಾಬ್ರುವನ್ ॥೩೬॥

ತತಃ ಶಿಖಂಡಿನಂ ಸೋಽಥ ರುರೋಹ ಗಣನಾಯಕಃ ।
ಪಾತಾಲಾದ್ಧರಣೀಂ ಪ್ರಾಯಾತ್ತತ್ತ್ರಿಭಿಃ ಸಂಯುತೋ ವಶೀ ॥೩೭॥

---

ನಾವು ಇಂದು ಬಂಧವಿಮುಕ್ತರಾಗಿದ್ದೇವೆ. ಈ ಸರ್ಪಗಳು ನಿಷ್ಕಾರಣವಾಗಿ ನಮ್ಮನ್ನು ಸೆರೆಮನೆಯಲ್ಲಿ ಕೊಳೆಹಾಕಿದ್ದವು. ಪರಮೇಶ್ವರ! ನಿನಗೆ ಅನೇಕ ವಂದನೆಗಳು.

ಬ್ರಹ್ಮಾ :—

ಹೀಗೆಂದು ನುಡಿದು ತಮ್ಮ ನೂತನ ಬಂಧುವಾದ ಶಿಖಂಡಿಯ ಸಮೀಪಕ್ಕೆ ಆ ಮೂರು ಪಕ್ಷಿಗಳೂ ಬಂದವು. ॥೩೫॥

ಭ್ರಾತೃವಾತ್ಸಲ್ಯದಿಂದ ಮಯೂರವನ್ನು ಆಲಿಂಗಿಸಿದವು. ಸ್ನೇಹಾತಿರೇಕದಿಂದ ಆ ಪಕ್ಷಿಗಳಿಗೆ ಕಂಠಗಳು ಉಬ್ಬಿಬಂದು ಧ್ವನಿಯು ಗದ್ಗದಿತವಾಯಿತು. ನಡುಗುವ ಧ್ವನಿಯಿಂದಲೇ ಮಯೂರದ ಹಾಗೂ ತಮ್ಮ ತಾಯಿಯಾದ ವಿನತೆಯ ಕ್ಷೇಮ ಸಮಾಚಾರವನ್ನು ಪ್ರಶ್ನಿಸಿ, ತಾವೂ ಕ್ಷೇಮದಿಂದಿರುವ ಸಂಗತಿಯನ್ನು ತಿಳಿಸಿದವು. ॥೩೬॥

ಅನಂತರ ಗಣನಾಯಕನು ನಾಗಕನ್ಯೆಯರೊಂದಿಗೆ ಶಿಖಂಡಿಯನ್ನು ಏರಿ ಕುಳಿತು ಪಾತಾಲ ಲೋಕದಿಂದ ಭೂ-ಲೋಕಕ್ಕೆ ಪ್ರಯಾಣ ಹೊರಟು ಬಂದನು. ನಿರ್ಲಿಪ್ತನೂ, ನಿರ್ವಿಕಾರನೂ ಆದ ಮಯೂರೇಶ್ವರನಿಗೆ ಇದುವರೆಗೆ ನಡೆದ ಘಟನೆಗಳಿಂದಾಗಿ ಯಾವ ಬಗೆಯ ಹರ್ಷ-ವಿಷಾದಗಳೂ ಉಂಟಾಗಲಿಲ್ಲ. ಜಿತೇಂದ್ರಿಯರ ಗುಣವೇ ಹೀಗೆ. ॥೩೭॥

ಭಗಾಸುರಂ ದದರ್ಶಾರ್ಧಮಾರ್ಗೇ ಶಿಶುಹರಂ ಚ ತಮ್ ।
ಉದ್ಯಮ್ಯ ಪರಶುಂ ದೀಪ್ತಂ ಶಶಿ-ಸೂರ್ಯನಿಭಂ ವಿಭುಃ ॥೩೮॥

ತತ್ಯಾಜ ಕಂಠೇ ತಂ ತಸ್ಯ ಪಶುಮಾರಮಮಾರಯತ್ ।
ತಚ್ಛಿರಃ ಪರಿಬಭ್ರಾಮ ಶೃಂಗಂ ವಜ್ರಾಹತಂ ಯಥಾ ॥೩೦॥

ತತಸ್ತ ಉತ್ಥಿತಾ ಬಾಲಾ ಯೋಗಮಾಯಾವಿಮೋಹಿತಾಃ ।
'ಮಯೂರೇಶಃ ಕ್ವ ಚಾಸ್ತೇ'ತಿ ಪ್ರಾಕ್ರೋಶನ್ ಸರ್ವ ಏವ ತೇ ॥೪೦॥

ಆಸನೇ ಕ್ರೀಡನೇ ಸ್ವಾಪೇ ಜಾಗೃತೌ ಭೋಜನೇಽಪಿ ಚ ।
ತಮೇವ ಧ್ಯಾಯಮಾನಾಸ್ತೇ ತನ್ಮುಖಾದ್ಬಹಿರಾಯಯುಃ ॥೪೧॥

---

ಬರುವಾಗ ಮಾರ್ಗದಲ್ಲಿ ತನ್ನ ಸ್ನೇಹಿತ ವರ್ಗವನ್ನು ನುಂಗಿ ಹಿಂಸಿಸುತ್ತ ನೆಲದ ಮೇಲೆ ಮಲಗಿದ್ದ ಭಯಂಕರಾಕೃತಿಯ ಭಗಾಸುರನನ್ನು ಕಂಡನು. ದೇವನಿಗೆ ರಾಕ್ಷಸನ ದೌಷ್ಟ್ಯಕ್ಕಾಗಿ ಬಹಳ ಕೋಪ ಉಂಟಾಯಿತು. ಸೂರ್ಯ-ಚಂದ್ರರಂತೆ ಥಳಥಳಿಸುವ ನಿಶಿತವಾದ ತನ್ನ ಪಿಚ್ಚು ಕೊಡಲಿಯನ್ನು ವಿಭು ಮೇಲಕ್ಕೆತ್ತಿದನು. ||೩೮||

ಮತ್ತು ಅದನ್ನು ಬೀಸಿ ರಾಕ್ಷಸನ ಆಯಕಟ್ಟಾದ ಕಂಠಪ್ರದೇಶಕ್ಕೆ ಗುರಿ ನೋಡಿ ಎಸೆದನು. ಅದರ ಹೊಡೆತದಿಂದ ಭಗಾಸುರನ ಶಿರಸ್ಸು ಕತ್ತರಿಸಿ ಅತ್ತಿತ್ತ ತೂರಾಡ ತೊಡಗಿತು. ಇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳನ್ನು ಭೇದಿಸಿದಾಗ ಅದರ ವೇಗಕ್ಕೆ ಸಿಲುಕಿದ ಶಿಖರಗಳಂತೆ ಈ ದೃಶ್ಯವು ಕಂಡಿತು. ||೩೯||

ಇದುವರೆಗೂ ದೇವನ ಪ್ರಭಾವದಿಂದ ಯೋಗಮಾಯೆಯ:ಮುಸುಕಿನಲ್ಲಿ ಸಿಲುಕಿ ಬಿದ್ದಿದ್ದ ಮುನಿಬಾಲಕರೆಲ್ಲ ಎಚ್ಚರಗೊಂಡು ಮೇಲೆದ್ದು ನಿಂತರು. ಮತ್ತು 'ಮಯೂರೇಶನೆಲ್ಲಿದ್ದಾನೆ?' ಎಂದು ಒಮ್ಮೆಲೆ ಆಕ್ರೋಶಿಸಲಾರಂಭಿಸಿದರು. ||೪೦||

ಕುಳ್ಳಿರುವಾಗ, ಆಟಗಳನ್ನಾಡುವಾಗ, ಭುಜಿಸುವಾಗ ಹೆಚ್ಚೇನು? ಜಾಗ್ರತ್ಸ್ವಪ್ನ ಸುಷುಪ್ತಿ ದಶೆಗಳಲ್ಲಿ ಸಹ ಭಗವಂತನಾದ ಮಯೂರೇಶ್ವರನ ಸ್ಮರಣೆಯಲ್ಲೇ ತಲ್ಲೀನರಾಗಿದ್ದುದರಿಂದಲೇ ಆ ಬಾಲಕರು ಯಾವುದೊಂದು ಅಪಾಯಕ್ಕೂ ಒಳಗಾಗದೇ ಆ ಭಗಾಸುರನ ಬಾಯಿಯಿಂದ ಪಾರಾಗಿ ಈಚೆಗೆ ಬಂದರು. ||೪೧||

**ಗರ್ಭವಾಸಾದಿವೋತ್ತೀರ್ಣಾ ದದೃಶುಸ್ತಂ ಗುಣೇಶ್ವರಮ್ ।**
**ದೃಷ್ಟ್ವಾ ತೇ ರುರುದುಃ ಸ್ನೇಹಾದಾಲಿಲಿಂಗುರ್ಮುದಾಖಿಲಾಃ ॥೪೨॥**

**ತ ಊಚುಃ :—**

**ತ್ಯಕ್ತ್ವಾಸ್ಮಾನ್ ದೈತ್ಯ ಜಠರೇ ಮೃತಾನ್ ಕ್ವಾಸಿ ಗತೋ ಭವಾನ್ ।**
**ತ್ವತ್ಸ್ಮೃತೇಸ್ತಸ್ಯ ಜಠರೇ ಜೀವಿತಾ ನಿರ್ಗತಾಸ್ತತಃ ॥೪೩॥**

**ಮಯೂರೇಶ ಉವಾಚ :—**

**ಸರ್ವವ್ಯಾಪೀ ಸರ್ವಗತಸ್ಸರ್ವವೇತ್ತಾಖಿಲೇಶ್ವರಃ ।**

---

ಶಿಶುವು ಗರ್ಭಕೋಶದಲ್ಲಿ ವಾಸವಾಗಿರುವಾಗ ಯಾವ ಯಾವ ಬಗೆಯ ಇಕ್ಕಟ್ಟು ಕ್ಲೇಶ ಇವನ್ನು ಅನುಭವಿಸಿ ನಿರ್ವಿಣ್ಣವಾಗಿ ಈಚೆಗೆ ಬಂದೊಡನೆ ಯಾವ ರೀತಿ ಸಂತೋಷವನ್ನು ಹೊಂದುವುದೋ ಅದೇ ರೀತಿಯಾಗಿ ಕಶ್ಮಲ ಭೂಯಿಷ್ಠವಾದ ಭಗಾಸುರನ ಉದರದಲ್ಲಿ ಹೊಕ್ಕಿದ್ದ ಈ ಬಾಲಕರು ಈಚೆಗೆ ಬಂದು ಸುಖ ಸಂತೋಷ ಗಳನ್ನು ಹೊಂದಿದರು. ಹೊರಕ್ಕೆ ಬಂದಕೂಡಲೇ ಎದುರಿಗೇ ನಿಂತಿದ್ದ ತಮ್ಮ ಸರ್ವಸ್ವ ನಾದ ಮಹಾಗಣಪತಿಯನ್ನು ನೋಡಿದರು. ಇದುವರೆಗೂ ಅವನನ್ನು ಕಾಣದೆ ತಾವು ಅನುಭವಿಸಿದ ಅನಿರ್ವಚನೀಯ ದುಃಖವು ಮರುಕಳಿಸಿ ಬಂದಂತಾಗಿ. ದೊಡ್ಡ ಧ್ವನಿಯಿಂದ ಅತ್ತುಬಿಟ್ಟರು. ದುಃಖಾವೇಗವು ಕಡಿಮೆಯಾದೊಡನೆಯೇ ಸ್ನೇಹ ರಸವು ಉಕ್ಕಿ ಬರಲು ಭರದಿಂದ ಮುಂದೆ ಬಂದು ಎಲ್ಲರೂ ಒಮ್ಮೆಲೇ ಮಯೂರೇಶ್ವರ ನನ್ನು ಆಲಿಂಗಿಸಿಕೊಂಡರು. ಆಗ ಅವರಿಗೆ ಬಹಳ ಹರ್ಷ ಉಂಟಾಯಿತು. ॥೪೨॥

**ಬಾಲಕರು :—**

ದುಷ್ಟ ದೈತ್ಯನ ಹೊಟ್ಟೆಯಲ್ಲಿ ಸಿಕ್ಕು ಸಾಯಲೆಂದು ನಮ್ಮನ್ನು ಇಲ್ಲಿಯೇ ಬಿಟ್ಟು ಬಿಟ್ಟು ದೇವ, ಮಯೂರೇಶ! ಇದುವರೆಗೂ ನೀನು ಎಲ್ಲಿಗೆ ಹೋಗಿದ್ದೆ? ನಿನ್ನ ಸ್ಮರಣೆಯಲ್ಲೇ ಸರ್ವದಾ ನಾವು ನಿರತರಾಗಿದ್ದುದರಿಂದ ಅಸುರನ ಹೊಟ್ಟೆಯನ್ನು ಹೊಕ್ಕಿದ್ದರೂ ಬದುಕಿದ್ದೆವು. ಮತ್ತು ಯಾವ ಅಪಾಯಕ್ಕೂ ಬಲಿಯಾಗದೇ ಅಲ್ಲಿಂದ ಈಚೆಗೂ ಬಂದೆವು.

ಮಯೂರೇಶ್ವರ :—

ಮುಗ್ಧ ಬಾಲಕರೇ! ನಾನು ಎಲ್ಲೆಡೆಯಲ್ಲೂ ಸರ್ವದಾ ಇರತಕ್ಕವನು. ಯಾವ

ನ ತ್ಯಕ್ತ್ವಾರ್ಕ ಕದಾಚಿದ್ಯೋ ಮಾ ಚಿಂತಾಂ ಕರ್ತುಮರ್ಹಥ ||೪೪||

ಕ ಉವಾಚ :—

ತತೋ ಯಯೌ ಮಯೂರೇಶೋ ಬಾಲಕೈಃ ಪರಿವೇಷ್ಟಿತಃ ।
ಕೇಚಿದ್ಧಾವಂತಿ ಪುರತೋ ನಾನಾಶಬ್ದಕರಾ ಭೃಶಮ್ ||೪೫||

ಕೇಚಿಚ್ಛತ್ರಧರಾಃ ಕೇಚಿದ್ದಂಡ-ಚಾಮರಧಾರಿಣಃ ।
ಧೂಲಿಧ್ವಜಂ ಸಮಾಲೋಕ್ಯ ಯಯುರ್ಮುನಿಗಣಾ ಬಹಿಃ ||೪೬||

---

ಕ್ಷಣಕ್ಕೆ ಎಲ್ಲಿಗೆ ಬೇಕೆನಿಸಿದರೂ ಸ್ವಲ್ಪವೂ ವಿಲಂಬವಿಲ್ಲದೇ ಹೋಗಬಲ್ಲವನು. ಎಲ್ಲೆಲ್ಲಿ ಯಾವ ಯಾವ ಸಂಗತಿಗಳು ನಡೆಯುವುವೋ ಅವನ್ನೆಲ್ಲ ಸ್ಪಷ್ಟವಾಗಿ ತಿಳಿಯತಕ್ಕವನು. ಎಲ್ಲಕ್ಕೂ ನಾನು ಒಡೆಯನಾದವನು. ನಿಮ್ಮನ್ನು ನಾನು ಎಂದೆಂದಿಗೂ ಬಿಟ್ಟವನಲ್ಲ. ಇನ್ನು ಮುಂದೆ ಸಹ ಬಿಟ್ಟಿರುವುದೂ ಇಲ್ಲ. ಆದುದರಿಂದ ನೀವು ವ್ಯರ್ಥವಾಗಿ ಚಿಂತೆಯನ್ನು ಮಾಡಬೇಕಾಗಿರುವುದಿಲ್ಲ. ||೪೪||

ಬ್ರಹ್ಮಾ:—

ಅನಂತರ ಮಯೂರೇಶನು ಮುಂದೆ ಮನೆಯ ಕಡೆಗೆ ಪ್ರಯಾಣ ಹೊರಟನು. ಬಾಲಕರು ಮಯೂರೇಶ್ವರನನ್ನು ಸುತ್ತುವರೆದು ನಡೆಯುತ್ತಿದ್ದರು. ಮೊದಲೇ ಹುಡುಗರು ಚಪಲರು. ಈಗಂತೂ ಗಣಪತಿಯು ದೊರೆತುದರಿಂದಲೂ, ಭಗಾಸರುನಿಂದ ತಮಗೊದಗಿದ್ದ ವಿಪತ್ತು ದೂರವಾದುದರಿಂದಲೂ ಹರ್ಷೋದ್ರಿಕ್ತರಾಗಿದ್ದರು. ಎಂದ ಮೇಲೆ ಅವರ ಉತ್ಸಾಹವೆಷ್ಟರ ಮಟ್ಟಿಗೆ ಇದ್ದಿತು ಎಂಬುದನ್ನು ನೀನೇ ಚಿಂತಿಸು. ಕೆಲವರಂತೂ ಬಾಯಿಗೆ ಬಂದಂತೆ ಜಯಕಾರವನ್ನು ಉದ್ಘೋಷಿಸುತ್ತ ಮುಂದೆ ಮುಂದೆ ಓಡಿ ನಡೆದರು. ||೪೫||

ಕೆಲವರು ಮಯೂರೇಶನ ಅಕ್ಕ-ಪಕ್ಕಗಳಲ್ಲಿ ನಿಂತು ಅವನಿಗೆ ಛತ್ರವನ್ನು ಹಿಡಿದರು. ಮತ್ತೆ ಕೆಲವರು ಮರ್ಯಾದಾರ್ಥವಾಗಿ ಕೋಲನ್ನು ಹಿಡಿದರು. ಮಗುದವರು ಚಾಮರಗಳನ್ನು ಬೀಸಿದರು. ಇವರ ಹಾರಾಟ-ಕುಣಿದಾಟಗಳಿಂದಾಗಿ

ಶಿಖ್ಯಾರೂಢಂ ಮಯೂರೇಶಂ ಬಾಲಕೈಃ ಪರಿವೇಷ್ಟಿತಮ್ ।
ಊಚುಃ ಪರಸ್ಪರಂ ಸರ್ವೇ ಮುನಯೋ ವಿಸ್ಮಯಾನ್ವಿತಾಃ ॥೪೭॥

ಮುನಯ ಊಚುಃ :—

ಗೃಹೇಽಸ್ಮಿನ್ ಶಿಶವಶ್ಚಾಮೀ ಕುತೋಽನ್ಯೇಽಸ್ಯ ಸಮೀಪತಃ ।

ಕ ಉವಾಚ :—

ತಾಂಶ್ಚ ತಾನ್ ಮೀಲಿತಾಸ್ಸರ್ವೇಽಪಶ್ಯಂಸ್ತೇ ದೇವರೂಪಿಣಃ ॥೪೮॥

---

ಭೂಮಿಯ ಮೇಲಿದ್ದ ಧೂಳೆಲ್ಲ ಅಂತರಿಕ್ಷದ ವರೆಗೂ ಎದ್ದುಬಿಟ್ಟಿತು. ಇದು ಒಂದು ರೀತಿಯಿಂದ ಧ್ವಜವೋ ಎಂಬಂತೆ ತೋರುತ್ತಲಿದ್ದಿತು. ಇದನ್ನು ನೋಡಿ ಆಶ್ರಮದಲ್ಲಿದ್ದ ಮುನಿಗಳ ಸಮುದಾಯ "ಇದೇನು" ಎಂದು ತಿಳಿಯಲು ಹೊರಕ್ಕೆ ಬಂದಿತು. ॥೪೬॥

ದಿಟ್ಟಿಸಿ ನೋಡಲು ಮಯೂರವನ್ನೇರಿ ಬಾಲಕರೊಂದಿಗೆ ಅತ್ಯುತ್ಸಾಹದಿಂದ ಗುಣೇಶ್ವರನು ಆಶ್ರಮದ ಕಡೆಗೆ ಬರುತ್ತಲಿರುವುದು ಅವರಿಗೆ ಕಂಡುಬಂದಿತು. ಇದು ವರೆಗೆ ತಮ್ಮ ತಮ್ಮ ಆಶ್ರಮಗಳಲ್ಲಿ ಬಾಲಕರೊಂದಿಗೆ ಸುಖವಾಗಿದ್ದ ಮುನಿಗಳಿಗೆ ತಮ್ಮ ಬಾಲಕರಂತಿರುವ ಮತ್ತೊಂದು ತಂಡವನ್ನು ಕಂಡು ಬಹಳ ವಿಸ್ಮಯ ಉಂಟಾಯಿತು, ಒಬ್ಬರ ಮುಖವನ್ನು ಮತ್ತೊಬ್ಬರು ನೋಡುತ್ತ ಪರಸ್ಪರವಾಗಿ ಹೀಗೆ ಮಾತನಾಡತೊಡಗಿದರು. ॥೪೭॥

ಮುನಿಗಳು :—

ನಮ್ಮ ಹುಡುಗರೆಲ್ಲ ನಮ್ಮ ಆಶ್ರಮಗಳಲ್ಲೇ ಇದ್ದಾರೆಯಲ್ಲವೇ ? ಎಂದ ಮೇಲೆ ಈ ಹುಡುಗರಾರು ? ಎಲ್ಲಿಂದ ಬಂದು ಗುಣೇಶನನ್ನು ಸುತ್ತುವರೆದಿದ್ದಾರೆ ?

ಬ್ರಹ್ಮಾ :-

ಎಂದು ಪಿಸುಮಾತುಗಳನ್ನಾಡುತ್ತ ಅವರೊಂದಿಗೆ ತಾವೂ ಆಶ್ರಮಗಳನ್ನು ಸೇರಿದರು. ಮೊದಲು ಆಶ್ರಮದಲ್ಲಿದ್ದ ಹುಡುಗರೊಂದಿಗೆ ಈಗ ಹೊಸದಾಗಿ ಬಂದ ಹುಡುಗರು ನಿಂತೊಡನೆ ಮೊದಲಿದ್ದ ಹುಡುಗರೆಲ್ಲ ಸಾಕ್ಷಾತ್ ದೇವನ ರೂಪದಿಂದ ಕಂಗೊಳಿಸಿದರು. ॥೪೮"

ವಿಚಾರೇಣ ಚ ತಾನ್ ಸರ್ವೇ ಪರಬ್ರಹ್ಮಸ್ವರೂಪಿಣಃ ।
ಆನಂದಹ್ರದಮಗ್ನಾಸ್ತೇ ನ ವಿದುಃ ಸ್ವಂ ಪರಂ ಪುನಃ ॥೪೯॥

ನಾಪಶ್ಯಂಸ್ತೇ ಪುನಸ್ತಾಂಸ್ತಾನ್ ಭ್ರಾಂತಾ ಇವ ವ್ಯಲೋಕಯನ್ ।
ಮಾಯಯಾ ಮೋಹಿತಾಸ್ಸರ್ವೇ ಸ್ವಾನ್ ಸ್ವಾನ್ ಬಾಲಾನ್ ವ್ಯಲೋಕಯನ್ ॥೫೦॥

ಕಶ್ಚಿತ್ಪಿತರಮಾಸಾದ್ಯ ಪಠತಿ ಸ್ಮ ಯಥಾ ಪುರಾ ।
ಕಶ್ಚಿನ್ಮಾತರಮಾಸಾದ್ಯ ಪಿಬತಿ ಸ್ಮ ಸ್ತನಂ ಮುದಾ ॥೫೧॥

ಆಲಿಲಿಂಗಾಥ ಜನನೀಂ ಪಿತರಂ ನಾಪಿ ಕಶ್ಚನ ।

---

ಮುನಿಗಳು ಎಷ್ಟೆಂದರೂ ತಪಸ್ವಿಗಳಲ್ಲವೇ ? ಈ ಚಮತ್ಕಾರದ ಸಾರವನ್ನು ತಮ್ಮ ಧ್ಯಾನದೃಷ್ಟಿಯಿಂದ ಕೂಡಲೇ ಅರಿತರು. ಮೊದಲಿದ್ದ ಬಾಲಕರು ಪರಬ್ರಹ್ಮ ಸ್ವರೂಪನಾದ ಗುಣೇಶ್ವರನಾಗಿ ತೋರಿದರು. ಗುಣೇಶ್ವರನೇ ಬಾಲಕರ ರೂಪದಿಂದ ಇದುವರೆಗೂ ತಮ್ಮ ಆಶ್ರಮದಲ್ಲಿದ್ದನೆಂದು ತಿಳಿದೊಡನೆ ಮುನಿಗಳಿಗುಂಟಾದ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಆನಂದದ ಮಡುವಿನಲ್ಲಿ ಮುಳುಗಿಹೋದರು. ಇದರಿಂದಾಗಿ ಅವರಿಗೆ ಸ್ವ-ಪರ ಭೇದಜ್ಞಾನವು ಸಹ ಕ್ಷಣಕಾಲ ಅಳಿಸಿಹೋಯಿತು. ॥೪೯॥

ಆನಂದಾನುಭವವು ಸ್ವಲ್ಪಮಟ್ಟಿಗೆ ಕುಗ್ಗಿದ ಬಳಿಕ ಪುನಃ ದಿಟ್ಟಿಸಿ ನೋಡಲು ಇದುವರೆಗೂ ಅವರಿಗೆ ಕಾಣುತ್ತಲಿದ್ದ ದೇವರೂಪೀ ಶಿಶುಗಳು ಅದೃಶ್ಯರಾಗಿದ್ದರು. ಮತ್ತೆ ಈಶ್ವರೀಮಾಯೆಯು ಅವರನ್ನು ಮುಸುಕಿ ಪ್ರಾಪಂಚಿಕ ವ್ಯವಹಾರಕ್ಕೆ ಎಳೆದು ತಂದಿದ್ದರಿಂದ ಅವರಿಗೆ ತಮ್ಮ ತಮ್ಮ ಮಕ್ಕಳು ಮಾತ್ರ ಕಾಣತೊಡಗಿದರು. ॥೫೦॥

ಹುಡುಗರು ತಮ್ಮ ತಮ್ಮ ದಿನಚರಿಯನ್ನು ವಯೋಧರ್ಮಕ್ಕನುಗುಣವಾಗಿ ಮುಂದುವರೆಸಿ ನಡೆಸಲಾರಂಭಿಸಿದರು. ಕೆಲವರು ತಮ್ಮ ಜನಕರ ಬಳಿಗೆ ಬಂದು ಹಿಂದೆ ಕಲಿತ ಪಾಠಗಳನ್ನು ಒಪ್ಪಿಸತೊಡಗಿದರು. ಇನ್ನೂ ಪ್ರಬುದ್ಧರಾಗದ ಚಿಕ್ಕ ಚಿಕ್ಕ ಮಕ್ಕಳು ತಮ್ಮ ಜನನಿಯರ ಮಡಿಲಿನಲ್ಲಿ ಮಲಗಿ ಕುಲು ಕುಲು ನಗುತ್ತ ಸ್ತನ್ಯವನ್ನು ಪಾನಮಾಡತೊಡಗಿದವು. ॥೫೧॥

ಕೆಲವು ಬಾಲಕರು ತಮ್ಮ ಜನಕರನ್ನೂ ಮತ್ತೆ ಕೆಲವರು ಜನನಿಯರನ್ನೂ

ಭ್ರಾತರಂ ತಾಡಯಿತ್ವಾನ್ಯೋ ರುರೋದ ತಾಡನಾದಿವ ||೫೨||

ಉಮಾಪಿ ತನಯಂ ದೃಷ್ಟ್ವಾಲಿಂಗ್ಯ ಪ್ರಾದಾತ್ಸ್ತನಂ ಮುದಾ ।
" ಕಥಂ ಚಿರತರಂ ಯಾತ " ಇತಿ ಕ್ರೋಧಾದಭಾಷತ ||೫೩||

ಆದಾಯ ಹಸ್ತೇ ಗಿರಿಜಾ ಮಯೂರೇಶಂ ಗೃಹಂ ಯಯೌ ।
ಸರ್ವೇ ತೇ ಮುನಯೋ ಜಗ್ಮುಃ ಶಿಶುಭಿಃ ಸ್ವಂ ಸ್ವಮಾಶ್ರಮಮ್ ||೫೪||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ಭಗಾಸುರವಧೋ " ನಾಮ ಶತತಮೋಽಧ್ಯಾಯಸ್ಸಮಾಪ್ತಃ.

---

ಆಲಿಂಗಿಸಿಕೊಂಡು ನಿಂತರು. ಆ ಪೈಕಿ ತುಂಟನಾದ ಹುಡುಗನೊಬ್ಬನು ತನ್ನಅಣ್ಣನನ್ನು ಹೊಡೆದು ಓಡಿಬಂದು ತಾನೇ ಅವನಿಂದ ಹೊಡೆತ ತಿಂದು ಬಂದವನಂತೆ ಅಳ ತೊಡಗಿದನು. ||೫೨||

ಉಮಾದೇವಿಯು ತನ್ನ ಮಗು ಗುಣೇಶ್ವರನನ್ನು ನೋಡಿದ ಕೂಡಲೇ ಭರ ದಿಂದಪ್ಪಿ ಸಂತೋಷದಿಂದ ಸ್ತನ್ಯವನ್ನು ಪಾನಮಾಡಿಸಿದಳು. ಮತ್ತು ವಾತ್ಸಲ್ಯದ ಮುನಿಸಿನಿಂದ ' ಇಷ್ಟು ಹೊತ್ತೂ ಎಲ್ಲಿಗೆ ಹೋಗಿದ್ದೆ ? ' ಎಂದು ಗದುರಿಸಿದಂತೆ ಮಾಡಿದಳು. ||೫೩||

ಇಷ್ಟಾದ ಬಳಿಕ ಗಿರಿಜಾದೇವಿಯು ಮಯೂರೇಶ್ವರನ ಎರಡೂ ಕೈಗಳನ್ನು ಭದ್ರವಾಗಿ ಹಿಡಿದುಕೊಂಡು ತನ್ನ ಮಂದಿರಕ್ಕೆ ತೆರಳಿದಳು. ಇತರ ಮುನಿಗಳೂ ಸಹ ತಮ್ಮ ತಮ್ಮ ಮಕ್ಕಳನ್ನು ಕರೆದುಕೊಂಡು ಆಶ್ರಮಗಳಿಗೆ ತೆರಳಿದರು.

ಇಲ್ಲಿಗೆ ಶ್ರೀ ಗಣೇಶಪುರಾಣ, ಉತ್ತರಖಂಡದಲ್ಲಿ " ಭಗಾಸುರನ ವಧೆ " ಎಂಬಲ್ಲಿಗೆ ನೂರನೆಯ ಅಧ್ಯಾಯಾನುವಾದವು ಮುಗಿದುದು

|| ಶ್ರೀ ಗಣೇಶಾಯ ನಮಃ ||

# ಅಥೈಕೋತ್ತರಶತತಮೋಽಧ್ಯಾಯಃ

ಕ. ಉವಾಚ :—

ತತಸ್ತು ದಶಮೇ ವರ್ಷೇ ಸುಖಾಸೀನಂ ಮಹೇಶ್ವರಮ್ ।
ಗಿರಿಜಾಸಹಿತಂ ವಾಮೇ ಸಪ್ತಕೋಟಿಗಣಾನ್ವಿತಮ್ ॥೧॥

ನೃತ್ಯಂತಂ ತಂ ಮಯೂರೇಶಂ ಪಶ್ಯಂತಂ ಸ್ವಾಂಗಣೇ ಶಿಶುಮ್ ।
ಆಯಯುರ್ಮುನಯಸ್ಸರ್ವೇ ಗೌತಮಾದ್ಯಾಃ ಪ್ರಣಮ್ಯ ತಮ್ ॥೨॥

---

|| ಶ್ರೀ ಮಂಗಲಮೂರ್ತಯೇ ನಮಃ ||

## ೧೦೧ ನೆಯ ಅಧ್ಯಾಯ

ಬ್ರಹ್ಮ :—

ಹೀಗೆಯೇ ಕಾಲವು ತನ್ನ ಪಾಡಿಗೆ ತಾನು ಉರುಳಿತು. ಆಗ ಮಹಾಗಣಪತಿಗೆ ಹತ್ತನೆಯ ವರ್ಷವು ನಡೆಯುತ್ತಲಿದ್ದಿತು. ಅನಾದಿನಿಧನನಾದ ಪರಮ ಪುರುಷನಿಗೆ ವಯಸ್ಸಿನ ಗಣನೆ ಹೇಗೆ ಎಂದು ಶಂಕೆಗೊಳ್ಳಬೇಡ. ನಾನು ಹೇಳಿದ ವಯಃಪ್ರಮಾಣ, ಮಯೂರೇಶನಾಗಿ ಗಣಪತಿಯು ಅವತರಿಸಿದ ದೇಹಕ್ಕೆ ಸಂಬಂಧಿಸಿದುದು ಎಂದು ತಿಳಿ. ಇರಲಿ, ಒಂದು ದಿವಸ ಮಹೇಶ್ವರನು ಸುಖವಾಗಿ ಕುಳಿತಿದ್ದನು. ಗಿರಿಜಾಮಾತೆಯು ದೇವನ ವಾಮಪಾರ್ಶ್ವದಲ್ಲಿ ವಿರಾಜಮಾನಳಾಗಿದ್ದಳು. ಏಳು ಕೋಟಿ ಪ್ರಮಥಗಣಗಳು ದೇವನನ್ನು ಸುತ್ತುವರಿದು ನಿಂತು ದೇವನ ಆಜ್ಞೆಯನ್ನು ನಿರೀಕ್ಷಿಸುತ್ತಿದ್ದರು. ॥೧॥

ಎದುರಿನ ಅಂಗಣದಲ್ಲಿ ಶಿಶುವಾದ ಮಯೂರೇಶ್ವರನು ನರ್ತಿಸುತ್ತಿದ್ದನು. ಅವನ ಕುಣಿದಾಟವನ್ನು ನೋಡುತ್ತ ಆದಿದಂಪತಿಗಳು ಸಂತೋಷಿಸುತ್ತಲಿದ್ದರು. ಅಷ್ಟರಲ್ಲಿ ಗೌತಮರೇ ಮೊದಲಾದ ಮುನಿವರರೆಲ್ಲ ಪರಶಿವನ ಸಮೀಪಕ್ಕೆ ಬಂದು ದೇವ ದೇವ, ಚಂದ್ರಶೇಖರನ ಅಡಿದಾವರೆಗಳಿಗೆ ಸಾಷ್ಟಾಂಗವೆರಗಿದರು. ॥೨॥

ಊಚುಃ ಪ್ರಬುದ್ಧಮತಯೋ ಮಹಾದೇವಂ ಮಹೌಜಸಮ್ ।
ಮುನಯ ಊಚುಃ :—
ಯಾವತ್ಕಾಲಂ ಶಿವಾತ್ರ ತ್ವಂ ಮಯೂರೇಶಸಮನ್ವಿತಃ ||೩||

ಸ್ಥಿತೋಽಸಿ ತಾವದ್ದೈತ್ಯಾನಾಮನಂತಾನಾಂ ಸಮಾಗಮಃ ।
ವಯಂ ತೇನ ಪ್ರಪೀಡ್ಯಾಮೋಽನ್ಯತ್ರ ಯಾಹಿ ಶಿವಾಧುನಾ ||೪||

ವಯಂ ವಾನ್ಯತ್ರ ಗಚ್ಛಾಮೋ ಯದ್ಯಾಜ್ಞಾ ತೇ ಭವೇದ್ಧರ ! ।

---

ಅದೇನು ದೈವಸಂಕಲ್ಪವೋ ತಿಳಿಯದು. ಇದ್ದಕ್ಕಿದ್ದಂತೆಯೇ ಅವರ ಮೆದುಳಿಗೆ ಏನೋ ಒಂದು ವಿಚಾರವು ಸ್ಫುರಿಸಿದಂತಾಗಲು ಮಹಾತೇಜಸ್ವಿಯಾದ ಮಹೇಶ್ವರ ನನ್ನು ಕುರಿತು ಅವರು ಪೂರ್ವಾಪರ ವಿಚಾರವಿಲ್ಲದೆ ಹೀಗೆಂದು ಮಾತನಾಡಿದರು.

ಮುನಿಗಳು :—

ಸ್ವಾಮಿನ್, ಪರಶಿವ ! ನೀನು ಈ ಮಯೂರೇಶ್ವರನೊಂದಿಗೆ ಎಲ್ಲಿಯತನಕ ಇಲ್ಲಿ ನೆಲೆಸಿರುವೆಯೋ ||೩||

ಅಲ್ಲಿಯವರೆಗೂ ಈ ಪ್ರದೇಶಕ್ಕೂ ಮತ್ತು ಇಲ್ಲಿ ವಾಸಮಾಡುತ್ತಿರುವ ನಮಗೂ ದುಷ್ಟರಾದ ದೈತ್ಯರ ಕಾಟವು ತಪ್ಪುವಂತಿಲ್ಲವೆಂದೇ ತೋರುತ್ತದೆ. ಏನೋ ಒಬ್ಬಿಬ್ಬರು ದೈತ್ಯರು ಅಕಸ್ಮಾತ್ ಬಂದಿದ್ದರೆ ಹೇಗೊ ಸಹಿಸಿಕೊಂಡಿರಬಹುದಾಗಿದ್ದಿತು. ಇಲ್ಲಿ ಬರುತ್ತಲಿರುವ ದೈತ್ಯರನ್ನು ಗಣಿಸುವುದಕ್ಕೇ ಆಗುವಂತಿಲ್ಲ. ಇವರ ಚಿತ್ರ ವಿಚಿತ್ರ ಹಾವಳಿಯನ್ನು ಸಹಿಸಿಕೊಂಡು ನಾವು ಇಲ್ಲಿ ಇರುವುದಾದರೂ ಹೇಗೆ ? ನಮಗಂತೂ ಇವರ ಪೀಡೆಯನ್ನು ತಡೆದುಕೊಂಡಿರುವುದು ಬಹಳ ಅಸಹ್ಯವೆನಿಸಿದೆ. ಆದುದರಿಂದ ದೇವ ! ನೀನು ನಿನ್ನ ಕುಟುಂಬ ಪರಿವಾರದೊಂದಿಗೆ ಮತ್ತಾವ ಪ್ರದೇಶಕ್ಕಾದರೂ ಈಗಲೇ ಹೋಗಿ ಅಲ್ಲಿ ಸುಖದಿಂದ ವಾಸಮಾಡು. ||೪||

" ನಾನು ಇಲ್ಲಿಯೇ ವಾಸವಾಗಿರುವೆನು, ನೀವೇ ಮತ್ತೆಲ್ಲಿಗಾದರೂ ಹೋಗಿ " ಎಂದು ಭಯಹರ ! ನಿನ್ನ ಆಜ್ಞೆಯಾಗುವುದಾದರೆ ಅದಕ್ಕೂ ನಮ್ಮ ಅಡ್ಡಿ ಏನೂ ಇಲ್ಲ. ನಾವೇ ಮತ್ತೆಲ್ಲಿಗಾದರೂ ಹೊರಟುಹೋಗುವೆವು. ಮುಖ್ಯವಾಗಿ ಈ ದೈತ್ಯರ ಕಾಟ ನಮಗೆ ಇಲ್ಲದಿದ್ದರೆ ಸರಿ.

**ಶಿವ ಉವಾಚ :—**

**ಭವತ್ಸಂಗೇನ ಚ ಮಯಾ ನವ ವರ್ಷಾಣಿ ಸೌಖ್ಯತಃ ||೫||**

**ಅತಿಕ್ರಾಂತಾನಿ ವಿಘ್ನಾನಿ ಮಯೂರೇಶೇನ ತಾನಿ ಚ ।**
**ಭವತಾಂ ಗಮನೇಽಸ್ಮಾಕಂ ಸ್ಥಿತ್ವಾ ಕಿನ್ನು ಪ್ರಯೋಜನಮ್ ? ||೬||**

**ಅಹಮೇವ ಪ್ರಯಾಸ್ಯಾಮಿ ಸ್ಥಲಮನ್ಯಂ ನಿರಾಕುಲಮ್ ।**

**ಕ ಉವಾಚ :—**

**ಇತಿ ಶಂಭುವಚಃ ಶ್ರುತ್ವಾ ಮುನಯಸ್ತಂ ಪ್ರಣಮ್ಯ ತೇ ||೭||**

---

ಶಿವ :—

ಮಹರ್ಷಿಗಳೇ ! ಅಪಾಪಹತಚೇತರೂ ತಪಸ್ಸಿದ್ಧರೂ ಆದ ನಿಮ್ಮ ಸತ್ಸಹವಾಸದಲ್ಲಿ ನಾನು ಈಗ ಕಳೆದ ಒಂಭತ್ತು ವರ್ಷಗಳ ಕಾಲ ಸುಖವಾಗಿ ವಾಸ ಮಾಡಿದ್ದೇನೆ. ||೫||

ನೀವು ಹೇಳುವುದು ಸಹ ನಿಜವೇ ಸರಿ, ವಿಘ್ನಗಳೇನೋ ಎಣಿಸಲಾರದಷ್ಟು ಬಂದವು. ಆದರೆ ನಮ್ಮ ಮುದ್ದು ಕುಮಾರ ಮಯೂರೇಶ್ವರನ ಮಹಿಮಾವಿಶೇಷದಿಂದ ಎಲ್ಲವೂ ಪರಿಹಾರವಾಗಿವೆಯಲ್ಲವೇ ? ಇರಲಿ, ಇಲ್ಲಿಂದ ನೀವೆಲ್ಲ ಹೊರಟು ಹೋದಮೇಲೆ ನಾನಾದರೂ ಏಕಾಕಿಯಾಗಿ ಹೇಗೆ ಕಾಲವನ್ನು ಕಳೆಯಲಿ ? ನಿಮ್ಮನ್ನು ಈ ಸ್ಥಳದಿಂದ ಬೇರೆಡೆಗೆ ಕಳಿಸಿಬಿಟ್ಟರೆ ನನಗಾಗುವ ಪ್ರಯೋಜನವಾದರೂ ಯಾವುದು ? ||೬||

ಆದುದರಿಂದ ನಾನೇ ಇಲ್ಲಿಂದ ಹೊರಟುಹೋಗುವೆನು. ನಿರಾಕುಲವಾಗಿರಬಹುದಾದ ಮತ್ತಾವುದಾದರೊಂದು ಪುಣ್ಯತಮ ಪ್ರದೇಶವನ್ನು ಅರಿಸಿಕೊಂಡು ಅಲ್ಲಿಯೇ ವಾಸಮಾಡುವೆನು.

ಬ್ರಹ್ಮ :—

ವತ್ಸ, ವ್ಯಾಸ ! ಈ ಘಟನೆಯನ್ನಾದರೂ ನೋಡಿದೆಯ ? ಗೌತಮಾದಿ ಮುನಿಗಳು ಅಜ್ಞರೇ ? ಯಾರ ಗರ್ಭವಾಸದಲ್ಲಿ ನಾವು ಸುಖವಾಗಿ ಜೀವಿಸಬಲ್ಲೆವೋ,

" ಜಯ ದೇವ ಮಯೂರೇಶೇ " ತ್ಯುಕ್ತ್ವಾ ಸ್ವಸ್ಥಾನಮಾಯಯುಃ ।
ಶಿವೋऽಪಿ ಗಣಸಂಯುಕ್ತೋ ವೃಷಾರೂಢೋऽಂಬಿಕಾಯುತಃ ॥೮॥

ಮತ್ತು ಯಾರ ಕೃಪೆ ತಪ್ಪಿದರೆ ನಮ್ಮ ಎಲ್ಲ ವ್ಯವಹಾರಗಳೂ ನಿಂತೇ ಹೋಗುವುವೋ ಅಂತಹ ಲೋಕಶಂಕರನಾದ ಶಂಕರನಿಗೆ " ನೀನು ಈ ಪರಿವಾರದೊಂದಿಗೆ ಇಲ್ಲಿರುವ ವರೆಗೂ ನಮಗೆ ಆತಂಕ ತಪ್ಪದು, ಮೊದಲು ನೀನು ಇಲ್ಲಿಂದ ಹೊರಟು ಹೋಗು " ಎಂದು ಮುನಿಗಳು ನುಡಿದರಲ್ಲ? ಇದಕ್ಕೆ ನಿನ್ನ ಉತ್ತರವೇನು? ನಾನೇ ಹೇಳುವೆನು, ಕೇಳು, ಮುನಿಯಾದ ಮಾತ್ರಕ್ಕೆ ಮಾನವ ಸಹಜವಾದ ಅಜ್ಞಾನದ ಆವರಣ ಮರೆಯಾದೀತೇ? ಆವರಣ ಹರಿಯಿತೆಂದರೆ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಜ್ಞಾನವು ಉದಿಸಿ ಈ ಎಲ್ಲ ಭೇದಪ್ರತ್ಯಯಗಳು ತೋರಿ ಬರುವುದೇ ಇಲ್ಲ. ಆವರಣವು ಹರಿಯಬೇಕಾದರೆ ಪಾರ್ಥಿವ ದೇಹ ಹೋಗಿ ಇಂದ್ರಿಯಗಳೆಲ್ಲ ತತ್ತದಭಿಮಾನಿ ದೇವತೆಗಳಲ್ಲಿ ಸೇರಿಹೋಗಬೇಕು. ಆಗ ಮಾತ್ರ ಅಖಂಡಾನಂದದ ಅನುಭವ ಪ್ರಾಣಿಗೆ ಬರುವುದು. ಮುನಿಗಳು ತಪಸ್ಸಿನಿಂದ ಮಾಯೆಯ ವಿಕ್ಷೇಪಶಕ್ತಿಯನ್ನು ಗೆದ್ದಿದ್ದರೂ ಆವರಣವನ್ನು ದಾಟಿ ಹೋದವರಲ್ಲ. ಅಥವಾ ದುಷ್ಟನಿಗ್ರಹ–ಶಿಷ್ಟಪರಿಪಾಲನೆಗಾಗಿ ರೂಪಗೊಂಡು ಅವತರಿಸಿದ ದೇವರ ದೇವನಿಗೆ ಆಯಾ ಕಾಲಕ್ಕೆ ತಕ್ಕಂತೆ ಸೂಚನೆಗಳನ್ನು ನೇರವಾಗಿಯೋ ಪರ್ಯಾಯವಾಗಿಯೋ ಅರುಹಿ,ಅವನಿಂದ ಲೋಕೋದ್ಧಾರ ಕಾರ್ಯವನ್ನು ಮಾಡಿಸುವುದಕ್ಕಾಗಿ ಹೀಗೆ ನುಡಿದರೆಂದರೂ ಅಡ್ಡಿ ಇಲ್ಲ. ಅಂತೂ ಮುನಿಗಳೇನೋ ದೇವನನ್ನು ಕುರಿತು ಹೀಗೆ ನುಡಿದುದುಂಟು. ಪರಮೇಶ್ವರನು ಸರ್ವಜ್ಞನಾದುದರಿಂದ ' ಆಗಬಹುದೆ'ಂದು ಲೋಕಾಭಿರಾಮವಾಗಿಯೇ ಉತ್ತರವನ್ನಿತ್ತಿದ್ದನು. ಅದನ್ನು ಕೇಳಿದೊಡನೆಯೇ ಋಷಿಗಳು ದೇವನ ಸರಳತನಕ್ಕಾಗಿ ಸಂತೋಷಿಸಿ ದೇವನಿಗೆ ನಮಸ್ಕರಿಸಿದರು. ॥೭॥

" ದೇವ, ಮಯೂರೇಶ! ನಿನಗೆ ವಿಜಯವಾಗಲಿ " ಎಂದು ಜಯಘೋಷವನ್ನು ಮಾಡಿ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಅತ್ತ ಪರಶಿವನೂ ಸಹ ಪತ್ನಿಯಾದ ಪಾರ್ವತಿಯೊಡನೆ ವೃಷಭವನ್ನೇರಿ ಕುಳಿತು ಆ ಆಶ್ರಮವನ್ನು ಬಿಟ್ಟು ಬೇರೊಂದೆಡೆಗೆ ಪ್ರಯಾಣ ಬೆಳೆಸಿದನು. ಇವನ ಏಳು ಕೋಟಿ ಗಣಗಳೂ ದೇವನನ್ನು ಸುತ್ತುವರೆದು ಹೊರಟವು. ।೮॥

**ಬರ್ಹಾರೂಢಂ ಮಯೂರೇಶಂ ಪುರಸ್ಕೃತ್ವಾ ಮುದಾನ್ವಿತಃ ।**
**ನಾನಾವಾದಿತ್ರನಿರ್ಘೋಷೈರ್ನಾದಯನ್ವಿಷ್ಟಪಂ ತತಃ ॥೯॥**

**ಅನ್ವಯುರ್ಮುನಯಃ ಸರ್ವೇ ಮಯೂರೇಶಂ ಶಿವಾನ್ವಿತಮ್ ।**
**ಪತ್ನ್ಯೋಽಪಿ ಬಾಲಕೈಸ್ಸಾರ್ಧಂ ಸ್ನೇಹಗದ್ಗದಭಾಷಿಭಿಃ ॥೧೦॥**

**ರಜಸಾ ವ್ಯೋಮನಿ ತತೇ ನ ಪ್ರಾಜ್ಞಾಯತ ಕಿಂಚನ ।**
**ಪರಾವೃತ್ಯ ಶಿವಃ ಸರ್ವಾನ್ ದಕ್ಷಿಣಾಭಿಮುಖೋ ಯಯೌ ॥೧೧॥**

---

ಗಣಪತಿಯು ತನ್ನ ವಾಹನವಾದ ಮಯೂರವನ್ನು ಏರಿ ಎಲ್ಲರಿಗೂ ಮುಂದೆಯೇ ಪ್ರಯಾಣ ಹೊರಟಿದ್ದನು. ಮಹಾದೇವನು ತನ್ನ ಕುಮಾರನನ್ನು ಮುಂದಿರಿಸಿ ಕೊಂಡು ಹೃಷ್ಟಾಂತರಂಗನಾಗಿ ಪ್ರಯಾಣಹೊರಟನು. ನಾನಾಬಗೆಯ ಮಂಗಲ ವಾದ್ಯಗಳು ಭೋರ್ಗರೆಯುತ್ತಿದ್ದವು. ಈ ಧ್ವನಿಯೊಂದಿಗೆ ಏಳು ಕೋಟಿ ಪ್ರಮಥರು ಜಯಕಾರವನ್ನು ಮಾಡುತ್ತಲಿದ್ದರು. ಇದರಿಂದ ಭೂಲೋಕವಂತೂ ಇರಲಿ, ಸ್ವರ್ಗವೂ ಸಹ ಕಿವುಡುಗಚ್ಚುವಂತಾಯಿತು. ॥೯॥

ಮಹಾದೇವನೊಡನೆ ಪ್ರಯಾಣ ಹೊರಟ ಮಯೂರೇಶನನ್ನು ಎಲ್ಲ ಮುನಿಗಳೂ ಅನುಸರಿಸಿ ನಡೆದರು. ತಮ್ಮ ಗಂಡಂದಿರು ಹೊರಟುದನ್ನು ಕಂಡು ಸಾಧ್ವೀ ಶಿರೋಮಣಿಗಳಾದ ಮುನಿಪತ್ನಿಯರೂ ತಮ್ಮ ತಮ್ಮ ಮಕ್ಕಳು-ಮರಿಗಳನ್ನು ಕಟ್ಟಿ ಕೊಂಡು ಹಿಂಡು ಹಿಂಡಾಗಿ ಪ್ರಯಾಣ ಹೊರಟರು. ಹೋಗುವಾಗ ತಮ್ಮ ತಮ್ಮ ಮಕ್ಕಳೊಂದಿಗೆ ಸ್ನೇಹದಿಂದ ಮಾತನಾಡುತ್ತಲಿದ್ದರು. ಅವರ ಗಂಟಲು ವಾತ್ಸಲ್ಯ ದಿಂದ ಉಬ್ಬಿ ಬಂದುದರ ಪರಿಣಾಮವಾಗಿ ಧ್ವನಿಯು ನಡುಗುತ್ತಲಿದ್ದಿತು. ॥೧೦॥

ಇಷ್ಟು ಜನರ ಕಾಲ್ತುಳಿತದಿಂದ ಭೂಮಿಯ ಮೇಲಿದ್ದ ಧೂಳೆಲ್ಲ ಮೇಲಕ್ಕೆದ್ದು ನಕ್ಷತ್ರಮಂಡಲವನ್ನು ಮುಸುಕಿಬಿಟ್ಟಿತು. ಒಬ್ಬರ ಮುಖ ಮತ್ತೊಬ್ಬರಿಗೆ ಕಾಣ ದಷ್ಟು ಮಬ್ಬು ಮೂಡಿತು. ಯಾರು ಏನನ್ನು ಮಾಡುತ್ತಲಿದ್ದಾರೆ? ಎಂಬುದು ಸಹ ಯಾರಾರಿಗೂ ತಿಳಿಯುತ್ತಲಿರಲಿಲ್ಲ. ಆಗ ಪರಶಿವನು ಆಶ್ರಮವಾಸಿಗಳೆಲ್ಲ ತಮ್ಮನ್ನು

ದದೃಶುರ್ಮಾರ್ಗಮಧ್ಯೇ ತಂ ದ್ವಾದಶಾ[1]ಕ್ಷೌಹಿಣೀಯುತಮ್ ।
“ಕಮಲಾಸುರ”ಮಾಯಾಂತಂ ಧೂಲಿಧೂಸರಿತಾಂಬರಮ್ ॥೧೨॥

ಗಜಾಶ್ಚ ಪುರತೋ ಯಾಂತಿ ರಥಾಶ್ವಪದಚಾರಿಣಃ
ನ ಜ್ಞಾಯತೇ ರವೇಸ್ತೇಜಃ ಶಸ್ತ್ರದೀಪ್ತ್ಯಾಥ ಕಿಂಚನ ॥೧೩॥

ಕೋಲಾಹಲೋ ಮಹಾನಾಸೀತ್ ಗಜಾಶ್ವರಥಪತ್ತಿಜಃ ।
ನಾನಾವಿಧಾನಾಂ ಶಸ್ತ್ರಾಣಾಂ ಸಂಘಟ್ಟಸ್ವನಮಿಶ್ರಿತಃ ॥೧೪॥

---

ಹಿಂಬಾಲಿಸಿ ಬರುತ್ತಿರುವುದನ್ನು ನೋಡಿ ಅವರೆಲ್ಲ ಹಿಂದಿರುಗಿ ಹೋಗುವಂತೆ ಸೂಚಿಸಿ ತಾನು ತನ್ನ ಪರಿವಾರದೊಂದಿಗೆ ದಕ್ಷಿಣ ದಿಗಭಿಮುಖನಾಗಿ ಪ್ರಯಾಣಮಾಡಿದನು. ॥೧೧॥

ಇಷ್ಟರಲ್ಲಿ ಮಾರ್ಗಮಧ್ಯೇ ತನ್ನ ಸೇನಾ-ಪರಿವಾರದೊಂದಿಗೆ ಅಟ್ಟಹಾಸದಿಂದ ಬರುತ್ತಿರುವ ‘ಕಮಲಾಸುರ’ ಎಂಬ ದೈತ್ಯನನ್ನು ಇವರು ಸಂಧಿಸಿದರು. ಅವನ ಸೈನ್ಯ ಹೆಚ್ಚೇನೂ ಇರಲಿಲ್ಲ. ಹನ್ನೆರಡು ಅಕ್ಷೌಹಿಣಿಗಳಷ್ಟು ಮಾತ್ರವಿದ್ದಿತು. ಅವನು ತನ್ನ ಹಾಗೂ ತನ್ನ ಸೈನಿಕರ ಕಾಲ್ತುಳಿತದಿಂದೆದ್ದ ಧೂಳಿಯಿಂದ ದಿಗ್ದಿದಿಕ್ಕು ಅಂತರಿಕ್ಷ ಇವನ್ನೆಲ್ಲ ಮುಚ್ಚಿಹಾಕಿದ್ದನು. ॥೧೨॥

ಕಮಲಾಸುರನು ತನ್ನ ಸೇನಾರಚನೆಯನ್ನು ಈ ರೀತಿ ಮಾಡಿಕೊಂಡಿದ್ದನು. ಮುಂದುಗಡೆ ಗಜಸೇನೆಯು ನಡೆದು ಬರುತ್ತಲಿದ್ದಿತು. ಅದರ ಹಿಂದೆ ರಥಗಳು ಅದಾದ ಮೇಲೆ ಅಶ್ವಾರೋಹಿಗಳು ಕೊನೆಯಲ್ಲಿ ಪದಾತಿ ಸೈನ್ಯವು ಬರುತ್ತಲಿದ್ದಿತು. ಒಬ್ಬೊಬ್ಬ ಸೈನಿಕನು ಧರಿಸಿದ ಶಸ್ತ್ರಾಸ್ತ್ರಗಳೂ ಮಿಂಚಿನಂತೆ ಹೊಳೆಯುತ್ತಲಿದ್ದುದರಿಂದ ಇದರ ಮುಂದೆ ಸಹಸ್ರಕಿರಣನ ತೇಜವೂ ದೀಪದ ಮುಂದಿನ ಮಿಣುಕು ಹುಳುವಿನಂತೆ ಮಂಕಾಗಿ ಕಾಣುತ್ತಲಿದ್ದಿತು. ॥೧೩॥

ಸೈನಿಕರೆಂದರೆ ಸ್ವಭಾವತಃ ಹೃದಯಶೂನ್ಯರೂ ಉನ್ಮತ್ತರೂ ಆಗಿರುತ್ತಾರೆ. ಅವರಿಗೆ ಯಾವ ನೀತಿ ನಿರ್ಬಂಧವೂ ಅಡ್ಡಿಬರುವುದಿಲ್ಲ. ಇವರಂತೂ ರಾಕ್ಷಸನ ಸೈನ್ಯದವರು. ಅವರು ಮಂದಹಾಸ್ಯವನ್ನು ಬೀರಿದರೂ ಬರಸಿಡಿಲಿನಂತೆ ಧ್ವನಿಯಾಗುತ್ತದೆ.

1) ವಿವರಣೆಯನ್ನು ಪರಿಶಿಷ್ಟದಿಂದ ತಿಳಿಯತಕ್ಕದ್ದು.

**ದದೃಶುಸ್ತಂ ಮಹಾದೈತ್ಯಂ ಶಿವಚಾರಾಃ ಪುರೋಗತಾಃ ।**
**ಶಂಖಾಸುರಸ್ಯ ತಂ ಬಂಧುಂ ನಾನಾಭೂಷಾವಿರಾಜಿತಮ್ ॥೧೫॥**

**ನಾನಾಯುಧಧರಂ ಪ್ರೋಚುರಾಗತ್ಯ ತು ಶಿವಂ ಗಣಾಃ ।**
**ಪಾದಾಘಾತೇನ ತಸ್ಯಾಶು ಕಂಪತೇ ಕಮಠಾದಯಃ ॥೧೬॥**

**ಮುನಯೋಽಗ್ರೇಚರಾಃ ಪೇತುರ್ಭಯಭೀತಾಸ್ತಮಬ್ರುವನ್**

---

ಎಂದಮೇಲೆ ಅಂಥವರು ಕೂಗಾಡಲಾರಂಭಿಸಿದರೆ ಆ ಧ್ವನಿ ಎಷ್ಟು ಭಯಂಕರವಾಗಿ ಇದ್ದಿರಬಹುದು ? ವ್ಯಾಸ ! ಚತುರಂಗ ಸೇನೆಯು ಕೂಗುತ್ತಲಿದ್ದುದರಿಂದಲೂ, ಸೈನಿಕರು ತಮ್ಮ ಕೈಗಳಲ್ಲಿರುವ ಶಸ್ತ್ರಾಸ್ತ್ರಗಳನ್ನು ಝಳಪಿಸುತ್ತಲಿದ್ದುದರಿಂದಲೂ ಉಂಟಾದ ಧ್ವನಿಯು ದೊಡ್ಡದೊಂದು ಕೋಲಾಹಲವನ್ನೇ ಎಬ್ಬಿಸಿತು. ॥೧೪॥

ಶಿವನೊಡನೆ ಪ್ರಯಾಣ ಹೊರಟವರ ಪೈಕಿ ಮುಂದುಗಡೆ ಇದ್ದವರೆಂದರೆ ಶಿವನ ಅನುಚರರಾದ ಪ್ರಮಥಗಣದವರು. ಕಮಲಾಸುರನ ಸೈನ್ಯವನ್ನು ಮೊದಲು ನೋಡಿದವರೂ ಅವರೇ. ನೋಡಿದೊಡನೆಯೇ ಇಷ್ಟು ದೊಡ್ಡ ಸೈನ್ಯದೊಡನೆ ಅಟ್ಟಹಾಸದಿಂದ ಬರುತ್ತಿರುವವನು ಶಂಖಾಸುರನ ಬಂಧು ಎಂಬುದು ಅವರಿಗೆ ಅರಿವಾಗಿ ಹೋಯಿತು. ಕಮಲಾಸುರನು ಆಗ್ಗೆ ನಾನಾಬಗೆಯ ಭೂಷಣ—ವಸ್ತ್ರಾದಿಗಳಿಂದ ಅಲಂಕೃತನಾಗಿ ವಿರಾಜಿಸುತ್ತಲಿದ್ದನು.

ಎಷ್ಟೆಷ್ಟು ವಿಧ ಆಭರಣಗಳನ್ನು ಧರಿಸಿದ್ದನೋ ಅಷ್ಟಷ್ಟೇ ಬಗೆಯ ದಿವ್ಯ ಆಯುಧಗಳನ್ನೂ ಧರಿಸಿದ್ದನು. ಪ್ರಮಥಗಣದವರು ಸ್ವಲ್ಪವೂ ವಿಲಂಬಮಾಡದೇ ಹಿಂದಿರುಗಿ ಓಡುತ್ತ ಬಂದು ಪರಶಿವನಿಗೆ ತಾವು ಕಂಡ ದೈತ್ಯ, ಅವನ ಸೇನೆ ಹಾಗೂ ಅವರು ಎಬ್ಬಿಸಿರುವ ಕೋಲಾಹಲ ಇವನ್ನೆಲ್ಲ ಅರುಹಿದರು. ಕಮಲಾಸುರನು ಒಮ್ಮೆ ಹೆಜ್ಜೆಯನ್ನಿಟ್ಟನೆಂದರೆ ಅವನ ತುಳಿತಕ್ಕೆ ಆದಿಕೂರ್ಮನೂ ನಡುಗುವನೆಂಬುದನ್ನು ಹೇಳಲು ಮರೆಯಲಿಲ್ಲ. ॥೧೬॥

ಮುಂದೆ ಮುಂದೆ ನಡೆದು ಬರುತ್ತಲಿದ್ದ ಮುನಿಗಳು ಈ ರಾಕ್ಷಸನನ್ನು ನೋಡಿದರು. ಹೆದರಿಕೆಯಿಂದ ದೇಹವಾದ್ಯಂತ ಗಡಗಡ ನಡುಗಿಹೋಯಿತು. ತಮ್ಮ ತಮ್ಮಲ್ಲೇ ಒಬ್ಬರನ್ನೊಬ್ಬರು ಎಡವಿ ನೆಲಕ್ಕೆ ಬಿದ್ದರು. ಮಯೂರೇಶ್ವರನನ್ನು ನೋಡುತ್ತ ಬಹು ದೈನ್ಯದಿಂದ ಅಂಗಲಾಚಿ ಬೇಡತೊಡಗಿದರು.

**ಮುನಯ ಊಚುಃ :—**

**ಮಯೂರೇಶ, ಮಹಾಭಾಗ ! ಕಥಂ ರಕ್ಷಸಿ ? ನೋಽಖಿಲಾನ್ ||೧೭||**

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಪ್ರಾವದತ್ಸ ಗುಣೇಶ್ವರಃ**

**ಗುಣೇಶ ಉವಾಚ :—**

**ವಿದ್ಯಮಾನೇ ಶಿವೇ ಚಿಂತಾ ನ ಕಾರ್ಯಾ ಮುನಿಪುಂಗವಾಃ ! ||೧೮||**

**ಕ ಉವಾಚ :—**

**ಮಯೂರೇಶೋ ಹರಂ ಪ್ರಾಹ ನಮಸ್ಕೃತ್ಯ ತತಃ ಪುನಃ ।**

---

ಮುನಿಗಳು :—

ಮಹಾಭಾಗ, ಮಯೂರೇಶ್ವರ ! ಈ ವಿಪತ್ತಿನಿಂದ ನಮ್ಮನ್ನು ಹೇಗೆ ಪಾರು ಮಾಡುವೆಯಪ್ಪ ? ||೧೭||

ಬ್ರಹ್ಮ :—

ಮುನಿಗಳಾಡಿದ ಈ ದೀನ ಮಾತುಗಳಿಂದ ಮಯೂರೇಶ್ವರನ ಮನಸ್ಸು ಕರಗಿ ಹೋಯಿತು. ಆಗ ಗಣಪತಿಯು ಭಯಗ್ರಸ್ತರಾದ ಋಷಿಗಳನ್ನು ಕುರಿತು ಈ ರೀತಿ ಮಾತನಾಡಿ ಆಶ್ವಾಸಿಸಿದನು.

ಗಣಪತಿ :—

ಮುನೀಶ್ವರರೇ ! ಸಕಲ ಚರಾಚರಗಳಿಗೂ ನಿಯಾಮಕನಾದ ಪರಮೇಶ್ವರನು ನಿಮ್ಮ ಸಮೀಪದಲ್ಲಿಯೇ ಇರುವಾಗ ನೀವೇಕೆ ಭಯಪಡುವಿರಿ ? ಕಾತುರಪಡ ಬೇಡಿರಿ. ನೀವು ಚಿಂತಿಸಬೇಕಾದುದಿಲ್ಲ. ||೧೮||

ಬ್ರಹ್ಮ :—

ಮಯೂರೇಶನು ಮುನೀಶ್ವರರಿಗೆ ಹೀಗೆಂದು ಸಮಾಧಾನಪಡಿಸಿದ ಬಳಿಕ ತನ್ನ ಪೂಜ್ಯ ಜನಕ ; ಪುರಹರನ ಕಡೆಗೆ ತಿರುಗಿ ಭಕ್ತಿಯಿಂದ ನಮಸ್ಕರಿಸಿ ಅವನನ್ನು ಕುರಿತು ಹೀಗೆ ನುಡಿದನು.

**ದೇವ ಉವಾಚ :—**

**ಮಹಾಸೇನಾಯುತೋ ದೈತ್ಯೋ ನಾಮ್ನಾಸೌ ಕಮಲಾಸುರಃ ॥೧೯॥**

**ಯದಿ ತೇಽನುಗ್ರಹೋ ಮೇ ಸ್ಯಾದ್ಯುದ್ಧಾಯಾಶು ವ್ರಜಾಮ್ಯಹಮ್ ।**

**ಶಿವ ಉವಾಚ :—**

**ಸಮ್ಯಗುಕ್ತಂ ತ್ವಯಾ ಪುತ್ರ ! ಹೃದಯಾನಂದನಂ ವಚಃ ॥೨೦॥**

**ದ್ವಾದಶಾಕ್ಷೋಹಿಣೀಸೇನಾಯುತೋಽಸೌ ದೈತ್ಯಪುಂಗವಃ ।**
**ಏಕಾಕೀ ಕಥಮಾಯಾಸಿ ? ಸಪ್ತಕೋಟಿಗಣೈರ್ಯುತಃ ॥೨೧॥**

---

ಗುಣೇಶಃ :—

ಭಗರ್ವ, ಲೋಕೇಶ್ವರ! ದೊಡ್ಡ ಸೈನ್ಯವನ್ನು ಸಂಗಡ ಕರೆದುಕೊಂಡು ನಮ್ಮೆದುರಿಗೆ ಬಂದು ನಿಂತಿರುವ ಈ ದೈತ್ಯನ ಹೆಸರು “ ಕಮಲಾಸುರ ” ॥೧೯॥

ನನ್ನ ಮೇಲೆ ನಿನ್ನ ಅನುಗ್ರಹವಿರುವುದಾದರೆ ಇದೋ, ಈಗಲೇ ನಾನು ಇವನೊಡನೆ ಯುದ್ಧಮಾಡಲು ಹೊರಡುವೆನು.

ಪರಶಿವ :—

ಸು-ಪುತ್ರ ! ವೀರೋಚಿತವಾದ ನಿನ್ನ ಈ ಮಾತನ್ನು ಕೇಳಿ ನನ್ನ ಮನಸ್ಸು ಬಹಳ ಹರ್ಷಗೊಂಡಿದೆ. ನೀನು ಸರಿಯಾಗಿಯೇ ಮಾತನ್ನಾಡಿರುವೆ. ॥೨೦॥

ಆದರೆ ಈ ದೈತ್ಯನ ಬೆಂಬಲವು ಎಷ್ಟಿದೆ ಎಂಬುದನ್ನು ಗಣಿಸಿ ನೋಡಿರುವೆಯ ? ಹನ್ನೆರಡು ಅಕ್ಷೌಹಿಣಿಯಷ್ಟು ಸೈನ್ಯವನ್ನು ಇವನು ಸಂಗಡ ಕರೆದು ತಂದಿದ್ದಾನೆ. ಇಷ್ಟು ಸೈನಿಕರನ್ನು ಅಧೀನದಲ್ಲಿರಿಸಿಕೊಳ್ಳಬೇಕಾದರೆ ಈ ದೈತ್ಯನು ಸ್ವಯಂ ವೀರಾಗ್ರಣಿ ಎಂಬುದರಲ್ಲಿ ಸಂಶಯವೇ ಇಲ್ಲ. ಹೀಗಿರುವಾಗ ನೀನೊಬ್ಬನೇ ಇವನೊಡನೆ ಯುದ್ಧಕ್ಕೆ ತೆರಳುವೆ ಎನ್ನುವಿಯಲ್ಲ ? ಇರಲಿ, ನಿನ್ನ ಸಂಗಡ ನಮ್ಮ ಈ ಏಳು ಕೋಟಿ ಪ್ರಮಥರೂ ಬರುತ್ತಾರೆ. ಅವರನ್ನೂ ಕರೆದುಕೊಂಡು ॥೨೧॥

ಕಾಲಾನುರೂಪಾಸ್ತೇ ವೀರಾ ಬ್ರಹ್ಮಾಂಡಾಶನತತ್ಪರಾಃ ।
ಮೇರೋರಧಿಕಮಾನಾಸ್ತೇ ಶಬ್ದತಃ ಶೃಂಗಪಾತಿನಃ ॥೨೮॥

ಪರಸ್ಪರಂ ನಿಜಘ್ನುಸ್ತೇ ತುಮುಲೇ ಸಂಯುಗೇ ತತಃ ।
ಅಂಧಕಾರೋ ಮಹಾನಾಸೀದ್ರಜಸಾಚ್ಛಾದಿತಾ ದಿಶಃ ॥೨೯॥

ವಿಸ್ಮಯಂ ಚಕ್ರಿರೇ ದೈತ್ಯಾ

ದೈತ್ಯಾ ಊಚುಃ :—
ಇದಾನೀಮಯಮೇಕಲಃ ।
ಅನೇಕತಾಂ ಕಥಂ ಯಾತಸ್ತಸ್ಮಾದೇಷ ಪರಃ ಪುಮಾನ್ ॥೩೦॥

---

ಉಭಯಪಕ್ಷದ ಸೈನಿಕರೂ ಸಾಮಾನ್ಯರಾದವರಲ್ಲ. ಪ್ರಸಂಗಕ್ಕನುಗುಣವಾಗಿ ತಮ್ಮ ತಮ್ಮ ದೇಹಗಳನ್ನು ಮಾರ್ಪಡಿಸಿಕೊಳ್ಳುವಷ್ಟು ಸಾಮರ್ಥ್ಯವನ್ನು ಪಡೆದವರು. ಮತ್ತು ಯಮನಂತಿರುವವರು. ಆವಶ್ಯಕವೆನಿಸಿದರೆ ಒಬ್ಬೊಬ್ಬರೂ ಇಡೀ ಬ್ರಹ್ಮಾಂಡವನ್ನೇ ಏಕಾಪೋಶನವನ್ನಾಗಿಮಾಡಬಲ್ಲವರು. ಮೇರುಪರ್ವತಕ್ಕಿಂತಲೂ ಎತ್ತರವಾಗಿರತಕ್ಕವರು. ಒಮ್ಮೆ ಅವರು ಗರ್ಜಿಸಿದರೆಂದರೆ ಪರ್ವತಗಳ ಶಿಖರಗಳೆಲ್ಲ ಉರುಳುರುಳಿ ಬೀಳುವವು, ಅವರ ಧ್ವನಿ ಅಷ್ಟು ಮೃದು. ॥೨೮॥

ಯುದ್ಧವು ಆರಂಭವಾಯಿತು. ಪರಸ್ಪರರನ್ನು ಬಲವಾಗಿ ಪ್ರಹರಿಸಲಾರಂಭಿಸಿದರು. ತುಮುಲಯುದ್ಧ ಆರಂಭವಾದೊಡನೆಯೇ ಎರಡು ಸೇನೆಗಳೂ ಬೆರತು ಹೋದವು, ಧೂಳಿ ಎಲ್ಲರನ್ನೂ ಮುಸುಕಿ ಸೈನಿಕರಲ್ಲಿ ಸ್ವ-ಪರ ಭೇದಜ್ಞಾನವೇ ಉಂಟಾಗದಂತೆ ಮಾಡಿತು. ದಿಕ್ಕುಗಳು ಸಹ ಕಾಣದಂತಾದವು. ॥೨೯॥

ಎದುರಾಳಿಗಳ ಈ ಹುರುಪನ್ನೂ, ಯುದ್ಧಕೌಶಲವನ್ನೂ ನೋಡಿ ದೈತ್ಯರು ವಿಸ್ಮಯವನ್ನು ಹೊಂದಿದರು. ಅವರ ಹೃದಯದಲ್ಲಿ ಒಂದು ಬಗೆಯ ಆಂತರಿಕ ಹೆದರಿಕೆ ಮೂಡಿತು. ಆಗ ಅವರು ತಮ್ಮಲ್ಲೇ ಹೀಗೆಂದು ಚಿಂತಿಸಿದರು.

ದೈತ್ಯರು :—

ಇದೇನೀ ಚಮತ್ಕಾರ ? ಈಗಿನ್ನೂ ನೋಡಿದ್ದೇವೆ. ಈ ಬಾಲಕನೊಬ್ಬನೇ ನಮ್ಮೆದುರು ನಿಂದಿದ್ದನಲ್ಲವೇ ? ಒಮ್ಮೆಲೇ ಇಷ್ಟು ಮಂದಿ ಸೈನಿಕರನ್ನು ಇವನು ಹೇಗೆ

**ಭೂ-ಭಾರಂ ಹರ್ತುಕಾಮೋಽಯಮವತೀರ್ಣಃ ಶಿವಾಲಯೇ ।**

**ಕ ಉವಾಚ :—**

**ಸೋಽಪಿ ದೀರ್ಘತರಂ ರೂಪಂ ದಧಾರ ಸಹಸಾ ವಿಭುಃ ॥೩೦॥**

**ದೃಷ್ಟ್ವಾ ದೀರ್ಘಂ ದೈತ್ಯರೂಪಂ ಯೋಗಮಾಯಾಸಮಾವೃತಃ ।**
**ದಶಾಯುಧಧರೋ ದೇವೋ ದಶಹಸ್ತೋ ಮಹಾಬಲಃ ॥೩೧॥**

**ಮಯೂರೇಶಶ್ಚ ದೈತ್ಯಶ್ಚ ಯುಧ್ಯಮಾನೌ ವಿರೇಜತುಃ ।**

---

ಸಂಗ್ರಹಿಸಿ ತಂದಿರಬಹುದು? ಹೊರಗಿನಿಂದ ಯಾರೂ ಬಂದಂತೆ ತೋರುವುದಿಲ್ಲ. ಈ ಬಾಲಕನು ತಾನೇ ಈ ಸೈನಿಕರ ಹಾಗೆ ಮಾರ್ಪಟ್ಟಿರಬಹುದೇ? ಹಾಗಿದ್ದರೆ ಇವನು ಪರಾತ್ಪರ ಪುರುಷನೇ ಇರಬೇಕು. ಇಲ್ಲವಾಗಿದ್ದರೆ ಯಾರಿಗೆ ಇಂತಹ ಅತ್ಯದ್ಭುತ ಸಾಮರ್ಥ್ಯವಿದ್ದೀತು? ॥೩೦॥

ಇವನು ಸರ್ವೇಶ್ವರ. ಇದರಲ್ಲಿ ಸಂದೇಹವೇ ಇರುವುದಿಲ್ಲ. ಭೂ-ಭಾರವನ್ನು ಹರಣಮಾಡುವ ಸಲುವಾಗಿ ಆ ಭಗವಂತನು ಪರಶಿವನ ಮನೆಯಲ್ಲಿ ಪ್ರಾಕೃತ ಶಿಶುವಿನಂತೆ ರೂಪಗೊಂಡು ಅವತರಿಸಿದ್ದಾನೆ.

ಬ್ರಹ್ಮಾ:—

ಇಷ್ಟನ್ನು ನಿರ್ಧರಿಸಿದ ಬಳಿಕ "ತಾನೂ ಒಮ್ಮೆ ತನ್ನ ಮಾಯಾಶಕ್ತಿಯನ್ನು ಬೀರಿ ನೋಡೋಣ'ವೆಂದು ನಿರ್ಧರಿಸಿ ಅತಿ ದೀರ್ಘತರವಾದ ರೂಪವನ್ನು ದೈತ್ಯನು ಧರಿಸಿ ನಿಂತನು. ವಿಭು, ಗಣಪತಿಯು ಕಮಲಾಸುರನು ಮಾರ್ಪಡಿಸಿಕೊಂಡ ಸು-ದೀರ್ಘದೇಹವನ್ನು ಕಂಡು ತಾನೂ ಯೋಗಮಾಯಾ ಸ್ವರೂಪವನ್ನು ಸ್ವೀಕರಿಸಿ ನಿಂದನು. ದೇವನು ಆಗ ಧರಿಸಿದ ರೂಪವನ್ನು ವರ್ಣಿಸುವೆನು ಕೇಳು. ದಶಬಾಹುಗಳಲ್ಲಿ ದಶವಿದ ನಿಶಿತಾಯುಧಗಳನ್ನು ಧರಿಸಿದ್ದನು. ಮಹಾಬಲಿಷ್ಠವೂ, ಅದ್ಭುತಾಕಾರವೂ ಉಳ್ಳದ್ದು ದೇವನು ಧರಿಸಿದ ಆ ದೇಹ. ॥೩೧॥

ಮಯೂರೇಶ್ವರ, ದೈತ್ಯರಾಜ; ಕಮಲಾಸುರ ಇವರಿಬ್ಬರೂ ಕಲಿತನದಿಂದ

**ನಾನಾಶಸ್ತ್ರಪ್ರಹರಣೈರ್ನಾನಾಯುದ್ಧವಿಶಾರದೈಃ ॥೩೩॥**

**ವ್ಯಸ್ತಾವ್ಯಸ್ತಮಯುದ್ಧ್ಯಂತ ಗಣಾ ಸೇನಾಚರಾಶ್ಚ ತೇ ।**
**ಮುಷ್ಟಿಪ್ರಹಾರೈರ್ದಂತೈಶ್ಚ ಶಸ್ತ್ರಾಸ್ತ್ರೈರಿತರೇತರಮ್ ॥೩೪॥**

**ಕೇಷಾಂಚಿನ್ಮಸ್ತಕಾ ಭಗ್ನಾ ಅಪರೇಷಾಂ ಮುಖಾನಿ ಚ ।**
**ಜಾನುಜಂಘಾವಿರಹಿತಾ ನಿಪೇತುರಪರೇ ರಣೇ ॥೩೫॥**

**ಗರ್ಜಯಂತೋ ದಶ ದಿಶಃ ಶಸ್ತ್ರಾಸ್ತ್ರಘಾತನಿಃಸ್ವನೈಃ ।**

ಕಾದಾಡತೊಡಗಿದರು. ಇವರಿಬ್ಬರ ಮುಖದ ಮೇಲೂ ವೀರಶ್ರೀ ರಾರಾಜಿಸುತ್ತಲಿದ್ದಿತು. ಯಾರೊಬ್ಬರೂ ಹಿಂಜರಿಯತಕ್ಕವರಲ್ಲ. ಇವರು ಪ್ರಯೋಗಿಸುತ್ತಲಿದ್ದ ಶಸ್ತ್ರಾಸ್ತ್ರಗಳು ವಿವಿಧವಾಗಿದ್ದವು. ಯುದ್ಧವಿಶಾರದರಾದ ವೀರರಿಬ್ಬರೂ ತಮ್ಮ ಚಾತುರ್ಯವನ್ನು ಬಗೆಬಗೆಯಿಂದ ತೋರಿಸುತ್ತ ಎದುರಾಳಿಗಳನ್ನು ಚಕಿತರನ್ನಾಗಿ ಮಾಡುತ್ತಲಿದ್ದರು. ॥೩೩॥

ಅತ್ತಕಡೆ ಪ್ರಮಥಗಣಗಳು, ದೈತ್ಯನ ಸೈನಿಕರು ಪರಸ್ಪರ ಹೋರಾಡುತ್ತಲಿದ್ದರಷ್ಟೇ? ಅವರಾರಲ್ಲೂ ನೀತಿನಿಯಮಗಳುಳಿದಿರಲಿಲ್ಲ. ಮನಸ್ಸಿಗೆ ಬಂದಂತೆಲ್ಲ ಹೊಡೆದಾಡಲಾರಂಭಿಸಿದರು. ಶಸ್ತ್ರಗಳನ್ನು ಪ್ರಯೋಗಿಸಬೇಕಾದ ಸಂದರ್ಭದಲ್ಲಿ ಮುಷ್ಟಿಗಳಿಂದ ಗುದ್ದುವರು. ಬಾಣಗಳನ್ನು ಬಿಡಬೇಕಾದಾಗ ತಮ್ಮ ಹಲ್ಲು ಉಗುರುಗಳಿಂದ ಶತ್ರುಗಳನ್ನು ಕಚ್ಚಿ ಪರಚುವರು. ಮಲ್ಲಯುದ್ಧಕ್ಕಾಗಿ ಬಂದವರ ಮೇಲೆ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುವರು. ಅಂತೂ ಯಾರೂ ಹಿಂಜರಿಯದೆ ಕಾದಾಡುತ್ತಲಿದ್ದರು. ॥೩೪॥

ಕೆಲವರ ತಲೆ ಬುರುಡೆಗಳು ಒಡೆದುಹೋದವು. ಮತ್ತೆ ಕೆಲವರ ಮುಖಗಳು ಜಜ್ಜಿಹೋಗಿ 'ಇವರಾರೆಂ'ಬುದು ಸಹ ತಿಳಿಯದಂತಾಯಿತು. ಕೈ-ಕಾಲು ಮಂಡಿ ತೊಡೆಗಳನ್ನು ಕಳೆದುಕೊಂಡವರನೇಕರು ಅತ್ತಿತ್ತ ಸುಳಿದಾಡಲಾರದೇ ರಣರಂಗದಲ್ಲೇ ಬಿದ್ದು ಹೊರಳಾಡಲಾರಂಭಿಸಿದರು. ॥೩೫॥

ಶಸ್ತ್ರಪ್ರಯೋಗಗಳಿಂದುಂಟಾದ ಖಣಲ್ ಶಬ್ದ, ಬಾಣಗಳ ಸುಂಯ್ ಗುಟ್ಟು

ಸ್ವಾಮಿಸ್ವನಾಮತೋ ಜಘ್ನುರಂಧಕಾರೇ ರಜಸ್ಕೃತೇ ||೩೬||

ಕಬಂಧಾ ಮಾರಯಂಸ್ತತ್ರ ಪರಾನ್ ಸ್ವಾನಪಿ ಸಮ್ಮುಖಮ್ ।
ದೈತ್ಯಸೇನಾಚಿರಾ ಭಗ್ನಾ ದೈತ್ಯಮೇವಾನ್ವಯುಸ್ತದಾ ||೩೭||

ಅಸಂಖ್ಯಾತಾನ್ಮೃತಾನ್ ಪ್ರಾಹುಃ ನದ್ಯಸ್ತು ರಕ್ತಸಂಭವಾಃ ।

---

ಏಕೆ, ಮುಸಲ ತೋಮರಗಳ 'ಧಡಧಡ' ಹೊಡೆತ, ವೀರರು ನಡು-ನಡುವೆ ಮಾಡುತ್ತಿರುವ ಸಿಂಹನಾದಗಳಿಂದ ದಿಕ್ಕುಗಳೆಲ್ಲ ಪ್ರತಿಧ್ವನಿಗೈಯ್ಯುವಂತಾದವು. "ಇದೋ ಇಂತಹ ವೀರನ ಹೊಡೆತವನ್ನು ತಡೆದುಕೋ"," ನಮ್ಮ ಸ್ವಾಮಿಯು ಯಾರೆಂದು ತಿಳಿದೆ?" ಎಂಬ ವೀರವಾದಗಳು ಪ್ರತಿಯೊಬ್ಬ ಯೋಧನ ಮುಖದಿಂದಲೂ ನಿರರ್ಗಳವಾಗಿ ಬರುತ್ತಲಿದ್ದವು. ತಾವು ಹೊಡೆಯುವ ಪ್ರಸಂಗ ಒದಗಿದಾಗ ಯೋಧರು ಬಹಳ ಉತ್ಸಾಹಗೊಳ್ಳುತ್ತಲಿದ್ದರು. ಯೋಧರ ಓಡಾಟ-ಹಾರಾಟಗಳಲ್ಲಿ ಭೂಮಿಯ ಧೂಳಿಯೆಲ್ಲವೂ ಯುದ್ಧರಂಗವನ್ನು ಮುಸುಕಿ ಅಂಧಕಾರವನ್ನು ಬೀರಿತು. ||೩೬||

ಸ್ವ-ಪರಭೇದಜ್ಞಾನ ಶೂನ್ಯಗಳಾದ ರುಂಡವಿಲ್ಲದ ಮುಂಡಗಳು ತಮ್ಮ ತಮ್ಮ ಕೈಗಳಲ್ಲಿದ್ದ ಶಸ್ತ್ರಗಳಿಂದ ಸಮೀಪಕ್ಕೆ ಬಂದವರನ್ನೆಲ್ಲ ಹೊಡೆದು ಕೆಡಹುತ್ತಲಿದ್ದವು, ಯುದ್ಧದ ಬಿರುಸು ಬಿಸಿಯಾಗುವ ವೇಳೆಗೆ ಪ್ರಮಥರ ಕೈಯೇ ಮೇಲಾದುದರಿಂದ ದೈತ್ಯನ ಸೈನಿಕರೆಲ್ಲ ಭಂಗಹೊಂದಿ ರಣರಂಗದಲ್ಲಿ ನಿಂದಿರಲಾರದೇ ತಮ್ಮ ಪ್ರಭು. ಕಮಲಾಸುರನಿದ್ದಲ್ಲಿಗೆ ಓಡಿ ನಡೆದು ಅವನಿಗೆ ಶರಣುಹೋದರು. ||೩೭||

ಲೆಕ್ಕವಿಲ್ಲದಷ್ಟು ತಮ್ಮ ಸಹೋದ್ಯೋಗಿಗಳು ಮೃತರಾದುದನ್ನೂ, ಅವರ ದೇಹಗಳಿಂದ ರಕ್ತವು ಪ್ರವಾಹರೂಪವಾಗಿ ಹರಿದುದನ್ನೂ ಮತ್ತಿಷ್ಟು ಭಯಾನಕವಾಗುವಂತೆ ತಮ್ಮ ಅರಸನ ಎದುರಿಗೆ ವರ್ಣಿಸಿ ಹೇಳಿದರು. ಯುದ್ಧೋನ್ಮತ್ತನಾಗಿದ್ದ ಕಮಲಾಸುರನು ತಮ್ಮ ಸೇನೆಯು ಭಂಗ ಹೊಂದಿದ್ದನ್ನು ದೂತರ ಮುಖದಿಂದ ಕೇಳಿ ಮತ್ತಿಷ್ಟು ರೊಚ್ಚಿಗೆದ್ದನು. ಮತ್ತು ತನ್ನ ಪಾಡಿಗೆ ತಾನು ಹೀಗೆಂದು ಮಾತನಾಡುತ್ತ ಆಕ್ರೋಶಿಸಿದನು.

ದೈತ್ಯ ಉವಾಚ :—

ಇಂದ್ರಾದಯೋ ಲೋಕಪಾಲಾ ಬ್ರಹ್ಮಾದ್ಯಾ ದೇವತಾಗಣಾಃ ||೩೮||

ನಿರ್ಜಿತಾ ಯೇನ ತೇನೇಹ ಕೋ ಯುದ್ಧಂ ಕರ್ತುಮುತ್ಸಹೇತ್ |
ಭೂ-ಗೋಲಂ ನ್ಯುಬ್ಜತಾಂ ನೇತುಂ ಕೋಽನ್ಯಃ ಶಕ್ತೋ ಭವಿಷ್ಯತಿ? ||೩೯||

ಕ ಉವಾಚ :—

ಇತ್ಯುಕ್ತ್ವಾಂದೋಲಯಾಮಾಸ ಶಸ್ತ್ರಾಂದೋಲನತೋ ಜಗತ್ |
ಕ್ರೋಧಸಂರಕ್ತನಯನೋ ಮಾರಯಾಮಾಸ ದೈತ್ಯರಾಟ್ ||೪೦||

ಮಯೂರೇಶಗಣಾರ್ ಸರ್ವಾನ್ನಾನಾವಾಹನಹೇತಿಕಾರ್ |

---

ಕಮಲಾಸುರ :—

ಇಂದ್ರಾದ್ಯಷ್ಟ ದಿಕ್ಪಾಲಕರಾಗಲಿ, ಬ್ರಹ್ಮಾದಿ ದೇವತಾಗಣಗಳಾಗಲಿ ||೩೮||

ಯುದ್ಧದಲ್ಲಿ ನನ್ನೆದುರು ನಿಲ್ಲಲಾರದೆ ಪರಾಜಿತರಾಗಿ ಓಡಿ ಹೋಗಿರುವರು. ಇಂತಹ ವೀರಾಗ್ರಣಿಯೊಡನೆ ಯುದ್ಧಮಾಡಲು ಯಾರಿಗೆ ಸಾಮರ್ಥ್ಯವಿದೆ? ಹುಂಬತನದಿಂದ ನನ್ನೊಡನೆ ಹೋರಾಡಿ ಸಾಯಲು ಯಾವನು ಉತ್ಸಾಹಗೊಂಡಾನು? ಅಖಂಡವಾದೀ ಭೂಗೋಳವನ್ನು ಮುಷ್ಟಿಯಿಂದ ಹಿಡಿದೇನೆಂದು ಹೇಳುವಷ್ಟು ಸಾಹಸಿಗನು ನನ್ನನ್ನು ಹೊರೆತು ಬೇರಾವನಿರುವನು? ||೩೯||

ಬ್ರಹ್ಮಾ:—

ಎಂದು ಒಮ್ಮೆ ಬಲವಾಗಿ ಬಡಬಡಿಸಿ ತನ್ನ ಕೈಯಲ್ಲಿದ್ದ ಶಸ್ತ್ರವನ್ನು ಗರಗರ ತಿರುಗಿಸಿ ಝಳಪಿಸಿದನು. ಇದರ ಪರಿಣಾಮವಾಗಿ ಇಡೀ ಜಗತ್ತೇ ಹೊಯ್ದಾಡಿ ಹೋಯಿತು. ಕೋಪಾತಿರೇಕದಿಂದ ಕಮಲಾಸುರನ ಕಣ್ಣುಗಳು ನಿಗಿನಿಗಿ ಕೆಂಡದಂತೆ ಕೆಂಪಾಗಿ ಹೊಳೆಯಲಾರಂಭಿಸಿದವು. ಖಡ್ಗವನ್ನು ಎತ್ತಿಹಿಡಿದು ಶತ್ರುಸೈನ್ಯವನ್ನು ಸದೆಬಡಿಯಲು ತಾನೇ ಮುನ್ನುಗ್ಗಿ ಅನೇಕ ಸೈನಿಕರನ್ನು ಹೊಡೆದು ಕೊಂದನು. ||೪೦||

ಕೈಗೆ ಸಿಕ್ಕಿದ ಶತ್ರು ಸೈನಿಕನನ್ನು ಕತ್ತರಿಸಲಾರಂಭಿಸಿದನು. ಕೆಲವರ ತಲೆ

ಶಿರಃ ಪಾದಾಂಕೃತೀಹಸ್ತಾನ್ ಛಿತ್ವಾಪಾತಯದಾಹವೇ ||೪೧||

ಉತ್ಕರ್ಷಂ ತಸ್ಯ ತಂ ದೃಷ್ಟ್ವಾ ಮಯೂರೇಶೋ ಯಯೌ ಪುರಃ |
ಸ್ವರ್ಗಂ ಚ ಗರ್ಜಯನ್ ವ್ಯೋಮ ಪಶ ಶಸ್ತ್ರೈರ್ದ್ವಿಷೋಽಹನತ್ ||೪೨||

ಅಸಂಖ್ಯಾತಾ ಹತಾ ದೈತ್ಯಾ ಮುಕ್ತಿಂ ಪ್ರಾಪುಃ ಸು–ದುರ್ಲಭಮ್ ||೪೩||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಕಮಲಾಸುರಸೇನಾವಧ ವರ್ಣನಂ' ನಾಮ ಏಕಶತತಮೋಽಧ್ಯಾಯಃ ಸಮಾಪ್ತಃ

---

ಗಳನ್ನು ಕತ್ತರಿಸಿದನು. ಕೆಲವರ ಕಾಲುಗಳನ್ನು ಮುರಿದನು. ಮತ್ತೆ ಕೆಲವು ಸೈನಿಕರ ಕೈಗಳನ್ನು ತುಂಡರಿಸಿ ಅವನ್ನೂ, ಅವರು ಧರಿಸಿದ್ದ ಆಯುಧಗಳನ್ನೂ ದೂರ ದೂರ ಬಿಸುಟನು. ಯೋಧರನ್ನು ಕಡಿದು ಚೆಲ್ಲುವಾಗ ಕಮಲಾಸುರನು ತೋರಿಸಿದ ಅಸಹನೆ ಕಲಿತನ ಇವು ವರ್ಣನಾತೀತವಾಗಿದ್ದವು. ||೪೧||

ಬರಬರುತ್ತ ಪ್ರಮಥರ ಗುಂಪು ಬರಿದಾಗತೊಡಗಿತು. ಶತ್ರುಸೈನ್ಯವು ಕರಗಿದಂತೆಲ್ಲ ಕಮಲಾಸುರನ ಹುಮ್ಮಸ್ಸು ಸಿಂಹಗರ್ಜನೆಗಳು ಹೆಚ್ಚಾದವು. ಶತ್ರುವಿನ ಈ ಬಗೆಯ ಉತ್ಕರ್ಷವನ್ನು ನೋಡಿ ಸಹಿಸಲಾರದೇ ಮಯೂರೇಶನು ಆವೇಶಗೊಂಡು ತಾನೇ ಮುನ್ನುಗ್ಗಿ ಬಂದನು. ಬರುವಾಗ ಪದೇ ಪದೇ ಗರ್ಜಿಸುತ್ತಲೇ ಇದ್ದನು. ಈ ಧ್ವನಿಯು ಸ್ವರ್ಲೋಕವನ್ನು ಸಹ ಗಡಗಡ ನಡುಗಿಸಿತು. ಹತ್ತು ದಿಕ್ಕುಗಳೂ ಪ್ರತಿಧ್ವನಿಗೈದವು. ದೇವನು ತನ್ನ ಕೈಯ್ಯಲ್ಲಿದ್ದ ಆಯುಧಗಳಿಂದ ರಾಕ್ಷಸನ ಸೈನ್ಯವನ್ನು ತಡೆ ಇಲ್ಲದೇ ಸವರಲಾರಂಭಿಸಿದನು. ||೪೨||

ಈ ಹೊಡೆತವನ್ನು ತಿಂದ ಮೇಲೆ ದೈತ್ಯ ಸೈನಿಕರು ಜೀವಿಸಿರಬಲ್ಲರೇ ? ಎಲ್ಲರೂ ಮೃತಿಯನ್ನೈದಿದರು. ಮೃತಿಯನ್ನೈದಿದ ವೀರರೆಲ್ಲರೂ ದೈವಾನುಗ್ರಹದಿಂದ ಅತಿ ದುರ್ಲಭವಾದ ಮುಕ್ತಿಯನ್ನು ಪಡೆದರು. ಅವರು ಮತ್ತಾರೊಡನೆಯಾದರೂ ಹೋರಾಡುತ್ತಿರುವಾಗ ಮೃತಿಯನ್ನೈದಿದ್ದರೆ ಈ ಭಾಗ್ಯ ಅವರ ಪಾಲಿಗೆ ಬರುತ್ತಲಿರಲಿಲ್ಲ. " ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ | ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವ ಹಿ ಪಾವಕಃ " ||೪೩||

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರಖಂಡದಲ್ಲಿ " ಕಮಲಾಸುರ ಸೇನಾವಧೆಯ ವರ್ಣನೆ " ಎಂಬಲ್ಲಿಗೆ ನೂರ ಒಂದನೆಯ ಅಧ್ಯಾಯಾನುವಾದವು ಸಂಪೂರ್ಣವಾಯಿತು.

|| ಶ್ರೀ ಗಣೇಶಾಯ ನಮಃ ||

# ಅಥ ದ್ವ್ಯಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ವಿನಷ್ಟೇ ಬಹುಧಾ ಸೈನ್ಯೇ ರುರೋಹಾಶ್ವಂ ಸ ದೈತ್ಯರಾಟ್ ।**
**ಖಡ್ಗಪಾಣಿರ್ಯಯೌ ಯೋದ್ಧುಂ ಮಯೂರೇಶಂ ರುಷಾನ್ವಿತಃ ||೧||**

**ತಂ ದೃಷ್ಟ್ವಾ ತು ಮಯೂರೇಶೋ ರುರೋಹ ಸ್ವಂ ಶಿಖಂಡಿನಮ್ ।**
**ತಂ ದೃಷ್ಟ್ವಾ ಶೀಘ್ರಮಾಯಾಂತಂ ಪನ್ನಗಾಸ್ತ್ರಂ ಸ ದೈತ್ಯರಾಟ್ ||೨||**

|| ಶ್ರೀ ಗಣೇಶಾಯ ನಮಃ ||

## ೧೦೨ ನೆಯ ಅಧ್ಯಾಯ

ಬ್ರಹ್ಮಾ :—

ವತ್ಸ, ವ್ಯಾಸ! ಮುಂದಿನ ಸನ್ನಿವೇಶವನ್ನು ಕೇಳು. ತನ್ನ ಸೈನ್ಯವು ಬಹು ಬಗೆಯಿಂದ ನಾಶಹೊಂದಿದುದನ್ನು ಗಮನಿಸಿ ರಾಕ್ಷಸರಾಜನು ಬಹಳ ಖತಿಗೊಂಡನು. ಇನ್ನು ವಿಲಂಬಿಸುವುದು ಸರ್ವಥಾ ಸಮಂಜಸವಲ್ಲವೆಂದು ನಿಶ್ಚಯಿಸಿ ತನ್ನ ಕುದುರೆ ಯನ್ನೇರಿ ಖಡ್ಗವನ್ನು ಕೈಗೆ ತೆಗೆದುಕೊಂಡು ಮಯೂರೇಶನೊಡನೆ ಯುದ್ಧಮಾಡಲು ಮುನ್ನುಗ್ಗಿ ಬಂದನು. ||೧||

ಕಮಲಾಸುರನು ಅಶ್ವಾರೋಹಿಯಾಗಿ ಬರುತ್ತಿರುವುದನ್ನು ನೋಡಿ ದೇವನು ತಾನೂ ತನ್ನ ವಾಹನವಾದ ಶಿಖಂಡಿಯನ್ನೇರಿ ಕುಳಿತು ಎದುರಾಳಿಯನ್ನೆದುರಿಸಲು ಸಿದ್ಧನಾಗಿ ನಿಂತನು, ಪ್ರತಿದ್ವಂದ್ವಿಯೂ ಸನ್ನಾಹಗೊಂಡುದನ್ನು ನೋಡಿ ಕಮಲಾ ಸುರನು ತನ್ನ ಬಿಲ್ಲಿನಲ್ಲಿ ಒಂದು ನಿಶಿತವಾದ ಬಾಣವನ್ನು ಹೂಡಿ ಅದನ್ನು ಸರ್ಪ ಮಂತ್ರದಿಂದ ಅಭಿಮಂತ್ರಿಸಿ ಮಯೂರೇಶನ ಸೇನೆಯ ಮೇಲೆ ಪ್ರಯೋಗಿಸಿದನು. ||೨||

ಜಪ್ತ್ವಾ ಮಂತ್ರಂ ಚ ಶತಧಾ ಭಾರ್ಗವಾದಿಷ್ಟಮಾದರಾತ್ ।
ಸಸರ್ಜ ಪನ್ನಗಾಸ್ತ್ರಂ ತತ್ತೇಜಸಾ ಜಜ್ವಲುರ್ದಿಶಃ ॥೩॥

ಸರ್ಪಸೈನ್ಯೈರವೇಷ್ಟ್ಯಂತ ದೇವಸೇನಾಚರಾ ನರಾಃ ।
ಮೃತಾಃ ಕೇಚಿದ್ಗತಾಃ ಕೇಚಿತ್ಪತಿತಾಶ್ಚಾಪರೇಽವನೌ ॥೪॥

ನನಂದ ದೇವಸ್ತಂ ದೈತ್ಯಮತಿವೀರ್ಯಪರಾಕ್ರಮಮ್ ।

---

ಆಯಾ ಅಸ್ತ್ರಗಳ ಅಭಿಮಾನಿ ದೇವತೆಗಳನ್ನು ಸ್ತುತಿಸಿ ಆಯಾ ದೇವತೆಯು ಆಯಾ ಅಸ್ತ್ರಗಳಲ್ಲಿ ಬಂದು ನೆಲೆಸಿ ಇಷ್ಟಾರ್ಥವನ್ನು ನಡೆಸಿಕೊಡುವಂತೆ ಮಾಡಬಲ್ಲ ಮಂತ್ರಗಳನ್ನು ಕಮಲಾಸುರನಿಗೆ ಸ್ವತಃ ಶುಕ್ರಾಚಾರ್ಯರೇ ಉಪದೇಶಿಸಿದ್ದರು. ಆ ಮಂತ್ರಗಳಲ್ಲಿ ಪ್ರಕೃತೋಪಯೋಗಿಯಾದ ಸರ್ಪಮಂತ್ರವನ್ನು ರಾಕ್ಷಸನು ಆದರ ಭಕ್ತಿಗಳಿಂದ ಒಂದು ನೂರು ಸಲ ಜಪಿಸಿ ಆ ಬಾಣವನ್ನು ಪ್ರಯೋಗಿಸಿದನು. ಕಮಲಾಸುರನು ಜಾತ್ಯಾ ರಾಕ್ಷಸನಾಗಿದ್ದರೂ ಅಸ್ತ್ರವಿದ್ಯೆಯನ್ನು ಅಭ್ಯಸಿಸುವಾಗ ಬಹಳ ನಿಷ್ಠೆಯಿಂದಲೇ ಅವನ್ನು ಪಠಿಸಿ ದೇವತಾನುಗ್ರಹದಿಂದ ಸ್ವಾಧೀನಪಡಿಸಿಕೊಂಡಿದ್ದನು. ಅಂತೆಯೇ ಆ ಅಸ್ತ್ರಗಳು ಮಂತ್ರಪೂತವಾಗಿ ಪ್ರಜ್ವಲಿಸುತ್ತ ದಶದಿಕ್ಕುಗಳನ್ನೂ ಸುಡಲಾರಂಭಿಸಿದವು. ॥೩॥

ರಾಕ್ಷಸನು ಪ್ರಯೋಗಿಸಿದ ಪನ್ನಗಾಸ್ತ್ರವು ದೊಡ್ಡದಾದ ಒಂದು ಸರ್ಪಸೈನ್ಯವನ್ನೇ ಸೃಜಿಸಿತು. ಇದರಿಂದ ಪ್ರಮಥಗಣಗಳೆಲ್ಲ ಆವೃತವಾಗಿ ಅಸಹನೀಯ ಯಾತನೆಗೆ ಗುರಿಯಾದವು. ಸರ್ಪಗಳ ಕಡಿತದಿಂದ ಕೆಲವು ಮಂದಿ ಪ್ರಮಥರು ಮೃತರಾದರು. ಕೆಲವರು ರಣರಂಗದಿಂದ ಓಡಿಯೇ ಹೋದರು. ಮತ್ತೆ ಕೆಲವರಂತೂ ಓಡಲಿಕ್ಕೂ ಕೈಲಾಗದವರಾಗಿ ನೆಲದಲ್ಲಿ ಬಿದ್ದುಬಿಟ್ಟರು. ॥೪॥

ಕ್ಷಣಮಾತ್ರದಲ್ಲೇ ತನ್ನ ಸೇನೆಯನ್ನೆಲ್ಲ ಕ್ಷೋಭಗೊಳಿಸುವಷ್ಟು ಶತ್ರು ಸಮರ್ಥನಾಗಿರುವುದನ್ನು ನೋಡಿ ದೇವನು ನಿಜವಾಗಿಯೂ ಆನಂದಿತನಾದನು. ಶೂರರ ಲಕ್ಷಣವೇ ಇದು. ಈ ಹರ್ಷವನ್ನು ಅಂತರಂಗದಲ್ಲೇ ಬಚ್ಚಿಟ್ಟುಕೊಳ್ಳಲಾರದೇ ಬಾಯಿಯಿಂದಲೂ ಹೀಗೆಂದು ಆಡಿ ಪ್ರಶಂಸಿಸಿದನು.

**ಮಯೂರೇಶ ಉವಾಚ :—**

**ಸಾಧು ಯುದ್ಧ್ಯಸಿ ದೈತ್ಯೇಂದ್ರ ! ನೇದೃಶಃ ಕೋಽಪಿ ವೀಕ್ಷಿತಃ ॥೫॥**

**ಕ ಉವಾಚ :—**

**ಏವಮುಕ್ತ್ವಾ ರಿಪುಂ ದೇವೋ ಗಾರುಡಾಸ್ತ್ರಮವಾಸೃಜತ್ ।**
**ತತಃ ಪಲಾಯಿತಾಃ ಸರ್ಪಾಃ ಪ್ರೋತ್ತಿಷ್ಠಂಶ್ಚ ಚಮೂಚರಾಃ ॥೬॥**

**ಚಕ್ರಾಸ್ತ್ರಮಸೃಜದ್ದೇವೋ ದೈತ್ಯಸೇನಾನಿಬರ್ಹಣಮ್ ।**
**ತೇನ ಕೇಚಿನ್ಮೃತಾ ದೈತ್ಯಾಃ ಕೇಚಿಚ್ಛಿನ್ನಾಂಘ್ರಿಮಸ್ತಕಾಃ ॥೭॥**

---

ಗಣಪತಿ :—

ರಾಕ್ಷಸರಾಜ ! ನಿನ್ನಂತಹ ಪರಾಕ್ರಮಿಯಾದ ಯೋಧನನ್ನು ಇದುವರೆಗೂ ನಾನೆಲ್ಲಿಯೂ ನೋಡಿರುವುದಿಲ್ಲ. ನೀನು ಬಹಳ ಹಿರಿತನವಾಗಿ ಹೋರಾಡುತ್ತಲಿರುವಿ. ಭಲೆ, ನನಗೆ ಬಹಳ ಹರ್ಷ ಉಂಟಾಗಿದೆ. ॥೫॥

ಬ್ರಹ್ಮಾ :—

ಹೀಗೆ ಹೇಳಿ ತಾನೊಂದು ಬಾಣವನ್ನು ಬಿಲ್ಲಿನಲ್ಲಿ ಹೂಡಿ ಅದರಲ್ಲಿ ಸರ್ಪವಿದ್ವೇಷಿಯಾದ ಗರುತ್ಮಂತನ ಶಕ್ತಿ-ಸಾಹಸಗಳು ಸಂಕ್ರಾಂತಿಗೊಳ್ಳುವಂತಹ ಮೂಲಮಂತ್ರವನ್ನು ಜಪಿಸಿ, ರಾಕ್ಷಸನ ಮೇಲೆ ಅದನ್ನು ಪ್ರಯೋಗಿಸಿದನು. ಕಮಲಾಸುರನು ಪ್ರಯೋಗಿಸಿದ ಸರ್ಪಾಸ್ತ್ರದಿಂದ ಹುಟ್ಟಿ ಬಂದ ಬಗೆಬಗೆಯ ಸರ್ಪಗಳನ್ನೆಲ್ಲ ದೇವನು ಬಿಟ್ಟ ಈ ಗಾರುಡಾಸ್ತ್ರವು ಧ್ವಂಸಗೊಳಿಸಿಬಿಟ್ಟಿತು. ಅಸ್ತ್ರದ ಆಘಾತಕ್ಕೆ ಸಿಕ್ಕದೆ ನುಣಿಚಿಕೊಂಡಿದ್ದ ಹಾವುಗಳೆಲ್ಲ ಬಿಲ ಸಿಕ್ಕಿದಲ್ಲೆಲ್ಲ ಓಡುತ್ತ ಹೋಗಿ ಸೇರಿಕೊಂಡವು. ಸರ್ಪಗಳ ಹಿಡಿತ ತಪ್ಪಿದೊಡನೆಯೇ ವಿಷವೇಗದಿಂದ ಬೆಂದು ಬಳಲಿ ಹೋಗಿದ್ದ ಪ್ರಮಥರೆಲ್ಲ ಮತ್ತೆ ಎದ್ದು ಕುಳಿತುಕೊಳ್ಳಲಾರಂಭಿಸಿದರು. ॥೬॥

ಸುದರ್ಶನದಂತೆ ಸುತ್ತಲೂ ಭ್ರಮಿಸುತ್ತ ಶತ್ರುಗಳನ್ನು ತುಂಡರಿಸಬಲ್ಲ ಒಂದು ಅಸ್ತ್ರವನ್ನು ಮಂತ್ರಶಕ್ತಿಯಿಂದ ನಿರ್ಮಿಸಿ, ಅದನ್ನು ಗಣಪತಿಯು ದೈತ್ಯಸೇನೆಯ ಮೇಲೆ ಪ್ರಯೋಗಿಸಿದನು. ಆ ಅಸ್ತ್ರದ ಅಲಗುಗಳಿಗೆ ಸಿಲುಕಿದ ದೈತ್ಯರನೇಕರ ಶಿರಸ್ಸುಗಳು ಕತ್ತರಿಸಿ ನೆಲಕ್ಕೆ ಬಿದ್ದವು. ಕೆಲವರು ಕೈ-ತಲೆಚಿಪ್ಪುಗಳನ್ನು ಕಳೆದುಕೊಂಡರು. ॥೭॥

**ವಿಭಿನ್ನಜಾನು-ಜಂಘಾಶ್ಚ ಛಿನ್ನಗುಲ್ಫಾಃ ಪರೇಽಪತನ್ ।**
**ಗರ್ಜಂತಿ "ಧಾವ, ಧಾವೇ"ತಿ "ಪಿತರ್ಮಾತಃ ಸುತೇ"ತಿ ಚ ||೮||**

**ಮುಕ್ತಿಂ ಯಾಂತಿ ಮಯೂರೇಶಂ ದೃಷ್ಟ್ವಾ ಪ್ರಾಣಾನ್ ಜಹುಶ್ಚ ಯೇ ।**
**ಏವಂ ಸೇನಾ ನಿರಸ್ತಾಸ್ಯ ತತೋ ದೈತ್ಯೋ ರುಷಾದ್ರವತ್ ||೯||**

**ಖಡ್ಗಪಾಣೀ ರುಷಾ ಗರ್ಜನ್ ವೇಗೇನಾಯಾದ್ಗಜಾನನಮ್ ।**
**ತಥಾವಿಧಂ ರಿಪುಂ ದೃಷ್ಟ್ವಾ ಪರಶುಂ ಜಗೃಹೇ ವಿಭುಃ ||೧೦||**

ಜಾನು, ಜಂಘೆ ಪ್ರದೇಶಗಳು ಕತ್ತರಿಸಿಹೋದಾಗ ಗೋಳಾಡುತ್ತ ಕೆಳಕ್ಕೆ ಬಿದ್ದವರೆಷ್ಟೋ ಜನರು. ಗುಲ್ಫಗಳನ್ನು ಮುರಿದುಕೊಂಡವರು ನಿಂದಿರಲಾರದೇ ಕುಕ್ಕರಿಸಿದರು. "ಓಡಿ, ನಿಲ್ಲಬೇಡಿ" ಎಂತಲೂ, "ಅಪ್ಪ, ಅಮ್ಮ, ಮಗುವೇ" ಎಂತಲೂ ಆಕ್ರಂದಿಸುವವರು ಗಣನೆಗೇ ಸಿಕ್ಕುತ್ತಿರಲಿಲ್ಲ. ||೮||

ಭಗವಾನ್ ಮಯೂರೇಶನನ್ನು ಕಣ್ಣು ತುಂಬ ನೋಡಿ ಅವನ ಹೊಡೆತಕ್ಕೆ ಸಿಲುಕಿ ಸತ್ತವರೆಲ್ಲ ಮುಕ್ತಿ ಸಾಮ್ರಾಜ್ಯವನ್ನು ಪಡೆದರು. ಈ ರೀತಿಯಾಗಿ ಕಮಲಾಸುರನ ಸೇನೆಯು ಚಲ್ಲಾಪಿಲ್ಲಿಯಾಗಿ ಹೋಯಿತು. ಇದನ್ನು ನೋಡಿದ ಕೂಡಲೇ ರಾಕ್ಷಸೇಶ್ವರನಿಗೆ ಮಿತಿಮೀರಿ ಕೋಪ ಉಂಟಾಯಿತು. ಓಡೋಡುತ್ತ ಮುಂದೆ ಬಂದನು. ||೯||

ತನ್ನ ಕೈಯಲ್ಲಿದ್ದ ನೀಳವೂ ನಿಶಿತವೂ ಆದ ಚಂದ್ರಹಾಸವನ್ನು ಹಿಡಿದು ಚಿತ್ರವಿಚಿತ್ರವಾಗಿ ತಿರುಗಿಸಲಾರಂಭಿಸಿದನು. ಕೋಪವು ಕ್ಷಣಕ್ಷಣಕ್ಕೂ ವೃದ್ಧಿಯಾಗುತ್ತಲೇ ಇದ್ದುದರಿಂದ ಪದೇ ಪದೇ ಘಟ್ಟಿಯಾಗಿ ಗರ್ಜಿಸುತ್ತಿದ್ದನು. ಧಾವಿಸುತ್ತ ಬಂದ ದೈತ್ಯನು ಗಜಾನನನನ್ನು ಎದುರಿಸಿದನು. ತನ್ನ ಶತ್ರು ಅತಿ ಸಾಹಸದಿಂದ ತನ್ನನ್ನು ಅತಿಕ್ರಮಿಸುವುದಕ್ಕಾಗಿ ಬಂದುದನ್ನು ಕಂಡು ವಿಭು, ಗಣಪತಿಯು ತನ್ನ ಆಯುಧಗಳಲ್ಲಿ ಒಂದಾದ ಖಂಡಪರಶುವನ್ನು ಕೈಯಿಗೆ ತೆಗೆದುಕೊಂಡನು. ||೧೦||

ಯಯೌ ದೈತ್ಯಂ ಮಹಾವೇಗಮುಸೃಜತ್ಪರಶುಂ ಚ ತಮ್ ।
ಸ ದಹಂಸ್ತೇಜಸಾ ವ್ಯೋಮ ದಿಶಃ ಪಕ್ಷಿಗಣಾನಪಿ ॥೧೧॥

ಅಚ್ಛಿನದ್ದೈತ್ಯಹಸ್ತಂ ಚ ಖಡ್ಗಂ ಚ ಶತಧಾ ಜವಾತ್ ।
ಸ ಚಾಪಂ ಸಹಸಾ ಗೃಹ್ಯ ಸಜ್ಜಂ ಕೃತ್ವಾ ಶರಾನ್ ಬಹೂನ್ ॥೧೨॥

ಅಸಂಖ್ಯಾತಾನ್ ಬಲಾಚ್ಛಿದ್ಧ್ಯನ್ ಛಾದಯಾಮಾಸ ಸೈನಿಕಾನ್ ।
ಗಗನಂ ಚ ದಿಶಃ ಸರ್ವಾನ್ ಜಗರ್ಜ ಘನನಿಃಸ್ವನಃ ॥೧೩॥

ಶತ್ರುವಿನ ಮೇಲೆ ನುಗ್ಗಿಹೋಗಿ ಅದನ್ನು ಅವನ ಮೇಲೆ ರಭಸದಿಂದ ಎಸೆದನು. ದೇವನ ಹಸ್ತದಲ್ಲಿದ್ದ ಪರಶು ಸಾಮಾನ್ಯವಾದುದಲ್ಲ. ಅದರ ಹೊಳಪು ಎಲ್ಲರ ಕಣ್ಣುಗಳನ್ನೂ ಕುಕ್ಕುವಂತಹದು. ಅದರ ತೈಕ್ಷ್ಣ್ಯವೂ ಸಹ ಅತ್ಯಮೋಘವಾದುದು. ಅದು ತನ್ನ ತೇಜಸ್ಸಿನಿಂದ ವಿಸ್ತಾರವಾದ ಬಯಲನ್ನೂ, ಅಲ್ಲಿ ಉಡ್ಡಾಣಮಾಡುವ ಹಕ್ಕಿಗಳನ್ನೂ ದಹಿಸುತ್ತ ಮುಂದುವರಿದು ಹೋಯಿತು. ದಿಕ್ಕುಗಳೆಲ್ಲ ಧಗಧಗ ಉರಿಯಲಾರಂಭಿಸಿದವು. ॥೧೧॥

ಬಹು ವೇಗವಾಗಿ ಬಂದ ಪರಶು ಮೊದಲು ದೈತ್ಯನ ಮುಂಗೈಯ್ಯನ್ನು ಕತ್ತರಿಸಿತು. ಇದರ ವೇಗಕ್ಕೆ ಸಿಲುಕಿದ ರಾಕ್ಷಸರಾಜನ ಖಡ್ಗವು ನೂರಾರು ತುಂಡುಗಳಾಗಿ ನೆಲದಲ್ಲಿ ಬಿದ್ದಿತು. ಕಣ್ಣು ಎವೆ ಇಕ್ಕುವಷ್ಟರಲ್ಲೇ ಇಷ್ಟೆಲ್ಲ ಅದ್ಭುತವು ನಡೆದುಹೋಯಿತು. ಕಮಲಾಸುರನು ಅನಿರೀಕ್ಷಿತವಾದ ಈ ಘಟನೆಯಿಂದ ಚಕಿತನಾದರೂ ಸ್ವಲ್ಪವೂ ಎದೆಗೆಡದೇ ತನ್ನ ಧನುಸ್ಸಿಗೆ ಹೆದೆಯನ್ನೇರಿಸಿ ಮೊಂಡು ಕೈಯಿಂದಲೇ ಶತ್ರುವಿನ ಮೇಲೆ ಅನೇಕ ನಿಶಿತ ಬಾಣಗಳನ್ನು ಪ್ರಯೋಗಿಸಿದನು. ॥೧೨॥

ತನಗೆ ಬಲವೆಷ್ಟಿದೆಯೋ ಅದನ್ನೆಲ್ಲ ಒಮ್ಮೆಲೇ ಉಪಯೋಗಿಸಿ ಶತ್ರುಗಳ ಮೇಲೆ ಲೆಕ್ಕವಿಲ್ಲದಷ್ಟು ಬಾಣಗಳನ್ನು ಬಿಡುತ್ತ ದೇವನ ಸೈನಿಕರನ್ನೆಲ್ಲ ಮುಚ್ಚಿಹಾಕಿದನು. ಎಲ್ಲಿ ನೋಡಿದರೂ ರಾಕ್ಷಸನ ಬಾಣಗಳು ಕಂಡುಬರುತ್ತಲಿದ್ದವು. ಪಕ್ಷಿಗಳಿಗೆ ಬದಲು ಬಾಣಗಳೇ ಗಗನದಲ್ಲಿ ಹಾರಾಡಿದವು. ಶತ್ರುವಿರುವ ಎಡೆಯಾಗಲಿ ಅಥವಾ ನಿರ್ಜನ ಪ್ರದೇಶವಾಗಲಿ ಎಲ್ಲ ಕಡೆಗೂ ರಾಕ್ಷಸನು ಬಾಣಗಳನ್ನು ಬೀಸಿಬಿಟ್ಟಿದ್ದನು. ಮತ್ತು

**ಶರಾಘಾತೇನ ಬಲವಾನ್ ನಿರ್ಮಾರ್ಯ ಶರಪಂಜರಮ್ ।**
**ಅಂಧಕಾರೇ ಬಾಣಮಯೇ ನಾಜ್ಞಾಸೀತ್ಕೋಽಪಿ ಕಂಚನ ॥೧೪॥**

**ಮಯೂರೇಶೋಽಥ ಶೀಘ್ರಂ ತದಶ್ವಂ ಭೂಮಾವಪಾತಯತ್ ।**
**ತತೋಽಂತರಿಕ್ಷೇ ತಿಷ್ಠನ್ ಸ ಪ್ರೋಚೇ ಚ ಗಣನಾಯಕಮ್ ॥೧೫॥**

**ದೈತ್ಯ ಉವಾಚ :—**

**ಅಶ್ವೋ ನಿಪಾತಿತಸ್ತಸ್ಯ ಪಶ್ಯ ಮೇ ಕೌತುಕಂ ಮಹತ್ ।**
**ಶಿಖಂಡಿನಂ ಹನಿಷ್ಯಾಮಿ ಪಶ್ಯತಸ್ತೇ ಗುಣೇಶ್ವರ ! ॥೧೬॥**

---

ಸಂವರ್ತಾದಿ ಮಹಾಮೇಘಗಳು ಗುಡುಗುವಂತೆ ಗಟ್ಟಿಯಾಗಿ ಗರ್ಜಿಸಿ ಎಲ್ಲರ ಎದೆಗಳನ್ನೂ ನಡುಗಿಸಿದನು. ॥೧೩॥

ಮಹಾಬಲಶಾಲಿಯಾದ ಕಮಲಾಸುರನು ಬಾಣಗಳ ಆಘಾತದಿಂದ ಶತ್ರುಗಳನ್ನೆಲ್ಲ ಹಿಮ್ಮೆಟ್ಟಿಸಿ ಅವರು ಅತ್ತಿತ್ತ ಓಡಿಹೋಗದಂತೆ ತಡೆಗಟ್ಟಲು ಒಂದು ಶರಪಂಜರವನ್ನೇ ನಿರ್ಮಿಸಿದನು. ಬಾಣಗಳು ಚಾಪೆಯಂತೆ ಒತ್ತಾಗಿ ಹೆಣೆದಂತಾದುದರಿಂದ ಬೆಳಕಿನ ಒಂದು ಕಿರಣಕ್ಕೂ ಆ ಚಪ್ಪರದ ಒಳಕ್ಕೆ ಪ್ರವೇಶಿಸಲು ಅವಕಾಶವಿರಲಿಲ್ಲವಾಗಿ ಎಲ್ಲ ಕಡೆಯನ್ನೂ ಗಾಢಾಂಧಕಾರವು ಆವರಿಸಿಬಿಟ್ಟಿತು. ಒಬ್ಬರ ಮುಖವು ಮತ್ತೊಬ್ಬರಿಗೆ ಕಾಣುವುದಾಗಲೀ, ಅಥವಾ ಅಲ್ಲೇನು ನಡೆಯುತ್ತಲಿದೆ ಎಂಬುದಾಗಲೀ ಯಾರಿಗೂ ಗೋಚರವಾಗುತ್ತಿರಲಿಲ್ಲ. ॥೧೪॥

ಆಗ ಮಯೂರೇಶನು ಮುನ್ನುಗ್ಗಿ ಬಂದು ಕಮಲಾಸುರನು ಏರಿ ಕುಳಿತಿದ್ದ ಅಶ್ವವನ್ನು ಒಮ್ಮೆಲೇ ಕೊಂದು ನೆಲಕ್ಕೆ ಕೆಡಹಿದನು. ಅನಿರೀಕ್ಷಿತವಾಗಿ ಈ ಘಟನೆಯೊದಗಲು ಇದರ ಸೂಕ್ಷ್ಮವನ್ನರಿತ ದೈತ್ಯನು ತತ್ಕ್ಷಣವೇ ಗಗನಕ್ಕೆ ನೆಗೆದು ನಿಂತು ಗಣನಾಯಕನನ್ನು ಸಂಬೋಧಿಸಿ ಹೀಗೆಂದು ನುಡಿದನು. ॥೧೫॥

ಕಮಲಾಸುರ :—

ಗುಣೇಶ್ವರ ! "ಇವನ ಕುದುರೆಯನ್ನು ಕೆಡಹಿಬಿಟ್ಟೆ. ಇನ್ನು ಮೇಲೆ ಇವನು ಏನನ್ನು ಮಾಡಿಯಾನು ?" ಎಂದು ವೃಥಾ ಹೆಮ್ಮೆ ಪಡಬೇಡ. ನಾನು

ಕ ಉವಾಚ :—

ಉಭಯತ್ರ ನಿಷಂಗಸ್ಥಾನ್ ಶರಾನ್ ಭೂಮೌ ವ್ಯಚಿಕ್ಷಿಪತ್ ।
ಚಾಪಮಾಕೃಷ್ಯ ಕರ್ಣಾಂತಂ ಚಿಕ್ಷೇಪ ಶರಸಂಚಯಾನ್ ॥೧೭॥

ಮಯೂರೇಶಸ್ಯ ಸೇನಾಯಾಂ ಮಾರಯನ್ ಸರ್ವಸೈನಿಕಾನ್ ।
ವವರ್ಷ ಶರಜಾಲಾನಿ ವರ್ಷಾಕಾಲೇ ಘನಾ ಯಥಾ ॥೧೮॥

ಕಿಯಂತೋ ಭಿನ್ನಸರ್ವಾಂಗಾಃ ಕೇಚಿತ್ಪ್ರಾಣಾನ್ ಜಹುಃ ಸುರಾಃ ।

---

ಬೇರೆಡೆ ದೃಷ್ಟಿಯನ್ನಿರಿಸಿದಾಗ ನೀನು ನನ್ನ ಕುದುರೆಯನ್ನು ಕೊಂದಿರಬಹುದು. ಆದರೆ ನನ್ನ ಹಸ್ತಲಾಘವವನ್ನಾದರೂ ಒಮ್ಮೆ ನೋಡು. ನೀನು ಎಷ್ಟೇ ಜಾಗರೂಕತೆಯಿಂದ ಸಂರಕ್ಷಿಸುತ್ತಲಿದ್ದರೂ ನಿನ್ನ ವಾಹನವಾದ ಈ ನವಿಲನ್ನು ನಿನ್ನ ಕಣ್ಣು ಮುಂದೆಯೇ ಕತ್ತರಿಸಿ ಚಲ್ಲುವೆನು. ॥೧೬॥

ಬ್ರಹ್ಮ:—

ರಾಕ್ಷಸನು ತನ್ನ ಬೆನ್ನಿನ ಎರಡು ಪಾರ್ಶ್ವಗಳಲ್ಲೂ ಬಾಣಗಳಿಂದ ತುಂಬಿದ ಬತ್ತಳಿಕೆಗಳನ್ನು ಬಿಗಿದು ಕಟ್ಟಿಕೊಂಡಿದ್ದನು. ಅವೆರಡರಿಂದಲೂ ಬಾಣಗಳನ್ನು ಹಿರಿದೆಳೆಯುತ್ತ ಬಿಲ್ಲಿನಲ್ಲಿ ಸಂಧಾನಮಾಡಿ ಅದರ ಹುರಿಯನ್ನು ಕಿವಿಯವರೆಗೂ ಎಳೆಯುತ್ತ ಸವ್ಯಾಪಸವ್ಯ ಹಸ್ತಗಳಿಂದ ಪ್ರಯೋಗಿಸಲಾರಂಭಿಸಿದನು. ಒಮ್ಮೆ ಇವನು ಬಾಣವನ್ನು ಪ್ರಯೋಗಿಸಿದನೆಂದರೆ ಅದು ಬಿಲ್ಲನ್ನು ಬಿಟ್ಟು ಹೊರಕ್ಕೆ ಹೊರಡುವಾಗ ಒಂಟಿಯಾಗಿದ್ದರೂ ಮಂತ್ರಪ್ರಭಾವದಿಂದ ನೂರು, ಸಾವಿರಗಳಾಗಿ ಮಾರ್ಪಟು ಶತ್ರುಗಳ ಮೇಲೆ ಹೋಗಿ ಬೀಳುವುದು. ॥೧೭॥

ದೈತ್ಯನ ಬಾಣಗಳಿಗೆ ಬಲಿಯಾದ ದೇವ ಸೈನಿಕರು ಬಿರುಗಾಳಿಗೆ ಸಿಕ್ಕ ತರಗಿನಂತೆ ಉದುರುದುರಿ ನೆಲಕ್ಕೆ ಬೀಳತೊಡಗಿದರು. ವರ್ಷಾಕಾಲದಲ್ಲಿ ಮೇಘಗಳು ಏಕಪ್ರಕಾರವಾಗಿ ಜಲಧಾರೆಯನ್ನು ಸುರಿಸುವಂತೆ ರಾಕ್ಷಸನು ಬಾಣಗಳ ಮಳೆಯನ್ನು ಶತ್ರುಗಳ ಮೇಲೆ ಕರೆಯಲಾರಂಭಿಸಿದನು. ॥೧೮॥

ದೇಹದ ಸಕಲಾವಯವಗಳನ್ನೂ ಭಂಗಪಡಿಸಿಕೊಂಡವರು ಲೆಕ್ಕಕ್ಕೇ ಹತ್ತಲೊಲ್ಲರು. ಕೆಲವರಂತೂ ಮೃತರೇ ಆಗಿಹೋದರು. ತನ್ನ ಸೇನಾದಳದಲ್ಲಿ ವೀರ

ಏವಂ ನಶ್ಯತ್ಸು ವೀರೇಷು ಮಯೂರೇಶೋ ರುಷಾನ್ವಿತಃ　　||೧೯||

ಕಮಲಾಸುರಬಾಣೈಸ್ತು ವಿದ್ಧ್ಯಂಸ್ತ್ಯಕ್ತ್ವಾ ಶಿಖಂಡಿನಮ್ ।
ಪಾಶಂ ಕರೇಣ ಜಗ್ರಾಹ ತೋಲಯಿತ್ವಾ ಸ ಸಾದರಮ್　　||೨೦||

ಜಗರ್ಜ ನಾದರ್ಯ್ವ್ಯೋಮ ತತ್ಯಾಜ ಮಹಸಾಯುತಮ್ ।
ಸ ಪಾತರ್ಯ್ದೈತ್ಯಗಣಾರ್ನ್ ದದಾಹ ರಿಪುಸೈನಿಕಾರ್ನ್　　||೨೧||

ಕಂಠೇ ಚ ನ್ಯಪತತ್ತಸ್ಯ ದೈತ್ಯಸೇನಾಧಿಪಸ್ಯ ಹ ।

---

ರೆಲ್ಲ ನಾಶವಾಗುತ್ತಲಿರುವುದನ್ನು ನೋಡಿ ಮಯೂರೇಶನಿಗೆ ಸಹಿಸಲಾರದಷ್ಟು ಸಿಟ್ಟು ಬಂದಿತು.　||೧೯||

ಈ ಗದ್ದಲದಲ್ಲಿ ಕಮಲಾಸುರನು ಪ್ರಯೋಗಿಸಿದ ಬಾಣಗಳು ಗಣಪತಿಯ ದೇಹಕ್ಕೂ ಅಲ್ಲಲ್ಲಿ ನೆಟ್ಟು ಗಾಯಗೊಳಿಸಿದ್ದವು. ಇದಾವುದನ್ನೂ ಲಕ್ಷ್ಯಕ್ಕೇ ತಾರದೆ ತನ್ನ ವಾಹನವಾದ ಮಯೂರವನ್ನು ಅಲ್ಲಿಯೇ ಬಿಟ್ಟು ತಾನು ನೆಲದ ಮೇಲೆ ನಿಂತನು. ಮತ್ತು ತನ್ನ ದಿವ್ಯಾಯುಧಗಳಲ್ಲಿ ಒಂದಾದ ಕಾಲಪಾಶದಂತಿರುವ ಪಾಶವನ್ನು ಕೈಯಿಗೆ ತೆಗೆದುಕೊಂಡನು ಅದನ್ನು ಹೇಗೆ ಎಸೆದರೆ ಅದು ನೇರವಾಗಿ ಹೋಗಿ ಕಮಲಾಸುರನ ಕಂಠಕ್ಕೆ ಬೀಳಬಹುದೋ ಅದನ್ನು ಮನಸ್ಸಿನಲ್ಲೇ ನಿಶ್ಚಯಿಸಿ ತದನುಗುಣವಾಗಿ ಒಮ್ಮೆ ಪಾಶವನ್ನು ಬೀಸಿ ನೋಡಿದನು. ಅತ್ಯದ್ಭುತ ಸಾಹಸವುಳ್ಳ ಆ ಪಾಶಾಯುಧದ ಬಗ್ಗೆ ಗಣಪತಿಗೆ ಬಹಳ ಅಭಿಮಾನವೆನಿಸಿತಾಗಿ ಒಮ್ಮೆ ಅದನ್ನು ಆದರದಿಂದ ನೋಡಿದನು.　||೨೦||

ಒಡನೆಯೇ ಒಂದು ಸಲ ಸಿಂಹದಂತೆ ಗರ್ಜಿಸಿದನು. ಆ ಗರ್ಜನೆಯನ್ನು ಅನುಮೋದಿಸಿ ತಾನೂ ಪ್ರತ್ಯುತ್ತರವನ್ನು ಕೊಟ್ಟಿತೋ ಎಂಬಂತೆ ನಭೋಮಂಡಲವೂ ಪ್ರತಿಧ್ವನಿಯನ್ನು ಮಾಡಿತು. ಅನಂತರ ದೇವನು ಮಹಾಮಹಿಮೆಯುಳ್ಳ ಆ ಪಾಶಾಯುಧವನ್ನು ಒಮ್ಮೆ ಬೀಸಿ ಕಮಲಾಸುರನ ಕಡೆಗೆ ಗುರಿನೋಡಿ ಎಸೆದನು. ಆ ಪಾಶವೋ ತನ್ನ ಲಕ್ಷ್ಯವಾದ ಕಮಲಾಸುರನ ಕಂಠವನ್ನು ಮುಟ್ಟುವುದರೊಳಗಾಗಿಯೇ ಮಾರ್ಗದಲ್ಲಿ ಸಿಕ್ಕ ಎಲ್ಲ ಸೈನಿಕರನ್ನೂ ಸುಡುತ್ತಲೇ ಮುಂದುವರೆಯಿತು.　||೨೧||

ಅವಾಂತರ ಕೆಲಸಗಳೆಲ್ಲ ಮುಗಿದಂತಾದ ಬಳಿಕ ಅಂತರಿಕ್ಷಕ್ಕೆ ಹಾರಿಹೋಗಿ

ರುರೋಧ ಶ್ವಾಸಮಸ್ಯಾಸೌ ದೈತ್ಯೋ ರೂಪಾಂತರಂ ಶ್ರಿತಃ ||೨೨||

ಮೂರ್ಧ್ನಾ ಸಂಛಾದಯಾಮಾಸ ತತ್ಕ್ಷಣಾದ್ರವಿಮಂಡಲಮ್ ।
ಅಂಧಕಾರೇ ಘೋರತಮೇ ನ ಪ್ರಾಜ್ಞಾಯತ ಕಿಂಚನ ||೨೩||

ಉವಾಚ ಸಂಮುಖೋ ಭೂತ್ವಾ ಮಯೂರೇಶಂ ರುಷಾನ್ವಿತಃ ।
ದೈತ್ಯ ಉವಾಚ :—
ಮಯಾ ಕಿಂ ಯುದ್ಧ್ಯಸೇ ಬಾಲ ! ಗಚ್ಛ ಮಾತುಃ ಸ್ತನಂ ಪಿಬ ||೨೪||

ದೈತ್ಯರಾಜನ ಕಂಠವನ್ನು ಸುತ್ತುವರೆದು ಬಲವಾಗಿ ಬಿಗಿಯಲಾರಂಭಿಸಿತು. ದೈತ್ಯ ಸೇನಾಧಿಪತಿಯ ಆಗಿನ ದುಃಸ್ಥಿತಿಯನ್ನು ವ್ಯಾಸ! ಏನೆಂದು ವರ್ಣಿಸಲಿ? ಅವನ ಉಸಿರೇ ನಿಂತು ಹೋಗಿ ತಟ–ಪಟ ಒದೆದಾಡಿದನು. ಆದರೂ ಅವನು ಪ್ರಮಾದಿ (Careless or Over-confident) ಯಾಗಿರಲಿಲ್ಲ. ಉಸಿರಾಡುವುದು ಮಂದವಾಗಲಾರಂಭಿಸಿದೊಡನೆಯೇ ಸ್ವಲ್ಪವೂ ವಿಲಂಬಮಾಡದೇ ಶ್ವಾಸಧಾರಣೆಯ ಮೂಲಕ ಆ ದೇಹವನ್ನು ಬಿಟ್ಟು ಈಚೆಗೆ ಬಂದು ಮಾಯೆಯಿಂದ ಮತ್ತೊಂದು ಮಹದಾಕೃತಿಯ ರೂಪವನ್ನು ಸೃಜಿಸಿ ಅದರಲ್ಲಿ ಹೊಕ್ಕು ನಿಂತನು. ||೨೨||

ಅವನು ಸೃಜಿಸಿದ ರೂಪ ಬಹಳ ಭಯಾನಕವಾದುದು. ಭೂಮ್ಯಂತರಿಕ್ಷಗಳನ್ನೂ ವ್ಯಾಪಿಸಿ ನಿಂದಿದ್ದಿತು. ರಾಕ್ಷಸನು ತನ್ನ ತಲೆಯನ್ನು ರವಿಮಂಡಲಕ್ಕೆ ಎದುರಾಗಿ ನಿಲ್ಲಿಸಿ ಅವನನ್ನು ಸಂಪೂರ್ಣ ಮುಚ್ಚಿಬಿಟ್ಟನು. ಜಗಜ್ಜ್ಯೋತಿಯೇ ಮರೆಯಾದ ಬಳಿಕ ಬೆಳಕೆಲ್ಲಿಂದ ಬರಬೇಕು? ರಣಾಂಗಣವೆಲ್ಲವನ್ನೂ ಕಗ್ಗತ್ತಲು ಆವರಿಸಿ ತಾನೇ ತಾನಾಗಿ ನಿಂತಿತು. ಹೆಪ್ಪುಗಟ್ಟಿದಂತಿದ್ದ ಆ ಕಪ್ಪಿನಲ್ಲಿ ಎಲ್ಲಿ ಏನು ನಡೆಯುತ್ತಲಿದೆ ಎಂಬುದು ಸಹ ಯಾರಿಗೂ ತಿಳಿಯುತ್ತಲಿರಲಿಲ್ಲ. ||೨೩||

ಆಗ ರಾಕ್ಷಸನು ಮಯೂರೇಶನನ್ನು ಹಂಗಿಸುವುದಕ್ಕಾಗಿ ಅವನೆದುರು ಬಂದು ನಿಂತು ಕೋಪದಿಂದಲೂ ಕೊಂಕು ಧ್ವನಿಯಿಂದಲೂ ಹೀಗೆಂದು ಮಾತನಾಡಿದನು.

ಕಮಲಾಸುರ ;—

ಏಯ್, ಹುಚ್ಚು ಹುಡುಗ! ನನ್ನೊಡನೆ ಏತಕ್ಕೋ, ಯುದ್ಧಮಾಡಲು ಬಂದೆ?

ರಮಸ್ವ ಬಾಲಕೈರ್ನೋ ಚೇನ್ಮರಿಷ್ಯಸಿ ಮಮಾಗ್ರತಃ ।
ಮಮ ಚಾಕ್ರಂದನೇನ್ನೈವ ಕಂಪತೇ ಭುವನತ್ರಯಮ್ ॥೨೫॥

ಪಾದೇ ಭೂಮೌ ಸ್ಥಾಪ್ಯಮಾನೇ ಶೇಷೋಽಪಿ ಚಲತೇಹ್ಯಧಃ ।
ಮಮ ಮುಷ್ಟಿಪ್ರಹಾರೇಣ ಚೂರ್ಣೀಭೂತಾ ಮಹಾಚಲಾಃ ॥೨೬॥

ನಖಾಗ್ರೇಣ ಶಿರಸ್ತೇಽಹಂ ಗಮಯಿಷ್ಯೇ ರಸಾತಲಮ್ ।

---

ಹೋಗು, ತಾಯಿಯ ಮಡುಲಿನಲ್ಲಿ ಬೆಚ್ಚಗೆ ಮಲಗಿಕೊಂಡು ಸ್ತನ್ಯವನ್ನು ಪಾನಮಾಡು. ಯುದ್ಧವೆಂದರೆ ಮಕ್ಕಳಾಟವೆಂದು ತಿಳಿದೆಯ ? ॥೨೪॥

ನಿನ್ನ ಸಂಗಡಿಗರಾದ ಉಡಾಳ ಸ್ವಭಾವದ ಬಾಲಕರು ನಿನಗಾಗಿ ಕಾದಿರ ಬಹುದು. ಓಡು, ಅವರೊಡನೆ ಆಟವಾಡು. ನನ್ನ ಬುದ್ಧಿವಾದವನ್ನು ಕೇಳದೇ ಅಧಿಕ ಪ್ರಸಂಗತನದಿಂದ ಏನಾದರೂ ಒಂದು ಕ್ಷಣಕಾಲ ಇಲ್ಲಿಯೇ ನಿಂತೆಯೋ? ಸರಿ, ನಿನ್ನ ಅವತಾರ ಪರಿಸಮಾಪ್ತಿಗೊಂಡಿತೆಂದೇ ಭಾವಿಸು. ನಾನೆಂದರೇನು? ನನ್ನೆದುರು ನೀನು ನಿಲ್ಲೋಣವೆಂದರೇನು ? ಯಾರಾಡುವ ಮಾತು. ಪಾಪ, ನೀನಿನ್ನೂ ಎಳೆಯ ಹುಡುಗ, ಎಲ್ಲೋ ಹುಡುಗರೊಂದಿಗೆ ಕುಸ್ತಿಯಾಡುವಾಗ ನಿಮ್ಮ ತಂದೆ-ತಾಯಿಯರ ದಾಕ್ಷಿಣ್ಯಕ್ಕೊ ಅಥವಾ ನಿನಗೆ ಉತ್ತೇಜನವನ್ನೀಯಬೇಕೆಂದೋ ಅಂತೂ ನೀನೇ ಜಯ ಶಾಲಿಯಾಗುವಂತೆ ಹುಡುಗರು ಮಾಡಿರಬಹುದು. ಅದನ್ನೇ ನಂಬಿ " ಯಾರೊಡನೆ ಯಾದರೂ ಸರಿ, ಹೋರಾಡಿ ಗೆಲ್ಲುವೆನು " ಎಂದು ಮಾತ್ರ ಹುಂಬತನ ಮಾಡಬೇಡ. ನಾನು ಸಾಮಾನ್ಯನಲ್ಲ. ಒಮ್ಮೆ ನಾನು ಗರ್ಜಿಸಿದೆನೆಂದರೆ ತ್ರಿ-ಭುವನಗಳೂ ತತ್ತರಿಸಿ ಹೋಗುವುವು. ॥೨೫॥

ನಾನು ನಡೆಯುವಾಗ ಎಲ್ಲೆಲ್ಲಿ ಹೆಜ್ಜೆಗಳನ್ನಿಡುವೆನೋ ಆ ಭಾಗದಲ್ಲೆಲ್ಲ ಅದುಮಿ ದಂತಾಗಿ ಭೂ-ಭಾರವನ್ನು ಹೊತ್ತು ನಿಂತಿರುವ ಆದಿಶೇಷನೂ ಸಹ ತನ್ನ ಹೆಡೆಗಳನ್ನು ಬಗ್ಗಿಸುತ್ತಾನೆ. ವಜ್ರದಂತಿರುವ ನನ್ನ ಮುಷ್ಟಿಪ್ರಹಾರದಿಂದ ಕುಲಪರ್ವತಗಳೆಷ್ಟೋ ಪುಡಿ-ಪುಡಿಯಾಗಿ ಹೋಗಿವೆ. ॥೨೬॥

ಇಂತಹ ನನಗೆ ನಿನ್ನನ್ನು ಕೊಲ್ಲುವುದೆಂದರೆ ನಿರಾಯಾಸವಾದ ಕೆಲಸ. ಕೇವಲ ನನ್ನ ಈ ಉಗುರಿನ ತುದಿಯಿಂದಲೇ ನಿನ್ನ ಶಿರವನ್ನು ಚಿವುಟಿ ಬಿಸುಟೇನು.

**ಕ ಉವಾಚ :—**

**ಏವಮಾಕರ್ಣ್ಯ ದುರ್ಬುದ್ಧೇರ್ವಾಕ್ಯಂ ಪ್ರೋಚೇ ಗಜಾನನಃ ॥೨೭॥**

**ದೇವ ಉವಾಚ :—**

**ಪಿಶಾಚವನ್ಮದ್ಯಪವತ್ಕಿಂ ವಲ್ಗಸಿ ? ಮಮಾಗ್ರತಃ ।**
**ನ ಜಯಂ ಪ್ರಾಪ್ನುತೇ ಕ್ವಾಪಿ ದೇವ-ದ್ವಿಜವಿನಿಂದಕಃ ॥೨೮॥**

**ಮಮ ಚೇದ್ಭವಿತಾ ಕ್ರೋಧೋ ಜ್ವಾಲಯೇ ಭುವನತ್ರಯಮ್ ।**

ಮತ್ತು ಅದು ಯಾರ ಕೈಗಳಿಗೂ ಸಿಕ್ಕದಂತೆ ಅದನ್ನು ರಸಾತಲಕ್ಕೆ ಎಸೆದೇನು, ತಿಳಿಯಿತೇ ?

ಬ್ರಹ್ಮಾ:—

ಗಣಪತಿಯು ಕಮಲಾಸುರನ ಉನ್ಮತ್ತತನದ ಈ ಮಾತುಗಳನ್ನು ಕೇಳಿ ಬಹುಮಟ್ಟಿಗೆ ಅಸಹನೆಗೊಂಡು ಅವನನ್ನು ಭರ್ತ್ಸಿಸುತ್ತ ಹೀಗೆಂದು ಉತ್ತರಿಸಿದನು. ॥೨೭॥

ಗಜಾನನ :—

ಇದೇನು ? ಪಿಶಾಚದಂತೆಯೂ, ಮದ್ಯಪಾನವನ್ನು ಮಾಡಿ ಮತಿಭ್ರಂಶಗೊಂಡ ವರಂತೆಯೂ ಬಾಯಿಗೆ ಬಂದ ಹಾಗೆಯೇ ಬೊಗಳುವೆಯಲ್ಲ ? ಈ ತರಹದ ಪೊಳ್ಳು ಹರಟೆಯನ್ನು ಯಾರೆದುರಿಗೆ ನಿಂತು ಬಡಬಡಿಸುತ್ತಿರುವೆ ಎಂಬ ತಿಳಿವಾದರೂ ನಿನ ಗಿರುವುದೇ ? ನಿನ್ನೆದುರು ನಿಂದಿರುವನು ನಾನು, ನಿನ್ನ ಮೃತ್ಯು, ಗಣಾಧೀಶ್ವರ, ಈಗ ಲಾದರೂ ಎಚ್ಚರ ಬಂದಿತೋ, ಇಲ್ಲವೋ ? ನಿನಗೆ ಇಷ್ಟು ವಯಸ್ಸು ಕಳೆದಿದೆ. ಲೋಕ ವ್ಯವಹಾರದ ಅರಿವಾದರೂ ನಿನಗಿರುವುದೇ ? ದೈವ–ಬ್ರಾಹ್ಮಣ ವಿದ್ವೇಷಿಯಾದ ವನು ಎಂದಿಗಾದರೂ ಜಯವನ್ನು ಪಡೆಯಬಲ್ಲನೇ ? ನೀನೋ ದೈವ–ಬ್ರಾಹ್ಮಣ ರನ್ನು ನಿಂದಿಸತಕ್ಕ ಪರಮಪಾತಕಿ, ಎಂದ ಮೇಲೆ ನಿನಗೆ ಜಯ ಹೇಗೆ ದೊರೆತೀತು ? ॥೨೮॥

ನನಗೇನಾದರೂ ಕೋಪ ಉಂಟಾವರೆ ತ್ರಿ-ಭುವನಗಳನ್ನೂ ದಹಿಸಿಬಿಡುವೆನು. ಏನೋ, ನೀನೂ ಒಬ್ಬ ಬಲಶಾಲಿಯಾದ ರಾಕ್ಷಸ ಎಂಬುದನ್ನು ಲೋಕಕ್ಕೆ

ಯಶಸ್ತೇ ಖ್ಯಾಪಿತುಂ ಲೋಕೇ ಯುದ್ಧ್ಯಾಮಿ ಹರ್ಷನಿರ್ಭರಃ ॥೨೯॥

ನೋ ಚೇದ್ಧುಂಕಾರಮಾತ್ರೇಣ ನೀತಃ ಸ್ಯಾದ್ಯಮಸಾದನಮ್ ।

ಕ ಉವಾಚ :—

ಏವಮಾಕರ್ಣ್ಯ ತದ್ವಾಕ್ಯಂ ದೈತ್ಯಃ ಕ್ರೋಧಾನಲಾಕುಲಃ ॥೩೦॥

ಕ್ಷ್ವೇಡಿತಂ ಪ್ರತಿಶಬ್ದೇನ ನಾದಯನ್ವಿದಿಶೋ ದಿಶಃ ।
ತದಾ ಗರ್ಭಾನ್ನಿಪತಿತಾಸ್ತಸ್ಯ ಶಬ್ದೇನ ತತ್ಕ್ಷಣಾತ್ ॥೩೧॥

---

ಪ್ರಖ್ಯಾಪನಮಾಡುವುದಕ್ಕಾಗಿ ನಿನ್ನೊಂದಿಗೆ ಯುದ್ಧಮಾಡುವಂತೆ ನಟಿಸುತ್ತಿರುವೆನು, ಅಷ್ಟೇ. ಇದು ನಿನ್ನ ಅಲ್ಪಮತಿಗೆ ಹೊಳೆಯಲಿಲ್ಲ. ಆದುದರಿಂದಲೇ ಹೀಗೆಲ್ಲ ಜಲ್ಪಿಸುವೆ. ನಿನ್ನೊಡನೆ ಹೋರಾಡುತ್ತಿರುವಾಗ ನನಗಾವ ಬಗೆಯ ಆಯಾಸವೂ ಕ್ಲೇಶವೂ ಉಂಟಾಗಿರುವುದಿಲ್ಲ. ನಾನು ಹರ್ಷದಿಂದಲೇ ಇದ್ದೇನೆ. ॥೨೯॥

ಕೇವಲ 'ಹುಂ ಕಾರ ಮಾತ್ರದಿಂದಲೇ ನಿನ್ನನ್ನು-ಸಂಯಮನೀ ನಗರಕ್ಕೆ ಕಳಿಸಿಬಿಡುತ್ತಿದ್ದೆನು. ನನ್ನ ಸೌಜನ್ಯದ ದುರುಪಯೋಗವನ್ನು ನೀನು ತೆಗೆದುಕೊಂಡು ಹೀಗೆಲ್ಲ ಜಂಭ ಕೊಚ್ಚುತ್ತಲಿರುವೆ.

ಬ್ರಹ್ಮಾ:—

ಕೇವಲ ಬಾಲಕನ ರೂಪದಿಂದಿರುವ ಗಣಪತಿಯು ಆಡಿದ ಮರ್ಮಭೇದಕವಾದ ಈ ವೀರವಾಣಿಯನ್ನು ಕೇಳಿ ಸ್ವಭಾವಶೂರನಾದ ಕಮಲಾಸುರನು ಸಿಡಿದೆದ್ದು ನಿಂತನು. ॥೩೦॥

ಬಲವಾಗಿ ಒಮ್ಮೆ ಚಪ್ಪಾಳೆಯನ್ನು ತಟ್ಟಿದನು. ಇದರ ಶಬ್ದವು ದಿಗಂತುಗಳನ್ನು ವ್ಯಾಪಿಸಿ ಅಲ್ಲಿಂದ ಪ್ರತಿಹತವಾಗಿ ನೂರ್ಮಡಿ ಶಬ್ದಮಾಡುತ್ತ ಹಿಂದಿರುಗಿತು. ಭಯಂಕರವಾದ ಈ ಶಬ್ದವನ್ನು ಕೇಳಿದೊಡನೆಯೇ ಗರ್ಭಿಣಿಯರ ಗರ್ಭಗಳು ಕಳಚಿ ಅಂತಸ್ಥ ಪಿಂಡಗಳು ಆಮಗರ್ಭವಾಗಿ ನೆಲಕ್ಕೆ ಬಿದ್ದವು. ॥೩೧॥

ಪ್ರಮಥಾದ್ಯಾ ಗಣಾಃ ಕೇಚಿನ್ಮೂರ್ಛಿತಾ ಧರಣೀಂ ಗತಾಃ ।
ಆಕರ್ಣಂ ಧನುರಾಕೃಷ್ಯ ಮುಮೋಚ ಕಮಲಾಸುರಃ ॥೩೨॥

ಶರವೃಷ್ಟಿಂ ಪುನಾರೌದ್ರಾಂ ಮಯೂರೇಶೇ ಬಲೇಽಪಿ ಚ ॥೩೩॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ಕಮಲಾಸುರೇಣ ಸಹ ಸಂಗ್ರಾಮೋ" ನಾಮ ದ್ವ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ

---

ಪ್ರಮಥರೇ ಮೊದಲಾದ ಪರಶಿವನ ಗಣದವರು ಈ ಶಬ್ದಕ್ಕೆ ಮೂರ್ಛೆಯನ್ನು ಪಡೆದು ಭೂಮಿಗೆ ಉರುಳಿದರು! ಕಮಲಾಸುರನು ಮತ್ತೆ ತನ್ನ ಧನುಸ್ಸನ್ನು ಕೈಗೆ ತೆಗೆದುಕೊಂಡನು. ಅನೇಕ ಬಾಣಗಳನ್ನು ಒಮ್ಮೆಲೇ ಹೂಡಿದನು. ಬಾಣಗಳ ತುದಿಯೊಂದಿಗೆ ಮೌರ್ವಿಯನ್ನು ಕಿವಿಯವರೆಗೂ ಎಳೆದು ಶತ್ರುಗಳ ಮೇಲೂ ಮಯೂರೇಶ್ವರನ ಮೇಲೂ ಪ್ರಯೋಗಿಸಿದನು. ॥೩೨॥

ಕುಂಭದ್ರೋಣದ ಮಳೆಯಂತೆ ಧಾರಾಕಾರವಾಗಿ ಬೀಳುವ ಭಯಂಕರಾಕಾರದ ಬಾಣಗಳು ಎಣಿಕೆಗೇ ಸಿಕ್ಕುತ್ತಲಿರಲಿಲ್ಲ. ಗಣಪತಿಯ ಸೇನೆಯು ಇದರಿಂದ ಬಹಳ ನೊಂದಿರಬೇಕು. ಸೇನಾನಿಯು ಮಯೂರೇಶನಾಗಿರದಿದ್ದರೆ ಕಮಲಾಸುರನ ಶರಾಘಾತಕ್ಕೆ ನಿಜವಾಗಿಯೂ ಘಾಸಿಗೊಳ್ಳುತ್ತಲಿದ್ದನು. ॥೩೩॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ "ಕಮಲಾಸುರಸಂಗರ ವರ್ಣನೆ" ಎಂಬಲ್ಲಿಗೆ ನೂರೆರಡನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ತ್ರ್ಯಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಉತ್ಕರ್ಷಂ ತಸ್ಯ ದೈತ್ಯಸ್ಯ ದೃಷ್ಟ್ವಾ ದೇವಸ್ತ್ವರಾನ್ವಿತಃ ।**
**ಆಯಯೌ ಪುರತೋ ದೈತ್ಯಂ ಜಘಾನ ಶರವೃಷ್ಟಿಭಿಃ ||೧||**

**ನ್ಯವಾರಯತ ದೈತ್ಯೋಽಪಿ ಸ್ವಶರೈರತಿವೇಗಿತೈಃ ।**
**ತತಸ್ತುತೋಷ ಭಗವಾನ್ ಮಯೂರೇಶೋ ಗುಣಾಗ್ರಣೀಃ ||೨||**

**ದರ್ಶಯಾಮಾಸ ತಸ್ಮೈ ಸ ವಿಶ್ವರೂಪಮನಂತಕಮ್ ।**
**ದಶದಿಕ್ಷು ಮಯೂರೇಶಂ ದದರ್ಶ ಕಮಲಾಸುರಃ ||೩||**

|| ಶ್ರೀ ಗಣಪತಯೇ ನಮಃ ||

## ೧೦೩ ನೆಯ ಅಧ್ಯಾಯ

ಬ್ರಹ್ಮಾ:-

ದೈತ್ಯರಾಜನ ಈ ಉತ್ಕರ್ಷವನ್ನು ನೋಡಿ ದೇವದೇವನು ತಾನೂ ಪ್ರತೀಕಾರವನ್ನು ಮಾಡಲು ತ್ವರೆಗೊಂಡನು. ದೈತ್ಯನ ಎದುರಿಗೆ ಬಂದು ನಿಂತು ತನ್ನ ಧನುಸ್ಸನ್ನು ಸಜ್ಜುಗೊಳಿಸಿ ಅತ್ಯಮೋಘ ಶರಗಳನ್ನು ಪ್ರಯೋಗಿಸಿ ಬಾಣಗಳ ವೃಷ್ಟಿಯನ್ನೇ ರಾಕ್ಷಸನ ಮೇಲೆ ಕರೆದನು. ||೧||

ಕಮಲಾಸುರನೂ ಸಹ ಅನೇಕ ರೀತಿಯ ಪ್ರತ್ಯಸ್ತ್ರಗಳನ್ನು ವೇಗವಾಗಿ ಪ್ರಯೋಗಿಸಿ ದೇವನಿಂದ ಪ್ರಯುಕ್ತವಾದ ಬಾಣಗಳ ಹೊಡೆತವನ್ನು ತಪ್ಪಿಸಿಕೊಳ್ಳಲಾರಂಭಿಸಿದನು. ||೨||

"ಇಂತಹ ಪ್ರಬಲತರ-ದೈತ್ಯವೀರ; ಕಮಲಾಸುರನನ್ನು ಹೇಗೆ ನಿಗ್ರಹಿಸುವುದು?" ಎಂದು ಚಿಂತಿಸಿ ಸರ್ವವ್ಯಾಪಕವಾದ ತನ್ನ ವಿಶ್ವಸ್ವರೂಪವನ್ನು ದೈತ್ಯನಿಗೆ ತೋರಿಸಿದನು. ರಾಕ್ಷಸನು ಎಲ್ಲಿ ನೋಡಿದರಲ್ಲಿ ಅವನಿಗೆ ಮಯೂರೇಶನೇ ಕಾಣಲಾರಂಭಿ

**ವಿಸ್ಮಿತಶ್ಛಾದ್ಯ ನಯನೇ ಹೃದಿ ತಂ ಪರಿದೃಷ್ಟವಾನ್ ।**
**ತತಃ ಪಲಾಯನಪರೋ ಯಾವದ್ಗಚ್ಛತಿ ದೈತ್ಯರಾಟ್ ॥೪॥**

**ಶಿಖಾಮಾಕ್ರಮ್ಯ ದೇವೋಽಪಿ ಧೃತ್ವಾ ಪ್ರೋವಾಚ ತಂ ಪುನಃ ।**
**ದೇವ ಉವಾಚ :—**
**ತಿಷ್ಠ ಯುದ್ಧ್ಯಸ್ವ ದೈತ್ಯೇಂದ್ರ ! ಸ್ಮರ ವಾಕ್ಯಾನಿ ತಾನಿ ಚ ॥೫॥**

---

ಸಿದನು. ಹತ್ತು ದಿಕ್ಕುಗಳ ಅಂಚಿನವರೆಗೂ ಕಮಲಾಸುರನು ತನ್ನ ದೃಷ್ಟಿಯನ್ನು ಪಸರಿಸಿ ನೋಡಿದರೂ ಮಯೂರೇಶ್ವರನ ಸ್ವರೂಪ ಬೇರೆ ಕಾಣದಿರಲಿಲ್ಲ. ॥೩॥

ಆಗ ಅಸುರನು ಬಹಳ ಆಶ್ಚರ್ಯವನ್ನು ಹೊಂದಿದನು. ಮತ್ತು ಭದ್ರವಾಗಿ ತನ್ನ ಕಣ್ಣುಗಳೆರಡನ್ನೂ ಮುಚ್ಚಿಕೊಂಡನು. ಅಣು, ರೇಣು, ತೃಣ ಕಾಷ್ಠಗಳಲ್ಲೂ ತಾನೇ ತಾನಾಗಿ ನೆಲೆಸಿ ನಿಂದಿರುವ ಪರಮಾತ್ಮನು ರಾಕ್ಷಸನ ಅಂತರಂಗದಲ್ಲಿ ಕಾಣವೇ ಹೋದಾನೆಯೇ ? ರಾಕ್ಷಸನಿಗೆ ತನ್ನ ಹೃದಯದಲ್ಲೇ ಮಯೂರೇಶ್ವರನು ತೋರ ಲಾರಂಭಿಸಿದನು. ಆಗ ಮಟ್ಟಿಗೆ ಕಮಲಾಸುರನಿಗೆ ದಿಕ್ಕೇ ತೋರದಂತಾಯಿತು- ಅವನು ಇದ್ದಕ್ಕಿದ್ದಂತೆಯೇ ರಣಭೂಮಿಯನ್ನು ತ್ಯಜಿಸಿ ಓಡಲಾರಂಭಿಸಿದನು. "ಅಪಾಣಿಪಾದೋ ಜವನೋ ಗ್ರಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ" ಎಂದರೆ ಕಾಲಿಲ್ಲದಿದ್ದರೂ ವೇಗವಾಗಿ ನಡೆಯತಕ್ಕವನು (ಆಕಾಶದಂತೆ ಸರ್ವವ್ಯಾಪಿ) ಕೈಗಳಿಲ್ಲದಿದ್ದರೂ ಹಿಡಿಯುಬಲ್ಲವನು. (ಸಕಲ ಮೂರ್ತ ವಸ್ತುಗಳೂ ಪರಮಾತ್ಮ ನನ್ನೇ ಆಶ್ರಯಿಸಿವೆ) ಕಣ್ಣುಗಳಿಲ್ಲದಿದ್ದರೂ ನೋಡಬಲ್ಲನು. (ಜ್ಯೋತಿಸ್ಸಿಗೂ ಜ್ಯೋತೀರೂಪನಾದವನು.) ಕಿವಿಗಳಿಲ್ಲದಿದ್ದರೂ ಕೇಳಬಲ್ಲವನು. (ಶಬ್ದಕ್ಕೆ ಆಶ್ರಯ ವಾದ ಬಯಲಿಗೂ ದೇವನು ಜನಕನು.) ಎಂದು ಶ್ರುತಿಶಿರಗಳು ಯಾರನ್ನು ವರ್ಣಿಸು ವುವೋ ಅಂತಹ ಮಹಾಮಹಿಮ ಮಹೇಶ್ವರಸೂನುವಿಗೆ ಈ ಕ್ಷುದ್ರ ರಾಕ್ಷಸನನ್ನು ಹಿಡಿದು ತರುವುದು ಶ್ರಮಸಾಧ್ಯವೆನಿಸೀತೇ ? ಒಡನೆಯೇ ಹಾರಿಹೋಗಿ ಅವನ ಜುಟ್ಟನ್ನು ತನ್ನ ಕೈಗಳಿಂದ ಭದ್ರವಾಗಿ ಹಿಡಿದುಬಿಟ್ಟನು ಮತ್ತು ಅವನನ್ನು ಗದ್ದರಿ ಸುತ್ತ ಹೀಗೆಂದು ನುಡಿದನು. ॥೪॥

ದೇವ :—

ನಿಲ್ಲು, ಎಲ್ಲಿಗೆ ಓಡಿಹೋಗುವೆ ? ಓಡಿದೆಯಾದರೂ ನನ್ನ ಕೈಯಿಂದ ತಪ್ಪಿಸಿ

**ಪುನರ್ದದರ್ಶ ದೈತ್ಯಸ್ತಮೇಕಮೇವ ಪುರಃ ಸ್ಥಿತಮ್ ।**
**ಅಧಾವತ್ಸಹಸಾ ಯೋದ್ಧುಂ ಜಗರ್ಜ ಚ ಮಹಾಬಲೀ ॥೬॥**

**ದಶಾಯುಧಧರೋ ದೇವೋ ಯೋಧಯಾಮಾಸ ತಂ ತದಾ ।**
**ಬಿಭೇದಾಸ್ಯ ಶರೀರಂ ಸ ವಿಘ್ನರಾಟ್ ಶಸ್ತ್ರಘಾತತಃ ॥೭॥**

**ಯತ್ರಾಸ್ಯ ನ್ಯಪತದ್ರಕ್ತಬಿಂದುಸ್ತತ್ರಾಸುರೋಽಭವತ್ ।**
**ತದ್ರೂಪಸ್ತದ್ಬಲಶ್ಚೈವಮಸಂಖ್ಯಾತಾಸ್ತದಾಸುರಾಃ ॥೮॥**

---

ಕೊಳ್ಳಬಲ್ಲೆಯ ? ಒಂದು ಕ್ಷಣದ ಹಿಂದೆ ಏನೇನನ್ನೋ ಬೊಗಳಿದೆಯಲ್ಲವೇ ? ಇಷ್ಟರಲ್ಲೇ ಅದೆಲ್ಲ ಮರೆತು ಹೋಯಿತೇನು ? ನಿನ್ನ ವೀರವಾದವನ್ನೂ ಯುದ್ಧಚಮತ್ಕಾರವನ್ನೂ ನೋಡಿ "ನೀನೊಬ್ಬ ವೀರಯೋಧ" ಎಂದು ನಾನು ಗ್ರಹಿಸಿದ್ದೆ. ರಣಹೇಡಿಯೇ! ಸಾಹಸವಿದ್ದರೆ ಯುದ್ಧಕ್ಕೆ ನಿಲ್ಲು. ॥೫॥

ಬ್ರಹ್ಮಾ :—

ಮಹಾ ದುರಭಿಮಾನಶಾಲಿಯಾದ ರಕ್ಕಸನಿಗೆ ಗಣಪತಿಯ ಮೂದಲಿಕೆಯನ್ನು ಕೇಳಿ ಸಹಿಸಲಾಗಲಿಲ್ಲ. ಒಡನೆಯೇ ಹಿಂದಿರುಗಿ ಗಣಪತಿಯನ್ನೊಮ್ಮೆ ದಿಟ್ಟಿಸಿ ನೋಡಿದನು. ಅಷ್ಟರಲ್ಲೇ ಮಯೂರೇಶನು ತನ್ನ ವಿಶ್ವರೂಪದ ದೃಶ್ಯವನ್ನು ಅಳಿಸಿಬಿಟ್ಟಿದ್ದನಾದುದರಿಂದ ರಾಕ್ಷಸನಿಗೆ ಒಬ್ಬೊಂಟಿಗನಾಗಿಯೇ ತೋರಿದನು. ಆಗ ಮತ್ತೊಮ್ಮೆ ಉತ್ಸಾಹವನ್ನು ತೆಗೆದುಕೊಂಡು ಕೋಪದಿಂದ ಮಯೂರೇಶನೊಡನೆ ಯುದ್ಧಮಾಡಲು ಸಿದ್ಧನಾಗಿ ನಿಂತು ಒಮ್ಮೆ ಘಟ್ಟಿಯಾಗಿ ಗರ್ಜಿಸಿದನು. ॥೬॥

ದೇವನೂ ಸಹ ತನ್ನ ಹತ್ತು ಕೈಗಳಲ್ಲೂ ದಶವಿಧ ನಿಶಿತಾಯುಧಗಳನ್ನು ಧರಿಸಿ ಆತತಾಯಿಯಾದ ದೈತ್ಯನನ್ನು ಎದುರಿಸಿದನು. ಮತ್ತು ತನ್ನ ಎಲ್ಲ ಆಯುಧಗಳನ್ನೂ ಒಮ್ಮೆಲೇ ರಾಕ್ಷಸನ ಮೇಲೆ ಪ್ರಯೋಗಿಸಿ ಅವನ ದೇಹವನ್ನು ತುಂಡು ತುಂಡಾಗಿ ಕತ್ತರಿಸಿ ಬಿಸುಟನು. ॥೭॥

ಆದರೆ ಒಂದು ಅತ್ಯದ್ಭುತವಾದ ಚಮತ್ಕಾರ ನಡೆಯತೊಡಗಿತು. ವಿಘ್ನರಾಜನು ರಾಕ್ಷಸನ ದೇಹವನ್ನು ತುಂಡುಮಾಡಿ ಬಿಸಾಡಿದಂತೆಲ್ಲ ಅವನ ಅವಯವಗಳಿಂದ ರಕ್ತವು ಧಾರಾಕಾರವಾಗಿ ಸುರಿಯುವುದು. ರಕ್ತದ ಒಂದೊಂದು ಹನಿ ಬಿದ್ದೆಡೆ

**ನಾನಾ ಶಸ್ತ್ರೈಸ್ತಥಾಸ್ತ್ರೈಸ್ತೇ ತಂ ಜಘ್ನುಃ ಶರವೃಷ್ಟಿಭಿಃ ।**
**ತತಃ ಪರಾವೃತೋ ದೇವೋ ಮಯೂರೇಶೋ ರುಷಾ ಜ್ವಲನ್ ॥೯॥**

**ಸಾರ್ಧಕೋಟಿತ್ರಯಮಿತೈಃ ಸಿದ್ಧಿ-ಬುದ್ಧೀ ತದಾ ಬಲೈಃ ।**
**ಈಯತುಃ ಪರಮಕ್ರುದ್ಧೇ ತತೋ ಯುದ್ಧಮವರ್ತತ ॥೧೦॥**

**ಊಚತುರ್ಗಣರಾಜಂ ತೇ " ದೇಹಿ ಭಕ್ಷ್ಯಂ ಕ್ಷುಧಾವಹಮ್ " ।**
**ತ ಊಚೇ " ಭಕ್ಷತಂ " ದೇವೋ " ದೈತ್ಯಾಸೃಗ್ಜನಿತಾನ್ ಬಹೂನ್ ॥೧೧॥**

---

ಎಲ್ಲ ಕಮಲಾಸುರನಂತಹ ರಾಕ್ಷಸನೊಬ್ಬನು ಉದಿಸಿನಿಂತು ದೇವನೊಂದಿಗೆ ಹೋರಾಡಲಾರಂಭಿಸಿದನು. ಹೀಗೆ ಹೊಸದಾಗಿ ಹುಟ್ಟಿದವರೆಲ್ಲರೂ ಯಾವ ವಿಧ ದಿಂದಲೂ ಕಮಲಾಸುರನಿಗೆ ಕಡಿಮೆಯಾದವರಾಗಿರಲಿಲ್ಲ. ಎಲ್ಲಿ ನೋಡಿದರಲ್ಲಿ ರಾಕ್ಷಸರೇ ತುಂಬಿ ಹೋದುದರಿಂದ ಇವರ ಸಂಖ್ಯೆಯು ಎಣಿಕೆಗೆ ನಿಲುಕಲಾರದಷ್ಟಾಯಿತು. ॥೮॥

ಮೂಲರಾಕ್ಷಸ ಹಾಗೂ ರಕ್ತದಿಂದ ಜನಿಸಿದವರು ಎಲ್ಲರೂ ನಾನಾ ಬಗೆಯ ಶಸ್ತ್ರಾಸ್ತ್ರಗಳನ್ನು ಧರಿಸಿದ್ದರು. ಮತ್ತು ದೊಡ್ಡ ಮಳೆ ಬೀಳುವಂತೆ ಬಿರುಸಾದ ಬಾಣಗಳನ್ನು ದೇವನ ಮೇಲೆ ಸುರಿಸಿದರು. ರಾಕ್ಷಸನ ಈ ಮಾಯಾಶಕ್ತಿಯನ್ನು ಕಂಡು ದೇವನು ಅತಿಯಾಗಿ ಚಕಿತನಾದನು. ಮತ್ತು ಒಮ್ಮೆ ತಿರುಗಿ ನೋಡಿದನು. ದೇವನ ಆ ದೃಷ್ಟಿ ಪ್ರಜ್ವಲಿಸುವ ಅಗ್ನಿಯಂತೆ ಭಯಂಕರವಾಗಿದ್ದಿತು. ॥೯॥

ದೇವನ ಇಂಗಿತವನ್ನು ಗ್ರಹಿಸಿದ ಸೂಕ್ಷ್ಮಮತಿಯರಾದ ಸಿದ್ಧಿ–ಬುದ್ಧಿಯರು ಒಡನೆಯೇ ಯುದ್ಧಸನ್ನದ್ಧರಾಗಿ ಮುಂದೆ ಬಂದು ನಿಂತರು. ಬರುವಾಗ ತಮ್ಮೊಡನೆ ತಮ್ಮ ಮೂರೂವರೆ ಕೋಟಿ ಸೈನ್ಯವನ್ನು ತೆಗೆದುಕೊಂಡೇ ಬಂದರು. ತಮ್ಮ ಪತಿಯ ಮೇಲೆ ಪರಾಕ್ರಮವನ್ನು ಪ್ರದರ್ಶಿಸಲಾರಂಭಿಸಿದ ಪಿಶಿತಾಶನನ ಮೇಲೆ ಅವರಿಬ್ಬರಿಗೂ ಬಹಳ ಕೋಪ ಉಂಟಾಗಿದ್ದಿತು. ಆಗ ಉಭಯಪಕ್ಷಕ್ಕೂ ಘನ ಘೋರ ಗಂಭೀರವಾದ ಹೋರಾಟವು ಆರಂಭವಾಯಿತು. ॥೧೦॥

ಸಿದ್ಧಿ-ಬುದ್ಧಿಯರು ರಣರಂಗಕ್ಕೆ ಬಂದೊಡನೆಯೇ ಹಸಿದ ತಮ್ಮ ಸೈನ್ಯಕ್ಕೆ ಹೊಟ್ಟೆ ತುಂಬುವಷ್ಟು ಆಹಾರವನ್ನು ಕೊಡಿಸಿಕೊಡಬೇಕೆಂದು ಮಹಾಗಣಪತಿಯನ್ನು

**ಇತ್ಯುಕ್ತೇ ತೇ ತದಾ ತೇನ ಮಯೂರೇಶೇನ ಸತ್ತ್ವರಮ್ |**
**ಬಭಕ್ಷುರ್ಭೂತಗಣೈಸ್ತಾನ್ ದೈತ್ಯಾನಖಿಲಾನಪಿ ||೧೨||**

**ದೇವೋ ಜಘಾನ ಖಡ್ಗೇನ ತಂ ದೈತ್ಯಂ ಕಮಲಾಸುರಮ್ |**
**ಪುನಶ್ಚ ಶತಶೋ ಜಾತಾ ದೈತ್ಯಾಸ್ತದ್ರಕ್ತಸಂಭವಾಃ ||೧೩||**

**ಬಭಕ್ಷುಸ್ತಾನಪಿ ತತೋ ಪಿಬನ್ ರಕ್ತಂ ಸಮಂತತಃ |**
**ತತಃ ಖಿನ್ನೋ ಮಯೂರೇಶಃ ಶೂಲಮುದ್ಯಮ್ಯ ವೇಗವಾನ್ ||೧೪||**

---

ಮೊದಲು ಪ್ರಾರ್ಥಿಸಿದರು. 'ಇದೇ ಸರಿಯಾದ ಸಮಯವೆ'ಂದು ಮಯೂರೇಶನು ಭಾವಿಸಿ "ರಕ್ತಪಾತದಿಂದ ಜನಿಸಿರುವ ಲೆಖ್ಖಕ್ಕೆ ನಿಲುಕದ ಈ ರಾಕ್ಷಸರನ್ನೆಲ್ಲ ಭಕ್ಷಿಸಲಿ" ಎಂದು ಅಪ್ಪಣೆಯನ್ನು ಮಾಡಿದನು. ||೧೧||

ಮಯೂರೇಶನು ಹೀಗೆಂದು ಆಜ್ಞೆಮಾಡುವುದೇ ತಡ, ಸಿದ್ಧಿ–ಬುದ್ಧಿಯರು ಭೂತಗಣದ ತಮ್ಮ ಪರಿವಾರದೊಂದಿಗೆ ಒಮ್ಮೆಲೇ ಮುಂದುವರಿದು ಬಂದು ಒಂದೊಂದು ಕಬಳಕ್ಕೆ ನೂರಾರು ಮಂದಿಯಂತೆ ಗಬ–ಗಬ ರಾಕ್ಷಸರನ್ನು ತಿನ್ನುತ್ತ ಕಣ್ಣು ಎವೆ ಇಕ್ಕುವಷ್ಟರಲ್ಲಿ ಎಲ್ಲರನ್ನೂ ನುಂಗಿ ಮುಗಿಸಿದರು. ||೧೨||

ಹೊಸದಾಗಿ ಹುಟ್ಟಿ ಬಂದ ದೈತ್ಯರೆಲ್ಲ ಕಾಣದಂತಾಗಲು ಮಯೂರೇಶನು ಮತ್ತೆ ಮುಂದೆ ಬಂದು ತನ್ನ ಕೈಯಲ್ಲಿದ್ದ ಖಡ್ಗದಿಂದ ಕಮಲಾಸುರನ ಅಂಗಾಂಗಗಳನ್ನೆಲ್ಲ ಮೊದಲಿಗಿಂತಲೂ ಇನ್ನೂ ಸಣ್ಣ ಸಣ್ಣ ತುಂಡುಗಳಾಗುವಂತೆ ಕತ್ತರಿಸಿ ಚಲ್ಲಿದನು. ಈ ತುಂಡುಗಳೊಡನೆ ಚಿಮ್ಮಿ ಚದುರಿದ ರಕ್ತಕಣಗಳೆಲ್ಲ ಶತಗುಣಿತ ರಾಕ್ಷಸರಾಗಿ ಪರಿಣಮಿಸಿದವು. ಆವನ ದೇಹದಲ್ಲಿದ್ದ ರಕ್ತದ ಪ್ರಭಾವವೇ ಅಂತಹ ಅದ್ಭುತವಾದುದು. ||೧೩||

ರಕ್ತದಿಂದ ರಾಕ್ಷಸರು ಹುಟ್ಟಿದಂತೆಲ್ಲ ಸಿದ್ಧಿ-ಬುದ್ಧಿಯರೂ ಗಣಗಳೂ ಅವರನ್ನು ನುಂಗುತ್ತಲೂ, ರಾಕ್ಷಸೇಶ್ವರನ ದೇಹದ ರಕ್ತವು ಬೀಳುವ ಕಡೆ ಸುತ್ತಮುತ್ತ ಅತಿದೀರ್ಘಗಳಾದ ತಮ್ಮ ನಾಲಿಗೆಗಳನ್ನು ಒಡ್ಡಿ ಪಾನಮಾಡುತ್ತಲೂ ಇದ್ದರು. ತಾನು ಎಷ್ಟು ಸಾರಿ ಕತ್ತರಿಸಿದಾಗ್ಯೂ, ಸಿದ್ಧಿ-ಬುದ್ಧಿಯರು ಗಣಗಳು ನೂತನ ರಾಕ್ಷಸರನ್ನು ಭಕ್ಷಿಸುತ್ತಲಿದ್ದಾಗ್ಯೂ ಹೊಸ ಹೊಸದಾಗಿ ರಾಕ್ಷಸರು ಒಂದಕ್ಕೆ ನೂರಾರರಷ್ಟು ಉದ್ಭವಿಸಿ

**ತತ್ಯಾಜ ಸಹಸಾ ದೈತ್ಯೇ ಯಯೌ ಸ ಪ್ರದಹನ್ ದಿಶಃ ।**
**ಚೂರ್ಣಯನ್ ಪರ್ವತಾನ್ ವ್ಯೋಮ ನಾದಯನ್ ಭಾನಿ ಪಾತಯನ್ ॥೧೫॥**

**ವೇಗೇನ ಪತಿತೋ ದೈತ್ಯದೇಹಂ ಭಿತ್ವಾ ದ್ವಿಧಾಕರೋತ್ ।**
**ಮಸ್ತಕಸ್ತಸ್ಯ ಪತಿತೋ [1]ಭೀಮಾಯಾ ದಕ್ಷಿಣೇ ತಟೇ ॥೧೬॥**

**[2]ಕೃಷ್ಣಾಯಾ ಉತ್ತರೇ ತೀರೇ ತಸ್ಥೌ ತತ್ರ ಗುಣೇಶ್ವರಃ ।**
**ಸರ್ವೇ ಸಂತುಷ್ಟಮನಸೋ “ ಜಯ ”ಶಬ್ದೈಸ್ತಮಬ್ರುವನ್ ॥೧೭॥**

---

ಬರುತ್ತಿರುವುದನ್ನುನೋಡಿ ಮಯೂರೇಶನು ಖಿನ್ನನಾದನು. ಆದರೂ ಬಿಡವೆ ಯುದ್ಧಕ್ಕೆ ಹೊರಡುವ ಮುನ್ನ ಪರಮೇಶ್ವರನು ತನಗೆ ಅನುಗ್ರಹಿಸಿಕೊಟ್ಟಿದ್ದ ಶೂಲಾಯುಧ ವನ್ನು ಕೈಗೆ ತೆಗೆದುಕೊಂಡು ರಭಸದಿಂದ ಎತ್ತಿಹಿಡಿದನು. ||೧೪||

ಅದನ್ನು ರಾಕಸನ ಮೇಲೆ ಪ್ರಯೋಗಿಸಲು ಗುರಿನೋಡಿ ಒಮ್ಮೆ ಬೀಸಿ ಒಗೆದನು. ಆ ಆಯುಧ ಲೋಕಹರನಾದ ಹರನದು. ಕೋಪದಿಂದ ಬೀಸಿ ಎಸೆದವನು ಲೋಕೇಶ್ವರನಾದ ಮಯೂರೇಶ್ವರ ಎಂದ ಮೇಲೆ ಆ ಆಯುಧ ಎಷ್ಟು ವೇಗದಿಂದ ಹೊರಟಿರ ಬಹುದು, ನೀನೇ ಯೋಚಿಸು. ಶೂಲವು ವೇಗದಿಂದ ಹೋಗುವಾಗ ಉರಿಯನ್ನು ಕಾರುತ್ತಲೇ ಹೋಯಿತು. ಈ ಝಳಕ್ಕೆ ಸಿಲುಕಿ ದಿಕ್ಕುಗಳೆಲ್ಲ ಉರಿದುಹೋದವು. ಇದರ ಆಘಾತದಿಂದಾಗಿ ಅನೇಕ ಪರ್ವತಗಳು ಚೂರು ಚೂರಾಗಿ ಉರುಳಿದವು. ಇದು ಬರುವ ರಭಸಕ್ಕೆ ಉಂಟಾದ ಭಯಂಕರ ನಾದದಿಂದ ಅಂತರಿಕ್ಷ ಮಂಡಲವು ಕಂಪಿಸಿತು. ತನ್ನಿಮಿತ್ತ ನಕ್ಷತ್ರಗಳೆಲ್ಲ ಭೂಮಿಗೆ ಉದುರಿಬಿದ್ದವು. ||೧೫||

ಅತಿ ವೇಗದಿಂದ ಹೋದ ಶೂಲಾಯುಧ ರಾಕ್ಷಸನ ದೇಹವನ್ನು ಹೊಕ್ಕು ಎರಡು ತುಂಡಾಗಿ ಮಾಡಿತು. ಶೂಲದ ಅಲುಗಿಗೆ ಸಿಕ್ಕಿ ಕಮಲಾಸುರನ ಶಿರವು ಭೀಮಾನದಿಯ ದಕ್ಷಿಣ ತೀರಕ್ಕೆ ಹೋಗಿ ಬಿದ್ದಿತು. ||೧೬||

ಭಗವಾನ್ ಗುಣೇಶ್ವರನು ತಾನು ಕೃಷ್ಣಾನದಿಯ ಉತ್ತರ ದಿಗ್ಭಾಗದ ದಡದಲ್ಲಿ ನಿಂತನು. ಮಯೂರೇಶ್ವರನು ಇಂತಹ ಅದ್ಭುತ ಶಕ್ತಿಯನ್ನು ತೋರಿಸಿದ ಬಗ್ಗೆ ಎಲ್ಲರೂ ಆಶ್ಚರ್ಯ ಚಕಿತರಾದರು. ಮತ್ತು ಹೃಷ್ಟಮಾನಸರಾಗಿ “ ಜಯ ”

**ಸರ್ವ ಊಚುಃ :—**

**ಜಯ ದೇವ, ಮಯೂರೇಶ ! ಕುರು ದುಷ್ಟವಿನಾಶನಮ್ ।**

**ಕ ಉವಾಚ :—**

**ತತಸ್ತತ್ರಾಯಯೌ ಗೌರೀಪತಿರ್ಗಣಪರೀವೃತಃ ||೧೮||**

**ಗೌತಮಾದ್ಯೈಶ್ಚ ಮುನಿಭಿಃ ಪಾರ್ವತ್ಯಾ ಚ ಸಮಾಯುತಃ ।**
**ವಾದ್ಯತ್ಸು ಸರ್ವವಾದ್ಯೇಷು ಪುಷ್ಪವೃಷ್ಟಿಃ ಪಪಾತ ಖಾತ್ ||೧೯||**

**ಆಲಿಂಗ್ಯ ಪಾರ್ವತೀ ಪ್ರಾದಾತ್ ಸ್ತನಪಾನಂ ಮುದಾ ತದಾ ।**

---

ಶಬ್ದದಿಂದ ದೇವರ ದೇವ, ಮಹಾಗಣಪತಿಯನ್ನು ಮನಃಪೂರ್ವಕವಾಗಿ ಹೊಗಳಿ ಹೀಗೆಂದು ಪ್ರಾರ್ಥಿಸಿದರು. ||೧೭||

ಜನರು :—

ದೇವ, ಮಯೂರೇಶ್ವರ! ನಿನಗೆ ವಿಜಯವಾಗಲಿ, ಲೋಕಕಂಟಕರಾದ ದುಷ್ಟ ದೈತ್ಯರನ್ನು ನೀನು ಇದೇ ರೀತಿ ನಿಗ್ರಹಿಸು.

ಬ್ರಹ್ಮಾ :—

ಅನಂತರ ಮಹಾಗಣಪತಿಯೂ ಸೇನಾಪರಿವಾರದವರೂ ನಿಂತಿದ್ದೆಡೆ ಪಾರ್ವತೀ ಪತಿಯಾದ ಪರಶಿವನು ತನ್ನ ಅನುಚರರು, ಪ್ರಮಥಗಣಗಳೊಂದಿಗೆ ಬಂದನು. ||೧೮||

ಪರಮೇಶ್ವರನನ್ನು ಹಿಂಬಾಲಿಸಿ ಗೌತಮಾದಿ ಮಹರ್ಷಿಗಳೂ ಗಿರಿರಾಜನ ಪುತ್ರಿ; ಪಾರ್ವತಿಯೂ ಬಂದರು. ಸಕಲ ವಿಧ ಮಂಗಳವಾದ್ಯಗಳೂ ಜಯವನ್ನು ಸುಶ್ರಾವ್ಯವಾಗಿ ಧ್ವನಿಗೈದವು. ನಭೋಮಂಡಲದಿಂದ ಪುಷ್ಪವೃಷ್ಟಿಯು ಅವಿಚ್ಛಿನ್ನವಾಗಿ ಸುರಿಯಿತು. ||೧೯||

ಮಗನು **ವಿಜಯಶಾಲಿಯಾದುದನ್ನು** ಕಂಡು **ಲೋಕಮಾತೆ ; ಪಾರ್ವತಿ**

**ಮುನಯಸ್ತುಷ್ಟುವುಶ್ಚೈನಂ ಮಯೂರೇಶಂ ಸುರೇಶ್ವರಮ್ ॥೨೦॥**

**ಮುನಯ ಊಚುಃ :—**

**ಕಮಲಾಕಾಂತಹೃದಯ, ಹೃದಯಾನಂದವರ್ಧನ ! ।**
**ಕಮಲಾಕಾಂತನಮಿತ, ಕಮಲಾಸುರನಾಶನ ! ॥೨೦॥**

**ಕಮಲಾಸೇವಿತಪದ, ಜಯ ತ್ವಂ ಕಮಲಾಪ್ರದ ! ।**
**ಕಮಲಾಸನವಂದ್ಯೇಶ, ಕಮಲಾಕರಶೀತಲ ! ॥೨೨॥**

---

ದೇವಿಯು ಹಿಗ್ಗಿಹೋದಳು. ಮತ್ತು ಮುಂದಕ್ಕೆ ಬಂದು ಮಯೂರೇಶ್ವರನನ್ನು ಬಿಗಿದಪ್ಪಿದಳು. ಗಣಪತಿಯು ದೊಡ್ಡವರೆನಿಸಿದವರಿಗೆ ಸಹ ಬಹಳ ದೊಡ್ಡವನಾದಾಗ್ಯೂ ಪಾರ್ವತೀದೇವಿಯ ದೃಷ್ಟಿಯಲ್ಲಿ ಇನ್ನೂ ಚಿಕ್ಕಕೂಸು ತಾನೇ? ಆದುದರಿಂದಲೇ ದೇವಿಯು ಸಂತೋಷದ ಭರದಲ್ಲಿ ಅವನಿಗೆ ಸ್ತನ್ಯಪಾನವನ್ನು ಮಾಡಿಸಿದಳು. ಈ ಸನ್ನಿವೇಶವನ್ನು ನೋಡಿ ಮುನಿಗಳು ಉಬ್ಬಿಹೋದರು. ಮತ್ತು ಸುರೇಶ್ವರನಾದ ಗಣನಾಥನನ್ನು ಈ ರೀತಿಯಾಗಿ ಸ್ತುತಿಸಲಾರಂಭಿಸಿದರು. ॥೨೦॥

ಮುನಿಗಳು :—

ಕಮಲಪುಷ್ಪದಂತೆ ವಿಸ್ತೃತವೂ ಸುಂದರವೂ ಆದ ಹೃದಯ ಉಳ್ಳವನು ನೀನು. ಆದುದರಿಂದಲೇ ನಮ್ಮೆಲ್ಲರ ಹೃದಯಗಳಲ್ಲೂ ಆನಂದದ ಬುಗ್ಗೆಯನ್ನು ಚಿಮ್ಮಿಸುವೆ. ಕಮಲಾಕಾಂತನಾದ ಜಗದ್ರಕ್ಷಕ, ಶ್ರೀಮನ್ನಾರಾಯಣನು ಸಹ ನಿನ್ನ ಚರಣಕಮಲಗಳಿಗೆ ವಂದಿಸುವನು. ಕಮಲಾಸುರನಂತಹ ಉದ್ದಾಮವೀರ್ಯವುಳ್ಳ ದೈತ್ಯನನ್ನು ನೀನು ಸಂಹರಿಸಿರುವೆ. ॥೨೧॥

ಯಾರ ಕೃಪಾಕಟಾಕ್ಷ ಲಾಭಕ್ಕಾಗಿ ಜನರು ಹಗಲಿರುಳೂ ಧರ್ಮಾಧರ್ಮಗಳನ್ನು ಅಲ್ಲಗಳೆದೂ ಪ್ರಯತ್ನಿಸುವರೋ ಅಂತಹ ಕಮಲೆ (ಲಕ್ಷ್ಮೀ) ಯು ಸರ್ವದಾ ನಿನ್ನ ಪಾದಕಮಲಗಳನ್ನು ಸೇವಿಸುತ್ತಿರುವಳು. ಭಗವನ್, ಕಮಲಾಪ್ರದ! ನಿನಗೆ ವಿಜಯವಾಗಲಿ, ಆದಿಜೀವನೂ ಲೋಕಪಿತಾಮಹನೂ ಆದ ಕಮಲಾಸನನು ಯಾರಿಗೆ ವಂದಿಸುವನೋ ಅಂಥವನಿಗೂ ನೀನು ಈಶ್ವರನಾಗಿರುವೆ. ಕಮಲಾಕರ (ಸರೋವರ) ದಂತೆ ನೀನು ಶೀತಲಸ್ವಭಾವದವನಾಗಿರುವುದರಿಂದಲೇ ಆರ್ತರ ತಾಪಗಳನ್ನು ಶಮನಗೊಳಿಸುವೆ. ॥೨೨॥

**ಕಮಲಾಂಕಸು-ಪಾದಾಬ್ಜ, ಕಮಲಾಂಕಿತಸತ್ಕರ ! ।**
**ಕಮಲಾಬಂಧುತಿಲಕ, ಭಕ್ತಾನಾಂ ಕಮಲಾಪ್ರದ !** ॥೨೩॥

**ಕಮಲಾಸೂನುರಿಪುಜ, ಕಮಲಾಸೂನುಸುಂದರ ! ।**
**ಕಮಲಾಪಿತೃರತ್ನಾನಾಂ ಮಾಲಯಾ ಜಯಶೋಭಿತ !** ॥೨೪॥

**ಕಮಲಾಸುರಬಾಣಾನಾಂ ಕಮಲೇನ ನಿವಾರಕ ! ।**
**ಕಮಲಾಕ್ರಾಂತಕಮಲಕೋಶಜಿತ್ಕರಪಂಕಜ !** ॥೨೫॥

**ಕಮಲಾಪತಿಹಸ್ತಸ್ಥ ಪದ್ಮಕೋಶನಿಭೇಕ್ಷಣ !**

---

ಜಗನ್ನಿವಾಸ! ನಿನ್ನ ಚರಣಕಮಲಗಳಲ್ಲಿ ಮಹಾಪುರುಷರ ಲಕ್ಷಣಗಳಾದ ಕಮಲಪುಷ್ಪವು ಅಂಕಿತವಾಗಿದೆ. ಜಗದ್ರಕ್ಷಕ, ಮಹಾವಿಷ್ಣು ಅರ್ಪಿಸಿದ ಕಮಲ ಪುಷ್ಪವನ್ನು ಮಯೂರೇಶ್ವರ ! ನೀನು ನಿನ್ನ ಕರಕಮಲದಲ್ಲಿ ಹಿಡಿದಿರುವೆ. ಕಮಲೆ (ಮಹಾಲಕ್ಷ್ಮಿ) ಯ ಬಂಧುವಾದ ಅಮೃತಕಿರಣ (ಚಂದ್ರ) ನನ್ನು ಫಾಲದಲ್ಲಿ ಧರಿಸಿರುವೆ. ನಿನ್ನನ್ನು ಅನನ್ಯಮನಸ್ಸಿನಿಂದ ಭಜಿಸುತ್ತಿರುವ ಭಕ್ತರಿಗೆ ಅಮಿತವಾಗಿ ಕಮಲೆಯ (ಐಶ್ವರ್ಯವ) ನ್ನು ಅನುಗ್ರಹಿಸತಕ್ಕವನು. ॥೨೩॥

ಕಮಲೆ (ಲಕ್ಷ್ಮಿ) ಯ ಸು-ಪುತ್ರನಾದ ಮನ್ಮಥನನ್ನು ಸಂಹರಿಸಿದ ಪರಶಿವ ನಂತಹ ಮಹಾತ್ಮನನ್ನು ನೀನು ತಂದೆಯನ್ನಾಗಿ ಪಡೆದವನು. ಕಮಲೆಯ ಮಗ ನಂತಹ ಸೌಂದರ್ಯ ನಿನ್ನದು. ಕಮಲೆ (ಲಕ್ಷ್ಮಿ) ಯ ತಂದೆ; ರತ್ನಾಕರನಲ್ಲಡ ಗಿರುವ ವಿವಿಧರತ್ನಗಳಿಂದ ನಿರ್ಮಿತವಾದ ಮಾಲೆಗಳನ್ನು ಕಂಧರದಲ್ಲಿ ಧರಿಸಿದವನು ನೀನು. ಭಗವನ್! ನೀನು ವಿಜಯಶಾಲಿಯಾಗು. ॥೨೪॥

ಮಹಾಬಲಶಾಲಿಯಾದ ಕಮಲಾಸುರನು ನಿನ್ನ ಮೇಲೆ ಪ್ರಯೋಗಿಸಿದ ನಿಶಿತ ಶರಗಳನ್ನೆಲ್ಲ ನಿನ್ನ ಕರಕಮಲದಲ್ಲಿ ಭೂಷಣವಾಗಿರುವ ಸು-ಕೋಮಲ ಕಮಲ ಪುಷ್ಪದಿಂದಲೇ ನಿವಾರಿಸಿದ ಧೀರನು ನೀನು. ನಿನ್ನ ಕರಕಮಲದ ಕಮನೀಯ ರೂಪದಿಂದ ಕರಗತ ಕಮಲಪುಷ್ಪವನ್ನು ನಾಚಿಸಿರುವೆ. ॥೨೫॥

ಕಮಲಾಪತಿಯ (ಶ್ರೀಮನ್ನಾರಾಯಣನ) ಕರಕಮಲದಲ್ಲಿರುವ ಕಮಲಪುಷ್ಪ

**ಸರ್ವಹೃತ್ಕಮಲಾನಂದ ಜಯ ಸರ್ವಾಘನಾಶನ ! ||೨೬||**

**ಕಮಲಾಂಕುಶಹಸ್ತಸ್ಥ ಜಯ ವಿಘ್ನಹರಾವ್ಯಯ ! ।**
**ತ್ವಯಾ ವಿನಿಹತಃ ಪಾಪಃ ಶಕ್ರಾದಿಭಯದೋ ರಿಪುಃ ||೨೭||**

**ವಜ್ರಚಕ್ರಾದ್ಯಭೇದ್ಯೋ ಯೋ ಮುನೀನಾಮಪಿ ಭೀತಿದಃ ।**

**ಕ ಉವಾಚ :—**

**ಏವಂ ಸ್ತುತ್ವಾ ಪುಪೂಜುಸ್ತೇ ಗೌತಮಾದ್ಯಾ ಮಹರ್ಷಯಃ ||೨೮||**

ದಂತೆ ಅರಳಿದ ಕಣ್ಣುಗಳುಳ್ಳವನು ನೀನು. ಎಲ್ಲರ ಹೃದಯಕಮಲಗಳನ್ನೂ ನೀನು. ಹೃಷ್ಟ-ಪುಷ್ಟಗಳನ್ನಾಗಿ ಮಾಡುವೆ. ಭಜಕರ ಸಕಲ ಪಾತಕಗಳನ್ನೂ ನಿಶ್ಶೇಷವಾಗಿ ಪರಿಹರಿಸುವ ಪರಮಾತ್ಮ! ನೀನು ವಿಜಯಶಾಲಿಯಾಗು. ||೨೬||

ನೀನು ನಿನ್ನ ಕರಕಮಲಗಳಲ್ಲಿ ಕಮಲಪುಷ್ಪ, ಅಂಕುಶ ಇವನ್ನು ಆಯುಧಗಳನ್ನಾಗಿ ಧರಿಸಿರುವೆ. ಸಕಲ ವಿಘ್ನಗಳನ್ನೂ ನೀನು ಪರಿಹರಿಸತಕ್ಕವನು. ವ್ಯಯ (ನಾಶ) ರಹಿತ ಸ್ವರೂಪನು ನೀನು ಈ ಕಮಲಾಸುರನು ಮಹಾ ಧೈರ್ಯವಂತರೆನಿಸಿದ ದೇವೇಂದ್ರಾದಿಗಳನ್ನೂ ಗಡಗಡ ನಡುಗಿಸಿದವನು. ಸುರವಿದ್ವೇಷಿ, ಮಹಾ ಪಾಪಿಷ್ಠ. ಇಂತಹ ಲೋಕಕಂಟಕನನ್ನು ಜಗತ್ಪ್ರಭೋ! ನೀನು ಸಂಹರಿಸಿರುವೆ. ||೨೭||

ದೇವೇಂದ್ರನ ವಜ್ರಾಯುಧ, ಶ್ರೀಮನ್ನಾರಾಯಣನ ಸುದರ್ಶನ ಚಕ್ರ ಇವಕ್ಕೂ ಸಹ ಈ ಕಮಲಾಸುರನ ದೇಹವನ್ನು ಭೇದಿಸುವ ಸಾಮರ್ಥ್ಯವಿರಲಿಲ್ಲ. ತಪಶ್ಶಕ್ತಿಯಿಂದ ನಿಮಿಷಮಾತ್ರದಲ್ಲಿ ತ್ರಿ-ಭುವನಗಳನ್ನೇ ದಹಿಸಿಬಿಡಬಲ್ಲ ಮುನಿಗಳೂ ಸಹ ಇವನ ದುಷ್ಟತನಕ್ಕಾಗಿ ಹೆದರಿಹೋಗಿದ್ದರು. ಅಂತಹ ಭಯಂಕರನಾದವನು ಆ ರಾಕ್ಷಸ.

ಬ್ರಹ್ಮಾ :—

ಹೀಗೆಂದು ಗೌತಮಾದಿ ಮಹರ್ಷಿಗಳು ಮಹಾಗಣಪತಿಯನ್ನು ಸ್ತುತಿಸಿ

**ದಶಭಿರ್ದೋರ್ಭಿರಾಲಿಂಗ್ಯ ಪುಪೂಜ ಗಿರಿಶೋಽಪಿ ತಮ್ ।**
**ತತಸ್ತೇ ಮುನಯಃ ಪ್ರೋಚುರ್ಮಯೂರೇಶಂ ಚ ಶಂಕರಮ್ ॥೨೯॥**

**ಮುನಯ ಊಚುಃ :—**

**ಅತ್ರ ತ್ವಂ ಸರ್ವದಾ ತಿಷ್ಠ ಸರ್ವದೇವಗಣೈರ್ಯುತಃ ।**
**ಪೂರಯನ್ ಭಕ್ತಕಾರ್ಯಾಣಿ ವಾರಯನ್ ವಿಘ್ನಸಂಚಯಾನ್ ॥೩೦॥**

---

ವಿವಿಧೋಪಚಾರಗಳನ್ನು ಸಮರ್ಪಿಸಿ ಭಕ್ತಿಯಿಂದ ಅರ್ಚಿಸಿದರು. ॥೨೮॥

ತನ್ನ ಪುತ್ರನ ಅಪ್ರತಿಮ ವೀರ್ಯವನ್ನೂ, ಮಹರ್ಷಿಗಳು ಸಹ ಅವನನ್ನು ಸ್ತುತಿಸಿ ಅರ್ಚಿಸಿದುದನ್ನೂ ಕಂಡು ಪರಮೇಶ್ವರನು ಪರಮಹರ್ಷಿತನಾದನು. ಆ ಕೂಡಲೇ ಮುಂದೆ ಬಂದು ತನ್ನ ಹತ್ತು ಬಾಹುಗಳನ್ನೂ ಚಾಚಿ ಮಗನನ್ನು ಬಿಗಿದಪಿದನು. ತತ್ಪುರುಷನು ತತ್ತ್ವವನ್ನು ಸ್ಪಷ್ಟವಾಗಿ ಅರಿತವನಾದುದರಿಂದ ಮಯೂರೇಶ್ವರನಾಗಿ ತೋರಿಬರುವ ಸಾಕಾರರೂಪದಲ್ಲಿ ಮಗನೆಂದು ವ್ಯಾಮೋಹವನ್ನಿಡದೆ ವಿವಿಧೋಪಚಾರಗಳನ್ನು ಸಮರ್ಪಿಸಿ ಖಂಡರೂಪವಾಗಿ ತೋರುತ್ತಲಿದ್ದ ಅಖಂಡ ಸ್ವರೂಪವನ್ನು ಭಕ್ತಿಯಿಂದ ಅರ್ಚಿಸಿದನು. ಮೊದಲೇ ಭಾವಪರವಶರಾಗಿದ್ದ ಮುನಿಗಳು ಅತ್ಯಪೂರ್ವವಾದ ಆ ದೃಶ್ಯವನ್ನು ನೋಡಿದ ಬಳಿಕಂತೂ ಬಹಳ ಸಂತುಷ್ಟರಾದರು. ಹಾಗೂ ಪರಮೇಶ್ವರನನ್ನೂ ಮಯೂರೇಶ್ವರನನ್ನೂ ಕುರಿತು ಹೀಗೆಂದು ವಿಜ್ಞಾಪಿಸಿದರು. ॥೨೯॥

ಮುನಿಗಳು :—

ಪೂಜ್ಯರೇ! ನಾವು ಎಷ್ಟೇ ತಪಸ್ಸಿದ್ಧರಾದರೂ ಪಾಮರರು. ಸಚ್ಚಿದಾನಂದ ಸ್ವರೂಪರಾದ ನಿಮ್ಮ ತಾತ್ತ್ವಿಕ ರೂಪವನ್ನು ಅರಿಯಲಸಮರ್ಥರು. ಆದುದರಿಂದಲೇ "ನೀವು ಇಲ್ಲಿರುವುದು, ಬೇಡ. ಬೇರೆಲ್ಲಾದರೂ ಹೋಗಿ!" ಎಂದೂ "ಇಲ್ಲವಾದರೆ ನಾವೇ ಹೊರಟುಹೋಗುವೆವು" ಎಂದೂ ನುಡಿದೆವು. ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೇ ನೀವು ಸರ್ವದಾ ಇಲ್ಲಿಯೇ ವಾಸವಾಗಿರಿ. ನೀವಿಲ್ಲಿದ್ದರೆ ತಪಸ್ವಿಗಳಾದ ನಮಗೆ ಯಾವ ಬಗೆಯ ತಾಪವೂ ಇರುವುದಿಲ್ಲ. ಒಂದು ವೇಳೆ ಅಂತಹ ಪ್ರಮಾದವೇ

ಕ ಉವಾಚ :—

ಏವಂ ತೈಃ ಪ್ರಾರ್ಥಿತೌ ದೇವೌ ಸರ್ವದೇವಗಣೈರ್ಯುತೌ ।
ಪೂರಯಂತೌ ಭಕ್ತಕಾಮಾನ್ ಹರಂತೌ ವಿಘ್ನಸಂಚಯಾನ್ ॥೩೧॥

ಸ್ಥಿತೌ ತತ್ರ ಮಯೂರೇಶ–ಶಂಕರೌ ಲೋಕಶಂಕರೌ ।
ವಿಶ್ವಕರ್ಮಾ ವ್ಯಧಾತ್ತತ್ರ ಮಂದಿರಂ ಸುಂದರಂ ತತಃ ॥೩೨॥

ಅಸಂಖ್ಯಶಿಖರದ್ವಾರಂ ಅಸಂಖ್ಯಾಶ್ಚರ್ಯಸಂಯುತಮ್ ।
ತತ್ರಾಭೂನ್ನಗರಂ ಚಾರು ಸರ್ವಲೋಕಸಮನ್ವಿತಮ್ ॥೩೩॥

---

ನಾದರೂ ಘಟಿಸಿದರೆ ಹೇಗೂ ನೀವಿಲ್ಲಿರುವುದರಿಂದ ಎಂತಹ ವಿಪತ್ತು ಬಂದರೂ ನೀವು ನಮ್ಮನ್ನು ಅದರಿಂದ ಪಾರುಗಾಣಿಸುವಿರಿ. ಭಕ್ತರ ಕಾರ್ಯಗಳನ್ನೆಲ್ಲ ನಡೆಸಿಕೊಟ್ಟಂತೆಯೂ ಆಗುವುದು. ॥೩೦॥

ಬ್ರಹ್ಮಾ:—

ಈ ರೀತಿಯಾಗಿ ಗೌತಮಾದಿಗಳು ಅವರಿಬ್ಬರನ್ನೂ ಪ್ರಾರ್ಥಿಸಲು, ಅವ್ಯಾಜ ಕರುಣಾಸಾಗರರಾದ ಪಿತಾ-ಪುತ್ರರಿಬ್ಬರೂ ಅವರ ಬಿನ್ನಹವನ್ನು ಸಂತೋಷದಿಂದ ಅನುಮೋದಿಸಿ ಅಲ್ಲಿಯೇ ವಾಸಮಾಡಲು ನಿಶ್ಚಯಿಸಿದರು. " ಬಸವನಿದ್ದಲ್ಲಿ ಬಾಲ " ಎಂಬಂತೆ ಸಕಲ ದೇವತೆಗಳೂ, ಪ್ರಮಥಗಣಗಳೂ ದೇವರೊಡನೆ ಅಲ್ಲಿಯೇ ನೆಲೆಸಿದರು. ಮತ್ತು ಭಜಿಸುವ ಭಕ್ತರು ಬೇಡುವ ಸಕಲ ವಿಧ ಬಯಕೆಗಳನ್ನೂ ಈಡೇರಿಸಿ ಕೊಡುತ್ತಲಿದ್ದರು. ಆ ಪ್ರದೇಶವೆಲ್ಲ ಸುರಕ್ಷಿತವಾಯಿತು. ಬರುತ್ತಲಿರಬಹುದಾದ ವಿಘ್ನಗಳನ್ನೆಲ್ಲ ಪರಿಹರಿಸಲು ವಿಘ್ನಹರನು ಸಿದ್ಧನಾಗಿಯೇ ಇದ್ದನು. ॥೩೧॥

ಲೋಕ ಶಂಕರರಾದ ಶಂಕರ-ಸುಮುಖ (ಗಣಪತಿ) ರು ಅಲ್ಲಿ ವಾಸಮಾಡಲು ನಿರ್ಧರಿಸಿದೊಡನೆಯೇ ದೇವಲೋಕದ ಶಿಲ್ಪಿಯಾದ ವಿಶ್ವಕರ್ಮ ಬ್ರಹ್ಮನು ಧಾವಿಸಿ ಬಂದು ಆ ಪ್ರದೇಶದಲ್ಲಿ ಸುಂದರವಾದ ಒಂದು ಮಂದಿರವನ್ನು ನಿರ್ಮಿಸಿಕೊಟ್ಟನು. ಆ ಮಂದಿರವು ಇವರ ವಾಸಕ್ಕೆ ತಕ್ಕುದಾಗಿದ್ದಿತು. ॥೩೨॥

ಆ ದಿವ್ಯಮಂದಿರದ ಮೇಲ್ಭಾಗಗಳಲ್ಲಿದ್ದ ಉನ್ನತ ಶಿಖರಗಳನ್ನು ಎಣಿಸುವುದಕ್ಕೆ

" ಮಯೂರೇಶಪುರಂ " ತಸ್ಯ ನಾಮ ಚಕ್ರುರ್ಮಹರ್ಷಯಃ ।
ತಪಸ್ತೇಪುರ್ಮುನಿಗಣಾ ನಾನಾಭರಣಸಂಶ್ರಿತಾಃ ॥೩೪॥

ಹರೋಽಪಿ ಚ ತಪಸ್ತೇಪೇ ಗಿರಿಜಾ-ಗಣಸಂಯುತಃ ।
ತಸ್ಯ ಧ್ಯಾನಂ ಪೂಜನಂ ಚ ಸ್ಮರಣಂ ತೇ ವ್ಯಧುರ್ದ್ವಿಜಾಃ ॥೩೫॥

ಮಯೂರೇಶಃ ಪುನರ್ಬಾಲ್ಯೈಃ ಕ್ರೀಡತಿ ಸ್ಮ ಯಥಾ ಪುರಾ ॥೩೬॥

ಸಹ ಸುಲಭವಾಗಿ ಆಗುತ್ತಲಿರಲಿಲ್ಲ. ಎಲ್ಲಿ ನೋಡಿದರೂ ಅಲ್ಲೊಂದು ಮಹಾ ದ್ವಾರವು ಕಂಡುಬರುತ್ತಲಿದ್ದಿತು. ಆ ಮಂದಿರದಲ್ಲಿದ್ದ ಪ್ರತಿಯೊಂದು ಸನ್ನಿವೇಶವೂ ಅತ್ಯಪೂರ್ವವೂ ಆಶ್ಚರ್ಯಕರವೂ ಆಗಿದ್ದಿತು. ಇವರು ನೆಲೆಸಿದ ಆ ಪ್ರದೇಶ ದಲ್ಲಿ ಒಂದು ನಗರವೇ ನಿರ್ಮಿತವಾಯಿತು. ಜನರೆಲ್ಲ ಬಂದು ತಮ್ಮ ತಮ್ಮ ಅನುಕೂಲ್ಯಕ್ಕನುಸರಿಸಿ ಬಗೆ ಬಗೆಯ ವಾಸಸ್ಥಾನಗಳನ್ನು ಕಲ್ಪಿಸಿಕೊಂಡು " ನಾನು ಮೊದಲು, ತಾನು ಮೊದಲು " ಎಂಬ ಪೈಪೋಟಿಯ ಮೂಲಕ ಬಂದು ಅಲ್ಲಿಯೇ ನೆಲೆಸಿದರು. ನಗರವು ಜನನಿಬಿಡವಾಗಿದ್ದರೂ ಅತ್ಯಂತ ರಮಣೀಯವಾಗಿ ತೋರುತ್ತಲಿದ್ದಿತು. ||೩೩||

" ಮಯೂರೇಶ ಪುರ " ಎಂದು ಆ ನಗರಕ್ಕೆ ಮಹರ್ಷಿಗಳು ಹೆಸರನ್ನಿಟ್ಟರು. ತಾವೂ ಅಲ್ಲಿ ನೆಲೆಸಿ ತಪೋಽನುಷ್ಠಾನವನ್ನು ಕೈಗೊಂಡರು. ಅವರಿಗೆ ಯಾವ ವಿಧ ವಾದ ಉಪದ್ರವವೂ ಉಂಟಾಗಲಿಲ್ಲ. ||೩೪||

ಗಿರಿಜೆ, ಪ್ರಮಥಗಣಗಳು ಇವರೊಡನೆ ಕೂಡಿಕೊಂಡು ಕಪರ್ದಿಯೂ ಅಲ್ಲಿ ತಪಸ್ಸನ್ನು ಆರಂಭಿಸಿದನು. ಇತರ ದ್ವಿಜಜನರು ಮಯೂರೇಶ್ವರ, ಪರಮೇಶ್ವರ ತಪಸ್ವಿಗಳು ಇವರ ಧ್ಯಾನ ಹಾಗೂ ಪೂಜೆ ಇತ್ಯಾದಿಗಳಲ್ಲೇ ನಿರತರಾಗಿ ಸುಖದಿಂದ ವಾಸಿಸಲಾರಂಭಿಸಿದರು. ||೩೫||

ಸಾಹಸವನ್ನು ತೋರಿಸಬೇಕಾದ ಸನ್ನಿವೇಶವೆಲ್ಲ ಕಳೆದುಹೋದ ಬಳಿಕ ಮಯೂರೇಶನು ಮತ್ತೆ ಸಾಮಾನ್ಯ ಬಾಲಕನಂತಾಗಿ ತನ್ನ ಸಂಗಡಿಗರಾದ ಮುನಿ ಬಾಲಕರೊಂದಿಗೆ ಯಥಾಪ್ರಕಾರ ಆಟಗಳನ್ನಾಡುತ್ತಲಿದ್ದನು. ||೩೬||

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ “ ಕಮಲಾಸುರವಧೋ ” ನಾಮ ತ್ರ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ ||**

ಇಲ್ಲಿಗೆ ಶ್ರೀ ಗಣೇಶ ಪುರಾಣದ ಉತ್ತರಖಂಡದಲ್ಲಿ “ ಕಮಲಾಸುರ ವಧೆ ” ಎಂಬಲ್ಲಿಗೆ ನೂರ ಮೂರನೆಯ ಅಧ್ಯಾಯಾನುವಾದವು ಮುಗಿಯಿತು.

॥ ಶ್ರೀ ಗಣೇಶಾಯ ನಮಃ ॥

# ಅಥ ಚತುರಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಅಹಂ ಪ್ರಯಾತಸ್ತಂ ದ್ರಷ್ಟುಂ ಗುಪ್ತರೂಪೋ ದ್ವಿಜೋತ್ತಮ ! ।**
**ಅದರ್ಶಂ ತತ್ರ ತಂ ದೇವಮುಮಯಾ ಸಹಿತಂ ಪ್ರಭುಮ್ ॥೧॥**

**ಸ್ನಾತ್ವಾಸೀನಂ ಜಪಂತಂ ಚ ಪರಂ ಬ್ರಹ್ಮ ಸನಾತನಮ್ ।**
**ಅಹಂ ತಮಸ್ತುವಂ ದೇವಂ ಮಯೂರೇಶ್ವರಸಂಜ್ಞಕಮ್ ॥೨॥**

---

॥ ಶ್ರೀ ಗಣೇಶಾಯ ನಮಃ ॥

## ೧೦೪ ನೆಯ ಅಧ್ಯಾಯ

ಬ್ರಹ್ಮಾ:—

ದ್ವಿಜೋತ್ತಮ, ವ್ಯಾಸ ! ಕೇಳು, ಹಿಂದೊಮ್ಮೆ ನಡೆದ ಕಥಾನಕವನ್ನು ಹೇಳುವೆನು. ಇದ್ದಕ್ಕಿದ್ದಂತೆಯೇ ನನಗೊಂದು ದಿವಸ ಯಾರಿಗೂ ತಿಳಿಯದ ರೀತಿಯಲ್ಲಿ ದೇವನನ್ನು ನೋಡಿಕೊಂಡು ಬರಬೇಕೆಂಬ ಇಚ್ಛೆ ಉಂಟಾಯಿತು. ಮಯೂರೇಶ್ವರನ ಬಗ್ಗೆ ಅನೇಕರು ಅನೇಕ ರೀತಿಯಿಂದ ಮಹಿಮೆಗಳನ್ನು ವರ್ಣಿಸಿ ಹೇಳುತ್ತಿದ್ದುದೇ ನನಗುಂಟಾದ ಉತ್ಸಾಹಕ್ಕೆ ಕಾರಣ. ನಾನು 'ಬ್ರಹ್ಮಾ' ಎಂಬುದನ್ನು ಯಾರೂ ತಿಳಿಯದಿರಲಿ, ಎಂದು ನಿಶ್ಚಯಿಸಿ ಗುಪ್ತವೇಷದಿಂದ ಅಲ್ಲಿಗೆ ತೆರಳಿದೆನು ಮತ್ತು ಜಗದ್ಯೋನಿಗಳಾದ ಉಮಾ-ಮಹೇಶ್ವರರೊಡನೆ ಅಲ್ಲಿ ನಲಿದಾಡುತ್ತಲಿದ್ದ ಪ್ರಭು; ಮಯೂರೇಶ್ವರನನ್ನು ಸಂದರ್ಶಿಸಿದೆನು. ॥೧॥

ಆ ವೇಳೆಗಾಗಲೇ ಭಗವಂತನು ಸ್ನಾನವನ್ನು ಮಾಡಿ ಸನಾತನವೂ ಸ್ವ-ಸ್ವರೂಪವೂ ಆದ ಪರಬ್ರಹ್ಮವಸ್ತುವನ್ನು ಧ್ಯಾನಿಸುತ್ತಲೂ "ಸೋಽಹಮಸ್ಮಿ" ಎಂದು

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ಕಮಲಾಸುರವಧೋ "**
**ನಾಮ ತ್ರ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ ||**

---

ಇಲ್ಲಿಗೆ ಶ್ರೀ ಗಣೇಶ ಪುರಾಣದ ಉತ್ತರಖಂಡದಲ್ಲಿ " ಕಮಲಾಸುರ ವಧೆ "
ಎಂಬಲ್ಲಿಗೆ ನೂರ ಮೂರನೆಯ ಅಧ್ಯಾಯಾನುವಾದವು ಮುಗಿಯಿತು.

॥ ಶ್ರೀ ಗಣೇಶಾಯ ನಮಃ ॥

# ಅಥ ಚತುರಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಅಹಂ ಪ್ರಯಾತಸ್ತಂ ದ್ರಷ್ಟುಂ ಗುಪ್ತರೂಪೋ ದ್ವಿಜೋತ್ತಮ ! ।**
**ಅದರ್ಶಂ ತತ್ರ ತಂ ದೇವಮುಮಯಾ ಸಹಿತಂ ಪ್ರಭುಮ್ ॥೧॥**

**ಸ್ನಾತ್ವಾಸೀನಂ ಜಪಂತಂ ಚ ಪರಂ ಬ್ರಹ್ಮ ಸನಾತನಮ್ ।**
**ಅಹಂ ತಮಸ್ತುವಂ ದೇವಂ ಮಯೂರೇಶ್ವರಸಂಜ್ಞಕಮ್ ॥೨॥**

---

॥ ಶ್ರೀ ಗಣೇಶಾಯ ನಮಃ ॥

## ೧೦೪ ನೆಯ ಅಧ್ಯಾಯ

ಬ್ರಹ್ಮಾ:—

ದ್ವಿಜೋತ್ತಮ, ವ್ಯಾಸ ! ಕೇಳು, ಹಿಂದೊಮ್ಮೆ ನಡೆದ ಕಥಾನಕವನ್ನು ಹೇಳುವೆನು. ಇದ್ದಕ್ಕಿದ್ದಂತೆಯೇ ನನಗೊಂದು ದಿವಸ ಯಾರಿಗೂ ತಿಳಿಯದ ರೀತಿಯಲ್ಲಿ ದೇವನನ್ನು ನೋಡಿಕೊಂಡು ಬರಬೇಕೆಂಬ ಇಚ್ಛೆ ಉಂಟಾಯಿತು. ಮಯೂರೇಶ್ವರನ ಬಗ್ಗೆ ಅನೇಕರು ಅನೇಕ ರೀತಿಯಿಂದ ಮಹಿಮೆಗಳನ್ನು ವರ್ಣಿಸಿ ಹೇಳುತ್ತಿದ್ದುದೇ ನನಗುಂಟಾದ ಉತ್ಸಾಹಕ್ಕೆ ಕಾರಣ. ನಾನು 'ಬ್ರಹ್ಮಾ' ಎಂಬುದನ್ನು ಯಾರೂ ತಿಳಿಯದಿರಲಿ, ಎಂದು ನಿಶ್ಚಯಿಸಿ ಗುಪ್ತವೇಷದಿಂದ ಅಲ್ಲಿಗೆ ತೆರಳಿದೆನು ಮತ್ತು ಜಗದ್ಯೋನಿಗಳಾದ ಉಮಾ-ಮಹೇಶ್ವರರೊಡನೆ ಅಲ್ಲಿ ನಲಿದಾಡುತ್ತಲಿದ್ದ ಪ್ರಭು; ಮಯೂರೇಶ್ವರನನ್ನು ಸಂದರ್ಶಿಸಿದೆನು. ॥೧॥

ಆ ವೇಳೆಗಾಗಲೇ ಭಗವಂತನು ಸ್ನಾನವನ್ನು ಮಾಡಿ ಸನಾತನವೂ ಸ್ವ-ಸ್ವರೂಪವೂ ಆದ ಪರಬ್ರಹ್ಮವಸ್ತುವನ್ನು ಧ್ಯಾನಿಸುತ್ತಲೂ "ಸೋಽಹಮಸ್ಮಿ" ಎಂದು

**ಪುರಾಣಪುರುಷಂ ದೇವಂ ನಾನಾಕ್ರೀಡಕರಂ ಮುದಾ ।**
**ಮಾಯಾವಿನಂ ದುರ್ವಿಭಾವ್ಯಂ ಮಯೂರೇಶಂ ನಮಾಮ್ಯಹಮ್ ॥೩॥**

**ಪರಾತ್ಪರಂ ಚಿದಾನಂದಂ ನಿರ್ವಿಕಾರಂ ಹೃದಿ ಸ್ಥಿತಮ್ ।**
**ಗುಣಾತೀತಂ ಗುಣಮಯಂ ಮಯೂರೇಶಂ ನಮಾಮ್ಯಹಮ್ ॥೪॥**

---

ಸರ್ವದಾ ಜಪಿಸುತ್ತಲೂ ಕುಳಿತಿದ್ದನು. ಪವಿತ್ರವಾದ ಈ ದೃಶ್ಯವನ್ನು ನೋಡಿ ಪುಲಕಿತನಾದ ನಾನು ಪ್ರಕೃತ "ಮಯೂರೇಶ್ವರ" ಎಂದು ಹೆಸರನ್ನಿಟ್ಟುಕೊಂಡು ಅತ್ಯದ್ಭುತ ರೀತಿಯಿಂದ ತನ್ನ ಲೀಲಾ-ವಿನೋದಗಳನ್ನು ಜಗತ್ತಿಗೆ ವ್ಯಕ್ತಪಡಿಸುತ್ತಲಿದ್ದ ದೇವರ ದೇವನನು ಸ್ತುತಿಸಲಾರಂಭಿಸಿದೆನು. ॥೨॥

ಭಗವನ್ ! ನೀನು ಅನಾದಿಸ್ವರೂಪನು, ಸ್ವಯಂಪ್ರಕಾಶನು, ಯಾವ ಕ್ಲೇಶವೂ ಇಲ್ಲದೇ ನಾನಾ ಬಗೆಯ ಕ್ರೀಡೆಗಳನ್ನು ಲೀಲೆಯಿಂದಲೇ ನಡೆಸಬಲ್ಲವನು. ಅನೇಕ ವಿಧವಾದ ಮಾಯೆಗಳನ್ನು ಅಧೀನಪಡಿಸಿಕೊಂಡವನು. ಮನಃಪ್ರಣಿಧಾನವಿಲ್ಲದವರಿಗೆ ಅಗಮ್ಯನಾದವನು. ಮಯೂರೇಶ್ವರ ! ನಾನು ನಿನಗೆ ವಂದಿಸುವೆನು. ॥೩॥

ಪರವಸ್ತುಗಳಿಗೆಲ್ಲ ಪರತರನಾದವನು. ಅಖಂಡ ಜ್ಞಾನಾನಂದಸ್ವರೂಪನು, ಸರ್ವವಿಧ ಭಾವವಿಕಾರಶೂನ್ಯನು. (ವಿಕಾರವೆಂದರೆ ಪರಿಣಾಮ, ಅರ್ಥಾತ್ ಬದಲಾವಣೆ, ಹುಟ್ಟುವ ಜೀವಿಯು ದ್ರವರೂಪದಿಂದ ಘನೀಭೂತವಾಗಿ ಪರಿಣಾಮ ಹೊಂದಿ ಒಂದು ಬಗೆಯಿಂದ ಅವ್ಯಕ್ತರೂಪಗೊಂಡು ಜನಿಸುವುದು. ಜನಿಸಿದನಂತರ ದೇಹ, ದೇಹಾಂತರ್ಗತ ರಕ್ತಧಮನಿಗಳು ಇವು ಕಾಲ, ಬಾಹ್ಯವಾತಾವರಣ ಇವುಗಳ ಸಹಾಯ ಸಹಕಾರಗಳಿಂದ ಪುಷ್ಟಿಗೊಳ್ಳುವುವು, ಇದೇ ಕ್ರಮದಿಂದ ಶೈಶವ, ಬಾಲ್ಯ ಕೌಮಾರು ತಾರುಣ್ಯ, ಮಧ್ಯಮ ಹಾಗೂ ವಾರ್ಧಕ್ಯ ಈ ಎಲ್ಲ ದಶೆಗಳನ್ನೂ ಪಡೆದು ಮುಪ್ಪಿನಿಂದ ಗಲಿತವಾಗಿ ಕ್ಷಯಿಸುತ್ತ ಕೊನೆಗೊಂದು ದಿನ ಇದ್ದಕ್ಕಿದ್ದಂತೆಯೇ ಲಯವನ್ನು ಹೊಂದುವುದು. ಇದಲ್ಲದೇ ಆಹಾರ ವಿಹಾರಗಳ ವ್ಯತ್ಯಯದಿಂದ ಹಾಗೂ ಪ್ರಾರಬ್ಧ ಕರ್ಮದ ವತ್ತಡದಿಂದ ಅನೇಕ ವಿಧ ರೋಗಗಳಿಗೆ ಬಲಿಯಾಗಿ ಇದ್ದಕ್ಕಿದ್ದಂತೆ ಮಿತಿಮೀರಿ ಪುಷ್ಟಿಗೊಳ್ಳುವುದು, ಇಲ್ಲವೇ ಕ್ಷಯಿಸುತ್ತ ಹೋಗುವುದು, ಅಂಗ-ಇಂದ್ರಿಯಗಳು ವಿಕಲವಾಗುವುದು, ಅಥವಾ ದೇಹದ ಭಾಗಗಳು ಮೇಲ್ಹೊದ್ದಿಕೆಯ (ಚರ್ಮವ) ನ್ನು ಬಿರಿದು ಹೊರ

**ಸೃಜಂತಂ ಪಾಲಯಂತಂ ಚ ಸಂಹರಂತಂ ನಿಜೇಚ್ಛಯಾ ।**
**ಸರ್ವವಿಘ್ನಹರಂ ದೇವಂ ಮಯೂರೇಶಂ ನಮಾಮ್ಯಹಮ್ ॥೫॥**

**ಇಂದ್ರಾದಿದೇವತಾವೃಂದೈರಭಿಷ್ಟುತಮಹರ್ನಿಶಮ್ ।**
**ಸದಸದ್ವ್ಯಕ್ತಮವ್ಯಕ್ತಂ ಮಯೂರೇಶಂ ನಮಾಮ್ಯಹಮ್ ॥೬॥**

---

ಹೊಮ್ಮುವುದು ಇತ್ಯಾದಿಗಳು) ಇವೆಲ್ಲ ರೂಪಗೊಳ್ಳುವ ವಸ್ತುಗಳಿಗೆ:ಅನಿವಾರ್ಯವಾಗಿ ಸಂಭವಿಸತಕ್ಕವು. ನಿತ್ಯನೂ ಅನಂತನೂ:ಅಶರೀರಿಯೂ ಆದ ಭಗವನ್! ನಿನಗೆ ಈ ಯಾವ ವಿಕಾರವೂ ಸಂಭವಿಸುವುದಿಲ್ಲ ಎಲ್ಲರ ಹೃತ್ಕುಹರದಲ್ಲೂ ನೀನು ಅಭಿವ್ಯಕ್ತಿಗೊಳ್ಳತಕ್ಕವನು, ಸತ್ತ್ವರಜಸ್ತಮೋಗುಣಗಳ ಆಡಳಿತಕ್ಕೆ ಒಳಪಡದೇ ಇರತಕ್ಕವನು. ಆಯಾ ಗುಣಗಳನ್ನೆಲ್ಲ ವ್ಯಾಪಿಸಿರುವವನು- ಇಂತಹ ಮಯೂರೇಶನನ್ನು ನಾನು ನಮಸ್ಕರಿಸುವೆನು. ॥೪॥

ಸ್ಥಾವರ-ಜಂಗಮಾತ್ಮಕವಾದ ಈ ಪ್ರಪಂಚವನ್ನೆಲ್ಲ ತತ್ತತ್ಕರ್ಮಾನುಗುಣವಾಗಿ ನೀನು ಸೃಜಿಸುವೆ. ಸೃಜಿಸಿದ ವಸ್ತುಗಳನ್ನು ನೀನೇ ಪರಿಪಾಲಿಸುವೆ. ಹಾಗೂ ಆಯಾ ಪ್ರಾಣಿಗಳ ಕರ್ಮಾನುಭವ ಕಾಲವು ಪರಿಸಮಾಪ್ತಿಗೊಂಡಾಗ ಅವನ್ನೆಲ್ಲ ಸಂಹರಿಸುವೆ. ಸೃಷ್ಟಿ-ಸ್ಥಿತಿ-ಲಯಗಳನ್ನು ನಿರ್ವಹಿಸುವಾಗ ನೀನು ಶ್ರಮಪಡಬೇಕಾದುದೇ ಇಲ್ಲ. ಎಲ್ಲವೂ ಸ್ವೇಚ್ಛೆಯಿಂ (ಎಂದರೆ 'ಇದು ಹೀಗೆಯೇ ನಡೆಯಲಿ' ಎಂದು ನೀನು ಸಂಕಲ್ಪಿಸಿದ ಮಾತ್ರದಿಂ) ದಲೇ ಸ್ವಲ್ಪವೂ ತಡೆ ಇಲ್ಲದೇ ನಡೆದು ಹೋಗುವುದು. ಭಕ್ತರಿಗೊದಗುವ ಸಕಲ ವಿಧ ವಿಘ್ನಗಳನ್ನೂ ನೀನು ಪರಿಹರಿಸುವೆ. ನೀನು ಸ್ವಯಂಪ್ರಕಾಶ ವಸ್ತುವಾಗಿರುವೆ. ಭಗವನ್, ಮಯೂರೇಶ್ವರ : ನಿನಗೆ ನಾನು ವಂದಿಸುವೆನು. ॥೫॥

ದೇವ! ಮಹೇಂದ್ರಾದಿ ಸಕಲ ವೃಂದಾರಕ (ದೇವತೆಗಳು) ವೃಂದ (ಸಮುದಾಯ) ವು ನಿನ್ನನ್ನು ಸರ್ವದಾ ಹೊಗಳುತ್ತಲೂ ಸೇವಿಸುತ್ತಲೂ ಇರುವುದು. ನೀನು ವ್ಯಾವಹಾರಿಕ ಸತ್ತೂ ಅಲ್ಲ. ತುಚ್ಛ (ಶಶವಿಷಾಣ) ದಂತೆ ಅಸತ್ತೂ ಅಲ್ಲ. ಪ್ರಾತೀತಿಕ ದೃಶ್ಯದಂತೆ ಮಿಥ್ಯೆಯೂ ಅಲ್ಲ, ಇವೆಲ್ಲಕ್ಕೂ ವಿಲಕ್ಷಣ ವಸ್ತುವಾಗಿರುವೆ. ಯಾವ ಯಾವ ಬಗೆಯ ಉಪಕರಣಗಳಿಗೂ ನೀನು ಗೋಚರನಾಗತಕ್ಕವನಲ್ಲ. ಅರ್ಥಾತ್ ನೀನು ದೃಶ್ಯವಲ್ಲ. (You are not to be seen but

**ನಾನಾದೈತ್ಯನಿಹಂತಾರಂ ನಾನಾರೂಪಾಣಿ ಬಿಭ್ರತಮ್ ।**
**ನಾನಾಯುಧಧರಂ ಭಕ್ತ್ಯಾ ಮಯೂರೇಶಂ ನಮಾಮ್ಯಹಮ್ ॥೭॥**

**ಸರ್ವಶಕ್ತಿಮಯಂ ದೇವಂ ಸರ್ವರೂಪಧರಂ ವಿಭುಮ್ ।**
**ಸರ್ವವಿದ್ಯಾಪ್ರವಕ್ತಾರಂ ಮಯೂರೇಶಂ ನಮಾಮ್ಯಹಮ್ ॥೮॥**

**ಪಾರ್ವತೀನಂದನಂ ಶಂಭೋರಾನಂದಪರಿವರ್ಧನಮ್ ।**
**ಭಕ್ತಾನಂದಕರಂ ನಿತ್ಯಂ ಮಯೂರೇಶಂ ನಮಾಮ್ಯಹಮ್ ॥೯॥**

---

seer). ಇಂತಹ ಮಯೂರೇಶನನ್ನು ನಾನು ನಮಿಸುವೆನು. ॥೬॥

ಧರ್ಮವಿದ್ವೇಷಿಗಳಾದ ದೈತ್ಯರು ಎಷ್ಟೆಷ್ಟು ಜನರು ಇದ್ದರೋ. ಮತ್ತು ಯಾವ ಯಾವ ರೂಪಗಳನ್ನು ಧರಿಸಿ ಬಂದು ಜನರನ್ನು ಪೀಡಿಸಿದರೋ ಹೇಳಲ ಬರುವಂತಿಲ್ಲ. ಅವರನ್ನೆಲ್ಲ ನಿಗ್ರಹಿಸಲು ಭಗವನ್, ಸ್ವಭಾವತಃ ನೀರೂಪನಾದ ನೀನು ನಾನಾರೂಪಗಳನ್ನು ತಳೆದು ಅವತರಿಸಿರುವೆ. ಯಾವ ಯಾವ ಆಯುಧ ಗಳಿಂದ ತಮಗೆ ಮೃತ್ಯು ಒದಗಬಾರದೆಂದು ಅವರು ವರಗಳನ್ನು ಪಡೆದಿದ್ದರೋ ಅವಕ್ಕಿಂತಲೂ ವಿಲಕ್ಷಣಗಳಾದ ಆಯುಧಗಳನ್ನೇ ಉಪಯೋಗಿಸಿ ವರಗಳಿಗೆ ವಿಘಾತ ಬರದಂತೆ ಆ ರಕ್ಕಸರನ್ನು ನಿರ್ಮೂಲಮಾಡಿರುವೆ. ಮಯೂರೇಶ್ವರ ! ಬಹಳ ಭಕ್ತಿ ಯಿಂದ ನಿನ್ನನ್ನು ನಮಿಸುವೆನು. ॥೭॥

ನೀನು ಸರ್ವಶಕ್ತಿಸಂಪನ್ನನು. ದೇವರಿಗೆಲ್ಲ ದೇವನು. ಯಾವ ರೂಪವನ್ನು ಬೇಕಾದರೂ ಇಚ್ಛಾಮಾತ್ರದಿಂದಲೇ ಧರಿಸಬಲ್ಲವನು. ಅಣು-ರೇಣು-ತೃಣ-ಕಾಷ್ಠಗಳಲ್ಲೂ ಹಾಸು-ಹೊಕ್ಕಾಗಿ ನೆಲೆಸಿರುವೆ. ಸಕಲ ವಿಧ ವಿದ್ಯೆಗಳ ತಿರುಳನ್ನೂ ತಿಳಿದವನು ಮತ್ತು ಬುಭುತ್ಸುಗಳಿಗೆ ತಿಳಿಸಿಕೊಡತಕ್ಕವನು. ಇಂತಹ ಮಯೂ ರೇಶ್ವರನ್ನು ನಾನು ಪ್ರಣಮಿಸುವೆನು. ॥೮॥

ಪಾರ್ವತೀದೇವಿಯ ನಂದನ (ಕುಮಾರ) ನು. ಅಂತೆಯೇ ಪರಶಿವನ ಆನಂದ ವನ್ನು ನಿನ್ನ ಲೀಲಾವಿನೋದಗಳಿಂದ ಕ್ಷಣ-ಕ್ಷಣಕ್ಕೂ ಅಭಿವೃದ್ಧಿಗೊಳಿಸತಕ್ಕವನು. ಭಜಕರ ಹೃದಯಗಳಲ್ಲಿ ಸ್ವರೂಪಾನಂದದ ಬುಗ್ಗೆಯನ್ನು ಚಿಮ್ಮಿಸತಕ್ಕವನು. ನಿತ್ಯ

**ಮುನಿಧ್ಯೇಯಂ ಮುನಿನುತಂ ಮುನಿಕಾಮಪ್ರಪೂರಕಮ್ ।**
**ಸಮಷ್ಟಿ-ವ್ಯಷ್ಟಿರೂಪಂ ತ್ವಾಂ ಮಯೂರೇಶಂ ನಮಾಮ್ಯಹಮ್ ॥೧೦॥**

**ಸರ್ವಾಜ್ಞಾನನಿಹಂತಾರಂ ಸರ್ವಜ್ಞಾನಕರಂ ಶುಚಿಮ್ ।**
**ಸತ್ಯಜ್ಞಾನಮಯಂ ಸತ್ಯಂ ಮಯೂರೇಶಂ ನಮಾಮ್ಯಹಮ್ ॥೧೧॥**

**ಅನೇಕಕೋಟಿಬ್ರಹ್ಮಾಂಡನಾಯಕಂ ಜಗದೀಶ್ವರಮ್ ।**
**ಅನಂತವಿಭವಂ ವಿಷ್ಣುಂ ಮಯೂರೇಶಂ ನಮಾಮ್ಯಹಮ್ ॥೧೨॥**

**ತ್ವದ್ದರ್ಶನೇನ ಪೂತೋಽಹಂ ಪರಮಾನಂದನಿರ್ಭರಃ ।**
**ಆಶ್ಚರ್ಯಂ ಪರಮಂ ಪ್ರಾಪ್ತಸ್ತಸ್ಯ ದೈತ್ಯಸ್ಯ ಮಾರಣಾತ್ ॥೧೩॥**

---

ನಾದವನು. ಭಗವನ್! ಮಯೂರವಾಹನ! ನಿನ್ನನ್ನು ಅಭಿವಂದಿಸುವೆನು. ॥೯॥

ಮುನಿಗಳಿಗೆ ಪರಮಧ್ಯೇಯವಸ್ತುವಾದವನು. ಮುನಿಗಳ ಸ್ತೋತ್ರಕ್ಕೆ ಪಾತ್ರನಾದವನು. ಮುನಿಗಳ (ಮುಕ್ತಿರೂಪ) ಕಾಮನೆಯನ್ನು ಪರಿಪೂರಣಮಾಡತಕ್ಕವನು. ಜಲ–ತರು–ಪಾಷಾಣ ಮೊದಲಾದ ಪ್ರಪಂಚಾತ್ಮಕವಾಗಿ ತೋರತಕ್ಕವನೂ ನೀನೇ. ಅಂತೆಯೇ ಇವಕ್ಕೆ ವಿಲಕ್ಷಣನಾಗಿಯೂ ನೀನು ಇರುವೆ ಹಾಗೂ ತೋರುವೆ. ಇಂತಹ ಮಯೂರೇಶ್ವರನನ್ನು ನಾನು ವಂದಿಸುವೆನು. ॥೧೦॥

ಜನಸಾಮಾನ್ಯರಿಗೆ ಉಂಟಾಗಬಹುದಾದ ಅಜ್ಞಾನವನ್ನು ಕಳೆಯತಕ್ಕವನು. ಹಾಗೆಯೇ ಶುದ್ಧವಾದ ಸ್ವರೂಪಜ್ಞಾನವನ್ನು ಅನುಗ್ರಹಿಸತಕ್ಕವನು. ಸಕಲ ವಿಧ ಮಲಗಳ ಸಂಪರ್ಕಕ್ಕೂ ದೂರವಾದವನು.. ತ್ರಿಕಾಲಾಬಾಧಿತ ಸತ್ಸ್ವರೂಪನು. ಜ್ಞಾನಭಂಡಾರನು· ಜಗತ್ಪ್ರಭೋ, ಮಯೂರೇಶ್ವರ:! ನಿನ್ನನ್ನು ನಾನು ವಂದಿಸುವೆನು. ॥೧೧॥

ಅನೇಕ ಕೋಟಿ ಸಂಖ್ಯೆಯಲ್ಲಿರುವ ಬ್ರಹ್ಮಾಂಡಗಳಿಗೆಲ್ಲ ಅಧೀಶ್ವರನಾದವನು. ಜಗದೊಡೆಯನು. ಅನಂತ ವಿಭವಗಳುಳ್ಳವನು. ಸರ್ವತ್ರ ವ್ಯಾಪಕನಾಗಿರತಕ್ಕವನು. ಇಂತಹ ಮಯೂರೇಶ್ವರನನ್ನು ನಾನು ನಮಸ್ಕರಿಸುವೆನು. ॥೧೨॥

ನಿನ್ನ ದಿವ್ಯ ಮಂಗಲಸ್ವರೂಪವನ್ನು ಸಂದರ್ಶಿಸಿದ್ದರಿಂದ ನಾನು ಪುನೀತ

ಯೇನ ಶಕ್ರೋಽಂತಕೋ ದೇವಾ ಲೋಕಪಾಲಾ ಜಿತಾ ಬಲಾತ್ ।
ಸಹಸ್ರಶತಯೋಧೀಯೋಽಸಂಖ್ಯದೇಹೋ ರಣೇ ಹತಃ ॥೧೪॥

ತ್ರಿಧಾಭೂತಸ್ತ್ರಿಸ್ಥಲೇಷು ಪತಿತಃ ಕಮಲಾಸುರಃ ।
ತಂ ಸಮಾಪೂಜಯಮಹಂ ಸರ್ವತೀರ್ಥಜಲೈಶ್ಶುಭೈಃ ॥೧೫॥

ಕಮಂಡಲುಗತೈರೇನೋನಾಶಕೈರಭಿಷೇಚಯಮ್ ।
ದಿವ್ಯವಸ್ತ್ರೇ ದಿವ್ಯಗಂಧಂ ದಿವ್ಯಪುಷ್ಪಮಯೀಂ ಶುಭಾಮ್ ॥೧೬॥

---

ನಾನೆನು. ಪರಮಾನಂದಭರಿತನಾಗಿರುವೆನು. ಕಮಲಾಸುರನು ಎಂತಹ ಬಲಿಷ್ಠ ದೈತ್ಯ? ಅಂಥವನನ್ನು ಕೂಡ ನೀನು ನಿರ್ಲಕ್ಷ್ಯಭಾವದಿಂದ ಕೊಂದು ಚೆಲ್ಲಿದೆ ಯಲ್ಲವೇ? ಎಂತಹ ಅದ್ಭುತವಾದ ಸಂಗತಿ ಇದು? ನಾನಂತೂ ಆಶ್ಚರ್ಯ ಚಕಿತನಾಗಿ ಹೋಗಿದ್ದೇನೆ ॥೧೩॥

ಮಹೇಂದ್ರ, ಕೃತಾಂತ, ಮೊದಲಾದ ಲೋಕಪಾಲಕರಾದ ಎಲ್ಲ ದೇವತೆಗಳನ್ನೂ ಈ ಕಮಲಾಸುರನು ಜಯಿಸಿದವನಲ್ಲವೇ? ಲಕ್ಷಾವಧಿ ವೀರಯೋಧರು ಒಮ್ಮೆಲೇ ಇವನೊಂದಿಗೆ ಹೋರಾಟಕ್ಕೆ ಬಂದರೂ ಇವನು ಲಕ್ಷ್ಯವಿಲ್ಲದೇ ಅವರೊಡನೆ ಹೋರಾಡುತ್ತಲಿದ್ದವನು. ಪ್ರಸಂಗಾನುಗುಣವಾಗಿ ಎಣಿಸಲಾರದಷ್ಟು ದೇಹಗಳನ್ನು ಬೇಕಾದರೂ ಸೃಜಿಸಿಕೊಳ್ಳಬಲ್ಲವನಾದವನು. ಇಂತಹ ಧೂರ್ತ, ಕಮಲಾಸುರನ ರಣಶಿರದಲ್ಲಿ ಬಿದ್ದು ನಿನ್ನಿಂದ ಹತನಾದನಲ್ಲವೇ? ॥೧೪॥

ಕಮಲಾಸುರನಿಗೆ ಮರಣ ಬಂದರೂ ಸಾಮಾನ್ಯ ಮಾನವರಿಗೆ ಬರುವಂತೆ ಆಗಿರಲಿಲ್ಲ. ಅವನು ಮೂರು ತುಂಡುಗಳಾಗಿ ಮೂರು ಸ್ಥಳಗಳಲ್ಲಿ ಉರುಳಿಬಿದ್ದನು ಎಂದು ಮುಂತಾಗಿ ಸ್ತುತಿಸಿ ನಾನಾ ಬಗೆಯ ಉಪಚಾರಗಳನ್ನಿತ್ತು ಭಕ್ತಿಯಿಂದ ಅರ್ಚಿಸಿದೆನು. ನಾನು ದೇವನನ್ನು ಸಂದರ್ಶಿಸಲು ಹೋಗುವಾಗ ಸಕಲ ತೀರ್ಥಗಳನ್ನೂ ದಾಟಿ ಹೋಗಿದ್ದೆನಷ್ಟೆ, ಅಲ್ಲಲ್ಲಿಯ ತೀರ್ಥಗಳನ್ನೆಲ್ಲ ಸಂಗ್ರಹಿಸಿಕೊಂಡು ॥೧೬॥

ನನ್ನ ಕಮಂಡಲುವಿನಲ್ಲಿರಿಸಿದ್ದೆ. ಅವನ್ನು ಸರಿಯಾಗಿ ವಿನಿಯೋಗಿಸುವ ಸುಸನ್ನಿವೇಶವೂ ಅನಾಯಾಸವಾಗಿ ಒದಗಿಬಂದಿತ್ತು. ಅವನ್ನು ಗಣಪತ್ಯಥರ್ವಶೀರ್ಷ ಮಹಾಮಂತ್ರಗಳಿಂದ ಸಂಸ್ಕರಿಸಿ ಅದರಿಂದ ದೇವನಿಗೆ ಅಭಿಷೇಕವನ್ನು ಮಾಡಿದೆನು.

**ವನಮಾಲಾಮಸ್ಯ ಕಂಠೇ ದತ್ವಾ ನಾಮ ವ್ಯಧಾಮಹಮ್ ।**
**"ವನಮಾಲೀ"ತಿ ಲೋಕೇಷು ವಿಖ್ಯಾತಂ ಸರ್ವಮಂಗಲಮ್ ||೧೭||**

**ಪೂಜಾವಿಧಿಂ ಸಮಾಪ್ಯೈನಂ ಪ್ರದಕ್ಷಿಣಾಮಥೋ ವ್ಯಧಾಮ್ ।**
**ಪಾದಾಘಾತೇನ ಮೇ ತತ್ರ ನ್ಯುಬ್ಜತಾಂ ಗಮಿತಃ ಕ್ಷಣಾತ್ ||೧೮||**

**ನಾನಾ ತೀರ್ಥಜಲೈರ್ಯುಕ್ತಃ ಸ್ಥಾಪಿತೋ ಮೇ ಕಮಂಡಲುಃ ।**
**ಯತೋಽಹಂ ತಜ್ಜಲಂ ಭರ್ತುಂ ತತೋ ಮಾಮಬ್ರವೀದ್ವಿಭುಃ ||೧೯||**

---

ದಿವ್ಯವಾದ ವಸ್ತ್ರಯುಗ್ಮವನ್ನು ಉಡಿಸಿದೆನು. ದಿವ್ಯಚಂದನವನ್ನು ಅನುಲೇಪಿಸಿದೆನು-ಮಂದಾರ ಪಾರಿಜಾತ ಮೊದಲಾದ ದೇವಲೋಕದ ಸುಗಂಧಿ ಸು—ಮನೋಹರ ಕುಸುಮಗಳಿಂದ ಬಹು ಮುದ್ದಾಗಿ ರಚಿಸಿ ತಂದ ||೧೭||

ಪುಷ್ಪಮಾಲಿಕೆಯನ್ನು ದೇವನ ಕಂಬುಕಂಧರಕ್ಕೆ ಹಾಕಿ ಅಲಂಕರಿಸಿದೆನು. ಇಷ್ಟಾದ ಬಳಿಕ ದೇವನನ್ನು "ವನಮಾಲೀ" ಎಂಬ ಶುಭವಾದ ಅಂಕಿತದಿಂದ ಕರೆದೆನು. ಮಂಗಲಕರವಾದ ಈ ಹೆಸರು ಅಂದು ಮೊದಲ್ಗೊಂಡು ಸಕಲ ಲೋಕಗಳಲ್ಲೂ ಪ್ರಚಾರಕ್ಕೆ ಬಂದಿತು. ||೧೭||

ಪೂಜಾವಿಧಾನವೆಲ್ಲ ಪರಿಸಮಾಪನಗೊಂಡ ಬಳಿಕ ಮಯೂರವಾಹನನ ಸುತ್ತಲೂ ಪ್ರದಕ್ಷಿಣೆಯನ್ನು ಮಾಡಿದೆನು. ಪ್ರದಕ್ಷಿಣೆ ಬರುತ್ತಲಿದ್ದ ಸಂಭ್ರಮದಲ್ಲಿ ಅಲ್ಲೇ ಸಮೀಪದಲ್ಲಿರಿಸಿದ್ದ ನನ್ನ ಕಮಂಡಲುವಿಗೆ ನನ್ನ ಕಾಲು ತಗುಲಿತು. ಸರಿ, ಅದು ಮಗುಚಿಬಿದ್ದಿತು. ||೧೮||

ನಾನು ಬಹಳ ಪ್ರಯಾಸದಿಂದ ಅನೇಕ ತೀರ್ಥಪ್ರದೇಶಗಳನ್ನು ಅಲೆದಾಡಿ ಅಲ್ಲಿಯ ಪವಿತ್ರ ಜಲವನ್ನು ಸಂಗ್ರಹಿಸಿ ಕಮಂಡಲುವಿನಲ್ಲಿರಿಸಿದ್ದೆ. ಅಂತಹ ಜಲವೆಲ್ಲ ನೆಲಕ್ಕೆ ಚೆಲ್ಲಿಹೋದರೆ ಯಾರಿಗೆ ತಾನೆ ವ್ಯಥೆಯಾಗಲಿಕ್ಕಿಲ್ಲ? ಚೆಲ್ಲಿಹೋದ ಜಲವನ್ನೆಲ್ಲ ಪುನಃ ನನ್ನ ಕಮಂಡಲುವಿಗೆ ತುಂಬೋಣವೆಂದು ಪ್ರಯತ್ನಿಸಲಾರಂಭಿಸಿದೆನು. ನನ್ನ ಈ ಉದ್ಯಮವನ್ನು ನೋಡಿ ವಿಭು ನನ್ನನ್ನು ಕುರಿತು ಹೀಗೆಂದು ನುಡಿದನು. ||೧೯||

**ಮಯೂರೇಶ ಉವಾಚ :—**

**ಇದಂ ಬ್ರಹ್ಮಕೃತಂ ಸ್ತೋತ್ರಂ ಸರ್ವಪಾಪಪ್ರಣಾಶನಮ್ ।**
**ಸರ್ವಕಾಮಪ್ರದಂ ನೄಣಾಂ ಸರ್ವೋಪದ್ರವನಾಶನಮ್ ॥೨೦॥**

**ಕಾರಾಗೃಹಗತಾನಾಂ ಚ ಮೋಚನಂ ದಿನಸಪ್ತಕಾತ್ ।**
**ಆಧಿ-ವ್ಯಾಧಿಹರಂ ಚೈವ ಭುಕ್ತಿ-ಮುಕ್ತಿಪ್ರದಂ ವಿಭೋ ! ॥೨೧॥**

**ಸ್ಥಿರೋ ಭವ, ವಿರಿಂಚೇ ! ತ್ವಂ ನದೀಯಂ ಸರ್ವಪಾವನೀ ।**
**" ಕಮಂಡಲುಭವಾ " ನಾಮ್ನಾ ಖ್ಯಾತಾ ಲೋಕೇ ಭವಿಷ್ಯತಿ ॥೨೨॥**

**ದರ್ಶನಾದ್ವಾಚಕಂ ಪಾಪಂ ಸ್ಪರ್ಶನಾಚ್ಚ ಮನೋಮಯಮ್ ।**

---

ಮಯೂರೇಶ :—

ಕಮಲೋದ್ಭವ ! ನೀನು ರಚಿಸಿ ನುಡಿದ ಈ ಸ್ತೋತ್ರ ತತ್ತ್ವಗರ್ಭಿತವಾಗಿದೆ. ಇದು ಪಾತಕ ಪರಿಹಾರಕರವಾದುದು. ಇದು ಬ್ರಹ್ಮಕೃತವೆಂದು ಜಗತ್ತಿನಲ್ಲಿ ಖ್ಯಾತಿಗೊಳ್ಳಲಿ. ಇದನ್ನು ಪಠಿಸುವ ನರರು ತಮ್ಮ ಅಭೀಷ್ಟಗಳನ್ನು ಪಡೆಯುವಂತಾಗುವರು. ಇದು ಸಕಲ ಉಪದ್ರವಗಳನ್ನೂ ಪರಿಹರಿಸತಕ್ಕದ್ದಾಗಿದೆ. ॥೨೦॥

ವಿಧೇ ! ಈ ಸ್ತೋತ್ರವನ್ನು ಏಳು ದಿನಗಳವರೆಗೆ ಎಡೆಬಿಡದೇ ಭಕ್ತಿಯಿಂದ ಪಠಿಸುವುದಾದರೆ ಕಾರಾಗೃಹದಲ್ಲಿ ಬಂಧಿತನಾದವನೂ ಸಹ ಬಿಡುಗಡೆಯನು ಹೊಂದುತ್ತಾನೆ. ಆಧಿ (ಮಾನಸಿಕ ರೋಗ) ವ್ಯಾಧಿ (ಶಾರೀರಕ ರೋಗ) ಗಳನ್ನು ಈ ಸ್ತೋತ್ರವು ಪರಿಹರಿಸುವುದು. ಭುಕ್ತಿ (ಐಹಿಕ ಭೋಗ) ಮುಕ್ತಿ (ಆತ್ಯಂತಿಕ ಬಿಡುಗಡೆ) ಗಳನ್ನು ಕೊಡತಕ್ಕದ್ದು. ॥೨೧॥

ವಿರಿಂಚೇ ! ಕಮಂಡಲು ಜಲವೆಲ್ಲ ಉರುಳಿ ನೆಲಕ್ಕೆ ಚೆಲ್ಲಿಹೋಯಿತೆಂದು ನೀನು ಚಿಂತಿಸಬೇಕಾದ ಪ್ರಮೇಯವಿಲ್ಲ. ಇದು ಪರಮ ಪವಿತ್ರವಾದ ಒಂದು ನದಿಯಾಗಿ ಪರಿಣಮಿಸಿ ಹರಿಯುವುದು. " ಕಮಂಡಲು ಭವಾ " ಎಂದೇ ಇದರ ಹೆಸರು. ಈ ಹೆಸರೇ ಸರ್ವತ್ರ ಪ್ರಚಾರಕ್ಕೆ ಬರುವುದು. ॥೨೨॥

ಈ ನದಿಯನ್ನು ಯಾರು ಸಂದರ್ಶಿಸುವರೋ ಅಂಥವರ ವಾಚಕ ಪಾತಕ( ಇತರರನ್ನು ನಿಂದಿಸುವುದು. ಅಶ್ಲೀಲ ಭಾಷೆಗಳನ್ನಾಡುವುದು) ಗಳೆಲ್ಲ ಪರಿಹೃತವಾಗುವುವು.

**ಸ್ನಾನಾಚ್ಚ ಕಾಯಿಕಂ ಸರ್ವಂ ನಾಶಯಿಷ್ಯತಿ ನಿಮ್ನಗಾ ॥೨೩॥**

**ನಿರಂತರಂ ಸೇವನಾಚ್ಚ ಮೋಕ್ಷಮೇಷಾಂ ಪ್ರದಾಸ್ಯತಿ ।**

**ಕ ಉವಾಚ :—**

**ಏವಂ ದತ್ತೇ ವರೇ ತೇನ ಸಸ್ನುಸ್ತತ್ರ ಮುನೀಶ್ವರಾಃ ॥೨೪॥**

**ಸ–ದಾರಾಃ ಸ–ಪರೀವಾರಾಃ ಸಪ್ತಕೋಟಿಗಣಾ ಅಹನ್ ।**

**ತಪಸ್ತೇಪುಸ್ತದಾ ತತ್ರ ಮುನಯಸ್ತೇ ಮಯಾ ಸಹ ॥೨೫॥**

---

ಅಶ್ಲೀಲ ಭಾಷೆಗಳನ್ನಾಡುವುದು) ಗಳೆಲ್ಲ ಪರಿಹೃತವಾಗುವುವು. ಇದನ್ನು ಸ್ಪರ್ಶಿಸಿದರೆ ಮಾನಸಿಕ ಪಾತಕಗಳೆಲ್ಲ ನಾಶವನ್ನು ಹೊಂದುವುವು. ಇದರಲ್ಲಿಳಿದು ಅವಗಾಹನ ಸ್ನಾನವನ್ನು ಮಾಡತಕ್ಕವರಿಗೆ ದೈಹಿಕಪಾತಕಗಳೆಲ್ಲವೂ ನಿರ್ಮೂಲವಾಗಿ ಹೋಗುವುವು. ಇಂತಹ ಮಹಿಮೆಯುಳ್ಳದ್ದಾಗುವುದು ಈ ನದಿ. ॥೨೩॥

ಈ ನದೀ ತೀರದಲ್ಲೇ ವಾಸಮಾಡುತ್ತ ನಿರಂತರವಾಗಿ ಇದರ ದರ್ಶನ, ಸ್ಪರ್ಶ ಹಾಗೂ ಸ್ನಾನ ಪೂಜಾದಿಗಳನ್ನು ಮಾಡತಕ್ಕ ಭಾಗ್ಯಶಾಲಿಯು ನಿರತಿಶಯವಾದ ಮುಕ್ತಿಸಾಮ್ರಾಜ್ಯವನ್ನೇ ಪಡೆಯುವನು.

ಬ್ರಹ್ಮ:—

ದೇವನು ಆ ನದಿಗೆ ಹೀಗೆ ವರಗಳನ್ನು ಅನುಗ್ರಹಿಸಿದುದನ್ನು ತಿಳಿದ ಕೂಡಲೇ ಆ ಪ್ರದೇಶದಲ್ಲಿ ತಪೋಽನುಷ್ಠಾನ ನಿರತರಾದ ಮುನಿಗಳೆಲ್ಲ ಸರ-ಸರ ಎದ್ದು ಹೋಗಿ ಆ ನದಿಯಲ್ಲಿ ಸ್ನಾನವನ್ನು ಮಾಡಿದರು- ॥೨೪॥

ತಮ್ಮ ಪತಿಗಳಾದ ಮುನೀಶ್ವರರು ಹೊಸ ನದಿಯಲ್ಲಿ ಸ್ನಾನೋದ್ಯುಕ್ತರಾದುದನ್ನು ಕಂಡ ಋಷಿಪತ್ನಿಯರೆಲ್ಲರೂ ಧಾವಿಸಿ ಬಂದು ತಮ್ಮ ತಮ್ಮ ಪತಿಗಳೊಂದಿಗೆ ನದಿಯಲ್ಲಿ ಮಿಂದರು. ಇದನ್ನು ನೋಡಿದ ಋಷಿಕುಮಾರರು, ಶಿಷ್ಯವರ್ಗದವರು ಎಲ್ಲರೂ ಋಷಿ, ಋಷಿಪತ್ನಿಯರನ್ನನುಸರಿಸಿದರು. ಅನಂತರ ಏಳು ಕೋಟಿ ಪ್ರಮುಥ

**ತತೋಽಹಂ ಮಾಯಯಾ ತಸ್ಯ ಮೋಹಿತೋ ಪ್ರಾಬ್ರುವಂ ಬಹೂನ್ ।**
**ಜಗತ್ಕರ್ತಾ ಜಗದ್ವಂದ್ಯಃ ಶಕ್ರಾದಿಸುರಪೂಜಿತಃ ॥೨೬॥**

---

ಗಣಗಳೂ ಓಡುತ್ತ ಬಂದು ನದಿಯಲ್ಲಿ ಧುಮ್ಮಿಕ್ಕಿ ಸ್ನಾನವನ್ನು ಮಾಡಿದವು. ಇದರಿಂದ ನನಗೂ ಉತ್ಸಾಹ ಉಂಟಾಯಿತು. ನಾನೂ ಸ್ನಾನವನ್ನು ಮಾಡಿ ತಪಿಸುತ್ತ ಆ ನದಿಯ ತೀರದಲ್ಲೇ ಕುಳಿತೆನು. ಅಲ್ಲಿದ್ದ ಋಷಿಗಳೆಲ್ಲ ನನ್ನ ಸಮೀಪಕ್ಕೆ ಬಂದು ಕುಳಿತು ನನ್ನೊಡನೆ ತಮ್ಮ ಧ್ಯಾನಕ್ರಿಯೆಯನ್ನು ಆರಂಭಿಸಿದರು. ॥೨೫॥

ಇಷ್ಟೆಲ್ಲ ರೀತಿಯಿಂದ ಮಯೂರೇಶ್ವರನ ಮಹಿಮೆಯನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೆನಾದರೂ ಅವನ ಅಚಿಂತ್ಯ ಶಕ್ತಿಯುಳ್ಳ ಮಾಯೆಯು ನನ್ನನ್ನು ಮುಸುಕಿಬಿಟ್ಟಿತು. ಎಂತಹ ಪ್ರಾಜ್ಞನಾದರೇನು? ಮಾಯೆಯ ಆಡಳಿತದ ಮುಂದೆ ನಿಲ್ಲಬಲ್ಲನೇ? ಆಗ ನಾನು ನನ್ನ ಬಳಿ ಕುಳಿತಿದ್ದ ಮುನಿಗಳ ಪೈಕಿ ಬಹು ಜನರನ್ನು ಸಮೀಪಕ್ಕೆ ಕರೆದು ಅವರಿಗೆ ಹೀಗೆಂದು ಹೇಳಿದೆನು. 'ಮುನಿಗಳೇ ನೋಡಿ, ಜನರು ಎಷ್ಟರಮಟ್ಟಿಗೆ ದಡ್ಡರು ಎಂಬುದನ್ನು "ಗತಾನುಗತಿಕೋ ಲೋಕಃ ನ ಲೋಕಃ ಪಾರಮಾರ್ಥಿಕಃ ॥ ಸೇತೌ ಸೈಕತಲಿಂಗೇನ ನಷ್ಟಂ ಮೇ ತಾಮ್ರಭಾಜನಮ್" ಎಂದರೆ ಒಬ್ಬ ಬಡ ಯಾತ್ರಿಕನು ರಾಮೇಶ್ವರಕ್ಕೆ ಹೋದಾಗ ತನ್ನ ತಾಮ್ರದ ತಂಬಿಗೆಯನ್ನು ಸುರಕ್ಷಿತವಾಗಿರಿಸಲು ಸ್ಥಳವಿಲ್ಲದ್ದರಿಂದ ಸಮುದ್ರದ ದಡದಲ್ಲಿ ಹೂತಿಟ್ಟು ಆ ಸ್ಥಳದ ಗುರುತಿಗಾಗಿ ಅದರ ಮೇಲೆ ಮರಳಿನಿಂದ ಒಂದು ಲಿಂಗಾಕೃತಿಯನ್ನು ಮಾಡಿದನಂತೆ. ಅದರ ಪರಿಣಾಮವೇನಾಯ್ತು ಗೊತ್ತೇ? ಅನಂತರ ಬಂದ ಯಾತ್ರಿಗರು ಅಲ್ಲಿ ರಚಿತವಾಗಿದ್ದ ಕೃತಕ ಶಿವಲಿಂಗವನ್ನು ನೋಡಿ "ಸ್ನಾನಾನಂತರ ಹೀಗೆ ರಚಿಸಿಹೋಗುವುದು ಕ್ಷೇತ್ರನಿಯಮವಿರಬಹುದೆ"ಂದು ನಿಶ್ಚಯಿಸಿ ತತ್ತ್ವದ ಚಿಂತನೆಗೆ ಹೋಗದೆ ಪ್ರತಿಯೊಬ್ಬನೂ ಅಲ್ಲಲ್ಲಿ ಒಂದೊಂದು ಲಿಂಗಾಕೃತಿಯನ್ನು ನಿರ್ಮಿಸಿ ನಡೆದನಂತೆ. ಪಾಪ ಈ ಬಡ ಬ್ರಾಹ್ಮಣ ದೇವತಾಯತನಗಳನ್ನೆಲ್ಲ ಸಂದರ್ಶಿಸಿ ಬಂದು ಛತ್ರಕ್ಕೆ ಭೋಜನಾರ್ಥಿಯಾಗಿ ಹೋಗಲು ತನ್ನ ತಂಬಿಗೆಯನ್ನು ಹುಡುಕಿದರೆ ಯಾವುದು ತಾನು ರಚಿಸಿದ ಗುರುತು? ಎಂಬುದನ್ನು ತಿಳಿಯಲಾರದೇ ಇದ್ದ ಒಂದು ತಂಬಿಗೆಯನ್ನೂ ಕಳೆದುಕೊಂಡನಂತೆ, ಅದರಂತಾಗಿದೆ, ಈ ಜನರೆಲ್ಲರ ಸ್ಥಿತಿ. ಹೆಚ್ಚೇಕೆ? ನನ್ನನ್ನೇ ನೋಡಿ, ನನ್ನ ಮಹಿಮೆಯು ಸಾಮಾನ್ಯವಾದುದೇ? ಈ ಜಗವನ್ನೆಲ್ಲ

**ಬಾಲಮೇಕಾದಶಾಬ್ದಂ ತತ್ಕಥಂ ಪ್ರಣತವಾನಹಮ್ ।**
**ಅರ್ಭಕೈಃ ಕ್ರೀಡಮಾನಂ ತಮಾಚಾರರಹಿತಂ ಶಿಶುಮ್ ॥೨೬॥**

**ಧಿಙ್ಮೇ ಜ್ಞಾನಂ ಮಹತ್ತ್ವಂ ಚ ಪೈತಾಮಹಪದಂ ಚ ಧಿಕ್ ।**
**ಇಮಾಂ ಸೃಷ್ಟಿಂ ವಿಧಾಯಾಹಂ ಸ್ಥಾಸ್ಯಾಮಿ ಗುಪ್ತರೂಪಧೃಕ್ ॥೨೭॥**

**ಅಯಂ ಚೇತ್ಪರಮಾತ್ಮಾ ಸ್ಯಾದಪರಾಂ ನಿರ್ಮಮೀತ್ಸನಃ ।**
**ಏವಂ ನಿಶ್ಚಿತ್ಯ ಮನಸಾ ಸೃಷ್ಟಿಮಾತ್ಮಾನಮೇವ ಚ ॥೨೮॥**

---

ನಾನು ಸೃಜಿಸಿದವನಲ್ಲವೇ? ಜಗವೆಲ್ಲ ನನ್ನನ್ನು "ಪಿತಾಮಹ" ಎಂದು ಗೌರವಿಸಿ ವಂದಿಸುತ್ತಲಿಲ್ಲವೇ? ಇಂದ್ರಾದಿ ದೇವೋತ್ತಮರು ಸಹ ನನ್ನನ್ನು ವಂದಿಸುತ್ತಿರುವರು. ॥೨೬॥

ಇಂತಹ ನಾನು ಇತರರ ಆಚರಣೆಯನ್ನು ನೋಡಿ ಮುಗ್ಧನಾಗಿ ಹನ್ನೊಂದ ವರ್ಷದ ಈ ಬಾಲಕನಿಗೆ ನಮಸ್ಕರಿಸಿದೆನಲ್ಲ? ನಾನು ಹೀಗೇಕೆ ಮೋಸಹೋಗಿರಬಹುದು? ಇವನು ನನಗಿಂತಲೂ ವಯಸ್ಸಿನಲ್ಲಿ ದೊಡ್ಡವನೇ? ವಿದ್ಯಾವಿನಯ ಸಂಪನ್ನನೇ? ಅಥವಾ ಸದಾಚಾರಿಯೇ? ಗೌರವಾರ್ಹವಾದ ಯಾವುದೊಂದು ಗುಣವೂ ಈತನಲ್ಲಿರುವುದಿಲ್ಲ. ಹುಡುಗರೊಡನೆ ಹುಚ್ಚು ಹುಚ್ಚಾಗಿ ಆಟವಾಡುತ್ತ ತನ್ನ ವರ್ಣಾಶ್ರಮವಿಹಿತ ವೇದಾಧ್ಯಯನಾದಿಗಳನ್ನೂ ತ್ಯಜಿಸಿ ತಿರುಗುತ್ತಿರುವನು. ॥೨೬॥

ನನಗೆ ಧಿಕ್ಕಾರವಿರಲಿ, ನಾನು ಜ್ಞಾನಸಂಪನ್ನನಾಗಿದ್ದ ಮಾತ್ರಕ್ಕೆ ಬಂದ ಭಾಗ್ಯವಾದರೂ ಏನು? ನಾನು ಅಲಂಕರಿಸಿರುವ ಪೈತಾಮಹ ಪದವಿಯ ಗೌರವವಾದರೂ ಹೇಗೆ ಉಳಿದಂತಾಯಿತು? ಎಲ್ಲಕ್ಕೂ ಧಿಕ್ಕಾರವಿರಲಿ." ಎಂದು ನುಡಿದು "ಆದದ್ದಾಯಿತು, ಎದೆಗುಂದಬಾರದು. ನಾನು ರಚಿಸಿರುವ ಸೃಷ್ಟಿಯಾದ ಸಕಲ ಸ್ಥಾವರಜಂಗಮ ಜೀವಿಗಳೆಲ್ಲ ಕಾಣದಂತಾಗುವಂತೆ ಮಾಡಿ ನಾನು ಸಹ ಯಾರ ಕಣ್ಣಿಗೂ ಕಾಣಿಸದ ಹಾಗೆ ಅಡಗಿ ಕುಳಿತುಕೊಳ್ಳುವೆನು. ನೋಡೋಣ, ಇವನ ಸಾಮರ್ಥ್ಯವನ್ನು ॥೨೭॥

ಜನರು ಭಾವಿಸಿರುವಂತೆ ಇವನು ನಿಜವಾಗಿಯೂ ಪರಮಾತ್ಮನೇ ಆಗಿರುವ ಪಕ್ಷದಲ್ಲಿ ಯಾವುದಕ್ಕೂ ಅಂಜದೇ ನಾನು ಮಾಡಿದ ಈ ಮಾಯೆಗೆ ಪ್ರತಿಯಾಗಿ

**ಅಂತರ್ಧಾಯ ಸ್ಥಿತೋ ಯಾವತ್ತಾವದ್ದೇವೋ ಗಜಾನನಃ ।**
**ನ ದದರ್ಶ ಸಖೀನ್ ಬಾಲಾಂಸ್ತತಸ್ತೇಷಾಂ ಗೃಹಾನಗಾತ್ ॥೩೦॥**

**ಶೂನ್ಯಾನ್ ದೃಷ್ಟ್ವಾ ಗೃಹಾನ್ ಸರ್ವಾನ್ ಖಿನ್ನೋ ವೃಕ್ಷಾನಲೋಕಯತ್ ।**
**ನ ದದರ್ಶ ದ್ರುಮಾನ್ ಜಂತೂನ್ ಪಶು-ಪಕ್ಷಿಗಣಾನ್ ಯದಾ ॥೩೧॥**

**ತದಾ ಸ್ವರ್ಗಂ ಗತೋ ದೇವೋ ನಾಪಶ್ಯತ್ತತ್ರ ತಾನ್ ಸುರಾನ್ ।**
**ಗಂಧರ್ವಾನ್ ಕಿನ್ನರಾನ್ ಯಕ್ಷಾನ್ ಪಿತೄನ್ ಶಶಿ-ರವೀ ನ ಚ ॥೩೨॥**

---

ಮಾಯೆಯನ್ನು ಹೂಡಿ ಮತ್ತೊಂದು ಸೃಷ್ಟಿಯನ್ನೇ ಮಾಡಿ ನೆಲೆಗೊಳಿಸುವನು." ಎಂದು ಮನಸ್ಸಿನಲ್ಲೇ ನಿಶ್ಚಯಿಸಿಕೊಂಡು ಸಕಲ ಸ್ಥಾವರ ಜಂಗಮ ಸೃಷ್ಟಿಜಾತವನ್ನೂ ಹಾಗೂ ನನ್ನನ್ನೂ ॥೨೯॥

ಅಂತರ್ಧಾನಗೊಳಿಸಿ ಮುಂದೆ ನಡೆಯಬಹುದಾದ ಚಮತ್ಕಾರವನ್ನು ವೀಕ್ಷಿಸುತ್ತ ಒಂದೆಡೆ ಕುಳಿತೆನು. ವತ್ಸ! ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಅದಕ್ಕೆ ತನ್ನನ್ನು ಓಡಿಸಲು ಬಂದ ಮನೆಯ ಯಜಮಾನನು ಕಾಣಿಸುವುದಿಲ್ಲವೇ ಹೊರತು ಯಜಮಾನನಿಗೆ ಬೆಕ್ಕು ಕಾಣದೇ ಹೋದೀತೇ ? ಆದುದರಿಂದ ಮಹಾಮಾಯಾವಿಯೂ ತ್ರಿಮೂರ್ತಿಗಳಿಗೆ ಸಹ ಹಿರಿಯನೂ ಆದ ಗಜಾನನನಿಗೆ ಇದು ತಿಳಿದೇ ಹೋಯಿತು. ಆದರೂ ಅವತಾರಕ್ಕೆ ತಕ್ಕಂತೆ ನಟಿಸುತ್ತ ಸುತ್ತ-ಮುತ್ತಲೂ ಒಮ್ಮೆ ನೋಡಿದನು. ತನ್ನೊಡನೆ ಆಟವಾಡುತ್ತಲಿದ್ದ ಹುಡುಗರಾರೂ ಕಂಡು ಬರಲಿಲ್ಲ. ಒಡನೆಯೇ ಅವರ ಮನೆಗಳಿದ್ದ ಪ್ರದೇಶಗಳಿಗೆ ಓಡಿ ನಡೆದನು. ॥೩೦॥

ಅವೆಲ್ಲ ಶೂನ್ಯವಾಗಿದ್ದವು. ದೇವನಿಗೆ ಸ್ವಲ್ಪಮಟ್ಟಿಗೆ ಖೇದ ಉಂಟಾಯಿತು. ಕಣ್ಣೆತ್ತಿ ನೋಡಿದನು. ಆಶ್ರಮಸ್ಥಗಳಾದ ಗಿಡ-ಮರ ಪೊದೆಗಳಾಗಲೀ ಅವನ್ನಾಶ್ರಯಿಸಿ ಜೀವಿಸುತ್ತಲಿದ್ದ ಪಶು-ಪಕ್ಷಿಮೃಗಗಳಾಗಲೀ ಯಾವುದೂ ಗೋಚರಿಸಲಿಲ್ಲ. ॥೩೧॥

ಆಗ ಸ್ವರ್ಗಲೋಕಕ್ಕೆ ಧಾವಿಸಿ ನಡೆದನು. ಅಲ್ಲಾದರೂ ಏನಿದ್ದಿತು ? ಎಲ್ಲವನ್ನೂ ನಾನು ಅಂತರ್ಧಾನಗೊಳಿಸಿದ್ದೆನಲ್ಲವೇ ? ದೇವನಿಗೆ ದೇವತೆಗಳು ಕಾಣಲಿಲ್ಲ. ಗಂಧರ್ವಲೋಕಕ್ಕೆ ಬಂದು ನೋಡಿದನು, ಅವರೂ ಇರಲಿಲ್ಲ. ಕಿನ್ನರರ ಮನೆಗಳಿಗೆ ಹೋಗಿ ಹುಡುಕಿದನು, ಅವರೂ ಕಾಣೆಯಾಗಿದ್ದರು. ಯಕ್ಷರೂ, ಪಿತೃಗಳೂ ಇರ

**ಅಂಧಕಾರೇ ಗಾಢತಮೋ ನ ಪ್ರಾಜ್ಞಾಯತ ಕಿಂಚನ |**
**ತತೋಽಸೌ ಪ್ರಣಿಧಾನೇನ ಜ್ಞಾತ್ವಾ ಬ್ರಹ್ಮಕೃತಂ ಚ ಯತ್ ||೩೩||**

**ಸಾಮರ್ಥ್ಯಂ ನಿಜಮಾಯಾಂ ಚ ಆವಿಶ್ಚಕ್ರೇಽಖಿಲಾತ್ಮಕಃ |**
**ಬ್ರಹ್ಮಾಂಡಂ ನಿರ್ಮಮೇ ದೇವೋ ಮಯೂರೇಶಃ ಸ್ವ-ಲೀಲಯಾ ||೩೪||**

**ವಿಶ್ವಂ ಚರಾಚರಂ ತತ್ರ ಮಯೂರೇಶಪುರೀಮಪಿ |**
**ಯಥಾಪೂರ್ವಂ ಪಶ್ಯತಿ ಸ್ಮ ಸರ್ವಂ ತ್ರಿಭುವನಂ ವಿಭುಃ ||೩೫||**

---

ಬಹುದೇನೋ ಎಂದು ಶೋಧಿಸಿ ನೋಡಿದನು. ಅವರ ಹೆಸರೇ ಇರಲಿಲ್ಲ. ಅಷ್ಟರಲ್ಲಿ ಸೂರ್ಯ-ಚಂದ್ರರೂ ಕಾಣಿಸದಾದರು. ||೩೨||

ಸೂರ್ಯ-ಚಂದ್ರರೂ ಕಾಣೆಯಾದ ಬಳಿಕ ಕಗ್ಗತ್ತಲು ವ್ಯಾಪಿಸಿತು. ಯಾವುದೊಂದೂ ತಿಳಿಯದಂತಾಗಿ ಹೋಯಿತು. ಆಗ ದೇವನಿಗೆ ಏನೋ ಹೊಳೆದಂತಾಗಲು ಮನಸ್ಸನ್ನು ಏಕಾಗ್ರಗೊಳಿಸಿ "ಇದೇನಿರಬಹುದು ?" ಎಂಬುದನ್ನು ಅರಿಯಲಾರಂಭಿಸಿದನು. "ಶ್ರೋತ್ರಸ್ಯ ಶ್ರೋತ್ರಂ ಯನ್ಮನಸೋಮನಃ ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚಕ್ಷುಃ" ಎಂದರೆ ಶ್ರೋತ್ರೇಂದ್ರಿಯ, ಮನಸ್ಸು ಪ್ರಾಣ ಚಕ್ಷುಸ್ಸು ಇವಕ್ಕೂ ಸಹ ಯಾರು ಅಂತರ್ನಿಯಾಮಕನೋ ಅಂತಹ ಗಜಾಸ್ಯನಿಗೆ ಕಣ್ಣು ಏಪ ಇಕ್ಕುವಷ್ಟರಲ್ಲೇ "ಇದೆಲ್ಲ ಬ್ರಹ್ಮನ ಚೇಷ್ಟೆ" ಎಂಬುದು ಕರತಲಾಮಲಕವಾಗಿ ಹೋಯಿತು. ||೩೩||

ಆಗ ಯೋಗಮಾಯೆಯನ್ನು ಪ್ರೇರಿಸಿ ಸ್ವಸಾಮರ್ಥ್ಯವನ್ನು ಪ್ರಕಟಿಸಿದನು, ಬ್ರಹ್ಮಾದಿ ಸ್ತಂಬಪರ್ಯಂತವಾದ ವಸ್ತುಗಳಲ್ಲೆಲ್ಲ ಹಾಸು-ಹೊಕ್ಕಾಗಿರುವ ಪ್ರಭು ; ಪರಮೇಶ್ವರನು ಒಮ್ಮೆಲೇ ಸೃಷ್ಟಿಯನ್ನುಪ್ರಪಂಚಿಸಿದನು. ಇಡೀ ಬ್ರಹ್ಮಾಂಡವೇ ನಿಮಿಷಮಾತ್ರದಲ್ಲಿ ನಿರ್ಮಾಣವಾಗಿ ಹೋಯಿತು. ಇದನ್ನೆಲ್ಲ ನಿರ್ಮಿಸಲಿಕ್ಕೆ ಭಗವಂತನಿಗೆ ಸ್ವಲ್ಪವೂ ಕ್ಲೇಶವಾಗಲಿಲ್ಲ. ಎಲ್ಲವನ್ನೂ ತನ್ನ ಲೀಲೆಯಿಂದಲೇ ನಡೆಸಿಬಿಟ್ಟನು. ||೩೪||

ತಾನು ಸೃಜಿಸಿದ ಚರಾಚರ ವಿಶ್ವವನ್ನೂ, ಅಲ್ಲೇ ನಿರ್ಮಿತವಾದ ಮೊದಲಿದ್ದಂತಹ ಮಯೂರೇಶಪುರಿಯನ್ನೂ ಹೆಚ್ಚೇನು ? ತ್ರಿಭುವನಗಳನ್ನೂ ನೋಡುತ್ತ ಒಂದು ಕ್ಷಣ ಕಾಲ ನಿಂತನು. ಆನಂದಘನನಾದ ಮಯೂರೇಶನಿಗೆ ಇದೂ ಒಂದು ಬಗೆಯ ವಿನೋದವೆನಿಸಿರಬಹುದು. ||೩೫||

ಸ್ವಂ ಚ ಬಾಲೈಃ ಪರಿವೃತಂ ಬ್ರಹ್ಮಾಣಂ ಚ ತಥಾವಿಧಮ್ ।
ಶಂಕರಂ ಚ ಭವಾನೀಂ ತಾಮನುಷ್ಠಾನಗತಾನ್ ಮುನೀನ್ ॥೩೬॥

ತಪನಂ ಶಶಿನಂ ಭಾನಿ ಸ್ವರ್ಗಾನ್ ದೇವಗಣಾನಪಿ ।
ಪೃಥಿವೀಂ ಸರ್ವವೃಕ್ಷಾಂಶ್ಚ ಸಮುದ್ರಾನ್ ಸರಿತೋಽಪಿ ಚ ॥೩೭॥

ಪಾತಾಲಾನಿ ಮಯೂರೇಶೋ ದದರ್ಶ ಪೂರ್ವವದ್ವಿಭುಃ ।
ತತೋಽಹಂ ಸ್ಮೃತಿಮಾಪನ್ನೋ ಪಶ್ಯನ್ ದೇವಂ ಚಿದಾತ್ಮಕಮ್ ॥೩೮॥

ಕಲಾ–ಕಾಷ್ಠಾಮುಹೂರ್ತಾದಿ ದಿನ-ಪಕ್ಷ–ಸ್ವರೂಪಿಣಮ್ ।

---

ಪರಮಾತ್ಮನು ತೋರಿದ ಲೀಲಾ ವಿನೋದವನ್ನು ವಿವರಿಸುವೆನು, ಕೇಳು. ಈ ಮೊದಲು ದೇವನು ಹನ್ನೊಂದು ವರ್ಷದ ಬಾಲಕನಾಗಿ ಮುನಿಬಾಲಕರೊಂದಿಗೆ ಆಟವಾಡುತ್ತಲಿದ್ದನಷ್ಟೇ ? ಅಂತೆಯೇ ತನ್ನ ಸಂಗಡಿಗರನ್ನೂ ಸೃಜಿಸಿಕೊಂಡನು. ಬರಬರುತ್ತ ಹೊಸ ಸೃಷ್ಟಿಯು ನನ್ನವರೆಗೂ ಬಂದಿತು. ನನ್ನಂತೆಯೇ ಬ್ರಹ್ಮನೊಬ್ಬನು ಹುಟ್ಟಿ ನನಗೆ ಗೋಚರಿಸಿದನು. ಶಂಕರನ ಸೃಷ್ಟಿಯಾಯಿತು.. ಲೋಕಮಾತೆ ಭವಾನಿಯು ಉದ್ಭವಿಸಿ ಬಂದಳು. ಸರಿ, ತಪೋಮಗ್ನರಾಗಿ ಕುಳಿತಿದ್ದ ಉದ್ದುದ್ದ ಗಡ್ಡದ ಮುನಿಗಳೆಲ್ಲ ಯಥಾಪ್ರಕಾರ ಒಬ್ಬೊಬ್ಬರಾಗಿ ಕಾಣತೊಡಗಿದರು. ॥೩೬॥

ಪ್ರಭಾಕರ ನಿಶಾಕರರು, ನಕ್ಷತ್ರಗಳು, ಸ್ವರ್ಗಲೋಕಗಳು, ಅಲ್ಲಲ್ಲಿರಬೇಕಾದ ದೇವತಾಗಣಗಳು, ಪೃಥಿವೀ, ಸಕಲ ಜಾತಿಯ ವೃಕ್ಷಗಳು, ಸಪ್ತ ಸಮುದ್ರಗಳು, ಅನೇಕ ಮಹಾನದ್ಯುಪನದಿಗಳು, ॥೩೭॥

ಸಪ್ತ ಪಾತಾಳಗಳು ಎಲ್ಲವೂ ಅಚ್ಚಳಿಯದಂತೆ ಕ್ಷಣಮಾತ್ರದಲ್ಲಿ ಸಿದ್ಧವಾದುದನ್ನು ವಿಭು ಮಯೂರೇಶ್ವರನು ಕಂಡು " ಸರಿ, ಇನ್ನು ವ್ಯವಹಾರ ನಡೆಯಲಿ " ಎಂದು ಸಂಕಲ್ಪಿಸಿ ಸುಮ್ಮನಾದನು. ಅತ್ಯದ್ಭುತವಾದ ಈ ಸನ್ನಿವೇಶವನ್ನು ನೋಡಿ ನನ್ನ ಗುಂಡಿಗೆಯೇ ನಡುಗಿಹೋಯಿತು. ನನ್ನ ಅವಿವೇಕ, ಅಲ್ಪತನಗಳು ನನಗೆ ಸ್ಪಷ್ಟವಾಗಿ ತೋರಿ ಬಂದವು. ಜ್ಞಾನೋದಯವಾಯಿತು. ಎದುರಿಗೆ ಚಿದಾತ್ಮಕನಾದ ಮಯೂರೇಶ್ವರನನ್ನು ಕಣ್ತುಂಬ ನೋಡುತ್ತ ನಿಂತೆನು. ॥೩೮॥

ಭಗವಂತನು ಕಲಾ, ಕಾಷ್ಠಾ ಮುಹೂರ್ತಗಳಾಗಿ ತೋರಿದನು. ದಿವಸ

**ದೃಷ್ಟ್ವೇತ್ಥಂ ತಮಹಂ ನತ್ವಾ ಕ್ಷಮಾಪಯಮುದಾರಧೀಃ ॥೩೯॥**

**ಮಾಸರ್ತು-ವರ್ಷ-ಕಲ್ಪಾದಿ ಚರಾಚರಸ್ವರೂಪಿಣಮ್ ।**
**ಅಸಂಖ್ಯಬ್ರಹ್ಮಾಂಡಯುತಂ ರೋಮಾಂಚೈರುಪಶೋಭಿತಮ್ ॥೪೦॥**

**ದೇವರ್ಷಿಯಕ್ಷಗಂಧರ್ವಸರಿತ್ಸಾಗರರೂಪಿಣಮ್ ।**
**ಮನುಷ್ಯಕಿನ್ನರಲತಾವೃಕ್ಷಪನ್ನಗರೂಪಿಣಮ್ ॥೪೧॥**

**ದೃಷ್ಟ್ವೇತ್ಥಂ ತಮಹಂ ನತ್ವಾ ಕ್ಷಮಾಪಯದುದಾರಧೀಃ ।**
**ಪುನಃ ಪುನರಪಶ್ಯಂ ತಂ ಮಯೂರೇಶಂ ಕಿರೀಟಿನಮ್ ॥೪೨॥**

---

ಪಕ್ಷಗಳಾಗಿ ತೋರಿದನು. ಇದನ್ನೆಲ್ಲ ನೋಡಿದೊಡನೆಯೇ ನನ್ನ ಮೇಲೆ ತಣ್ಣೀರನ್ನೆ ರಚಿದಂತಾಗಿ ಓಡನೆಯೇ ಎದ್ದು ದೇವರ ದೇವನ ಅಡಿದಾವರೆಗಳಿಗೆ ಸಾಷ್ಟಾಂಗವೆರಗಿ " ಕ್ಷಮಿಸಬೇಕು ' ಎಂದು ದೈನ್ಯದಿಂದ ಯಾಚಿಸಿದೆನು. ॥೩೯॥

ಮಾಸ, ಋತು ಕಲ್ಪ ಮೊದಲಾದ ಸ್ವರೂಪಗಳಿಂದ ದೇವನು ತೋರುತ್ತಿದ್ದನು. ದೇವನು ಚರಾಚರ ವಸ್ತುಗಳಾಗಿ ತೋರಿದನು. ಅವನ ದೇಹಗತ ಪ್ರತಿಯೊಂದು ರೋಮದಲ್ಲೂ ಎಣಿಸಲಾರದಷ್ಟು ಬ್ರಹ್ಮಾಂಡಗಳು ಜೋಲಾಡುತ್ತಲಿದ್ದವು. ಇದನ್ನು ನೋಡಿದರೆ ಫಲಪುಷ್ಪಗಳಿಂದ ಭರಿತವಾದ ಮಹಾವೃಕ್ಷದಂತೆ ಭಗವಂತನು ಕಂಡು ಬಂದನು. ॥೪೦॥

ಸುವರ್ಣದಿಂದ ನಿರ್ಮಿತವಾದ ಭಿನ್ನಭಿನ್ನಾಕೃತಿಯುಳ್ಳ ಆಭರಣಗಳಲ್ಲೆಲ್ಲ ಚಿನ್ನವೇ ಹೇಗೆ ಎದ್ದು ಸ್ಪಷ್ಟವಾಗಿ ತೋರುವುದೋ, ಅದರಂತೆ ಭಗವಂತನ ವಿವರ್ತರೂಪವಾದ ಮುನಿಗಳು, ಯಕ್ಷ-ಗಂಧರ್ವರು, ನದೀನದ ಸಮುದ್ರಗಳು ಮೊದಲಾದ ವಸ್ತುಗಳಲ್ಲೆಲ್ಲ ಪರಮಾತ್ಮನ ಸಚ್ಚಿದಾನಂದ ರೂಪವು ಎದ್ದು ಕಾಣುತ್ತಲಿದ್ದಿತು. ಒಬ್ಬನೇ ಆದ ಪರಮಾತ್ಮನು ಯಕ್ಷಾದಿರೂಪದಿಂದ ಕಂಡುಬರುತ್ತಿದ್ದಂತೆ ಮನುಷ್ಯ, ಕಿನ್ನರ, ಲತೆ, ವೃಕ್ಷ, ಸರ್ಪಗಳು ಇತ್ಯಾದಿ ರೂಪಗಳಲ್ಲೂ ತೋರಿಬಂದನು. ॥೪೧॥

ಮಯೂರೇಶ್ವರನ ಅತ್ಯದ್ಭುತವಾದ ಇಂತಹ ರೂಪವನ್ನೂ ಸೃಷ್ಟಿ ಚಮತ್ಕಾರ ವನ್ನೂ ನೋಡಿದೊಡನೆಯೇ ನನ್ನ ಮನದಲ್ಲಿ ಮೂಡಿದ್ದ ದುರಹಂಕಾರ ಭಾವನೆಯಲ್ಲ

**ಕುಂಡಲಾಭ್ಯಾಂ ನೂಪುರಾಭ್ಯಾಮಂಗದಾಭ್ಯಾಂ ವಿರಾಜಿತಮ್ ।**
**ಶೇಷನಾಭಿಂ ಸರ್ಪಕಂಠಂ ದಿವ್ಯಮಾಲಾಂಬರಾವೃತಮ್ ॥೪೩॥**

**ದಿವ್ಯಸಿಂಹಾಸನಗತಂ ಸರ್ವದೇವೈರಭಿಷ್ಟುತಮ್ ।**
**ಸಿದ್ಧಿ-ಬುದ್ಧಿಸಮಾಯುಕ್ತಂ ವಿಭೂತಿಭಿರುಪಾಸಿತಮ್ ॥೪೪॥**

**ಚರಾಚರಮಯಂ ಸರ್ವನಮಸ್ಯಂ ತತ್ಸ್ವರೂಪಿಣಮ್ ।**
**ಪ್ರತ್ಯೇಕಂ ತತ್ರ ಚಾತ್ಮಾನಂ ತದ್ರೂಪಂ ಸ್ವಂ ವ್ಯಲೋಕಯಮ್ ॥೪೫॥**

---

ಅಳಿಸಿಹೋಯಿತು. ನಾನು ಒಡನೆಯೇ ಆ ವಿಶ್ವಂಭರಮೂರ್ತಿಗೆ ಸಾಷ್ಟಾಂಗವೆರಗಿ "ಕ್ಷಮಿಸೆಂ"ದು ಯಾಚಿಸಿದೆನು. ಉದಾರ ಮನಸ್ಸಿನ ದೇವನು ನನ್ನನ್ನು ಕ್ಷಮಿಸಿದನು. ಕಿರೀಟಾದಿ ದಿವ್ಯಾಭರಣಮಂಡಿತನಾದ ಮಯೂರವಾಹನನ ದಿವ್ಯರೂಪವನ್ನು ಪುನಃ ಪುನಃ ನೋಡುತ್ತ ನಿಂತೆನು. ॥೪೨॥

ದೇವನು ತನ್ನ ಮೃದು ಕರ್ಣಗಳಲ್ಲಿ ಮಣಿಮಯ ಕುಂಡಲಗಳನ್ನು ಧರಿಸಿದ್ದನು. ಕಾಲುಗಳಿಗೆ ಕಾಲಂದಿಗೆಗಳನ್ನು ಹಾಕಿಕೊಂಡಿದ್ದನು. ಭುಜಕೀರ್ತಿ, ಬಾಜುಬಂದು, ಕಂಕಣ ಇವನ್ನು ಧರಿಸಿ ಬಹಳ ಸುಂದರನಾಗಿ ಕಾಣುತ್ತಲಿದ್ದನು. ತನ್ನ ನಾಭಿಪ್ರದೇಶದಲ್ಲಿ ಸರ್ಪರಾಜ; ಆದಿಶೇಷನನ್ನು ಮೇಖಲೆಯಂತೆ ಬಿಗಿದಿದ್ದನು. ಇತರ ಆಶೀವಿಷಗಳನ್ನು ಕುತ್ತಿಗೆಗೆ ಸುತ್ತಿಕೊಂಡಿದ್ದನು. ದಿವ್ಯವಾದ ಮಾಲಿಕೆ, ವಸ್ತ್ರ ಇವನ್ನು ಧರಿಸಿದ್ದನು. ॥೪೩॥

ದಿವ್ಯವಾದ ಸಿಂಹಾಸನದಲ್ಲಿ ಮಂಡಿತನಾಗಿದ್ದನು. ಎಲ್ಲ ದೇವತೆಗಳೂ ಅವನನ್ನು ಹೊಗಳುತ್ತ ಕುಳಿತಿದ್ದರು. ನನ್ನ (ಬ್ರಹ್ಮ) ಮಾನಸಪುತ್ರಿಯರಾದ ಸಿದ್ಧಿ-ಬುದ್ಧಿಯರು ದೇವನ ವಾಮದಕ್ಷಿಣ ಪಾರ್ಶ್ವಗಳಲ್ಲಿ ಕುಳಿತು ಸೇವಿಸುತ್ತಲಿದ್ದರು. ಐಶ್ವರ್ಯಾಭಿಮಾನಿ ದೇವತೆಗಳು ದೇವನನ್ನು ಭಕ್ತಿಯಿಂದ ಉಪಾಸಿಸುತ್ತಲಿದ್ದರು. ॥೪೪॥

ದೇವನು ಚರಾಚರಮಯನಾದವನು. ಎಲ್ಲರಿಂದಲೂ ನಮಸ್ಕೃತನಾದವನು. ನಮಸ್ಕರಿಸತಕ್ಕವರ ಸ್ವರೂಪದಿಂದಿರತಕ್ಕವನು. ನನ್ನ ಪರಿಸ್ಥಿತಿ ಹೇಗಿತ್ತೆಂಬುದನ್ನು ಹೇಳುವೆನು, ಕೇಳು. ನಾನು ನಾನಾಗಿ ತೋರಿದರೂ ಮಯೂರೇಶ್ವರನ ಸ್ವರೂಪದಿಂದಲೂ ತೋರಿ ಬರುತ್ತಲಿದ್ದೆನು. ಈ ಬಗೆಯ ದ್ವಿ-ವಿಧ ರೂಪದಿಂದ ಭ್ರಾಂತ

ತತಸ್ತಂ ಸ್ತುತವಾನ್ನತ್ವಾ ಪ್ರಾರ್ಥಯಂ ಚ ಪುನಃ ಪುನಃ ।
ಕ್ಷಮಾಪರಾಧಂ ಮೇ ದೇವ ! ತ್ವನ್ಮಾಯಾಗರ್ವಿತಸ್ಯ ಮೇ ॥೪೬॥

ಪ್ರಭಾವಂ ದ್ರಷ್ಟುಕಾಮಸ್ಯ ದೀನಸ್ಯ ಶರಣಾರ್ಥಿನಃ ।
ಕ್ಷಣೇನಾನಂತಬ್ರಹ್ಮಾಂಡಕಾರಿಣೇ ತೇ ನಮೋ ನಮಃ ॥೪೭॥

ಏವಂ ವದಂತಂ ಮಾಂ ನಾಸಾಪವನಾತ್ಸ್ವೋದರೇಽನಯತ್ ।
ತತ್ರಾಪಶ್ಯಂ ಸರ್ವಲೋಕಂ ಯಥಾ ಬಹಿಃ ಪ್ರಹೃಷ್ಟವಾನ್ ॥೪೮॥

---

ನಾಗಿ ಮತ್ತೊಮ್ಮೆ ನನ್ನನ್ನು ನೋಡಿಕೊಂಡೆನು. ಆಗ ನಾನು ಭಿನ್ನನಾಗಿಯೇ ಇದ್ದೆನು. ॥೪೫॥

ನನಗೆ ಉಂಟಾದ ಭ್ರಮೆಯು ಇನ್ನೂ ಮುಂದುವರೆದು ಹೋಗಿದ್ದರೆ ದೇವನನ್ನು ಸ್ತುತಿಸಲು ಸಹ ನನ್ನಿಂದ ಆಗದೆ ಹೋಗಬಹುದೆಂದು ತಿಳಿದು ಲಗುಬಗೆಯಿಂದ ದೇವನಿಗೆ ಪದೇ ಪದೇ ನಮಸ್ಕರಿಸಿ ಹೀಗೆಂದು ಸ್ತುತಿಗೈಯ್ಯಲಾರಂಭಿಸಿದೆನು. " ದೇವರ ದೇವ! ನನ್ನ ಈ ಮಹದಪರಾಧವನ್ನು ಮನ್ನಿಸು. ನನಗೆ ಈ ಮೊದಲು ಬಹಳ ಸೊಕ್ಕು ಬಂದುಬಿಟ್ಟದ್ದಿತು. ಇದೂ ಸಹ ನಿನ್ನ ಮಾಯಾಪ್ರಭಾವವೇ ಸರಿ. ॥೪೬॥

ನಿನ್ನ ಪ್ರಭಾವವೆಷ್ಟೆಂಬುದನ್ನು ತಿಳಿದುನೋಡ ಬಯಸಿ ಹೀಗೆಲ್ಲ ಚೇಷ್ಟೆ ಮಾಡಿದೆನು. ಎಲ್ಲವೂ ನನಗರಿವಾಗಿ ಹೋಗಿದೆ. ಪ್ರಕೃತ ಹೆಚ್ಚಿನ ಪರೀಕ್ಷೆಯನ್ನು ಮಾಡಬೇಡ. ನಾನು ಬಹಳ ದೀನನಾಗಿದ್ದೇನೆ. ಶರಣು ಬಂದಿದ್ದೇನೆ. ನನ್ನನ್ನು ಕ್ಷಮಿಸು. ಒಂದೇ ಒಂದು ಕ್ಷಣದೊಳಗಾಗಿ ಇಷ್ಟೆಲ್ಲ ಬ್ರಹ್ಮಾಂಡಗಳನ್ನು ನಿರ್ಮಿಸುವುದೆಂದರೆ ಸಾಮಾನ್ಯವಾದ ಮಾತೇ ? ಯಾರಿಂದ ಇಂತಹ ಕೆಲಸ ಸಾಧ್ಯವಾದೀತು ? ಭಗವನ್ ! ನಿನಗೆ ಅನೇಕ ವಂದನೆಗಳು. ॥೪೭॥

ಹೀಗೆ ಏಕಪ್ರಕಾರವಾಗಿ ಹಲುಬಲಾರಂಭಿಸಿದ ಬಳಿಕ ದೇವನು ಒಮ್ಮೆ ಉಸಿರನ್ನು ಮೇಲಕ್ಕೆಳೆದು ತನ್ನ ದೀರ್ಘವಾದ ಸೊಂಡಲಿನ ರಂಧ್ರದ್ವಾರಾ ನನ್ನನ್ನು ತನ್ನ ವಿಶ್ವಗರ್ಭಕ್ಕೆ ಕರೆದೊಯ್ದನು. ಅಲ್ಲಿ ನನಗೆ ಕಂಡುಬಂದ ಅದ್ಭುತದೃಶ್ಯವನ್ನು ವಿವರಿಸಿ ಹೇಳು

**ದೇವಂ ತಥಾವಿಧಂ ಚಾಪಿ ಕೋಟಿಬ್ರಹ್ಮಾಂಡರೋಮಕಮ್ ।**
**ಸರ್ವಂ ಚರಾಚರಂ ವಿಶ್ವಂ ಯಥಾ ಭೂಮೌ ಯಥಾ ದಿವಿ ॥೪೯॥**

**ಏಕಸ್ಮಾದಂಡತಶ್ಚಾನ್ಯದ್ಬ್ರಹ್ಮಾಂಡಾಂತರಮಾವಿಶಮ್ ।**
**ತಥೈವ ದೃಷ್ಟವಾನ್ ಸರ್ವಾನೇವಂ ನಾನಾಂಡಮಧ್ಯಗಃ ॥೫೦॥**

**ಅಪಶ್ಯಂ ವಿಶ್ವಮಖಿಲಂ ಸ್ವಾತ್ಮಾನಂ ದೇವಮೇವ ಚ ।**
**ತತಃ ಖಿನ್ನೋಽಬ್ರುವಂ ದೇವಂ "ನಾಂತಂ ಪಶ್ಯಾಮಿ ತೇ ಕ್ವಚಿತ್ ॥೫೧॥**

ವೆನು, ಕೇಳು. ಹೊರಗಡೆ ಯಾವ ಯಾವ ಲೋಕಗಳನ್ನು ನಾನು ನೋಡಿದ್ದೆನೋ ಅಂತೆಯೇ ಇರುವ ಅನೇಕ ಲೋಕಗಳು ಕಂಡು ಬಂದವು. ಆ ಚಮತ್ಕಾರವನ್ನು ನೋಡಿ ನನಗೆ ಬಹಳ ಹರ್ಷವೆನಿಸಿತು. ॥೪೮॥

ಪ್ರತಿಯೊಂದು ರೋಮದಲ್ಲೂ ಕೋಟ್ಯವಧಿ ಬ್ರಹ್ಮಾಂಡಗಳನ್ನು ಹೊತ್ತು ನಿಂದಿರಬಲ್ಲ ವ್ಯಕ್ತಿಯನ್ನು ನಾನಂತೂ ನನ್ನ ಆಯುಷ್ಯದಲ್ಲಿ ಕಂಡಿರಲಿಲ್ಲ. ಹಾಗೂ ಕೇಳಿಯೂ ಇರಲಿಲ್ಲ. ಊಹಿಸಲಿಕ್ಕೆ ಸಹ ಅಸದಳವಾದಂತಹ ಅದ್ಭುತ ರೂಪವುಳ್ಳ ಮಯೂರೇಶ್ವರನನ್ನು ಕಂಡು ನನ್ನ ಹುಚ್ಚೆಲ್ಲವೂ ಬಿಟ್ಟುಹೋಯಿತು. ಒಂದೊಂದು ಬ್ರಹ್ಮಾಂಡದಲ್ಲೂ ಭೂಮಿಯಲ್ಲಿ ನಮಗೆ ಪ್ರತ್ಯಕ್ಷವಾಗಿ ಕಂಡುಬರುವ ವಸ್ತುಗಳು, ಅಂತೆಯೇ ಸ್ವರ್ಗಲೋಕದಲ್ಲಿರುವ ಸಕಲ ಚರಾಚರ ವಸ್ತುಗಳು ಇವೆಲ್ಲ ಸ್ಪಷ್ಟವಾಗಿ ಕಾಣತೊಡಗಿದವು. ॥೪೯॥

ಆಗ ನಾನು ಮನೆಯೊಳಗಿನ ಒಂದು ಕೋಣೆಯಿಂದ ಮತ್ತೊಂದಕ್ಕೆ ಹೋಗುವಂತೆ ಒಂದು ಬ್ರಹ್ಮಾಂಡವನ್ನು ದಾಟಿ ಮತ್ತೊಂದನ್ನು ಪ್ರವೇಶಿಸಿದೆನು. ಅಲ್ಲಿ ನೋಡಿದುದಾದರೂ ಏನೆಂದು ಭಾವಿಸಿದೆ? ಅದೇ ಭೂಮಿ, ಅದೇ ಅಂತರಿಕ್ಷ, ಅವೇ ಪ್ರಾಣಿಗಳು. ನಾನೂ ಅಲ್ಲೇ ಮಧ್ಯಭಾಗದಲ್ಲಿ ನಿಂತಿದ್ದೇನೆ. ॥೫೦॥

ಅಲ್ಲಿ ಕಂಡು ಬರುತ್ತಲಿದ್ದ ನಿಖಿಲ ವಿಶ್ವದೊಂದಿಗೆ ನಾನೂ ಕಂಡುಬಂದೆನು. ದೇವನು ಸಹ ಅಲ್ಲೇ ಸುಳಿದಾಡುತ್ತಿದ್ದುದು ಕಂಡಿತು. ಅಂತಹ ಸ್ಥಿತಿಯಲ್ಲಿ ಬೇರೆ ಯಾರಾದರೂ ಇದ್ದಿದ್ದರೆ ಅವರಿಗೆ ಹೇಗಾಗುತ್ತಲಿದ್ದಿತೋ ನನಗೂ ಹಾಗೆಯೇ

**ಕೃಪಾಂ ಕುರು ಮಮ ವಿಭೋ ! ಮಾಯಾಮೇತಾಂ ನಿವಾರಯ ।**
**ತತಃ ಸ ಕರುಣಾವಿಷ್ಟಃ ಸರ್ವಮಂತರ್ದಧೇ ಕ್ಷಣಾತ್ ॥೫೨॥**

**ಪುನರೇವ ಮಯೂರೇಶಮಪಶ್ಯಂ ಬಾಲಕೈರ್ವೃತಮ್ ।**
**ಕ್ರೀಡಂತಂ ಪೂರ್ವವನ್ನತ್ವಾಬ್ರುವಂ 'ಮಾಯಾಂ ನ ತೇಽವಿದಮ್ ॥೫೩॥**

**ಅಪರಾಧಸಹಸ್ರಂ ಮೇ ಮಾತೃವತ್ತ್ವಂ ಕ್ಷಮಸ್ವ ಚ ।**
**ಮಯೂರೇಶೋಽಬ್ರವೀನ್ಮಾಂ ಹಿ ಮೂರ್ಧ್ನಿ ಹಸ್ತಂ ನಿವೇಶ್ಯ ಹ ॥೫೪॥**

---

ಆಯಿತು. ನಾನು ಬಹಳ ಖಿನ್ನನಾಗಿ ದೇವನನ್ನು ಕುರಿತು 'ಭಗವನ್, ಭವ್ಯನಂದನ! ಈ ಬ್ರಹ್ಮಾಂಡಗಳಿಗೆ ಕೊನೆಯೇ ಕಾಣುವುದಿಲ್ಲವಲ್ಲ ? ಮುಂದೇನು ಗತಿ ? ॥೫೦॥

ಅಮರೇಶ್ವರ! ನನಲ್ಲಿ ದಯೆ ತೋರು. ನಿನ್ನ ಈ ಮಾಯೆಯನ್ನು ನಿವಾರಿಸು. ನಾನು ಭ್ರಮಿಸಿ ಹೋಗಿದ್ದೇನೆ' ಎಂದು ಹಲುಬಲಾಗಿ ದೇವನು ನನ್ನ ವಿಷಯದಲ್ಲಿ ಪ್ರಸನ್ನಚಿತ್ತನಾದನೆಂದು ತೋರುತ್ತದೆ. ಎಷ್ಟೆಂದರೂ ದೇವನು ದಯಾಸಾಗರನಲ್ಲವೇ ? ಒಡನೆಯೇ ಇದುವರೆಗೂ ನನಗೆ ತೋರಿದ್ದ ವಿಶ್ವರೂಪ ವನ್ನು ಒಂದೇ ಕ್ಷಣದಲ್ಲಿ ಅಂತರ್ಧಾನ ಗೊಳಿಸಿದನು. ॥೫೨॥

ಸ್ವಪ್ನನಿಮಗ್ನಮಾನಸನಿಗೆ ಒಮ್ಮೆಲೆ ಎಚ್ಚರವಾದಂತಾಯಿತು ನನಗೆ. ಕಣ್ಣು ಗಳನ್ನರಳಿಸಿ ಸುತ್ತಲೂ ಸೂಕ್ಷ್ಮವಾಗಿ ನೋಡಿದೆನು. ಮಯೂರೇಶ್ವರನು ತನ್ನ ಸಂಗ ಡಿಗರಾದ ಮುನಿಬಾಲಕರೊಂದಿಗೆ ಮೊದಲಿನಂತೆಯೇ ಆಟವಾಡುತ್ತಲಿದ್ದುದು ಕಂಡಿತು. ಇದುವರೆಗೂ ನಾನು ನೋಡಿದುದು ಸುಳ್ಳೋ, ಅಥವಾ ಈಗ ನೋಡುತ್ತಲಿರುವುದು ಸುಳ್ಳೋ ಎಂಬುದು ನನಗೆ ದೊಡ್ಡದೊಂದು ಸಮಸ್ಯೆಯಾಗಿ ಕುಳಿತಿತು. ॥೫೩॥

ಆಗ ನಾನೇನನ್ನು ಮಾಡಿದೆನೆಂಬುದು ನಿನಗೆ ಗೊತ್ತೋ? ಧಾವಿಸಿ ಹೋಗಿ ಮಯೂರೇಶ್ವರನ ಅಡಿದಾವರೆಗಳಿಗೆ ಎರಗಿದೆನು. ಹಾಗೂ 'ಮೂಲ ಮಾಯಾವಿ ಯಾದ ನಿನ್ನ ಪ್ರಭಾವವನ್ನು ನಾನು ಅರಿಯಲಾರದೇ ಹೋದೆನು. ನಾನು

**ದೇವ ಉವಾಚ :—**

**ನ ಮೇ ಕ್ರೋಧೋ ನ ಭಿನ್ನಾ ಧೀಃ ಸ್ವೀಯಃ ಪರ ಇತಿ ಭ್ರಮಃ ।**
**ಕಸ್ಮಾದಪಿ ಭಯಂ ಮೇ ನ ನ ಮತ್ತೋ ಭಯಮಣ್ವಪಿ ॥೫೫॥**

**ಕ ಉವಾಚ :—**

**ಶ್ರುತ್ವೇತ್ಥಂ ವಚನಂ ತಸ್ಯ ಮಯೂರೇಶಪುರಂ ಶಿವಮ್ ।**
**ಭವಾನೀಮಪಿ ತತ್ಪೂರ್ವಮದ್ರಾಕ್ಷಂ ಮುನಿಬಾಲಕೈಃ ॥೫೬॥**

---

ಸಹಸ್ರಾರು ಅಪರಾಧಗಳನ್ನೆಸಗಿರುವೆನು. ಜನನಿಯು ಮಗನ ತಪ್ಪುಗಳನ್ನು ಮನ್ನಿಸು ವಂತೆ ಭಕ್ತವತ್ಸಲ ! ನಾನು ಮಾಡಿದ ಅಪಚಾರಗಳನ್ನೆಲ್ಲ ಮರೆತು ನೀನು ನನ್ನನ್ನು ಕ್ಷಮಿಸಿಬಿಡು ? ಎಂದು ಬಹು ದೈನ್ಯದಿಂದ ಬೇಡಿದೆನು. ಆಗ ಮಯೂರೇಶ್ವರನು ನನ್ನನ್ನು ನೈದಡವಿ ಎಬ್ಬಿಸಿ ನನ್ನ ಶಿರಸ್ಸಿನ ಮೇಲೆ ತನ್ನ ವರದ ಹಸ್ತವನ್ನಿಟ್ಟು ಅನುಗ್ರಹಿಸುತ್ತ ಹೀಗೆಂದು ನುಡಿದನು. ॥೫೪॥

ದೇವ :—

ಬ್ರಹ್ಮರ್ಷೇ! ನೀನೇಕೆ ಇಷ್ಟು ಬೇಡಿಕೊಳ್ಳುತ್ತಲಿರುವೆ ? ನಿನ್ನ ವಿಷಯ ದಲ್ಲೇ ಏಕೆ ? ಯಾರ ವಿಷಯದಲ್ಲಿಯೂ ನನಗೆ ಕೋಪವೇ ಬರುವುದಿಲ್ಲ. ಅದ್ವಿತೀಯ ನಾದ ನನಗೆ ಸ್ವ-ಪರ ಎಂಬ ಭೇದ ಭಾವನೆ ಇದ್ದೀತೇ ? ನಾನು ಜ್ಞಾನಸ್ವರೂಪ ನಾದುದರಿಂದ ಇಂತಹ ಭ್ರಮೆಯೇ ನನಗೆ ಉಂಟಾಗುವುದಿಲ್ಲ. ನನ್ನ ಸ್ವಭಾವವನ್ನು ಮತ್ತೊಮ್ಮೆ ವಿವರಿಸುವೆನು, ಕೇಳು. ನಾನು ಯಾರಿಗೂ ಹೆದರತಕ್ಕವನಲ್ಲ ಅಂತೆಯೇ ಯಾರನ್ನೂ ವಿನೋದಕ್ಕಾಗಿ ಸಹ ಹೆದರಿಸತಕ್ಕವನೂ ಅಲ್ಲ. ॥೫೫॥

ಬ್ರಹ್ಮಾ :—

ದೇವನ ಅಮೃತಸದೃಶವಾದ ಈ ವಾಕ್ಸರಣಿಯನ್ನು ಕೇಳಿ ಉಬ್ಬಿ ಹೋಗಿ ಮತ್ತೊಮ್ಮೆ ಅತ್ತಿತ್ತ ನೋಡಿದೆನು. ಈ ಮೊದಲು ನಾನು ಆ ಆಶ್ರಮ ಪದಕ್ಕೆ ಬಂದಾಗ್ಗೆ ಯಾರನ್ನೆಲ್ಲ ನೋಡಿದ್ದೆನೋ, ಯಾವ ದೃಶ್ಯವು ನನಗೆ ಗೋಚರವಾಗಿ ದ್ದಿತೋ ಅದೇ ವ್ಯಕ್ತಿಗಳು, ಅದೇ ದೃಶ್ಯ ಇವೆಲ್ಲ ಮತ್ತೆ ಕಂಡು ಬಂದವು.

**ಗೃಹೀತ್ವಾಜ್ಞಾಂ ಸ್ವಕಂ ಸ್ಥಾನಮಗಮಂ ಹರ್ಷನಿರ್ಭರಃ ।**
**ಭವಾನೀ ಬಾಲಕೇನಾಯಾನ್ಮಂದಿರಂ ಸ್ವಂ ಚ ಬಾಲಕಾಃ ॥೫೭॥**

**ಇತಿ ಶ್ರೀ ಗಣೇಶ ಪುರಾಣೇ ಉತ್ತರ ಖಂಡೇ ' ವಿಶ್ವರೂಪದರ್ಶನಂ '**
**ನಾಮ ಚತುರಧಿಕ ಶತತಮೋಽಧ್ಯಾಯಃ**
**ಸಮಾಪ್ತಃ**

ಮಯೂರೇಶ್ವರಪುರ, ಅಲ್ಲಿ ನೆಲೆಸಿರುವ ಪರಶಿವ, ಪಾರ್ವತೀದೇವಿ, ಮುನಿಬಾಲಕ ರೊಂದಿಗೆ ಮನಸ್ವಿಯಾಗಿ ಆಟವಾಡುತ್ತಲಿದ್ದ ಮಯೂರೇಶ್ವರ ಎಲ್ಲರನ್ನೂ ಕಣ್ಣು ತುಂಬ ನೋಡಿ ಹರ್ಷಿಸಿದೆನು. ॥೫೬॥

ಎಲ್ಲರ ಅನುಮತಿಯನ್ನು ಪಡೆದು ನಾನು ನನ್ನದೆನಿಸಿದ ಸತ್ಯಲೋಕವನ್ನು ಕುರಿತು ಪ್ರಯಾಣ ಮಾಡಿದೆನು. ಭವಾನೀದೇವಿಯು ತನ್ನ ಮೊಗು ಮಯೂರ ವಾಹನನನ್ನೆತ್ತಿಕೊಂಡು ತನ್ನ ಮಂದಿರಕ್ಕೆ ತೆರಳಿದರು. ಮುನಿಬಾಲಕರೆಲ್ಲ ತಮ್ಮ ಪಾಡಿಗೆ ತಮ್ಮ ತಮ್ಮ ಮನೆಗಳಿಗೆ ಹೊರಟು ನಡೆದರು. ॥೫೭॥

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರಖಂಡದಲ್ಲಿ " ವಿಶ್ವರೂಪದರ್ಶನ "
ಎಂಬಲ್ಲಿಗೆ ನೂರ ನಾಲ್ಕನೆಯ ಅಧ್ಯಾಯಾನುವಾದವು
ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ಪಂಚೋತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ತತೋ ಭಾದ್ರಚತುರ್ಥ್ಯಾಂ ತು ತೇ ಸರ್ವೇ ಮುನಿಬಾಲಕಾಃ ।**
**ಮೃದಮಾಹರ್ತುಮಾಯಾತಾ ವಿಮಲಾಂ ತಾಮುಥಾಸರ್ಯ ॥೧॥**

**ಸ್ವ-ಸ್ವಬುದ್ಧ್ಯಾ ವಿಧಾಯಾಶು ಮೂರ್ತೀರ್ನಾನಾವಿಧಾಃ ಶುಭಾಃ ।**
**ಸಿಂಹಾರೂಢಾ ಮಯೂರಸ್ಥಾಃ ಕಾಶ್ಚಿನ್ಮೂಷಕಸಂಸ್ಥಿತಾಃ ॥೨॥**

---

|| ಶ್ರೀ ಗಣೇಶಾಯ ನಮಃ ||

## ೧೦೫ ನೆಯ ಅಧ್ಯಾಯ

ಬ್ರಹ್ಮಾ :-

ಹೀಗೆಯೇ ಕಾಲವು ಕಳೆಯುತ್ತಿರಲಾಗಿ ಭಾದ್ರಪದ ಮಾಸವು ಬಂದಿತು. ಮುನಿ ಬಾಲಕರೆಲ್ಲ ಅನೂಚಾನವಾಗಿ ಬಂದ ಮಹಾ ಗಣಪತಿಯ ಪೂಜೆಯನ್ನು ನಡೆಸಲು ನಿಶ್ಚಯಿಸಿದರು, ಮತ್ತು ಅದಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲ ಒದಗಿಸಿಕೊಂಡರು. ಸಿದ್ಧಿವಿನಾಯಕನ ಮೂರ್ತಿಯನ್ನು ನಿರ್ಮಿಸಲಿಕ್ಕೆ ಮೃದು ಹಾಗೂ ಜಿಗಟಾದ ಮೃತ್ತಿಕೆಯನ್ನು ತರಲು ಹೊರಟು ಪವಿತ್ರವಾದ ಮಣ್ಣನ್ನು ಹುಡುಕಿ ತಂದರು. ||೧||

ಅದನ್ನು ಹದಗೊಳಿಸಿ ತಮ್ಮ ತಮ್ಮ ಬುದ್ಧಿಗೆ ಹೊಳೆದಂತೆ ಮೂರ್ತಿಗಳನ್ನು ಆದಷ್ಟು ಬೇಗ ಮಾಡಿ ಮುಗಿಸಿದರು. ಹುಡುಗರು ಮನಸ್ಸಿಟ್ಟು ನಿರ್ಮಿಸಿದ ಗಣಪತಿಯು ಮೂರ್ತಿಗಳು ನೋಡಲು ಬಹಳ ಮುದ್ದಾಗಿದ್ದವು. ಎಲ್ಲರೂ ಒಂದೇ ಬಗೆಯಾಗಿ ನಿರ್ಮಿಸದೆ ತನು ತಮಗೆ ಛಂದ ಕಂಡಂತೆ ರಚಿಸಿದ್ದರು. ಕೆಲವರು ತಾವು ಮಾಡಿದ ಮೂರ್ತಿಗಳನ್ನು ಸಿಂಹದ ಮೇಲೆ ಕುಳ್ಳಿರಿಸಿದ್ದರು. ಕೆಲವರು

**ನಾನಾಯುಧಧರಾ ನಾನಾ ದಿವ್ಯಾಲಂಕಾರಸಂಯುತಾಃ ।**
**ಚತುರ್ಭುಜಾ ಗಣೇಶಸ್ಯ ದಿವ್ಯಗಂಧಾಂಬರಾಃ ಶುಭಾಃ ॥೩॥**

**ಭಕ್ತ್ಯಾ ಪರಮಯಾಪೂಜನ್ನುಪಚಾರೈಃ ಪೃಥಕ್ಪೃಥಕ್ ।**
**ಮಂಡಪೇ ತಾಃ ಪ್ರತಿಷ್ಠಾಪ್ಯ ಪುಷ್ಪಾದರ್ಶಪ್ರಭಾಯುಜಿ ॥೪॥**

**ಪದ್ಮಪುಷ್ಪಯುತಾ ಮಾಲಾ ದದುಸ್ತಾಃ ಸುಮನೋಹರಾಃ ।**
**ವಾದ್ಯತ್ಸು ತೂರ್ಯಘೋಷೇಷು ನಗರೀ ಹರ್ಷಮಾಪ ಸಾ ॥೫॥**

ಗಣಪತಿಯು ಮಯೂರ (ನವಿಲು) ವನ್ನೇರಿ ಕುಳಿತಂತೆ ಮಾಡಿದ್ದರು. ಮತ್ತೆ ಕೆಲವರು ಗಣಪತಿಗೆ ಮೂಷಕವ (ಇಲಿಯ) ನ್ನೇ ವಾಹನವನ್ನಾಗಿ ಮಾಡಿದ್ದರು. ಅಂತೂ ಆ ಮೂರ್ತಿಗಳು ಅಶಾಸ್ತ್ರೀಯಗಳೇನೂ ಆಗಿರಲಿಲ್ಲ. ॥೨॥

ಬಾಲಕರು ಆ ಮೂರ್ತಿಗಳಿಗೆ ಆಯಾ ಅವಯವಗಳಲ್ಲಿ ಅನುರೂಪವಾಗಿ ಕಂಡು ಬರುವಂತೆ ಬಗೆ ಬಗೆಯ ದಿವ್ಯಾಭರಣಗಳನ್ನೂ, ದಿವ್ಯಾಯುಧಗಳನ್ನೂ ಮಣ್ಣಿನಿಂದಲೇ ನಿರ್ಮಿಸಿ ,ಅವನ್ನು ಮೂರ್ತಿಯ ದೇಹದಲ್ಲೂ ನಾಲ್ಕು ಕೈಗಳಲ್ಲೂ ಅಂಟಿಸಿದ್ದರು. ಆ ಮೂರ್ತಿಗಳ ದೇಹಕ್ಕೆ ದಿವ್ಯ ಚಂದನವನ್ನು ಲೇಪಿಸಿದರು. ಒಳ್ಳೆಯ ಹಾಗೂ ಬಹಳ ಬೆಲೆ ಬಾಳುವ ವಸ್ತ್ರಗಳನ್ನು ಉಡಿಸಿ, ಹೊದ್ದಿಸಿದ್ದರು. ॥೩॥

ತಾವು ನಿರ್ಮಿಸಿದ ದೇವನ ಮೂರ್ತಿಯ ವಿಷಯದಲ್ಲಿ ಬಾಲಕರಿಗೆ ಬಹಳ ಭಕ್ತಿಯು ಉದ್ಭವಿಸಿತು. ಪೂಜೋಪಯೋಗಿ ಪಂಚೋಪಚಾರ ದ್ರವ್ಯಗಳನ್ನು ಪ್ರತಿಯೊಬ್ಬರೂ ಪ್ರತ್ಯೇಕ ಪ್ರತ್ಯೇಕವಾಗಿ ಒದಗಿಸಿಕೊಂಡರು. ಪೂಜೆಯನ್ನು ಬಹಳ ಸಂಭ್ರಮದಿಂದ ಮಾಡಿದರು. ಅನಂತರ ಅವನ್ನು ಸುಂದರವಾಗಿ ಅಲಂಕರಿಸಿದ ಮಂಟಪಗಳಲ್ಲಿಟ್ಟರು. ಆ ಮಂಟಪಗಳನ್ನು ಬಣ್ಣ ಬಣ್ಣದ ಪುಷ್ಪಗಳಿಂದಲೂ, ಸ್ವಚ್ಛವಾದ ಕನ್ನಡಿಗಳಿಂದಲೂ ಸಿಂಗರಿಸಿದ್ದರು. ॥೪॥

ಅರಳಿದ ಕಮಲ ಪುಷ್ಪಗಳಿಂದ ಬಹಳ ಮುದ್ದಾಗಿಯೂ, ಚಮತ್ಕಾರವಾಗಿಯೂ ನಿರ್ಮಿಸಿದ್ದ ದಿವ್ಯ ಮಾಲಿಕೆಯನ್ನು ಮೂರ್ತಿಗಳ ಕೊರಳಲ್ಲಿ ಹಾಕಿದರು. ಇತ್ಯಾದ್ಯ

ಗೌರೀ ತಸ್ಯಾಂ ಜನ್ಮತಿಥೌ ದ್ವಾದಶಾಬ್ದಿಕಮರ್ಭಕಮ್ ।
ಸ್ನಾಪಯಾಮಾಸ ಚ ದದೌ ವಾಯನಾನಿ ಸು-ವಾಸಿನೀಃ ॥೬॥

ಸಂಪೂಜ್ಯ ವಿಧಿವದ್ಭಕ್ತ್ಯಾ ಹರಿದ್ರಾ-ಕುಂಕುಮಾದಿಭಿಃ ।
ಏತಸ್ಮಿನ್ನಂತರೇ ದೈತ್ಯೋ ' ವಿಶ್ವದೇವ ' ಇತಿ ಶ್ರುತಃ ॥೭॥

ಭಗವದ್ರೂಪಮಾಸ್ಥಾಯ ಶ್ರೀಮುದ್ರಾಂಕಿತಮಾಯಯೌ ।
ಶಂಕ-ಚಕ್ರ-ಗದಾ-ಪದ್ಮ-ವನಮಾಲಾಲಸತ್ತನುಃ ॥೮॥

ಲಂಕರಣಗಳಿಂದ ಮೂರ್ತಿಗಳು ಮತ್ತಷ್ಟು ಮನೋಹರವಾಗಿ ಕಂಡುಬಂದವು. ಮಂಗಲವಾದ್ಯಗಳು ಎಲ್ಲಿ ನೋಡಿದರಲ್ಲಿ ಮೊಳಗುತ್ತಿದ್ದವು. ನಗರಿಯು ಉತ್ಸಾಹ ಹರ್ಷಗಳಿಂದ ಪರಿಪೂರ್ಣವಾಗಿ ಶೋಭಿಸಿತು. ॥೫॥

ಅಂದು ಮಹಾ ಗಣಪತಿಗೆ ಹನ್ನೆರಡನೆಯ ಜನ್ಮದಿನೋತ್ಸವ. ಗೌರೀ ದೇವಿಯು ತನ್ನ ಪ್ರಿಯ ಪುತ್ರನಿಗೆ ಮಂಗಲಸ್ನಾನವನ್ನು ಮಾಡಿಸಿದಳು. ಮನೆಗೆ ಅನೇಕ ಮಂದಿ ಮುನಿರಮಣಿಯರನ್ನು ಬರಮಾಡಿಕೊಂಡು ಅವರಿಗೆಲ್ಲ ಅರಿಸಿನ-ಕುಂಕುಮ, ಬಾಗಿನ ಇತ್ಯಾದಿಗಳನ್ನು ಕೊಟ್ಟಳು. ॥೬॥

ದೇವಿಯು ಸುವಾಸಿನಿಯರನ್ನು ವಿಧಿಪೂರ್ವಕವಾಗಿ ಪೂಜಿಸಿ ಗೌರವಿಸುತ್ತಲಿರುವ ಸಮಯಕ್ಕೆ ಸರಿಯಾಗಿ ಅಲ್ಲಿಗೊಬ್ಬ ದೈತ್ಯನು ಬಂದು ನಿಂತನು. ಅವನನ್ನು " ವಿಶ್ವದೇವ " ಎಂದು ಎಲ್ಲರೂ ಸಂಬೋಧಿಸಿ ವ್ಯವಹರಿಸುತ್ತಲಿದ್ದರು. ॥೭॥

ಅವನು ಬರುವಾಗ ತನ್ನ ಸ್ವಾಭಾವಿಕ ಅಕರಾಲ-ವಿಕರಾಲ ರೂಪದಿಂದ ಬರದೇ ಸಾಕ್ಷಾತ್ ಭಗವಂತನಾದ ಶ್ರೀಮನ್ನಾರಾಯಣನ ದಿವ್ಯ ರೂಪವನ್ನು ಧರಿಸಿ ಬಂದಿದ್ದನು. ಶ್ರೀವತ್ಸದ ಗುರುತು ಅವನ ಎದೆಯ ಮೇಲೆ ಸ್ಪಷ್ಟವಾಗಿ ತೋರುತ್ತಲಿದ್ದಿತು. ಶಂಖ, ಚಕ್ರ, ಗದಾ, ಪದ್ಮಗಳನ್ನು ತನ್ನ ನಾಲ್ಕೂ ಕೈಗಳಲ್ಲಿ ಧರಿಸಿದ್ದನು. ವನಮಾಲಿಕೆಯನ್ನು ಕೊರಳಲ್ಲಿ ಧರಿಸಿದ್ದರಿಂದ ಬಹಳ ವಿರಾಜಮಾನನಾಗಿ ತೋರುತ್ತಲಿದ್ದನು. ॥೮॥

ತುಲಸೀದಾಮರುಚಿರೋ ದಿವ್ಯ ವಸ್ತ್ರಾನುಲೇಪನಃ ।
ಕಮಂಡಲುಂ ವಾರಿಪೂರ್ಣಂ ವೇಣುದಂಡಂ ದಧತ್ಕರೇ ॥೯॥

ಗೌರೀ ತಮತಿಥಿಂ ದ್ವಾರಿ ತಿಷ್ಠಂತಂ ಪ್ರಾಹ ಭಕ್ತಿತಃ ।

**ಗೌರ್ಯುವಾಚ :—**

**ಕುತ ಆಗಮ್ಯತೇ ಬ್ರಹ್ಮಂಸ್ತುಷ್ಟಾಹಂ ತವ ತೇಜಸಾ ॥೧೦॥**

**ಕ ಉವಾಚ :—**

**ಇತ್ಯುಕ್ತಃ ಪ್ರಾಹ ತಾಂ ವಿಪ್ರಃ**

---

ತುಲಸಿಯ ಹಾರವನ್ನು ಧರಿಸಿದ್ದನು. ದಿವ್ಯವಾದ ಪೀತಾಂಬರವನ್ನುಟ್ಟು ಹೊದೆದಿದ್ದನು. ದೇಹಕ್ಕೆ ದಿವ್ಯ ಗಂಧವನ್ನು ಅನುಲೇಪಿಸಿಕೊಂಡಿದ್ದನು ಜಲ ಪೂರ್ಣವಾದ ಕಮಂಡಲುವನ್ನೂ ಮತ್ತೊಂದು ಕೈಯಲ್ಲಿ ಸುಂದರವಾದ ಸುನಾದವುಳ್ಳ ಬಿದಿರಿನ ಕೊಳಲನ್ನೂ ಧರಿಸಿದ್ದನು. ॥೯॥

ತನ್ನ ಮಂದಿರದ ಬಾಗಿಲಿಗೆ ಬಂದು ನಿಂತಿದ್ದ ಕೃತ್ರಿಮರೂಪದ ಈ ಅತಿಥಿಯನ್ನು ಕಂಡು ಗೌರಿಯು ಭಕ್ತಿಭಾವವುಳ್ಳವಳಾದಳು, ಮತ್ತು ಬಹಳ ವಿನಯದಿಂದ ಸಮೀಪಕ್ಕೆ ಬಂದು ನಿಂದು ಹೀಗೆಂದು ಪ್ರಶ್ನಿಸಿದಳು.

ದೇವೀ :—

ತೇಜಸ್ವಿಯಾದ ಬ್ರಾಹ್ಮಣೋತ್ತಮ! ಪ್ರಕೃತ ತಾವು ಎಲ್ಲಿಂದ ಇಲ್ಲಿಗೆ ಬರೋಣವಾಯಿತು? ಈ ಬ್ರಾಹ್ಮೀತೇಜವನ್ನು ಕಂಡು ನಾನು ಬಹಳ ಸಂತುಷ್ಟಳಾಗಿರುವೆನು. ॥೧೦॥

ಬ್ರಹ್ಮಾ :—

ದೇವಿಯ ಈ ಮಾತುಗಳನ್ನು ಕೇಳಿದ ಆ ರಕ್ಕಸನು ದೇವಿಯು ತನ್ನ ಈ ಮಾಯಾರೂಪಕ್ಕೆ ಮೋಸಹೋಗಿದ್ದಾಳೆಂದೂ, ತಾನು ಬಂದ ಕಾರ್ಯವನ್ನು ಶ್ರಮ

ದ್ವಿಜ ಉವಾಚ :—

ಶ್ರುತವಾನಸ್ಮಿ ಯತ್ಪುರಾ ।

ತದ್ದೃಷ್ಟ್ವಾ ನಯನಾಭ್ಯಾಂ ತೇ ಪರಿತುಷ್ಟಂ ಮನೋ ಮಮ ॥೧೧॥

ಕ್ಷುಧಯಾ ಪೀಡಿತಶ್ಚಾಹಂ ಭವತೀಗೃಹಮಾಗತಃ ।

ಪಾರ್ವತ್ಯುವಾಚ :—

ಆಸ್ಯತಾಂ ಭುಜ್ಯತಾಂ ಸ್ವಸ್ಥಂ

ಕ ಉವಾಚ :—

ಸ ಚ ತತ್ರಾಸನೇ ಸ್ಥಿತಃ ॥೧೨॥

---

ವಿಲ್ಲದೆ ಸಾಧಿಸಬಹುದೆಂದೂ ಸಂಪೂರ್ಣ ಉತ್ಸಾಹಗೊಂಡು ದೇವಿಗೆ ತನ್ನ ವಿಷಯದಲ್ಲಿ ಮತ್ತಷ್ಟು ನಂಬುಗೆಯುಂಟಾಗುವಂತೆ ಉತ್ತರಿಸತೊಡಗಿದನು.

ವಿಶ್ವದೇವ :—

ತಾಯೇ! ನಾನು ಅನೇಕ ಜನರ ಬಾಯಿಯಿಂದ ನಿನ್ನ ಸುಕುಮಾರನ ಮಹಾಮಹಿಮೆಗಳನ್ನು ಕೇಳಿದ್ದೇನೆ. ಅವೆಲ್ಲವನ್ನೂ ಪ್ರತ್ಯಕ್ಷವಾಗಿ ಕಂಡು ಸಂತೋಷಿಸೋಣವೆಂದು ಇಲ್ಲಿಯವರೆಗೂ ಬಂದಿರುವೆನು. ದೇವದೇವನಾದ ನಿನ್ನ ಮಗನನ್ನು ನೋಡಿದ ಮಾತ್ರದಿಂದಲೇ ನನ್ನ ಕಣ್ಣುಗಳು ಸಾರ್ಥಕಗೊಂಡವೆಂದು ನಾನು ನಂಬಿದ್ದೇನೆ. ॥೧೧॥

ಬಹು ದೂರದಿಂದ ನಡೆದು ಬಂದ ನನಗೆ ಬಹಳ ಹಸಿವಾಗಿದೆ. ನಿನ್ನ ಮನೆಯಲ್ಲೇ ಭೋಜನವನ್ನು ಮಾಡೋಣವೆಂದು ಬಂದಿದ್ದೇನೆ.

ಪಾರ್ವತೀ :—

ಇಲ್ಲಿ ಕುಳಿತುಕೊಳ್ಳಿ. ಯಥೇಷ್ಟವಾಗಿ ಭುಜಿಸಿರಿ. ಯಾವುದಕ್ಕೂ ನೀವು ಸಂಕೋಚಪಡಬೇಕಾಗಿಲ್ಲ. ಸ್ವಸ್ಥ ಮನಸ್ಸಿನಿಂದ ಭುಜಿಸಿರಿ.

ಬ್ರಹ್ಮ:—

ಎಂದು ನುಡಿಯಲು ವೇಷಧಾರಿಯಾದ ಆ ದೈತ್ಯ, ವಿಶ್ವದೇವನು ಅಲ್ಲೇ ಇದ್ದ ಒಂದು ಆಸನದಲ್ಲಿ ಕುಳಿತನು. ॥೧೨॥

ಆಸೀನಸ್ಯ ಮಯೂರೇಶೋ ನಿಷ್ಟರೇಽಕ್ಷಾಲಯತ್ತದಾ ।
ಚರಣೌ ತತ್ತೀರ್ಥಜಲೈಃ ಸಿಷೇಚ ಸರ್ವತೋಽಮಲೈಃ ॥೧೩॥

ಸಂಪೂಜ್ಯ ಭೋಜಯಾಮಾಸ ಪಕ್ವಾನ್ನೈಃ ಪಾಯಸೈರಪಿ ।
ಆಪೋಶನಕರಸ್ತೂಷ್ಣೀಂಆಸೀಚ್ಚಿಂತಾತುರೋ ದ್ವಿಜಃ ॥೧೪॥

ಉಮೋವಾಚ ದ್ವಿಜಂ ಪಶ್ಚಾತ್

ಉಮೋವಾಚ :—

ಭುಜ್ಯತಾಂ ಭುಜ್ಯತಾಂ

ಕ ಉವಾಚ :—

ಇತಿ ।

ಉಮೋವಾಚ :—

ಯದಿ ನಾನ್ನಂ ಮನೋಯೋಗ್ಯಂ ತದಾ ದಾಸ್ಯೇಽತಿವಾಂಛಿತಮ್ ॥೧೫॥

---

ಆಸನಾಸೀನನಾದ ವಿಶ್ವದೇವನ ಚರಣಕಮಲಗಳನ್ನು ಮಯೂರೇಶನು ತೊಳೆದನು ಮತ್ತು ಆ ಪವಿತ್ರ ಚರಣತೀರ್ಥದಿಂದ ಎಲ್ಲೆಡೆಯಲ್ಲೂ ಪ್ರೋಕ್ಷಿಸಿದನು. ॥೧೩॥

ಅರ್ಘ್ಯ ಆಚಮನೀಯಗಳನ್ನಿತ್ತು ಬಳಿಕ ವಿಪ್ರನನ್ನು ಅನೇಕೋಪಚಾರಗಳಿಂದ ಪೂಜಿಸಿ ಷಡ್ರಸೋಪೇತ ಪಕ್ವಾನ್ನಗಳಿಂದಲೂ ವಿವಿಧ ಪಾಯಸಗಳಿಂದಲೂ ಭೋಜನವನ್ನೇರ್ಪಡಿಸಿದನು. ಇಷ್ಟೆಲ್ಲ ಆಗುವವರೆಗೂ ಸುಮ್ಮನಿದ್ದ ವಿಪ್ರನು ಕೈಗೆ ಆಪೋಶನ ಬಿದ್ದೊಡನೆಯೇ ಚಿಂತಾಕ್ರಾಂತನಾದವನಂತೆ ಸುಮ್ಮನೆ ಕುಳಿತುಬಿಟ್ಟನು. ॥೧೪॥

ವಿಪ್ರೋತ್ತಮನ ಈ ವರ್ತನೆಯನ್ನು ಕಂಡ ಅನ್ನಪೂರ್ಣೆಯು ಅಚ್ಚರಿಗೊಂಡು ಬ್ರಾಹ್ಮಣನನ್ನು ಕುರಿತು ಹೀಗೆಂದು ನುಡಿದಳು.

ಉಮೆ : —

ವಿಪ್ರವರ್ಯ ! ಊಟವನ್ನು ಮಾಡು, ಸಂಕೋಚಿಸಬೇಡ. ಈಗ ಎಲೆಯಲ್ಲಿ ಬಡಿಸಿರುವ ಆಹಾರ ಪಾನೀಯಗಳು ನಿನ್ನ ಮನಸ್ಸಿಗೆ ರುಚಿಸದಿದ್ದರೆ ಬೇರೆ ಯಾವ ವಸ್ತುಗಳನ್ನಪೇಕ್ಷಿಸುವೆಯೋ ಅವು ಎಷ್ಟೇ ಅಪೂರ್ವವಾಗಿರಲಿ ಅಥವಾ ನಿನ್ನ ಬಯಕೆಯು

ಬಹುಜನ್ಮತಪೋಭಿರ್ಯತ್ಕಟಾಕ್ಷೋ ಭುವಿ ಲಭ್ಯತೇ ।
ತಯಾ ತೇ ಪರಿವಿಷ್ಟಾನ್ನಂ ಕಥಂ ತ್ಯಜಸಿ ಸುವ್ರತ ! ॥೨೧॥

ಬ್ರಹ್ಮಾದೀನಾಂ ನ ಗಮ್ಯಾ ಯಾ ದೃಷ್ಟಾ ಸಾಕ್ಷಾತ್ತ್ವಯಾ ಶಿವಾ ।
ಸರ್ವಲೋಕಸ್ಯ ಜನನೀ ಸರ್ವಯೋಷಿದ್ವರಾ ಹಿ ಸಾ ॥೨೨॥

ಸರ್ವೇಷಾಮೇವ ದೇವಾನಾಂ ಶಕ್ತಿಃ ಸಾ ಪರಮಾದ್ಭುತಾ ।
ತದ್ದರ್ಶನೇನ ದೇವಸ್ಯ ವಿಷ್ಣೋರ್ಜಾತಂ ಹಿ ದರ್ಶನಮ್ ॥೨೩॥

ಚಕೋರಸ್ಯೇವಾಗ್ನಿಭುಜೋ ಮಿಷ್ಟಾನ್ನಂ ನೈವ ರೋಚತೇ ।
ತಥಾ ಕಿಂ ತೇ ನ ರೋಚೇತ ? ದೇವಾನ್ನಮಮೃತೋಪಮಮ್ ॥೨೪॥

---

ಮಹಾದೇವಿ; ಅನ್ನಪೂರ್ಣೆಯ ಪರಮಾನುಗ್ರಹವನ್ನು ಪಡೆಯಲಿಕ್ಕೆ ಎಷ್ಟೆಷ್ಟೋ ಜನ್ಮಗಳಲ್ಲಿ ಪುಣ್ಯಕೆಲಸಗಳನ್ನು ಮಾಡಿರಬೇಕು. ಅಂತಹ ಮಹಾತಾಯಿ ಇಂದು ನಿನಗೆ ಅನ್ನವನ್ನಿತ್ತಿದ್ದಾಳೆ. ಸುವ್ರತ! ಇಂತಹ ಪವಿತ್ರಾನ್ನವನ್ನು ತೊರೆದು ಹೊರಡುವೆಯಾ ? ॥೨೧॥

ಬ್ರಹ್ಮಾದಿ ದೇವೋತ್ತಮರಿಗೆ ಸಹ ದೇವಿ ಗೋಚರವಾಗತಕ್ಕವಳಲ್ಲ. ಇಂಥವಳನ್ನು ನೀನು ಸಾಕ್ಷಾತ್ಕರಿಸಿರುವೆ ಪರಶಿವೆಯಂತಹ ಸ್ತ್ರೀರತ್ನ ಮತ್ತೆಲ್ಲಿಯಾದರೂ ದೊರೆತೀತೇ ? ಇವಳು ಸಾಮಾನ್ಯಳೆಂದು ಭಾವಿಸಬೇಡ. ಸಕಲ ಲೋಕಕ್ಕೂ ಇವಳು ಜನನಿ. ॥೨೨॥

ಸಕಲ ದೇವತೆಗಳಿಗೂ ಶಕ್ತಿ ಸ್ವರೂಪಳು. ಇವಳ ಅತ್ಯದ್ಭುತ ಸಾಮರ್ಥ್ಯದಿಂದಲೇ ದೇವತೆಗಳು ಅಸಾಧ್ಯವೆನಿಸುವ ಕಾರ್ಯಗಳನ್ನು ಸಾಧಿಸಿ ಲೋಕಮಾನ್ಯರೆನಿಸಿರುವರು. ಇವಳನ್ನು ನೋಡಿದ್ದರಿಂದ ಮಹಾವಿಷ್ಣುವನ್ನು ಸಂದರ್ಶಿಸಿದಂತೆಯೇ ಆಯಿತು. ಇವಳಿಗೂ ಶ್ರೀಮನ್ನಾರಾಯಣನಿಗೂ ಯಾವ ಭೇದವೂ ಇಲ್ಲವೇ ಇಲ್ಲ. ಇವಳಿಗೆ 'ನಾರಾಯಣಿ' ಎಂದೂ ಹೆಸರು. ॥೨೩॥

ತತ್ತ್ವವು ಹೀಗಿದ್ದರೂ ; ನಾನು ಇಷ್ಟು ವಿಶದವಾಗಿ ಇದನ್ನು ತಿಳಿಸಿದ್ದರೂ ಅಂಧಶ್ರದ್ಧೆಯನ್ನೇ ಮುಂದುವರಿಸಿಕೊಂಡು ದೊರೆತ ಅಮೃತೋಪಮ ಪಕ್ವಾನ್ನವನ್ನು

**ಮಮ ವಾ ಸರ್ವರೂಪಸ್ಯ ದರ್ಶನೇऽಸ್ಯ ದೃಶಿರ್ಭವೇತ್ ।**

**ದ್ವಿಜ ಉವಾಚ :—**

**ರಮಾಪತೇರಹಂ ದಾಸೋ ನ ನಮಸ್ಯಾಮಿ ಕಂಚನ ॥೨೫॥**

**ಯದಿ ತ್ವಂ ಸರ್ವರೂಪೋऽಸಿ ಯದಿ ಸಾಮರ್ಥ್ಯಮಸ್ತಿ ತೇ ।**
**ತದಾ ದರ್ಶಯ ವಿಶ್ವೇಶಂ ನಾರಾಯಣಮನಾಮಯಮ್ ॥೨೬॥**

**ಕ ಉವಾಚ :—**

**ಏವಂ ಬುದ್ಧ್ವಾ ದೃಢಂ ತಸ್ಯ ನಿಶ್ಚಯಂ ಸ ಮಯೂರರಾಟ್ ।**
**ಅಂತರ್ಧಾಯ ಪ್ರಾದುರಾಸೀನ್ನಾರಾಯಣಸ್ವರೂಪವಾನ್ ॥೨೭॥**

---

ತ್ಯಜಿಸುವೆಯಾದರೆ ನಿನ್ನಂತಹ ದುರ್ದೈವಿ ಬೇರೊಬ್ಬನಿರುವುದಿಲ್ಲ- ಬೆಂಕಿಯನ್ನು ತಿಂದು ಜೀವಿಸುವ ಚಕೋರಕ್ಕೆ ಭಕ್ಷ್ಯ-ಭೋಜ್ಯಗಳು ಹೇಗೆ ರುಚಿಸಿಯಾವು? ॥೨೪॥

ಸರ್ವಸ್ವರೂಪಿಯಾದ ನನ್ನನ್ನು ಸಂದರ್ಶಿಸಿದರೂ ಮಹಾವಿಷ್ಣುವನ್ನು ನೋಡಿದಂತಾಗುವುದರಿಂದ ನೀನು ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ ಭುಜಿಸಬಹುದು

ದ್ವಿಜ :—

ನಾನು ರಮಾಪತಿಯ ದಾಸನೆಂಬುದನ್ನು ಮೊದಲೇ ತಿಳಿಸಿರುವೆನಲ್ಲವೇ? ಎಂದ ಮೇಲೆ ಅವನನ್ನುಳಿದು ಮತ್ತಾರಿಗೂ ನಾನು ವಂದಿಸಲಾರೆ. ॥೨೫॥

ನಿನ್ನನ್ನೇನೋ ಸರ್ವಸ್ವರೂಪ ಎಂದು ಹೇಳಿಕೊಂಡೆ. ಅಲ್ಲವೇ? ನಿನಗೆ ನಿಜವಾಗಿಯೂ ಅಂತಹ ಸಾಮರ್ಥ್ಯವಿರುವುದಾದರೆ ನಿರಾಮಯನೂ, ನಿರಂಜನನೂ ಆದ ಜಗದೊಡೆಯ; ಆ ನಾರಾಯಣನನ್ನು ನನಗೆ ಸಂದರ್ಶಿಸು. ॥೨೬॥

ಬ್ರಹ್ಮಾ :—

ಈ ಮಾತನ್ನು ಕೇಳಿದ ಬಳಿಕ ವಿಶ್ವದೇವನಿಗೆ ತಾನು ಮೆಚ್ಚಿದ ಆಕೃತಿಯಲ್ಲಿ ಎಷ್ಟರಮಟ್ಟಿಗೆ ದೃಢವಿಶ್ವಾಸವಿದೆ ಎಂಬುದು ಮಯೂರೇಶನಿಗೆ ಅರಿವಾಯಿತು. ಒಡನೆಯೇ ಮಯೂರೇಶ್ವರನು ತನ್ನ ಆಗಿನ ರೂಪವನ್ನು ಅಂತರ್ಧಾನಗೊಳಿಸಿ

**ಪೀತಾಂಬರಃ ಶಂಖಚಕ್ರಗದಾಪದ್ಮಧರೋ ವಿಭುಃ ।**
**ನಾನಾಲಂಕಾರರುಚಿರಃ ಸರ್ವಾಲಂಕಾರಸುಂದರಃ ॥೨೮॥**

**ಕೌಸ್ತುಭೇನ ಲಸದ್ವಕ್ಷೋ ವನಮಾಲಾವಿಭೂಷಿತಃ ।**
**ಶೇಷಶಾಯೀ ಮಹಾಲಕ್ಷ್ಮ್ಯಾ ಸಂವಾಹಿತಪದಾಂಬುಜಃ ॥೨೯॥**

**ವಿಶ್ವದೇವಶ್ಚ ತಂ ದೃಷ್ಟ್ವಾ ನನಾಮ ಪರಿಪೂಜ್ಯ ಚ ।**
**ಯಾತಸ್ತನ್ಮಯತಾಂ ಭಕ್ತ್ಯಾ ನಿಃಸ್ಮೃತ್ಯ ಚ ಶರೀರತಾಮ್ ॥೩೦॥**

ವಿಪ್ರನಿಗೆ ಅಭೀಷ್ಟವಾದ ನಾರಾಯಣನ ದಿವ್ಯ ರೂಪವನ್ನು ಧರಿಸಿ ಅವನೆದುರು ಬಂದು ನಿಂದನು. ॥೨೭॥

ವಿಷ್ಣುವಾಗಿ ಮಾರ್ಪಟ್ಟ ಮಯೂರರಾಜನ ವೇಷಭೂಷಣಗಳನ್ನು ಬಣ್ಣಿಸು- ವೆನು, ವತ್ಸ, ವ್ಯಾಸ ! ಕೇಳು. ದಿವ್ಯವಾದ ಪೀತಾಂಬರವನ್ನು ಉಟ್ಟು ಹೊದೆದಿದ್ದನು. ಕೈಗಳಲ್ಲಿ ಶಂಖ, ಚಕ್ರ, ಗದಾ ಮತ್ತು ಪದ್ಮಗಳನ್ನು ಧರಿಸಿದ್ದನು. ಅಲ್ಲದೇ ನಾನಾ ಬಗೆಯಾಗಿ ಅಲಂಕರಿಸಿಕೊಂಡು ನಯನಮನಗಳಿಗೆ ಅಭಿರಾಮನಾಗಿದ್ದನು. ಈ ಅಲಂಕರಣದಿಂದ ದೇವನ ಸ್ವಭಾವಸುಂದರ ಅಪ್ರಾಕೃತ ಶರೀರ ಕಾಂತಿಯು ಮತ್ತಿಷ್ಟು ಹೃದಯಾಹ್ಲಾದಕರವಾಗಿದ್ದಿತು. ॥೨೮॥

ಕೌಸ್ತುಭ ಮಣಿಯು ದೇವನ ವಕ್ಷಸ್ಥಳವನ್ನು ಕಾಂತಿಮಯವನ್ನಾಗಿ ಮಾಡಿದ್ದಿತು. ವನಸುಮ ಮಾಲೆಯು ಕಂಠದಿಂದ ಚರಣಗಳ ವರೆಗೂ ಜೋಲು ಬಿದ್ದಿದ್ದಿತು. ಆದಿಶೇಷನ ಮೇಲೆ ಪವಡಿಸಿದ ದೇವನು ಮಹಾಲಕ್ಷ್ಮಿಯಿಂದ ಪಾದಸಂವಾಹನ ಸೇವೆಯನ್ನು ಕೈಗೊಳ್ಳುತ್ತಲಿದ್ದನು. ॥೨೯॥

ವಿಶ್ವದೇವನು ಆ ಭವ್ಯ ರೂಪವನ್ನು ಕಂಡು ಸಾಷ್ಟಾಂಗವೆರಗಿದನು, ಮತ್ತು ಪರಿಪರಿಯಿಂದ ಪೂಜಿಸಿದನು. ಭಕ್ತಿಯು ಉದ್ರೇಕವನ್ನು ಹೊಂದಿತು. ಎದುರಿಗೆ ಕಂಡ ದೇವನ ರೂಪವೊಂದನ್ನುಳಿದು ಮತ್ತಾವ ವಸ್ತುವಿನ ಕಲ್ಪನೆಯೂ ಅವನ ಮೆದುಳಿನಲ್ಲುಳಿಯಲಿಲ್ಲ. ಹೆಚ್ಚೇನು ? ತನ್ನ ದೇಹದ ಮೇಲೆ ಸಹ ಅವನಿಗೆ ಭಾನ ಉಳಿಯಲಿಲ್ಲ. ಇದನ್ನೇ 'ಭಾವ ಸಮಾಧಿ' ಎನ್ನುವರು. ॥೩೦॥

**ಉವಾಚ ಚ ಚಿದಾನಂದಪರಿಪೂರ್ಣೋ ದ್ವಿಜೋತ್ತಮಃ ।**

**ದ್ವಿಜ ಉವಾಚ :—**

**ಅದ್ಯ ಧನ್ಯಂ ಜನುರ್ಮೇಽದ್ಯ ಜೀವಿತಂ ಚ ಸುಜೀವಿತಮ್ ॥೩೧॥**

**ಅದ್ಯೇಯಂ ನಗರೀ ಧನ್ಯಾ ಧನ್ಯೌ ತೌ ಪಿತರೌ ಮಮ ।**
**ಮಯೂರೇಶೋಪದೇಶೇನ ಭವಾನ್ಯಾ ದರ್ಶನೇನ ಚ ॥೩೨॥**

**ಪರಾತ್ಪರಸ್ಯ ವಿಷ್ಣೋಸ್ತೇ ಚರಾಚರಸ್ವರೂಪಿಣಃ ।**
**ಲಬ್ಧಂ ದರ್ಶನಮತ್ರೈವ ಸರ್ವಾಂತರ್ಯಾಮಿಣೋ ವಿಭೋಃ ॥೩೩॥**

---

ಜ್ಞಾನಾನಂದಪರಿಪೂರ್ಣನಾಗಿ ಹೋಗಿದ್ದ ದ್ವಿಜವರನು ತನ್ನ ಧನ್ಯತೆಯ ಬಗ್ಗೆ ಹೀಗೆಂದು ಉದ್ಗಾರ ತೆಗೆದನು.

ದ್ವಿಜ :—

ಇಂದಿಗೆ ನನ್ನ ಜನ್ಮ ಧನ್ಯವಾಯಿತು- ನನ್ನ ಜೀವಿತವೇ ಸುಜೀವಿತವಾದುದು. ॥೩೧॥

ಈ ನಗರಿಯು ಇಂದು ಧನ್ಯವಾಯಿತು. ನನ್ನ ತಂದೆತಾಯಿಯರು ಪುನೀತ ರಾದರು. ಮಯೂರೇಶ ಭವಾನಿದೇವಿ ಇವರ ಉಪದೇಶವಿಲ್ಲದಿದ್ದರೆ ಈ ಪರಮ ಲಾಭಕ್ಕೆ ಅವಕಾಶವಿರಲಿಲ್ಲ. ॥೩೨॥

ಭಗವನ್, ಮಹಾವಿಷ್ಣೋ ! ಪರಾತ್ಪರ ವಸ್ತುವಾದ ನಿನ್ನನ್ನು ಸಂದರ್ಶಿಸಲು ಎಷ್ಟು ಶ್ರಮವಹಿಸಬೇಕಿದ್ದಿತೋ ? ತಿಳಿಯದು. ನೀನು ಚರಾಚರರೂಪಿಯಾಗಿ ಪ್ರತಿಕ್ಷಣ ನಮ್ಮೆದುರು ಕಂಡು ಬರುತ್ತಲಿದ್ದರೂ ಬಹಿರ್ಮುಖಿಗಳಾದ ಇಂದ್ರಿಯಗಳು ಬಾಹ್ಯ ರೂಪವನ್ನು ನೋಡಬಲ್ಲುವೇ ಹೊರತು ಸರ್ವಾಂತರ್ಯಾಮಿಯಾದ ನಿನ್ನನ್ನು ಕಾಣಲರಿಯವು. ಯಾವುದು ಹೇಗೇ ಇರಲಿ, ನನಗಂತೂ ಇಂದೇ, ಇಲ್ಲಿಯೇ ನಿನ್ನ ಈ ದಿವ್ಯ ರೂಪ ಗೋಚರಿಸಿದೆ. ನಾನೇ ಪರಮ ಧನ್ಯ. ॥೩೩॥

ಕ ಉವಾಚ :—

ನಾರಾಯಣೋಽಪಿ ತಂ ಭಕ್ತಂ ಬಾಹುಭಿಃ ಪರಿಷಸ್ವಜೇ ।
ಉವಾಚ ಚ ಪ್ರಸನ್ನಾತ್ಮಾ ಬಾಷ್ಪಗದ್ಗದಯಾ ಗಿರಾ ॥೩೪॥

ದೇವ ಉವಾಚ :—

ಮದರ್ಥಂ ತ್ಯಕ್ತವಾನ್ ಭುಕ್ತಿಂ ಕ್ಷೀರಾಬ್ಧೇರಹಮಾಗತಃ ।
ದೃಷ್ಟ್ವಾ ತೇ ನಿಶ್ಚಯಂ ಭಕ್ತಿಂ ದೃಢಾಮವ್ಯಭಿಚಾರಿಣೀಮ್ ॥೩೫॥

ಭಕ್ತಮಾರ್ಗಂ ಪ್ರಸಿಂಚಾಮಿ ಮಾರುತೋದ್ಧೃತಕಂಟಕಮ್ ।
ಭಕ್ತತೃಷಾನಿವೃತ್ಯರ್ಥಂ ಜಾತೋಽಹಂ ಜಲರೂಪಧೃಕ್ ॥೩೬॥

ನಾನಾರೂಪಧರೋ ಜಾತೋ ಭಕ್ತಾನಾಮಾರ್ತಿನಾಶನಃ ।
ಯಥಾ ಭಕ್ತಃ ಪ್ರಿಯೋ ನಿತ್ಯಮಿತಿ ತೇ ದರ್ಶಯಾಮ್ಯಹಮ್ ॥೩೭॥

---

ಬ್ರಹ್ಮಾ :—

ನಾರಾಯಣರೂಪಿಯಾದ ಮಯೂರವಾಹನನು ತನ್ನ ಏಕಾಂತ ಭಕ್ತ; ವಿಶ್ವದೇವನನ್ನು ಬರಸೆಳೆದು ನಾಲ್ಕುಭುಜಗಳಿಂದಲೂ ಅಪ್ಪಿಕೊಂಡನು. ಭಕ್ತನ ದಾರ್ಢ್ಯವನ್ನು ಕಂಡು ದೇವನ ನಯನಗಳಿಂದ ಆನಂದಾಶ್ರುಗಳು ಧಾರೆಯಾಗಿ ಉದುರಿದುವು. ಕಂಠವು ಗದ್ಗದಿತವಾಯಿತು. ಹಾಗೆಯೇ ಅವನನ್ನು ಕುರಿತು ಹೀಗೆಂದು ನುಡಿದನು. ॥೩೪॥

ದೇವ :—

ವತ್ಸ ! ನನಗಾಗಿ ನೀನು ಭುಜಿಸುವುದನ್ನು ಸಹ ಬಿಟ್ಟುಬಿಟ್ಟೆ. ಇದನ್ನರಿತು ಇದೋ, ನಾನು ಕ್ಷೀರಸಮುದ್ರದಿಂದ ಧಾವಿಸಿ ನಿನ್ನ ಬಳಿಗೆ ಬಂದಿದ್ದೇನೆ. ನಾನು ಬಂದೆನೆಂದರೇನು ? ನಿನ್ನ ದೃಢಭಕ್ತಿಯು ನನ್ನನ್ನಿಲ್ಲಿಗೆ ಎಳೆದು ತಂದಿದೆ. ॥೩೫॥

ಭಕ್ತರ ಮಾರ್ಗ ನಿಷ್ಕಂಟಕವಾಗಿರಲೆಂದು ನಾನು ವಾಯುವಾಗಿ ದಾರಿಯಲ್ಲಿ ಬಿದ್ದಿರುವ ಮುಳ್ಳುಗಳನ್ನೆಲ್ಲ ದೂರ ಎಸೆಯುವೆನು. ಅವರ ದಾಹ ಪರಿಹಾರಕ್ಕಾಗಿ ಜಲರೂಪಿಯಾಗಿರುವೆನು. ॥೩೬॥

ಭಕ್ತರ ಆರ್ತಿಯನ್ನು ಪರಿಹರಿಸಲಿಕ್ಕೆ ತಳೆಯಬಾರದಂತಹ ರೂಪಗಳನ್ನೆಲ್ಲ

ಕ ಉವಾಚ :—

ಅಭೂದ್ಭಾದ್ರಚತುರ್ಥ್ಯಾಂ ಹಿ ಮಯೂರೇಶಮಹೋತ್ಸವಃ ।
ಮೂರ್ತಿಂ ಮಹೀಮಯೀಂ ಕೃತ್ವಾ ಬರ್ಹ್ಯಾಖುಸಿಂಹಗಾಂ ಪೃಥಕ್ ॥೩೮॥

ನಾನಾಲಂಕಾರಶೋಭಾಢ್ಯಾಂ ನಾನಾರಂಗೈಃ ಸು-ಶೋಭಿತಾಮ್।
ಅನೇಕೈಃ ಪೂಜ್ಯತಾಂ ಸಮ್ಯಗ್ಬಾಲಕೈರ್ಮುನಿಸಂಚಯೈಃ ॥೩೯॥

ಕೇಚಿದಗ್ರೇ ಪ್ರಗಾಯಂತಿ ಕೇಚಿನ್ನೃತ್ಯಂತಿ ಭಕ್ತಿತಃ ।
ವಾಚಯಂತಿ ಪುರಾಣಾನಿ ಪ್ರದಕ್ಷಿಣಪರಾಃ ಪರೇ ॥೪೦॥

ಸ್ವೀಕರಿಸಿದ್ದೇನೆ. ಭಕ್ತರು ನನಗೆ ಎಷ್ಟರಮಟ್ಟಿಗೆ ಸರ್ವದಾ ಪ್ರಿಯರು ಎಂಬುದನು ನಿನಗೆ ತೋರಿಸಿಕೊಡುವೆನು. ॥೩೭॥

ಬ್ರಹ್ಮಾ:-

ಹೀಗಿರಲು ಭಾದ್ರಪದಮಾಸದ ಚತುರ್ಥಿಯಂದು ಒಮ್ಮೆ ಮಯೂರೇಶ್ವರನ್ನ ಪೂಜಾ ಮಹೋತ್ಸವ ನಡೆಯಿತು. ಜನರು ದೇವನ ಮೃಣ್ಮಯ ಮೂರ್ತಿಗಳನ್ನು ನಿರ್ಮಿಸಿದರು. ಕೆಲವರು ನವಿಲಿನ ಮೇಲೇರಿರುವಂತೆ ಮೂರ್ತಿಗಳನ್ನು ರಚಿಸಿದರು. ಇಲಿ, ಸಿಂಹಗಳ ಮೇಲೇರಿ ಕುಳಿತಂತಹ ವಿಗ್ರಹಗಳನ್ನು ಮತ್ತೆ ಕೆಲವರು ಮಾಡಿದರು. ಅಂತೂ ಪ್ರತಿಯೊರ್ವನೂ ತನ್ನದೆಂದು :ಪ್ರತ್ಯೇಕ ಮಾದರಿಯ ಮೂರ್ತಿಯನ್ನು ಏರ್ಪಡಿಸಿಕೊಂಡನು. ॥೩೮॥

ಅವನ್ನು ನಾನಾಬಗೆಯಿಂದ ಅಲಂಕರಿಸಿ ಸುಂದರಗೊಳಿಸಿದರು. ವಿವಿಧ ಬಣ್ಣಗಳನ್ನು ಅಲ್ಲಲ್ಲಿ ಹಚ್ಚಿದರು. ಅಂದು ಬಾಲಕರು–ವೃದ್ಧರು–ಸ್ತ್ರೀ–ಪುರುಷರೆನ್ನದೇ ಎಲ್ಲರೂ ಒಮ್ಮನದಿಂದ ಗಣಪತಿಯನ್ನು ಅರ್ಚಿಸಲಾರಂಭಿಸಿದರು. ॥೩೯॥

ಕೆಲವರು ದೇವನೆದುರು ನಿಂತುಕೊಂಡು ಮಧುರವಾಗಿ ಗಾಯನವನ್ನು ಮಾಡಿದರು. ಭಕ್ತಿಭಾವಾವಿಷ್ಟರಾದ ಕೆಲವರು ತಮಗೆ ಬಂದಂತೆ ನರ್ತಿಸಿದರು. ದೇವನ ಮಹಿಮಾಬೋಧಕಗಳಾದ ಪುರಾಣಗ್ರಂಥಗಳನ್ನು ಪಠಿಸಿ ಇತರರಿಗೆ

ಏತಸ್ಮಿನ್ನಂತರೇ ಪೌತ್ರೋ ವಸಿಷ್ಠಸ್ಯ ಮಹಾತ್ಮನಃ ।
'ಪರಾಶರ' ಇತಿ ಖ್ಯಾತ ಆಯಯೌ ಸ್ವೇಚ್ಛಯಾ ಮುನಿಃ ॥೪೧॥

ಸ ಚತುರ್ವಾರ್ಷಿಕೀಂ ಮೂರ್ತಿಂ ವಿದಧೇ ಭಕ್ತಿತತ್ಪರಃ ।
ಶುಷ್ಕಪರ್ಣಕೃತಾಂ ಮಾಲಾಂ ಕೃತ್ವಾ ತಸ್ಮೈ ನ್ಯವೇದಯತ್ ॥೪೨॥

ಗಂಧಬುದ್ಧ್ಯಾ ಕರ್ದಮೇನ ತಾಂ ವ್ಯಲೇಪಯದಾದರಾತ್ ।
ಮಿಷ್ಟಾನ್ನಾನಿ ಚ ಲಡ್ಡೂಕಾ ದಕ್ಷಿಣಾಂ ಚ ಫಲಾನಿ ಚ ॥೪೩॥

ಬೋಧಿಸುತ್ತಿದ್ದರು. ಮತ್ತೆ ಕೆಲವರು ಮೂರ್ತಿಯನ್ನು ಸುತ್ತುಗಟ್ಟುತ್ತ ನಮಸ್ಕಾರ ಮಾಡತೊಡಗಿದರು. ॥೪೦॥

ಇಷ್ಟರಲ್ಲಿ ಆ ಸ್ಥಳಕ್ಕೆ ಪರಾಶರಮಹರ್ಷಿಯು ಯಾದೃಚ್ಛಿಕವಾಗಿ ಆಗಮಿಸಿದನು. ಅವನು ವಸಿಷ್ಠ ಮಹರ್ಷಿಯ ಪೌತ್ರ. ವ್ಯಾಸ! ಅವನೇ ನಿನ್ನ ಜನಕ, ತಿಳಿಯಿತೇ? ॥೪೧॥

ಈ ಉತ್ಸವದ ಸನ್ನಿವೇಶವನ್ನು ನೋಡಿ ಅವನೂ ಉತ್ಸಾಹಗೊಂಡನು, ಮತ್ತು ತಾನೂ ದೇವನ ಒಂದು ಪ್ರತಿಕೃತಿಯನ್ನು ನಿರ್ಮಿಸಿದನು. ಅದು ನಾಲ್ಕು ವರ್ಷದ ಬಾಲಕನ ಅಳತೆಯುಳ್ಳಂತೆ ಪರಿಪುಷ್ಟವಾಗಿ ತೋರುತ್ತಲಿದ್ದಿತು. ಮತ್ತಾವ ಪೂಜಾ ಸಾಮಗ್ರಿ, ಅಲಂಕಾರೋಪಕರಣಗಳು ಪರಾಶರನಿಗೆ ದೊರಕಿರಲಿಲ್ಲವಾಗಿ ತರಗುಗಳಿಂದಲೇ ಒಂದು ಮಾಲಿಕೆಯನ್ನು ನಿರ್ಮಿಸಿ ಅದನ್ನು ಮೂರ್ತಿಯ ಕೊರಳಿಗೆ ಹಾಕಿದನು. ಎಂತಹ ನಿಕೃಷ್ಟ ವಸ್ತುಗಳನ್ನೇ ಅವನು ಪೂಜೆಗೆ ಉಪಯೋಗಿಸಿರಲಿ, ಅವನ ಪ್ರತಿಯೊಂದು ಕೆಲಸವೂ ಸದ್ಭಕ್ತಿಭಾವಿತವಾಗಿದ್ದಿತು. ॥೪೨॥

ಮೂರ್ತಿಯನ್ನು ಮಾಡಿದ ಅವಶಿಷ್ಟ ಮಣ್ಣನ್ನೇ (ಕೆಸರನ್ನೇ) ದಿವ್ಯ ಪರಿಮಳ ಗಂಧವೆಂದು ಭಾವಿಸಿ ದೇವನಿಗೆ ಅತ್ಯಾದರದಿಂದ ವಿಲೇಪಿಸಿದನು. ಮಿಷ್ಟಾನ್ನ, ಬಗೆ ಬಗೆಯ ಉಂಡೆಗಳು, ಸುವರ್ಣಪುಷ್ಪ, ಫಲ ಇವನ್ನೆಲ್ಲ ಕಾಲ್ಪನಿಕವಾಗಿಯೇ ನಿರ್ಮಿಸಿ ದೇವನಿಗೆ ಸಮರ್ಪಿಸಿದನು. ॥೪೩॥

ನ್ಯವೇದಯತ್ತದಾ ಪತ್ರೈರನೇಕೈಃ ಕರ್ದಮೈರಪಿ ।
ಸಂಕಲ್ಪಂ ಲೀಲಯಾ ಚಕ್ರೇ ಜಂಘಾವಾದ್ಯಂ ಶನೈಃ ಶನೈಃ ॥೪೪॥

ಮುಹೂರ್ತಂ ನರ್ತನಂ ಕೃತ್ವಾ ರುರೋದ 'ಭಕ್ಷಯೇ' ತಿ ಚ ।
ಸಂಪ್ರಾರ್ಥ್ಯ ಮೂರ್ತಿಂ ಬಹುಧಾ ತತಃ ಸಾ ಚೇತನಾಂ ಯಯೌ ॥೪೫॥

ಯದ್ಯತ್ತೇನ ಯದುದ್ದೇಶಾತ್ಸ್ಥಾಪಿತಂ ಪುರತೋಽಭವತ್ ।
ತತ್ತಥೈವ ಚ ಸಂಜಾತಂ ತತಃ ಸಾಭಕ್ಷಯತ್ತದಾ ॥೪೬॥

ಲಡ್ಡೂಕಾನ್ ಮೋದಕಾನ್ ನಾನಾ ಪಕ್ವಾನ್ನಂ ಪಾಯಸಾನ್ವಿತಮ್ ।
ವಿಶ್ವದೇವಶ್ಚ ತಂ ದೃಷ್ಟ್ವಾ ಮಿಥ್ಯಾಭೂತಂ ಯಥಾರ್ಥವತ್ ॥೪೭॥

---

ನಾನಾ ಜಾತಿಯ ಪತ್ರೆಗಳಿಂದ ಪ್ರಸನ್ನಪೂಜೆಯನ್ನು ಮುಗಿಸಿ ತೊಡೆಯನ್ನು ಮೃದುವಾಗಿ ನೆಲಕ್ಕೆ ಬಡಿಯುತ್ತ ಅದನ್ನೇ ಮಂಗಲ ವಾದ್ಯವನ್ನಾಗಿ ಮಾಡಿದನು. ಈ ರೀತಿಯ ಪೂಜೆಯನ್ನು ಸಲ್ಲಿಸುವಾಗ ಅವನ ಮನಸ್ಸಿಗೆ ಸ್ವಲ್ಪವೂ ಸಂಕೋಚವೆನಿಸಿರಲಿಲ್ಲ. ॥೪೪॥

ಅನಂತರ ದೇವನೆದುರು ನಿಂತು ಪಾರವಶ್ಯದಿಂದ ನರ್ತಿಸಿದನು. ತಾನು ನಿವೇದಿಸಿದ ವಸ್ತುಗಳನ್ನು ಭಕ್ಷಿಸಬೇಕೆಂದು ಅಳುತ್ತ ಅಂಗಲಾಚಿ ಬೇಡಿದನು. ಬಹುವಿಧವಾಗಿ ಪ್ರಾರ್ಥನೆಯನ್ನು ಸಲ್ಲಿಸಿದ ಬಳಿಕ ಮೃಣ್ಮಯ ಮೂರ್ತಿಯಲ್ಲಿ ಚೈತನ್ಯದ ಸಂಚಾರವಾಗತೊಡಗಿತು. ॥೪೫॥

ದೇವನಿಗೆ ನಿವೇದಿಸಲೋಸುಗ ಮಣ್ಣಿನಿಂದಲೇ ಭಕ್ಷ್ಯಾದಿಗಳನ್ನು ನಿರ್ಮಿಸಿ ಪರಾಶರನು ಸಮರ್ಪಿಸಿದ್ದನೋ ಅವೆಲ್ಲ ಆ ಋಷಿಯ ಶುದ್ಧ ಭಾವ ಹಾಗೂ ದೇವನ ಮಹಿಮೆಯಿಂದ ನಿಜವಾದ ಭಕ್ಷ್ಯಾದಿಗಳಾಗಿ ಪರಿಣಮಿಸಿದವು. "ಕಿಮಲಭ್ಯಂ ಭಗವತಿ ಪ್ರಸನ್ನೇ ಶ್ರೀನಿಕೇತನೇ" ಎಂಬ ಮಾತು ಸುಳ್ಳಲ್ಲ ವ್ಯಾಸ! ಚೈತನ್ಯಗೊಂಡ ಆ ಮೂರ್ತಿ ಅವನ್ನೆಲ್ಲ ಭಕ್ಷಿಸತೊಡಗಿತು. ॥೪೬॥

ಬಗೆ ಬಗೆಯ ಉಂಡೆಗಳು, ಮೋದಕ, ಇತರ ವಿಧ ಪಕ್ವಾನ್ನಗಳೆಲ್ಲ ಸಿದ್ಧವಾದುದನ್ನು ನೋಡಿ ವಿಶ್ವದೇವನು ಕೆಲಕಾಲ ಸ್ಮೃತಿ ತಪ್ಪಿದವನಂತಾದನು.

**ಮೃತ್ತಿಕಾನ್ನಾನಿ ಸತ್ಯಾನಿ ಸರ್ವಂ ಪುಷ್ಪಫಲಾದಿಕಮ್ ।**
**ಸಚೇತನಾಂ ಚ ತಾಂ ಮೂರ್ತಿಂ ಷಡ್ಭುಜಾಂ ಚ ಪುನಃ ಪುನಃ ॥೪೮॥**

**ವ್ಯಲೋಕಯದ್ವಿಷ್ಣುರೂಪಾಂ ಚತುರ್ಬಾಹುವಿರಾಜಿತಾಮ್ ।**
**ಉವಾಚ ಸತತಂ ದೇವಂ "ಕಿಮಿದಂ ಮೃತ್ತಿಕಾಶನಮ್ ?" ॥೪೯॥**

**ಮೂರ್ತಿರುವಾಚ :—**

**ಭಕ್ತ್ಯಾ ಯದರ್ಪಿತಂ ಪುಹ್ಯಂ ಸುಧಾರಸಸಮಂ ಭವೇತ್ ।**
**ಅಭಕ್ತ್ಯಾರ್ಪಿತಮಮೃತಂ ವಿಷಮೇವ ಭವೇನ್ಮಮ ॥೫೦॥**

ಕಾಲ್ಪನಿಕ ವಸ್ತುಗಳು ಭಕ್ಷಣಾರ್ಹಗಳಾಗುವುವೆಂದರೇನು? ಎಂಬುದೊಂದು ಅವನ ಪಾಲಿಗೆ ದೊಡ್ಡ ಸಮಸ್ಯೆಯಾಗಿ ಪರಿಣಮಿಸಿತು. ॥೪೭॥

ಪರಾಶರನು ಸ್ವಲ್ಪ ಹೊತ್ತಿಗೆ ಮುಂಚೆ ಇವನ್ನೆಲ್ಲ ಶುದ್ಧ ಮಣ್ಣಿನಿಂದಲೇ ನಿರ್ಮಿಸಿದುದನ್ನು ವಿಶ್ವದೇವನು ಪ್ರತ್ಯಕ್ಷವಾಗಿ ಕಂಡಿದ್ದನು. ಮಣ್ಣಿನ ಮುದ್ದೆ ಹಣ್ಣು-ಹೂವುಗಳಾದರೆ ಯಾರಿಗೆ ಅಚ್ಚರಿಯಾಗಲಿಕ್ಕಿಲ್ಲ? ಅತ್ತ ಕಡೆ ತಿರುಗಿ ನೋಡಲು ಮೃಣ್ಮಯ ಷಡ್ಭುಜಯುತ ಮೂರ್ತಿಯು ಒಮ್ಮಿಂದೊಮ್ಮೆ ಸಚೇತನವಾಗಿದೆ. ಯಾವುದೂ ಬಗೆ ಹರಿಯದಂತಾಗಲು ಅವನ್ನೆಲ್ಲ ಮತ್ತೆ ಮತ್ತೆ ಮುಟ್ಟಿ ನೋಡಿದನು. ॥೪೮॥

ಒಮ್ಮೆ ವಸ್ತುಗಳನ್ನು ನೋಡುವುದು, ಮತ್ತೊಮ್ಮೆ ಮೂರ್ತಿಯನ್ನು ನೋಡುವುದು ಹೀಗೆ ಮಾಡುತ್ತಿರುವಾಗ ಇದುವರೆಗೂ ಷಡ್ಭುಜಯುತ ಗಣಪತಿಯ ಸ್ವರೂಪವಾಗಿ ತೋರುತ್ತಿದ್ದ ಆ ಮೂರ್ತಿಯು ಒಮ್ಮೆಲೆ ಚತುರ್ಭುಜ ಮಂಡಿತ ಮಹಾವಿಷ್ಣುವಿನ ಆಕೃತಿಯಾಗಿ ಕಂಡುಬರತೊಡಗಿತು. ತನ್ನ ಆರಾಧ್ಯ ದೈವವನ್ನು ಕಂಡೊಡನೆಯೇ ಸ್ವಲ್ಪಮಟ್ಟಿಗೆ ಹೆಚ್ಚಿನ ಸಲಿಗೆಯನ್ನು ತೆಗೆದುಕೊಂಡು "ನಿನಗರೆಯಾದುದೇನಿದೆ, ದೇವ! ಮಣ್ಣನ್ನೇಕೆ ತಿನ್ನುತ್ತಲಿರುವೆ?" ಎಂದು ಪ್ರಶ್ನಿಸಿದನು. ॥೪೯॥

ಮೂರ್ತಿ :—

ವತ್ಸ! ಯಾರು ಯಾವುದನ್ನೇ ಸಮರ್ಪಿಸಲಿ, ಅದು ಭಕ್ತಿಯುತವಾಗಿದ್ದರೆ

**ಕ ಉವಾಚ :—**

**ಏವಂ ತದ್ವಚನಂ ಶ್ರುತ್ವಾ ವಿಶ್ವದೇವೋಽಬ್ರವೀತ್ಪುನಃ ।**

**ವಿಪ್ರ ಉವಾಚ :—**

**ಕಸ್ತೇ ಭಕ್ತೋ ಮಮ ಚ ತಂ ದರ್ಶಯಸ್ವ ಸುರೇಶ್ವರ ! ॥೫೧॥**

**ಕ ಉವಾಚ :—**

**ತತಸ್ತಸ್ಯ ಕರಂ ಧೃತ್ವಾ ಬಹಿರಾಯಾನ್ಮಯೂರರಾಟ್ ।**
**ಗೃಹೇ ಗೃಹೇ ಪೂಜ್ಯಮಾನಂ ದೇವಂ ತಸ್ಮೈ ವ್ಯದರ್ಶಯತ್ ॥೫೨॥**

**ಶಿಖಿನಂ ಸು– ಸಮಾರೂಢಂ ಮಯೂರೇಶಮಲೋಕಯತ್ ।**
**ತತ್ರಾಪಿ ಪರ್ಯಪಶ್ಯತ್ಸ ವಿಶ್ವದೇವಯುತಂ ಚ ತಮ್ ॥೫೩॥**

ಅಮೃತರಸದಂತೆ ಅದನ್ನು ನಾನು ಆಸ್ವಾದಿಸುವೆನು. ಭಕ್ತಿವಿಹೀನನಾದವನು ಅಮೃತವನ್ನೇ ತಂದು ಕೊಟ್ಟರೂ ಅದು ನನಗೆ ವಿಷಸಮಾನವೆನಿಸುವುದು. ॥೫೦॥

ಬ್ರಹ್ಮ :—

ದೇವನ ನಿರ್ಧಾರದ ವಚನವನ್ನು ಕೇಳಿ ಚಕಿತನಾದ ವಿಶ್ವದೇವನು ದೇವನನ್ನು ಕುರಿತು ಪುನಃ ಹೀಗೆಂದು ಪ್ರಶ್ನಿಸಿದನು.

ವಿಶ್ವದೇವ :—

ಸುರೇಶ್ವರ ! ಹಾಗಿದ್ದರೆ ನಿನ್ನ ಭಕ್ತರಾರು ? ಅವರನ್ನು ನನಗೆ ತೋರಿಸು. ॥೫೧॥

ಬ್ರಹ್ಮ :—

ಆಗ ಮಯೂರೇಶ್ವರನು ವಿಪ್ರನ ಕೈಯ್ಯನ್ನು ಹಿಡಿದುಕೊಂಡು ಹೊರಹೊರಟು ಬಂದನು. ಮನೆಮನೆಗಳನ್ನು ಪ್ರವೇಶಿಸಿ ಅಲ್ಲೆಲ್ಲ ಪೂಜೆಯನ್ನು ಕೈಗೊಳ್ಳುತ್ತಲಿದ್ದ ತನ್ನ ಸ್ವರೂಪದ ಮೂರ್ತಿಗಳನ್ನೂ ಅವನ್ನು ಪೂಜಿಸುತ್ತಿದ್ದವರನ್ನೂ ತೋರಿಸಿದನು. ॥೫೨॥

ವಿಶ್ವದೇವನು ನೋಡಿದೆಡೆಯಲ್ಲಿ ಮಯೂರಾರೂಢನಾದ ಮಹಾಗಣಪತಿ

'ನಾಯಂ ಮಮ ಭವೇತ್ಸ್ವಾಮೀ' ತ್ಯೇವಂ ಬುದ್ಧಿರ್ವಿಸೃಜ್ಯ ತಾಮ್ ।
ಗೃಹೇ ಗೃಹೇ ವಿಶ್ವದೇವೋ ನಾರಾಯಣಮಲೋಕಯತ್ ॥೩೪॥

ಸರ್ವತ್ರ ಸ ದದರ್ಶಾಥ ಪೂಜ್ಯಮಾನಂ ಗಣೇಶ್ವರಮ್ ।
ಕ್ವಾಪಿ ಕ್ವಾಪಿ ಮಯೂರೇಶಂ ದದರ್ಶ ವಿಷ್ಣುರೂಪಿಣಮ್ ॥೩೫॥

ಪುನರಾಲೋಕಯಂಸ್ತತ್ತನ್ಮಯೂರೇಶಮಲೋಕಯತ್ ।
ಭುಜಂ ಸ್ವಂ ಪರಿಗೃಹ್ಯೈವ ಬಹಿರ್ಯಾತಂ ಸ್ವ-ಲೀಲಯಾ ॥೩೬॥

ಆಕ್ಷಿಪ್ಯ ಹಸ್ತಂ ಸ ಪ್ರಾಯಾಽನ್ನಾಯಂ ಸ್ವಾಮೀ ಮಮೇ' ತಿ ಚ ।
ಅಟದ್ಗೃಹೇ ಗೃಹೇ ಸೋಽಥ ಪೂಜ್ಯಮಾನಂ ದದರ್ಶ ಹ ॥೩೭॥

---

ತೋರಿಬಂದನು. ಮಯೂರೇಶ್ವರನ ಆಯಾ ಮೂರ್ತಿಯ ಜೊತೆಗೆ ತಾನೂ ಇದ್ದಂತೆ ವಿಶ್ವದೇವನಿಗೆ ಅನುಭವವಾಗತೊಡಗಿತು. ||೩೩||

'ಇವನು ನನ್ನ ಆರಾಧ್ಯ ದೈವವಲ್ಲ' ಎಂದು ಭಾವಿಸುವಷ್ಟರಲ್ಲಿ ಆ ಮನೆಗಳಲ್ಲಿದ್ದ ಮೂರ್ತಿಗಳೆಲ್ಲ ನಾರಾಯಣನ ಪ್ರತಿಕೃತಿಯಂತೆ ಅವನಿಗೆ ಕಂಡುಬಂದವು. ಆಗ ವಿಶ್ವದೇವನು ತನ್ನ ಕಣ್ಣುಗಳನ್ನರಳಿಸಿ ನೋಡಿದನು. ಎಲ್ಲವೂ ನಾರಾಯಣನಂತಿದ್ದವು. ||೩೪||

ವಿಶ್ವದೇವನು ಯಾವ ಯಾವ ಮನೆಯನ್ನು ಪ್ರವೇಶಿಸಿ ನೋಡಿದನೋ. ಅಲ್ಲೆಲ್ಲ ಮಹಾಗಣಪತಿಗೆ ಪೂಜೋಪಚಾರಗಳು ನಡೆಯುತ್ತಲಿದ್ದವು. ಕೆಲವು ಕೆಲವು ಕಡೆಗಳಲ್ಲಿ ಮಾತ್ರ ಮಯೂರೇಶನು ಮಹಾವಿಷ್ಣುವಿನ ಆಕೃತಿಯಲ್ಲಿದ್ದುದನ್ನು ನೋಡಿದನು. ||೩೫||

ಮತ್ತೊಮ್ಮೆ ಅದೇ ಮೂರ್ತಿಯನ್ನು ನೋಡಲಾಗಿ ಇದುವರೆಗೂ ವಿಷ್ಣುವಾಗಿ ತೋರಿದ್ದು ಈಗ ಮಯೂರೇಶನಾಗಿ ತೋರಲಾರಂಭಿಸಿತು. ಈ ಹಿಂದೆ ತನ್ನ ಭುಜದ ಮೇಲೆ ಕೈ ಹಾಕಿಕೊಂಡು ಬಂದ ವ್ಯಕ್ತಿಯು ಸ್ವ-ಮಹಿಮೆಯಿಂದ ಈಗ ಮಯೂರೇಶನಾಗಿ ತೋರಿದುದನ್ನು ಗಮನಿಸಿದನು. ||೩೬||

ಅವನಿಗೆ ಸ್ವಲ್ಪವೂ ಸಹನೆಯಾಗಲಿಲ್ಲ. ಒಡನೆಯೇ ಆ ಕೈಯ್ಯನ್ನು ಕೊಸರಿಕೊಂಡು 'ಇಲ್ಲಿ ಕಂಡು ಬರುತ್ತಿರುವವನು ನನ್ನ ಆರಾಧ್ಯ ದೈವವಲ್ಲ' ಎಂದು ಬಿರುಸಾಗಿ

**ಮಯೂರೇಶಂ ವಾದ್ಯಘೋಷೈರ್ನೃತ್ಯ-ಗೀತೈರನೇಕಧಾ**
**ಕ್ವಾಪಿ ದೃಷ್ಟ್ವಾ ವಿಷ್ಣುರೂಪಂ ನಮಸ್ಕರ್ತುಂ ಯಯಾವಥ ॥೫೮॥**

**ಪುನರ್ಮಯೂರೇಶರೂಪಂ ದದರ್ಶ ಸ ಶಿಖಿಸ್ಥಿತಮ್ ।**
**ಗರುಡಾರೂಢಮನ್ಯತ್ರ ಶೇಷಾರೂಢಂ ತಥಾ ಕ್ವಚಿತ್ ॥೫೯॥**

**ನಮಸ್ಕರ್ತುಂ ಯದಾಯಾತಿ ವಿಶ್ವದೇವೋ ಮುದಾಯುತಃ ।**
**ತಾವದ್ವರ್ಹಿಸಮಾರೂಢಂ ಪಶ್ಯತಿ ಸ್ಮ ಪುನಃ ಪುನಃ ॥೬೦॥**

---

ನೋಡಿದನು. ಮತ್ತು ನಿಂತಲ್ಲಿ ನಿಲ್ಲದೇ ಮನೆ ಮನೆಗೂ ಹೋಗಿ ಪರೀಕ್ಷಿಸಿದನು. ಇವನು ಎಲ್ಲೆಲ್ಲಿ ನೋಡಿದನೋ ಅಲ್ಲೆಲ್ಲ ಮಯೂರೇಶ್ವರನೇ ಕಂಡುಬಂದನು. ಅಲ್ಲದೇ ಎಲ್ಲರೂ ಅವನನ್ನು ಪೂಜಿಸುತ್ತಿರುವಂತೆಯೂ ಕಂಡಿತು. ॥೫೭॥

ಉತ್ಸಾಹಿತರಾಗಿದ್ದ ಭಕ್ತರು ಅನೇಕ ಬಗೆಯ ಪೂಜೋಪಕರಣಗಳನ್ನು ಒದಗಿಸಿಕೊಂಡಿದ್ದರು ಮಾತ್ರವಲ್ಲದೇ ನೃತ್ತಗೀತಾದಿಗಳನ್ನು ಸಹ ಏರ್ಪಡಿಸಿದ್ದರು. ಮಹಾತಪಸ್ವಿಯಾದ ವಿಶ್ವದೇವನಲ್ಲಿ ಬೇರೂರಿದ್ದ ದ್ವೈತಭಾವನೆಯನ್ನು ತೊಡೆದುಹಾಕಿ ಅವನಿಗೆ ಐಕ್ಯಜ್ಞಾನವನ್ನು ಉಪದೇಶಿಸುವುದಕ್ಕಾಗಿ ಇಚ್ಛೆಪಟ್ಟ ಮಹಾತ್ಮಾ ಮಯೂರೇಶ್ವರನು ಅಲ್ಲಲ್ಲಿ ಮಹಾವಿಷ್ಣುವಿನಂತೆ ಕಾಣಿಸಿಕೊಂಡನೆಂದು ಹಿಂದೆಯೇ ಹೇಳಿದೆನಷ್ಟೆ? ಆಗ ವಿಶ್ವದೇವನು ತನ್ನ ಆರಾಧ್ಯ ದೈವದಂತೆ ಕಂಡ ಆರೂಪವನ್ನು ನಮಿಸಲು ಯತ್ನಿಸಿ ಸಮೀಪಕ್ಕೆ ಬಂದನು. ॥೫೮॥

ಭಕ್ತನು ಬಳಿಗೆ ಬರುವವರೆಗೂ ಬಲಿಧ್ವಂಸಿಯಂತೆ ತೋರಿದ ಭವಾನೀನಂದನನು ಒಮ್ಮಿಂದೊಮ್ಮೆಲೆ ಭಾಲಚಂದ್ರನಾಗಿ ಮಯೂರವನ್ನೇರಿ ಕುಳಿತಂತೆ ತೋರಿಬರುವನು. ಇದನ್ನು ಕಂಡ ವಿಶ್ವದೇವನು 'ಇವನು ನನ್ನ ದೇವನಲ್ಲ' ಎಂದು ಹಿಂದಿರುಗಿ ಮತ್ತೊಂದು ಕಡೆಗೆ ಹೋಗಿ ನೋಡಿದಾಗ ಗರುಡಾರೂಢನಾಗಿ ತೋರುವನು. ಕೆಲವು ಕಡೆ ಶೇಷಶಾಯಿಯಾಗಿಯೂ ತೋರಿ ವಿಶ್ವದೇವನನ್ನು ವ್ಯಾಮೋಹಗೊಳಿಸುತ್ತಲಿದ್ದನು. ॥೫೯॥

ವಿಶ್ವದೇವನು ಹರ್ಷೋದ್ರಿಕ್ತನಾಗಿ ನಮಸ್ಕರಿಸಲು ಸಮೀಪಕ್ಕೆ ಬಂದಕೂಡಲೇ

**ಭುಂಜಂತಂ ಚ ರಮಂತಂ ಚ ಸ್ವಪಂತಂ ಚ ದದರ್ಶ ಸಃ ।**
**ತತಃ ಖಿನ್ನೋ ವಿಶ್ವದೇವೋ ವಸಿಷ್ಠದ್ವಾರಮಾಗಮತ್ ॥೬೦॥**

**ತತೋಽಬ್ರವೀನ್ಮಯೂರೇಶಃ**

**ದೇವ ಉವಾಚ :—**

**ಪಶ್ಯ ಮೇ ಭಕ್ತಮುತ್ತಮಮ್ ।**

**ಕ ಉವಾಚ :—**

**ತತಃ ಪರಾಶರಂ ಸೋಽಥ ದದರ್ಶ ಪುರತಃ ಸ್ಥಿತಮ್ ॥೬೨॥**

---

ಬರ್ಹಿಯನ್ನೇರಿದ ಗಣೇಶನಾದನು. ಅನೇಕ ಮನೆಗಳಲ್ಲಿ ವಿಶ್ವದೇವನಿಗೆ ಇದೇ ಅನುಭವ ಬಂದಿತು. ॥೬೦॥

ಕೆಲವು ಮನೆಗಳಲ್ಲಿ ಊಟಮಾಡುತ್ತಲಿದ್ದರೆ ಮತ್ತೊಂದೆಡೆ ರಮಿಸುತ್ತಿರುವವ ನಂತೆಯೂ ಮತ್ತೆ ಕೆಲವು ಮನೆಗಳಲ್ಲಿ ಶ್ರಮಗೊಂಡು ನಿದ್ರಿಸುವವನಂತೆಯೂ ತೋರಿತು. ವಿಶ್ವದೇವನಿಗೆ ಅಲೆದಲೆದು ಬೇಸರವಾಯಿತು. ಬಹಳ ಖೇದಗೊಂಡು ಕಡೆಗೊಮ್ಮೆ ವಸಿಷ್ಠನ ಆಶ್ರಮದ ಬಾಗಿಲ ಬಳಿಗೆ ಬಂದನು. ॥೬೧॥

ಆಗ ಮಯೂರೇಶನು ಪರಾಶರನ ಕಡೆ ಬೆರಳು ಮಾಡಿ

ಮಯೂರೇಶ :—

ಇದೋ, ಇವನೇ ನನ್ನ ಭಕ್ತ. ಸ್ಪಷ್ಟವಾಗಿ ನೋಡು

ಬ್ರಹ್ಮಾ:-

ಎಂದು ಹೇಳಲು. ವಿಶ್ವದೇವನು ಇವನ ಭಕ್ತನಾರೆಂದು ಕುತೂಹಲಗೊಂಡು ತನ್ನ ಎದುರಿಗಿದ್ದ ವ್ಯಕ್ತಿಯನ್ನು ತೆರೆದ ಕಣ್ಣುಗಳಿಂದ ನೋಡಿದನು. ಇವನ ಎದುರಿಗೆ ಕಂಡು ಬಂದವನು 'ಪರಾಶರ' ॥೬೨॥

ಮೃಣ್ಮಯೈರುಪಚಾರೈಸ್ತಂ ಪೂಜಯಂತಂ ಗುಣೇಶ್ವರಮ್ ।
ಭಕ್ಷಯಂತಂ ಚ ಲಡ್ಡೂಕಾನ್ ಮೃಣ್ಮಯಾನ್ ದೇವಮೇವ ಚ ॥೬೩॥

ಪಶ್ಯತಿ ಸ್ಮ ಪುನರ್ವ್ಯೋಮ್ನಿ ಜಲೇ ಭೂಮೌ ತಮೇವ ಸಃ ।
ಕ್ಷಣಂ ನಾರಾಯಣಂ ದೇವಂ ಮಯೂರೇಶಂ ಕ್ಷಣಾದಪಿ ॥೬೪॥

ತತಃ ಸ್ವಭೇದಬುದ್ಧಿಂ ಸ್ವಾಂ ತತ್ಯಾಜ ಭ್ರಾಂತಿಮೇವ ಚ ।
ಸರ್ವಭಾವೇನ ತಂ ನತ್ವಾ ಸ್ತುತ್ವಾಭೇದಧಿಯಾ ಪುನಃ ॥೬೫॥

ಅನುಜ್ಞಾತೋ ಮುದಾ ಪ್ರಾಯಾದ್ವಿಶ್ವದೇವಃ ಸ್ವಮಾಶ್ರಮಮ್ ॥೬೬॥

---

ಅಲ್ಲಿ ಪರಾಶರನು ತಾನು ಒದಗಿಸಿಕೊಂಡಿದ್ದ ಮೃಣ್ಮಯ ಸಾಮಾಗ್ರಿಗಳಿಂದ ದೇವನನ್ನು ಪೂಜಿಸುತ್ತಲಿದ್ದನು. ಅವನು ಸಮರ್ಪಿಸಿದ ಮೃಣ್ಮಯ ವಸ್ತುಗಳನ್ನೆಲ್ಲ ಸ್ವಾಭಾವಿಕಗಳನ್ನಾಗಿ ಮಾರ್ಪಡಿಸಿ ಗಣೇಶ್ವರನು ಭುಜಿಸುತ್ತಲಿದ್ದನು. ॥೬೩॥

'ತನ್ನ ದೇವ ಕಾಣಲೊಲ್ಲನಲ್ಲ' ಎಂಬ ಚಿಂತೆಯಿಂದ ವಿಶ್ವದೇವನು ಅಂತರಿಕ್ಷವನ್ನು ನೋಡಿದನು, ಜಲದಲ್ಲಿ ಹುಡುಕಿದನು, ಭೂಮಿಯಲ್ಲಿ ಅಲೆದು ನೋಡಿದನು, ಈ ಭೂತತ್ರಯಗಳಲ್ಲೂ ಮಯೂರೇಶನ ರೂಪ ಅಂತರ್ಯಾಮಿಯಾಗಿ ಕಾಣಬಂದಿತು. ಕಂಡ ರೂಪ ನಾರಾಯಣ–ಮಯೂರೇಶರಾಗಿ ಕ್ಷಣಕ್ಷಣಕ್ಕೂ ಮಾರ್ಪಡುತ್ತಲಿದ್ದಿತು. ॥೬೪॥

ಆಗ ವಿಶ್ವದೇವನಿಗೆ ಜ್ಞಾನೋದಯವಾಯಿತು. ಇದುವರೆಗೂ ಅವನನ್ನಾವರಿಸಿದ್ದ ಅಜ್ಞಾನದ ತೆರೆ ಸರಿದು ಹೋಗಲು ಅಖಂಡ ಸಚ್ಚಿದಾನಂದ ರೂಪವು ಕಾಣಬಂದಿತು. ತಾನು ಅಜ್ಞಾನದ ಆವರಣದಲ್ಲಿದ್ದುದರಿಂದ ದೈವದಲ್ಲಿ ದ್ವೈಧೀಭಾವವನ್ನು ಕಂಡೆನೆಂಬುದು ಅರಿವಾಯಿತು. ಒಡನೆಯೇ ತನ್ನ ಭಾವನೆಯನ್ನು ಸಮರಸಗೊಳಿಸಿ ಸರ್ವಾತ್ಮನನ್ನು ವಂದಿಸಿದನು. ಮನಃಪೂರ್ತಿಯಾಗಿ ಮತ್ತೆ ಮತ್ತೆ ಸ್ತುತಿಸಿದನು. ॥೬೫॥

ಅನಂತರ ಮಯೂರೇಶ್ವರನ ಅಪ್ಪಣೆಯನ್ನು ಪಡೆದು ತನ್ನ ಆಶ್ರಮಕ್ಕೆ ಆನಂದದೊಡನೆ ತೆರಳಿದನು. ॥೬೬॥

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ವಿಶ್ವದೇವ ಭೇದ-
ಬುದ್ಧಿ ನಿರಾಸೋ' ನಾಮ ಪಂಚೋತ್ತರ
ಶತತಮೋಽಧ್ಯಾಯಃ ಸಮಾಪ್ತಃ**

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ವಿಶ್ವದೇವದ್ವೈತಬುದ್ಧಿ ನಿರಸನ' ಎಂಬಲ್ಲಿಗೆ ನೂರೈದನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ಷಡುತ್ತರಶತತಮೋಽಧ್ಯಾಯಃ

**ಕ ಉವಾಚ :—**

**ತತಸ್ತ್ರಯೋದಶೇ ವರ್ಷೇ ನಮಸ್ಕೃತ್ಯ ಮಹೇಶ್ವರಮ್ ।**
**ಭಸ್ಮಾಂಗರಾಗರುಚಿರಂ ಪಂಚಾಸ್ಯಂ ದಿಗ್ಭುಜಂ ಶುಭಮ್ ||೧||**

**ರುಂಡಮಾಲಾಧರಂ ಸುಪ್ತಂ ಚಂದ್ರಶೇಖರಮಚ್ಯುತಮ್ ।**
**ಮಯೂರೇಶೋಽಥ ಜಗ್ರಾಹ ಶಶಿನಂ ತಚ್ಛಿರೋಗತಮ್ ||೨||**

**ಕ್ರೀಡನ್ ಬಹಿಃ ಸಮಾಯಾತೋ ಬಾಲಕೈಃ ಪರಿವಾರಿತಃ ।**
**ಸುಹೃದ್ಭಿಃ ಪರಿನೃತ್ಯದ್ಭಿರ್ವದದ್ಭಿಶ್ಚ ಪರಸ್ಪರಮ್ ||೩||**

---

|| ಶ್ರೀ ಗಣೇಶಾಯ ನಮಃ ||

## ೧೦೬ ನೆಯ ಅಧ್ಯಾಯ

ಬ್ರಹ್ಮ:—

ವತ್ಸ ವ್ಯಾಸ! ಮಹಾಗಣಪತಿಗೆ ಹನ್ನೆರಡು ತುಂಬಿ ಹದಿಮೂರನೆಯ ವರ್ಷ ಆರಂಭವಾಯಿತು. ಒಂದು ದಿವಸ ಮಯೂರೇಶ್ವರನು ತನ್ನ ತಂದೆಯ ಬಳಿಗೆ ಬಂದು ನಮಸ್ಕರಿಸಿದನು. ಪರಶಿವನು ಭಸಿತಭೂಷಿತನಾದುದರಿಂದ ಸರ್ವಾಂಗ ಸುಂದರನಾಗಿ ಕಾಣುತ್ತಲಿದ್ದನು. ಮಹಾದೇವನು ಸದ್ಯೋಜಾತಾದಿ ಶುಭ ಪಂಚಮುಖಗಳಿಂದ ಕೂಡಿದವನು. ಅವನ ಭುಜಗಳು ದಿಗಂತವನ್ನು ವ್ಯಾಪಿಸಿದುವು. ||೧||

ರುಂಡಗಳಿಂದ ರಚಿತವಾದ ಮಾಲಿಕೆಯನ್ನು ಧರಿಸಿದ್ದನು. ಆದ್ಯಂತರಹಿತನಾದ ಚಂದ್ರಶೇಖರನು ಯೋಗನಿದ್ರಾಸಕ್ತನಾಗಿದ್ದಾಗ ಮಯೂರೇಶನು ಅವನ ಬಳಿಗೆ ಬಂದಿದ್ದನು. ಶಂಕರನ ಜಟೆಯಲ್ಲಿ ಹೊಳೆಯುತ್ತಲಿದ್ದ ಚಂದ್ರನ ಮೇಲೆ ಗಣಪತಿಯ ಗಮನ ಹೋಯಿತು. ಆಟಕ್ಕೆಂದು ಆ ಚಂದ್ರರೇಖೆಯನ್ನು ಕೈಗೆ ತೆಗೆದುಕೊಂಡನು. ||೨||

ಸಾಮಾನ್ಯ ಬಾಲಕನಂತೆ ನಟಿಸುತ್ತಲಿದ್ದ ಮಯೂರವಾಹನನಿಗೆ ಇದನ್ನೊಂದು ಕ್ರಿಡಾಸಾಧನವನ್ನಾಗಿ ಮಾಡಿಕೊಳ್ಳೋಣವೆಂದು ತೋರಿತು. ಒಡನೆಯೇ ಅದನ್ನು

ಏತಸ್ಮಿನ್ನಂತರೇ ತತ್ರ ದೈತ್ಯೋ 'ಮಂಗಲ' ಸಂಜ್ಞಕಃ ।
ಕರಾಲವದನಃ ಕ್ರೋಡೋ ವಿಜೇತಾ ಪರಮಾದ್ಭುತಃ ||೫||

ವರಾಹರೂಪೀ ಬಲವಾನ್ ದಂತಚ್ಛಿನ್ನಮಹೀರುಹಃ ।
ವಜ್ರಸಾರಸಟಾಭಿಃ ಸೋ ಭಿಂದನ್ ವ್ಯೋಮ ಪದೈರ್ಧರಾಮ್ ||೫||

ಅಂಜನಾದ್ರಿರಿವ ಶ್ಯಾಮೋ ವಹ್ನಿಕುಂಡನಿಭೇಕ್ಷಣಃ ।
ದೃಷ್ಟ್ವಾ ತಂ ವಿದ್ರುತಾ ಬಾಲಾ " ವರ್ಷಾಘನನಿಭಸ್ವನಃ ||೬||

---

ತೆಗೆದುಕೊಂಡು ತನ್ನ ಜೊತೆಗಾರರ ಸಂಗಡ ಆಟವಾಡಲು ಹೊರಟು ಹೋದನು. ಇವನ ಕೈಯ್ಯಲ್ಲಿದ್ದ ಚಂದ್ರಖಂಡವನ್ನು ನೋಡಿ ಇತರ ಬಾಲಕರು ಬಹಳ ಉತ್ಸಾಹಗೊಂಡು ಈ ಬಗ್ಗೆ ತಮ್ಮತಮ್ಮೊಳಗೆ ಮಾತನಾಡುತ್ತ ದೇವನ ಸುತ್ತಲೂ ಕುಣಿಯಲಾರಂಭಿಸಿದರು. ||೩||

ಹೀಗಿರುವಷ್ಟರಲ್ಲಿ ಹುಡುಗರು ಆಟವಾಡುತ್ತಲಿದ್ದ ಸ್ಥಳಕ್ಕೆ 'ಮಂಗಲ' ಎಂಬ ದೈತ್ಯನು ಕಾಡು ಹಂದಿಯ ರೂಪವನ್ನು ಧರಿಸಿ ಬಂದನು. ಆ ಹಂದಿಯ ಮುಖವನ್ನು ನೋಡಿದರೆ ಎಂತಹ ಧೈರ್ಯಶಾಲಿಯಾದರೂ ನಡುಗುವಂತಿದ್ದಿತು. ಸಕಲ ಲೋಕಗಳನ್ನೂ ಜಯಿಸುವಂತಹ ಅತ್ಯದ್ಭುತ ಶಕ್ತಿ ಆ ರಾಕ್ಷಸನದು. ||೪||

ವರಾಹರೂಪಿಯಾದ ಮಂಗಲಾಸುರನು ತನ್ನ ಕೋರೆ ಹಲ್ಲುಗಳಿಂದ ದೊಡ್ಡ ದೊಡ್ಡ ವೃಕ್ಷ ಪರ್ವತಗಳನ್ನು ಸಹ ಬುಡಸಹಿತ ಉರುಳಿಸುತ್ತಲಿದ್ದನು. ದಬ್ಬಳದಂತೆ ಕಠಿಣವಾಗಿಯೂ ಮೊನಚಾಗಿಯೂ ಇರುವ ತನ್ನ ತಲೆಗೂದಲಿನಿಂದ ಅಂತರಿಕ್ಷವನ್ನು ಭೇದಿಸುತ್ತಲಿದ್ದನು. ಕಾಲಿನ ಗೊರಸುಗಳಿಂದ ಭೂಮಿಯನ್ನು ತೋಡುತ್ತಲಿದ್ದನು. ||೫||

ಅಂಜನಪರ್ವತದಂತೆ ಅವನ ದೇಹ ಬಹಳ ಕಪ್ಪಾಗಿದ್ದಿತು. ಅವನ ಕಣ್ಣುಗಳು ಕೆಂಡದಂತೆ ಕೆಂಪಾಗಿ ನಿಗಿ ನಿಗಿ ಹೊಳೆಯುತ್ತಿದ್ದವು. ಮಳೆಗಾಲದ ಮೋಡಗಳಂತೆ ಗುಡುಗುತ್ತಲಿದ್ದನು. ಇಂತಹ ಹಂದಿಯನ್ನು ಕಂಡಕೂಡಲೇ ಮಯೂರೇಶನ ಸಂಗಡಿಗರಾದ ಹುಡುಗರೆಲ್ಲ ಗದಗುಟ್ಟಿ ನಡುಗಿ ಹೇಳದೇ ಕೇಳದೇ ಓಡಿಹೋದರು. ||೬||

ನ ದೃಷ್ಟಃ ಸೂಕರಃ ಕ್ವಾಪೀದೃಶ' ಇತ್ಯಬ್ರುವಂಶ್ಚ ತೇ ।
ಯಾವನ್ಮಾರಯತೇ ಬಾಲಾಂಸ್ತಾವದ್ದೇವೋ ಮಯೂರರಾಟ್ ॥೭॥

ದಧಾರ ದಂತಯೋರ್ದುಷ್ಟಂ ತದಾ ಸೂಕರದಾನವಮ್ ।
ಅಥಾಪರೇಣ ಹಸ್ತೇನ ದಧಾರಾಧರಪೋತ್ರಕಮ್ ॥೮॥

ಪಾಟಯಾಮಾಸ ಸಹಸಾ ವಂಶಖಂಡಮಿವಾರ್ಭಕಃ ।
ಪೂರ್ವದೇಹಂ ಸಮಾಸ್ಥಾಯ ದಶಯೋಜನವಿಸ್ತೃತಮ್ ॥೯॥

ಪತಿತಶ್ಚೂರ್ಣಯನ್ ವೃಕ್ಷಾನ್ ದಾರಯನ್ ಧರಣೀತಲಮ್ ।

ತತಸ್ತಮಬ್ರುವನ್ ಬಾಲಾ

ಬಾಲಾ ಊಚುಃ :—

ಧನ್ಯೋಽಯಂ ಪಾರ್ವತೀಸುತಃ ॥೧೦॥

ಅಬ್ಬಾ ! ಎಂತಹ ಭಾರೀ ಹಂದಿ ಇದು. ಇಂತಹ ದೊಡ್ಡ ಮೃಗವನ್ನು ನೋಡಿಯೇ ಇಲ್ಲ' ಎಂದು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳಲಾರಂಭಿಸಿದರು. ಹಂದಿಯು ಮುನ್ನುಗ್ಗಿ ಆ ಹುಡುಗರನ್ನು ತಿವಿದು ಕೊಲ್ಲುವಷ್ಟರಲ್ಲಿ ಮಯೂರೇಶನು ಮುಂದೆ ನುಗ್ಗಿ ॥೭॥

ಸೂಕರರೂಪೀ ದುಷ್ಟ ದಾನವನ ಕೋರೆ ಹಲ್ಲುಗಳೆರಡನ್ನೂ ತನ್ನ ಕೈಯಿಂದ ಬಲವಾಗಿ ಹಿಡಿದುಬಿಟ್ಟನು, ಮತ್ತು ಅದರ ತುದಿಯನ್ನು ಮತ್ತೊಂದು ಕೈಯಿಂದ ಹಿಡಿದು ಎಳೆಯುತ್ತ ॥೮॥

ಹುಡುಗರು ಬಿದಿರನ್ನು ಸೀಳುವಂತೆ ಒಮ್ಮೆಲೆ ಸೀಳಿ ಬಿಸುಟನು. ಅದರ ದೇಹದ ಅಳತೆ ಸಾಮಾನ್ಯವಾದುದೇನೂ ಅಲ್ಲ. ಅದರ ಮೇಲ್ಬದಿಯ ದೇಹ ಹತ್ತು ಯೋಜನಗಳಷ್ಟು ದೊಡ್ಡದಾಗಿದ್ದಿತು. ॥೯॥

ಮಯೂರೇಶನು ಆ ದೇಹವನ್ನು ಬೀಸಿ ಎಸೆಯಲು ಅದು ಬಹು ದೂರ ಹೋಗಿ ಬಿದ್ದು ಆ ಸ್ಥಳದ ಸುತ್ತಮುತ್ತಲು ಬೆಳೆದು ನಿಂತಿದ್ದ ಗಿಡಮರಗಳನ್ನೆಲ್ಲ ಪುಡಿ ಪುಡಿಮಾಡಿತು. ದೇಹಬಿದ್ದ ರಭಸಕ್ಕೆ ನೆಲ ಕುಸಿದು ದೊಡ್ಡ ಭಾವಿಯಂತಾಯಿತು. ಇದನ್ನು ನೋಡಿದ ಬಾಲಕರು ಗಣಪತಿಯನ್ನು ಕುರಿತು

ಹುಡುಗರು :—

ಪಾರ್ವತೀ ಪುತ್ರ, ಗಣಪತಿ ಎಂತಹ ಧನ್ಯ ? ॥೧೦॥

ಏತಸ್ಮಿನ್ನಂತರೇ ತತ್ರ ದೈತ್ಯೋ 'ಮಂಗಲ' ಸಂಜ್ಞಕಃ ।
ಕರಾಲವದನಃ ಕ್ರೋಡೋ ವಿಜೇತಾ ಪರಮಾದ್ಭುತಃ ॥೫॥

ವರಾಹರೂಪೀ ಬಲವಾನ್ ದಂತಚ್ಛಿನ್ನಮಹೀರುಹಃ ।
ವಜ್ರಸಾರಸಟಾಭಿಃ ಸೋ ಭಿಂದನ್ ವ್ಯೋಮ ಪದೈರ್ಧರಾಮ್ ॥೫॥

ಅಂಜನಾದ್ರಿರಿವ ಶ್ಯಾಮೋ ವಹ್ನಿಕುಂಡನಿಭೇಕ್ಷಣಃ ।
ದೃಷ್ಟ್ವಾ ತಂ ವಿದ್ರುತಾ ಬಾಲಾ " ವರ್ಷಾಘನನಿಭಸ್ವನಃ ॥೬॥

---

ತೆಗೆದುಕೊಂಡು ತನ್ನ ಜೊತೆಗಾರರ ಸಂಗಡ ಆಟವಾಡಲು ಹೊರಟು ಹೋದನು. ಇವನ ಕೈಯ್ಯಲ್ಲಿದ್ದ ಚಂದ್ರಖಂಡವನ್ನು ನೋಡಿ ಇತರ ಬಾಲಕರು ಬಹಳ ಉತ್ಸಾಹಗೊಂಡು ಈ ಬಗ್ಗೆ ತಮ್ಮ ತಮ್ಮೊಳಗೆ ಮಾತನಾಡುತ್ತ ದೇವನ ಸುತ್ತಲೂ ಕುಣಿಯಲಾರಂಭಿಸಿದರು. ॥೩॥

ಹೀಗಿರುವಷ್ಟರಲ್ಲಿ ಹುಡುಗರು ಆಟವಾಡುತ್ತಲಿದ್ದ ಸ್ಥಳಕ್ಕೆ 'ಮಂಗಲ' ಎಂಬ ದೈತ್ಯನು ಕಾಡು ಹಂದಿಯ ರೂಪವನ್ನು ಧರಿಸಿ ಬಂದನು. ಆ ಹಂದಿಯ ಮುಖವನ್ನು ನೋಡಿದರೆ ಎಂತಹ ಧೈರ್ಯಶಾಲಿಯಾದರೂ ನಡುಗುವಂತಿದ್ದಿತು. ಸಕಲ ಲೋಕಗಳನ್ನೂ ಜಯಿಸುವಂತಹ ಅತ್ಯದ್ಭುತ ಶಕ್ತಿ ಆ ರಾಕ್ಷಸನದು. ॥೪॥

ವರಾಹರೂಪಿಯಾದ ಮಂಗಲಾಸುರನು ತನ್ನ ಕೋರೆ ಹಲ್ಲುಗಳಿಂದ ದೊಡ್ಡ ದೊಡ್ಡ ವೃಕ್ಷ ಪರ್ವತಗಳನ್ನು ಸಹ ಬುಡಸಹಿತ ಉರುಳಿಸುತ್ತಲಿದ್ದನು. ದಬ್ಬಳದಂತೆ ಕಠಿಣವಾಗಿಯೂ ಮೊನಚಾಗಿಯೂ ಇರುವ ತನ್ನ ತಲೆಗೂದಲಿನಿಂದ ಅಂತರಿಕ್ಷವನ್ನು ಭೇದಿಸುತ್ತಲಿದ್ದನು. ಕಾಲಿನ ಗೊರಸುಗಳಿಂದ ಭೂಮಿಯನ್ನು ತೋಡುತ್ತಲಿದ್ದನು. ॥೫॥

ಅಂಜನಪರ್ವತದಂತೆ ಅವನ ದೇಹ ಬಹಳ ಕಪ್ಪಾಗಿದ್ದಿತು. ಅವನ ಕಣ್ಣುಗಳು ಕೆಂಡದಂತೆ ಕೆಂಪಾಗಿ ನಿಗಿ ನಿಗಿ ಹೊಳೆಯುತ್ತಿದ್ದವು. ಮಳೆಗಾಲದ ಮೋಡಗಳಂತೆ ಗುಡುಗುತ್ತಲಿದ್ದನು. ಇಂತಹ ಹಂದಿಯನ್ನು ಕಂಡಕೂಡಲೇ ಮಯೂರೇಶನ ಸಂಗಡಿಗರಾದ ಹುಡುಗರೆಲ್ಲ ಗದಗುಟ್ಟಿ ನಡುಗಿ ಹೇಳದೇ ಕೇಳದೇ ಓಡಿಹೋದರು. ॥೬॥

ನ ದೃಷ್ಟಃ ಸೂಕರಃ ಕ್ವಾಪೀದೃಶ' ಇತ್ಯಬ್ರುವಂಶ್ಚ ತೇ ।
ಯಾವನ್ಮಾರಯತೇ ಬಾಲಾಂಸ್ತಾವದ್ದೇವೋ ಮಯೂರರಾಟ್ ॥೭॥

ದಧಾರ ದಂತಯೋರ್ದುಷ್ಟಂ ತದಾ ಸೂಕರದಾನವಮ್ ।
ಅಥಾಪರೇಣ ಹಸ್ತೇನ ದಧಾರಾಧರಪೋತ್ರಕಮ್ ॥೮॥

ಪಾಟಯಾಮಾಸ ಸಹಸಾ ವಂಶಖಂಡಮಿವಾರ್ಭಕಃ ।
ಪೂರ್ವದೇಹಂ ಸಮಾಸ್ಥಾಯ ದಶಯೋಜನವಿಸ್ತೃತಮ್ ॥೯॥

ಪತಿತಶ್ಚೂರ್ಣಯನ್ ವೃಕ್ಷಾನ್ ದಾರಯನ್ ಧರಣೀತಲಮ್ ।

ತತಸ್ತಮಬ್ರುವನ್ ಬಾಲಾ
ಬಾಲಾ ಊಚುಃ :—

ಧನ್ಯೋಽಯಂ ಪಾರ್ವತೀಸುತಃ ॥೧೦॥

ಅಬ್ಬಾ ! ಎಂತಹ ಭಾರೀ ಹಂದಿ ಇದು. ಇಂತಹ ದೊಡ್ಡ ಮೃಗವನ್ನು ನೋಡಿಯೇ ಇಲ್ಲ' ಎಂದು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳಲಾರಂಭಿಸಿದರು. ಹಂದಿಯು ಮುನ್ನುಗ್ಗಿ ಆ ಹುಡುಗರನ್ನು ತಿವಿದು ಕೊಲ್ಲುವಷ್ಟರಲ್ಲಿ ಮಯೂರೇಶನು ಮುಂದೆ ನುಗ್ಗಿ ॥೭॥

ಸೂಕರರೂಪೀ ದುಷ್ಟ ದಾನವನ ಕೋರೆ ಹಲ್ಲುಗಳೆರಡನ್ನೂ ತನ್ನ ಕೈಯಿಂದ ಬಲವಾಗಿ ಹಿಡಿದುಬಿಟ್ಟನು, ಮತ್ತು ಅದರ ತುದಿಯನ್ನು ಮತ್ತೊಂದು ಕೈಯಿಂದ ಹಿಡಿದು ಎಳೆಯುತ್ತ ॥೮॥

ಹುಡುಗರು ಬಿದಿರನ್ನು ಸೀಳುವಂತೆ ಒಮ್ಮೆಲೆ ಸೀಳಿ ಬಿಸುಟನು. ಅದರ ದೇಹದ ಅಳತೆ ಸಾಮಾನ್ಯವಾದುದೇನೂ ಅಲ್ಲ. ಅದರ ಮೇಲ್ಭದಿಯ ದೇಹ ಹತ್ತು ಯೋಜನಗಳಷ್ಟು ದೊಡ್ಡದಾಗಿದ್ದಿತು. ॥೯॥

ಮಯೂರೇಶನು ಆ ದೇಹವನ್ನು ಬೀಸಿ ಎಸೆಯಲು ಅದು ಬಹು ದೂರ ಹೋಗಿ ಬಿದ್ದು ಆ ಸ್ಥಳದ ಸುತ್ತಮುತ್ತಲು ಬೆಳೆದು ನಿಂತಿದ್ದ ಗಿಡಮರಗಳನ್ನೆಲ್ಲ ಪುಡಿ ಪುಡಿಮಾಡಿತು. ದೇಹಬಿದ್ದ ರಭಸಕ್ಕೆ ನೆಲ ಕುಸಿದು ದೊಡ್ಡ ಭಾವಿಯಂತಾಯಿತು. ಇದನ್ನು ನೋಡಿದ ಬಾಲಕರು ಗಣಪತಿಯನ್ನು ಕುರಿತು
ಹುಡುಗರು :—

ಪಾರ್ವತೀ ಪುತ್ರ, ಗಣಪತಿ ಎಂತಹ ಧನ್ಯ ? ॥೧೦॥

ಕ್ಷಣೇನ ನಾಶಿತೋ ದೈತ್ಯೋ ಲೀಲಯಾಸೌ ಮಹಾಬಲಃ ।
ಅಸ್ಯ ದರ್ಶನತಸ್ತ್ರಸ್ತಾ ವಯಂ ಯಾತಾ ದಿಶೋ ದಶ ||೧೧||

ಪತಮಾನೇನ ಯೇನೇಹ ಚೂರ್ಣಿತಾನಿ ಗೃಹಾಣಿ ಚ ।

ಕ ಉವಾಚ :—

ತತಃ ಶಿವೋ ಲಲಾಟೇ ಸ್ವೇ ನಾ ಪಶ್ಯಚ್ಛಶಿನಂ ಯದಾ ||೧೨||

ಕ್ರೋಧಸಂರಕ್ತನಯನೋ ವಿಶ್ವಪಂ ಪ್ರದಹನ್ನಿವ ।
ಗಣಾನೂಚೇ ರುಷಾವಿಷ್ಟೋ
ಶಿವ ಉವಾಚ :—
ರಕ್ಷಣಂ ಕ್ರಿಯತೇ ಕಥಮ್ ? ||೧೩||

---

ಒಂದೇ ಕ್ಷಣದಲ್ಲಿ ಈ ದೈತ್ಯನನ್ನು ಲೀಲೆಯಿಂದಲೇ ಕೊಂದು ಬಿಸುಟಿದನಲ್ಲ ? ಈ ದೈತ್ಯನೋ, ಬಹಳ ಬಲಿಷ್ಠನಾದವನು. ಮೊದಲು ಇವನನ್ನು ನೋಡಿದ ಕೂಡಲೇ ನಾವೆಲ್ಲ ಹೆದರಿ ಹತ್ತು ದಿಕ್ಕುಗಳಿಗೂ ಓಡಿಹೋಗಿದ್ದೆವಲ್ಲವೇ ? ||೧೧||

ಏನು ಭಾರೀ ದೇಹ, ಈ ದೈತ್ಯನದು ? ಇದು ಬಿದ್ದ ಹೊಡೆತಕ್ಕೆ ಮನೆಗಳೆಲ್ಲ ಉರುಳಿ ಪುಡಿಪುಡಿಯಾಗಿ ನೆಲಕ್ಕೆ ಬಿದ್ದುಹೋದವಲ್ಲ !

ಬ್ರಹ್ಮಾ :—

ಇಷ್ಟಾಗುವ ಸಮಯಕ್ಕೆ ಸರಿಯಾಗಿ ಅತ್ತ ಪರಶಿವನು ಯೋಗನಿದ್ರೆಯನ್ನು ಬಿಟ್ಟು ಎದ್ದನು. ತನ್ನ ಲಲಾಟದಲ್ಲಿ ಚಂದ್ರನಿಲ್ಲದಿರುವುದು ಗಮನಕ್ಕೆ ಬಂದಿತು. ಆಗ ||೧೨||

ಬಹಳ ಕೋಪಗೊಂಡನು. ಕಣ್ಣುಗಳು ಕೆಂಪಡರಿದವು. ನೋಡಿದರೆ ಇಡೀ ವಿಶ್ವವನ್ನೇ ದಹಿಸಿಬಿಡುವನೋ ಎಂಬಂತೆ ತೋರಿದನು. ಕುಪಿತನಾದ ರುದ್ರನು ತನ್ನ ಪ್ರಮಥ ಗಣಗಳ ಕಡೆಗೆ ತಿರುಗಿ

ಶಿವ :—

ಇದೇನೋ, ನೀವು ರಕ್ಷಿಸುತ್ತಲಿರುವುದು ? ||೧೩||

**ಕೇನ ದೈತ್ಯೇನ ನೀತೋ ಮೇ ಲಲಾಟಸ್ಥೋಽಮಲಃ ಶಶೀ ।**

**ಕ ಉವಾಚ :—**

**ತತೋ ಲೀನಾ ಗಣಾಸ್ಸರ್ವೇ ಕಂಪಮಾನಾ ಭಯಾತುರಾಃ ॥೧೪॥**

**ಅಪರೇ ಧೈರ್ಯಮಾಲಂಬ್ಯ ವದಂತಿ ಸ್ಮ ಶಿವಂ ಪ್ರತಿ ।**

**ಗಣಾ ಊಚುಃ :—**

**ಉಮಾಕಾಂತ ! ಭವತ್ಪುತ್ರೋ ಮಯೂರೇಶ್ವರಸಂಜ್ಞಕಃ ॥೧೫॥**

**ಕ್ರೀಡಿತುಂ ಬಹಿರಾಯಾತಸ್ತಸ್ಯ ಹಸ್ತೇ ವಿಲೋಕಿತಃ ।**
**ಚಂದ್ರಸ್ತೇನ ಕದಾ ನೀತೋ ನ ಜಾನೀಮೋ ವಯಂ ವಿಭೋ ! ॥೧೬॥**

ನನ್ನ ಜಟೆಯಲ್ಲಿದ್ದ ವಿಮಲಕಾಂತಿಯ ಚಂದ್ರರೇಖೆಯನ್ನು ಯಾವ ದೈತ್ಯನು ಕೊಂಡೊಯ್ದನು ?

ಬ್ರ

ಎಂದು ಗದ್ದರಿಸಿ ಕೇಳಲು, ಭಯಕಂಪಿತ ಶರೀರಿಗಳಾದ ಪ್ರಮಥರು ಒಮ್ಮೆಲೇ ಹಿಂದಕ್ಕೆ ಸರಿದುಬಿಟ್ಟರು. ॥೧೪॥

ಆ ಪೈಕಿ ಕೆಲವರು ಇದ್ದುದರಲ್ಲೇ ಸ್ವಲ್ಪಮಟ್ಟಿಗೆ ಧೈರ್ಯವನ್ನು ತೆಗೆದುಕೊಂಡು ಮುಂದೆ ಬಂದು ದೇವನೆದುರು ಹೀಗೆ ಅರಿಕೆಮಾಡಿಕೊಂಡರು.

ಗಣಗಳು :—

ಸ್ವಾಮಿನ್, ಉಮಾಕಾಂತ ! ತಮ್ಮ ಪುತ್ರ ಮಯೂರೇಶ್ವರನು ॥೧೫॥

ಆಟವಾಡುವುದಕ್ಕಾಗಿ ಹೊರಗಡೆ ಬರುತ್ತಲಿದ್ದಾಗ ಚಂದ್ರಖಂಡವು ಅವನ ಕೈಯ್ಯಲ್ಲಿದ್ದುದನ್ನು ನಾವು ಕಂಡೆವು. ಅವನು ತಮ್ಮಿಂದಲೇ ಬೇಡಿ ಪಡೆದಿರಬಹುದೆಂದು ಸುಮ್ಮನಿದ್ದೆವು. ತಮಗೂ ತಿಳಿಯದಂತೆ ಅವನು ಯಾವಾಗ ತೆಗೆದು

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಪ್ರೋಚೇ ರುಷ್ಟೋ ಮಹೇಶ್ವರಃ ।**

**ಶಿವ ಉವಾಚ :—**

**ಕಥಂ ನು ಕ್ರಿಯತೇ ರಕ್ಷಾ ಭವದ್ಭಿರ್ಭಕ್ಷತತ್ಪರೈಃ ? ॥೧೭॥**

**ಚಂದ್ರೋ ವಾ ಚಂದ್ರಹರ್ತಾ ವಾ ಯದ್ಯಾನೀತಸ್ತದಾ ಶುಭಮ್ ।**
**ನೋ ಚೇದ್ಭಸ್ಮೀಕರಿಷ್ಯಾಮಿ ಸರ್ವೇಷಾಂ ನಾತ್ರ ಸಂಶಯಃ ॥೧೮॥**

**ಕ ಉವಾಚ :—**

**ತತಸ್ತೇ ಕ್ಷುಬ್ಧಮನಸೋ ಧಾವಮಾನಾಸ್ತ್ವರಾನ್ವಿತಾಃ ।**
**ಮಯೂರೇಶಂ ಸಮಭ್ಯೇತ್ಯ ಪ್ರಾಭರ್ಣ ರುಷ್ಟಚೇತಸಃ ॥೧೯॥**

---

ಕೊಂಡನೋ ಆದನ್ನು ನಾವು ಅರಿಯೆವು. ಇದ್ದ ಸಂಗತಿಯನ್ನು ಅರಿಕೆಮಾಡಿದ್ದೇವೆ ವಿಭೋ ? ॥೧೬॥

ಬ್ರಹ್ಮಾ :—

ಇದನ್ನು ಕೇಳಿದ ಬಳಿಕಂತೂ ಮಹೇಶ್ವರನಿಗೆ ಬಹಳ ಕೋಪ ಬಂದಿತು. ಗಣಗಳನ್ನು ಮತ್ತಷ್ಟು ಗದ್ದರಿಸುತ್ತಲೇ ಮುಂದೆ ಮಾತನ್ನಾಡಿದನು.

ಶಿವ :—

ನೀವು ಉಂಡು ತಿನ್ನುವುದರಲ್ಲೇ ಕಾಲವನ್ನು ಕಳೆಯತಕ್ಕವರು. ನಿಮ್ಮಿಂದ ರಕ್ಷಣೆಯ ಕೆಲಸ ಹೇಗೆ ಸಾಧ್ಯವಾದೀತು ? ॥೧೭॥

ಕಳೆದುಹೋದ ಚಂದ್ರನನ್ನಾಗಲಿ, ಅಥವಾ ಚಂದ್ರನನ್ನು ಕದ್ದವನನ್ನಾಗಲಿ ಹಿಡಿದು ತಂದರೆ ಸರಿ, ಇಲ್ಲವಾದರೆ ಎಲ್ಲರನ್ನೂ ಒಮ್ಮೆಲೇ ಸುಟ್ಟು ಭಸ್ಮಮಾಡಿಬಿಡುವೆನು. ಇದರಲ್ಲಿ ಸಂಶಯವೇ ಇಲ್ಲ. ॥೧೮॥

ಬ್ರಹ್ಮಾ :—

ದೇವನ ಗದ್ದರಿಕೆಯ ಮಾತುಗಳನ್ನು ಕೇಳಿ ಪ್ರಮಥರ ಮನಸ್ಸು ಬಹಳ

**ಗಣಾ ಊಚುಃ :—**

**ಯಾಹಿ ದುಷ್ಟ ! ಶಿವಂ ದೇವಂ, ಚಂದ್ರಂ ವಾ ಯಚ್ಛ ತಸ್ಕರ ! ।**

**ಕ ಉವಾಚ :—**

**ಗಣವಾಕ್ಯಂ ಪರಿಶ್ರುತ್ಯ ಚುಕೋಪ ಗಣನಾಯಕಃ ॥೨೦॥**

**ಮಯೂರೇಶ ಉವಾಚ :—**

**ನ ಮೇಽಸ್ತಿ ಗಣನಾ ಕಾಪಿ ಭವತಾಂ ತಸ್ಯ ವಾ ಗಣಾಃ ! ।**
**ಜಗತ್ತ್ರಯಜನನ್ಯಾ ಮೇ ತನಯಸ್ಯ ಪ್ರಭಾವಿನಃ ॥೨೧॥**

---

ಮುಟ್ಟಿಗೆ ಉದ್ವಿಗ್ನವಾಯಿತು. ಒಡನೆಯೇ ಮಯೂರೇಶನು ಆಟವಾಡುತ್ತಲಿದ್ದ ಸ್ಥಳಕ್ಕೆ ಧಾವಿಸಿ ಬಂದರು. ಪ್ರತಿಯೊಬ್ಬ ಪ್ರಮಥನಿಗೂ ತಾನು ಮೊದಲು ದೇವನ ಆಜ್ಞೆಯನ್ನು ಪ್ರಯೋಗಿಸಬೇಕೆಂಬ ಆತುರವಿದ್ದಿತು. ಗಣಪತಿಯನ್ನು ಸಮೀಪಿಸಿ ದೊಡನೆಯೇ ಬಹಳ ಕೋಪಗೊಂಡು ಹೀಗೆಂದು ಎಲ್ಲರೂ ಒಮ್ಮೆಲೇ ಮಾತನಾಡಿದರು. ||೧೯||

ಗಣಗಳು :—

ದುಷ್ಟಬಾಲಕ! ಬಾ, ಶಿವನ ಬಳಿಗೆ ಎಳೆದೊಯ್ಯುವೆವು. ಇಲ್ಲವಾದರೆ ಎಲವೋ ಕಳ್ಳ ! ನೀನು ಕದ್ದು ತಂದಿರುವ ಚಂದ್ರಬಿಂಬವನ್ನಾದರೂ ಇತ್ತ ಕೊಡು.

ಬ್ರಹ್ಮಾ :—

ಗಣಗಳಾಡಿದ ನಿಂದಾಮಾತುಗಳನ್ನು ಕೇಳಿ ಗಣಪತಿಯು ಬಹಳ ಕೋಪಗೊಂಡನು. ||೨೦||

ಮಯೂರೇಶ :—

ಏಯ್ ಗಣಗಳೇ! ನನಗೆ ನಿಮ್ಮದಾಗಲೀ ಅಥವಾ ಪರಶಿವನದಾಗಲೀ ಯಾರ ಗಣನೆ (ಭೀತಿ) ಯೂ ಇರುವುದಿಲ್ಲ. ನಾನಾರು? ಎಂಬುದನ್ನು ನೀವು ಮರೆತಂತಿದೆ. ನಾನು ತ್ರಿಲೋಕ ಜನನಿಯಾದ ಮಹಾದೇವಿಯ ವೀರಪುತ್ರ. ಈಗಲಾದರೂ ನನ್ನ ಪ್ರಭಾವ ನಿಮಗೆ ತಿಳಿಯಿತೇ ? ||೨೧||

**ಕ ಉವಾಚ :—**

**ಏವಮಂತರ್ಹಿತೋ ದೃಶ್ಯೋ ವಾರಂ ವಾರಂ ಬಭೂವ ಸಃ ||೨೭||**

**ತತಃ ಖಿನ್ನಾನ್ ಗಣಾನ್ ದೃಷ್ಟ್ವಾ ಪರಮಾತ್ಮಾ ಕೃಪಾನ್ವಿತಃ |**
**ತಸ್ಥೌ ತತ್ಪುರತಸ್ಸಮ್ಯಗ್ದೃಷ್ಟ್ವಾ ತಂ ಹರ್ಷನಿರ್ಭರಾಃ ||೨೮||**

**ಬಬಂಧುರ್ಗಿರಿಜಾಸೂನುಂ ನಿನ್ಯುಸ್ತೇ ಶಂಕರಂ ಪ್ರತಿ |**
**ಪೃಥಿವೀಭಾರಸದೃಶಮುಪವಿಷ್ಟಂ ತು ತೇ ಗಣಾಃ ||೨೯||**

ನಿನ್ನನ್ನು ಬಿಡತಕ್ಕವರಲ್ಲ. ನಿನ್ನನ್ನು ಹಿಡಿದೊಯ್ದು ಪರಶಿವನ ಎದುರಿಗೆ ನಿಲ್ಲಿಸಿಯೇ ಬಿಡುತ್ತೇವೆ.

ಬ್ರಹ್ಮಾ :—

ಹೀಗೆಂದು ವೀರಗರ್ಜನೆಯನ್ನು ಮಾಡುತ್ತ 'ಗಣಪತಿಯನ್ನು ಹಿಡಿದುಬಿಡೋಣ' ಎಂದು ಮುಂದೆ ನುಗ್ಗಿದರು. ಅವರು ತನ್ನ ಸಮೀಪಕ್ಕೆ ಬಂದೊಡನೆಯೇ ತಾನು ಕಾಣದಂತಾಗುವುದು, ಅವರು ಬೇಸತ್ತು ಒಂದೆಡೆ ಕುಳಿತೊಡನೆಯೇ ಅವರಿಗೆ ಕಾಣಿಸಿಕೊಳ್ಳುವುದು, ಹೀಗೆ ಬಹಳ ಹೊತ್ತಿನವರೆಗೂ ಕಣ್ಣುಮುಚ್ಚಾಲೆಯ ಆಟವನ್ನು ಪ್ರಮಥರೊಂದಿಗೆ ದೇವನು ಆಡಿದನು. ||೨೭||

ಗಣಪತಿಯನ್ನು ಹಿಡಿಯುವುದಕ್ಕಾಗಿ ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಓಡೋಡಿ ಪ್ರಮಥರು ಕಂಗೆಟ್ಟು ಹೋದರು. ಮೊದಮೊದಲು ಇವರನ್ನು ಆಟವಾಡಿಸಿದರೂ ಅವರ ಅಸಹಾಯ ಸ್ಥಿತಿಯನ್ನು ಅರಿತು ಪರಮಾತ್ಮಾ ಗಣಪತಿಗೆ ದಯೆ ಹುಟ್ಟಿತು. ಆಗ ಇದ್ದಕ್ಕಿದ್ದಂತೆಯೇ ಅವರ ಕಣ್ಣೆದುರು ನಿಂತುಬಿಟ್ಟನು. 'ಕೈಗೆ ಸಿಕ್ಕಿದನು' ಎಂದು ಗ್ರಹಿಸಿದ ಪ್ರಮಥರು ಬಹಳ ಹರ್ಷಗೊಂಡರು. ||೨೮||

ಗಿರಿಜಾಸುತನು ತಪ್ಪಿಸಿಕೊಂಡು ಹೋಗದಂತೆ ಜಾಗರೂಕರಾಗಿದ್ದು ಒಮ್ಮೆಲೇ ಅವನನ್ನು ಹಿಡಿದು ಬಲವಾಗಿ ಬಂಧಿಸಿದರು, ಶಂಕರನಿದ್ದೆಡೆಗೆ ಇವನನ್ನು ಮತ್ತು ಕರೆದೊಯ್ಯಲು ಎಲ್ಲರೂ ಒಟ್ಟಿಗೆ ಸೇರಿ ಪ್ರಯತ್ನಿಸಿದರು. ಕುಳಿತಿದ್ದ ಪುಟ್ಟ ಗಣಪತಿಯು

**ನ ಶೇಕುರುತ್ಥಾಪಯಿತುಂ ತತೋ ವಿಸ್ಮಿತಮಾನಸಾಃ ।**
**ಹತೋದ್ಯಮಾ ಗಣಾಸ್ಸರ್ವೇ ಶಿವಮೇತ್ಯ ಸಮೂಚಿರೇ ॥೩೦॥**

**ಗಣಾ ಊಚುಃ :—**
**ಸರ್ವೇ ವಯಂ ಸಮಾನೇತುಮೇಕಂ ಶಕ್ತಾ ನ ಶಂಕರ ! ।**
**ಕ ಉವಾಚ :—**
**ಆಜ್ಞಾಪಯಾಮಾಸ ತದಾ ನಂದಿನಂ ಪುರತಃ ಸ್ಥಿತಮ್ ॥೩೧॥**

**ಶಂಕರ ಉವಾಚ :—**
**ಝಡಿತ್ಯಾನಯ ಗಚ್ಛ ತ್ವಂ ಮಯೂರೇಶಂ ತು ತಸ್ಕರಮ್ ।**

---

ಇಡೀ ಪೃಥಿವಿಯಷ್ಟು ಭಾರವಾಗಿ ಬಿಟ್ಟನು. ಎಷ್ಟೆಷ್ಟು ಮುಕ್ಕರಿದು ಎತ್ತಲು ಪ್ರಯತ್ನಿಸಿದರೂ ॥೨೯॥

ಅವರಿಗೆ ಸಾಧ್ಯವಾಗಲಿಲ್ಲ. ಅವರು ಬಹಳ ಸೋಜಿಗಗೊಂಡರು. ಇದೇನಿರಬಹುದೆಂಬುದೇ ಅವರಿಗೆ ಗೊತ್ತಾಗಲಿಲ್ಲ. ಕೊಂಚ ಕಾಲ ತಡೆದು ತಡೆದು ಮತ್ತೆ ಮತ್ತೆ ಪ್ರಯತ್ನಿಸಿ ನೋಡಿದರು. ಕೊನೆಗೂ ಸಾಧ್ಯವಾಗುವ ಲಕ್ಷಣ ಕಂಡು ಬರಲಿಲ್ಲ. ಆಗ ಉಪಾಯಗಾಣದೆ ನೆಟ್ಟಗೆ ಪರಶಿವನ ಬಳಿಗೆ ಬಂದು ಹೀಗೆಂದು ಸಂಗತಿಯನ್ನು ತಿಳಿಸಿದರು. ॥೩೦॥

ಗಣಗಳು :—

ಭಗರ್ವ, ಶಂಕರ! ಗಣಪತಿಯನ್ನು ತಮ್ಮಾಜ್ಞೆಯಂತೆ ಹಿಡಿದು ತರಲು ನಾವೆಲ್ಲರೂ ಎಷ್ಟೆಷ್ಟೋ ರೀತಿಯಿಂದ ಪ್ರಯತ್ನಿಸಿದೆವು. ನಮ್ಮಿಂದ ಅವನನ್ನು ಎತ್ತಿಕೊಂಡು ಬರುವುದಕ್ಕೆ ಸಾಧ್ಯವಾಗಲಿಲ್ಲ.

ಬ್ರಹ್ಮಾ:—

ದೇವನು ಆಗ ತನ್ನ ದೃಷ್ಟಿಯನ್ನು ಎದುರಿಗಿದ್ದ ನಂದಿಕೇಶ್ವರನ ಬಳಿ ಹೊರಳಿಸಿ ॥೩೧॥

ಶಂಕರ :—

ನೀನು ಓಡಿಹೋಗಿ ಕಳ್ಳನಾದ ಆ ಮಯೂರೇಶ್ವರನನ್ನು ಎಳೆದುಕೊಂಡು ಬಾ.

**ನಂದ್ಯುವಾಚ :—**

**ಶೇಷಂ ಸೂರ್ಯಂ ಶಶಾಂಕಂ ಚ ಹನಿಷ್ಯೇಽಹಂ ತವಾಜ್ಞಯಾ ॥೩೨॥**

**ಕನೀಯಸೋ ನ ಮೇ ಕಾಚಿದ್ಗಣನಾಸ್ತಿ ಮಹೇಶ್ವರ ! ।**

**ಕ ಉವಾಚ :—**

**ಇತ್ಯುಕ್ತ್ವಾಗಾದ್ವಾಯುವೇಗೋ ಭಂಜನ್ವೃಕ್ಷಾಂಶ್ಚ ಪರ್ವತಾನ್ ॥೩೩॥**

**ಕ್ರೋಧಸಂರಕ್ತನಯನಸ್ತೀಕ್ಷ್ಣಶೃಂಗೋ ಗ್ರಸನ್ ದಿವಮ್ ।**

**ಉವಾಚ ತಂ ಮಯೂರೇಶಂ**

ಬ್ರ

ಎಂದು ಆಜ್ಞಾಪಿಸಿದನು.

ನಂದೀ :—

ಸ್ವಾಮಿನ್, ಶಂಕರ ! ನಿನ್ನ ಆಜ್ಞೆಯಾಗುವುದಾದರೆ ಆದಿಶೇಷನನ್ನಾಗಲಿ, ಜ್ಯೋತಿರ್ಮಂಡಲಗಳೆನಿಸಿದ ಸೂರ್ಯ-ಚಂದ್ರರನ್ನಾಗಲಿ ನಿರ್ಲಕ್ಷ್ಯದಿಂದ ಕೊಂದು ಬಿಟ್ಟೇನು. ॥೩೨॥

ಈ ಬಗೆಯ ಪ್ರಭಾವವುಳ್ಳ ನನಗೆ ಮಹೇಶ್ವರ ! ಎಳೆಗೂಸು, ಮಯೂರೇಶ್ವರನ ಗಣನೆ ಇದ್ದೀತೇ ?

ಬ್ರಹ್ಮಾ :—

ಎಂದು ಸಾಕಷ್ಟು ಪೌರುಷವನ್ನು ಕೊಚ್ಚಿ ಮಯೂರೇಶನಿದ್ದೆಡೆಗೆ ವಾಯುವಿನಂತೆ ಓಡಿ ಹೋದನು. ಓಡುವ ಭರದಲ್ಲಿ ಮಾರ್ಗ ಮಧ್ಯೆ ಸಿಕ್ಕಿದ ಗಿಡ ಮರಗಳು, ಪರ್ವತಗಳು ಇವನ್ನೆಲ್ಲ ಕೆಡಹಿದನು. ॥೩೩॥

ನಂದಿಯ ಕಣ್ಣುಗಳು ಕೋಪದಿಂದ ಕೆಂಪಾಗಿದ್ದವು. ಅವನ ಕೊಂಬುಗಳು ನೀಳವಾಗಿಯೂ ಅತಿ ಮೊನೂಚಾಗಿಯೂ ಇದ್ದವು. ಅವನು ನೆಗೆಯುತ್ತ ನಾಗಾಲೋಟದಿಂದ ಬರುತ್ತಿರುವುದನ್ನು ನೋಡಿದರೆ ದ್ಯುಲೋಕವನ್ನೇ ಗ್ರಸಿಸಿ

**ನಂದ್ಯುವಾಚ :—**

**ಯಾಹಿ ರೇ । ತ್ವಂ ಶಿವಂ ಪ್ರತಿ ॥೩೪॥**

**ನೋ ಚೇದದ್ಯ ನಶಿಷ್ಯಾಮಿ ನ ಸಮೋ ಹಿ ಗಣೈರಹಮ್ ।**

**ಕ ಉವಾಚ :—**

**ಏವಂ ವದತಿ ತಸ್ಮಿಂಸ್ತು ಮಯೂರೇಶೋ ರುಷಾನ್ವಿತಃ ॥೩೫॥**

**ಶ್ವಾಸಚಕ್ರೇಽಕ್ಷಿಪತ್ತಂ ತು ಗಮನಾಗಮಸಂಕುಲೇ ।**
**ತತ್ಯಾಜ ತಂ ದೃಢಂ ಶ್ವಾಸಾದತಿಖಿನ್ನಂ ಶಿವಾಂತಿಕೇ ॥೩೬॥**

---

ಬಿಡುವನೋ ಎಂಬಂತೆ ತೋರುತ್ತಲಿದ್ದಿತು. ನಂದಿಯು ಗಣಪತಿಯನ್ನು ಸಮೀಪಿಸಿದ ಕೂಡಲೆ ಬಹಳ ಬಿರುಸಿನಿಂದ ಅವನನ್ನು ಕುರಿತು ಹೀಗೆ ನುಡಿದನು.

ನಂದೀ :—

ಎಲವೋ ಪೋರ ! ಒಳ್ಳೆಯ ಮಾತಿನಿಂದ ಶಿವನಿದ್ದಲ್ಲಿಗೆ ನಡೆ. ॥೩೪॥

ಬರಲು ನೀನೇನಾದರೂ ತಂಟೆಯನ್ನು ಮಾಡಿದರೆ ನಿನ್ನನ್ನು ಇಲ್ಲಿಯೇ ಕೊಂದು ಬಿಡುವೆನು. ಇತರ ಪ್ರಮಥರಂತೆ ನಾನೂ ಒಬ್ಬ ಎಂದು ಭ್ರಮಿಸಿ ನನ್ನೆದುರು ಹುಡುಗತನವನ್ನು ತೋರಿಸಬೇಡ. ನನ್ನ ಹತ್ತಿರ ನಿನ್ನ ಆಟವೇನೂ ನಡೆಯಲಾರದು.

ಬ್ರಹ್ಮಾ :—

ನಂದಿಯ ಈ ಬಡಬಡಿಕೆಯನ್ನು ಕೇಳಿ ಮಯೂರೇಶ್ವರನು ಕೋಪಾತಿಶಯದಿಂದ ನಖ–ಶಿಖಾಂತ ಉರಿದು ಹೋದನು. ಯಾವ ಮಾತನ್ನೂ ಪ್ರತಿಯಾಗಿ ಆಡದೆ ನಂದಿಯನ್ನು ತನ್ನ ಶ್ವಾಸೋಚ್ಛ್ವಾಸದ ತಿರುವಿಗೆ ಸಿಲುಕಿಸಿ ಚಂಡಿನಂತೆ ಪುಟವಾಡಿಸಲಾರಂಭಿಸಿದನು. ಎಂದರೆ ಗಣಪತಿಯು ಶ್ವಾಸವನ್ನು ಮೇಲಕ್ಕೆಳೆದುಕೊಂಡಾಗ ಆ ಉಸಿರಿನೊಂದಿಗೆ ನಂದಿಯು ಮಯೂರೇಶ್ವರನ ಮೂಗಿನ ವರೆಗೂ ಹೋಗುವನು. ಅಷ್ಟರಲ್ಲೇ ಗಣಪತಿ ನಿಃಶ್ವಾಸವನ್ನು ಬಿಡುತ್ತಲಿದ್ದದರಿಂದ

**ವಮಂತಂ ರುಧಿರಂ ವಕ್ತ್ರಾತ್ಪೃಥಿವ್ಯಾಂ ಪತಿತಂ ತು ತಮ್ ।**
**ಬ್ರುವಂತಂ ಪೌರುಷಂ ನಾನಾಮೂರ್ಛಿತಂ ದ್ವಿ-ಮುಹೂರ್ತತಃ ॥೩೭॥**

**ಅಪಶ್ಯಚ್ಚ ಮಯೂರೇಶಂ ಜಾನುಭಾಗೇ ಸ್ಥಿತಂ ಶಿವಃ ।**
**ದೇದೀಪ್ಯಮಾನವಪುಷಾ ದಿವ್ಯಭೂಷಾಸಮನ್ವಿತಮ್ ॥೩೮॥**

**ಗಣಾ ಊಚುಃ ಶಿವಂ ದೃಷ್ಟ್ವಾ ಭಾಲಚಂದ್ರಂ ಯಥಾಪುರಾ ।**

---

ಆದರೊಂದಿಗೆ ಹಿಂದಕ್ಕೆ ಬಂದು ನೆಲಕ್ಕೆ ಧೊಪ್ಪನೆ ಬೀಳುವನು. ಗಣೇಶನು ಮೇಲೆ ಮೇಲೆ ಶ್ವಾಸೋಚ್ಛ್ವಾಸಗಳನ್ನು ಬಿಡಲಾರಂಭಿಸಿದ್ದರಿಂದ ಈ ಹೊಡೆತಕ್ಕೆ ಸಿಕ್ಕಿದ್ದ ನಂದಿಗೆ ಉಸಿರು ಬಿಡುವುದಕ್ಕೂ ಅವಕಾಶವಾಗದೇ ಬಹಳ ಮಟ್ಟಿಗೆ ಹಣ್ಣಾದನು. ಗಣಪತಿಯು ನಂದಿಯನ್ನು ಅಷ್ಟಕ್ಕೇ ಬಿಡದೇ ಒಮ್ಮೆ ಘಟ್ಟಿಯಾಗಿ ನಿಃಶ್ವಾಸವನ್ನು ಉಸುರಿ ನಂದಿಯು ಹಾರಿ ಹೋಗಿ ಶಿವನ ಪಾದದಡಿ ಬಿದ್ದುರುಳುವಂತೆ ಮಾಡಿದನು. ॥೩೬॥

ಅದುವರೆಗೂ 'ನಾನಾಬಗೆಯಿಂದ ಪೌರುಷವನ್ನು ಕೊಚ್ಚಿಕೊಂಡಿದ್ದ ನಂದಿಯು ಬಾಯಿಯಿಂದ ಧಾರಾಕಾರವಾಗಿ ರಕ್ತವನ್ನು ಕಾರುತ್ತ ಎರಡು ಮುಹೂರ್ತಗಳ ವರೆಗೆ ನಿಶ್ಚೇಷ್ಟನಾಗಿ ಬಿದ್ದು ಬಿಟ್ಟನು. ॥೩೭॥

ಭವಾನೀವಲ್ಲಭನು ನಂದಿಯನ್ನು ನೋಡುತ್ತಿರುವಷ್ಟರಲ್ಲಿ ಯಾವ ಮಾಯೆ ಯಲ್ಲೋ ಮಯೂರೇಶ್ವರನು ಮಹಾದೇವನ ಕಾಲು ಬದಿಗೆ ಬಂದು ಏನನ್ನೂ ಅರಿಯ ದವನಂತೆ ನಿಂದಿದ್ದನು. ಅಂತೆಯೇ ಇದುವರೆಗೂ ಕಾಣೆಯಾಗಿದ್ದ ಚಂದ್ರಖಂಡವೂ ಪರಶಿವನ ಜಟಾಜೂಟವನ್ನು ಅಲಂಕರಿಸಿ ಕುಳಿತಿದ್ದಿತು. ಪರಶಿವನು ತನ್ನ ಮಗನ ಕಡೆ ಹೊರಳಿ ನೋಡಿದಾಗ ಮಯೂರೇಶ್ವರನು ದೇದೀಪ್ಯಮಾನವಾದ ದೇಹದಿಂದಲೂ, ದಿವ್ಯಾಭರಣಭೂಷಿತನಾಗಿಯೂ ತೋರಿಬಂದನು. ॥೩೮॥

ಮಯೂರೇಶ್ವರನು ಪರಶಿವನ ಬಳಿ ನಿಂದಿರುವುದು, ಚಂದ್ರಮಂಡಲವು ಪರಶಿವನ ಜಟೆಯಲ್ಲಿರುವುದು ಇವೆಲ್ಲ ಪ್ರಮಥರಿಗೆ ಕಂಡು ಬಂದಿತು. ಆಗ ಅತ್ಯಾಶ್ಚರ್ಯಚಕಿತರಾದ ಪ್ರಮಥರು ದೇವನನ್ನು ನೋಡುತ್ತ

**ಗಣಾ ಊಚುಃ :—**

**ಲಲಾಟೇ ತೇ ಶಶೀ ದೇವ ! ವೃಥಾಜ್ಞಪ್ತಾ ವಯಂ ಶಿವ ! ||೩೯||**

**ಕ ಉವಾಚ :—**

**ಮಯೂರೇಶಂ ಗಣಾಂಶ್ಚಾಹ ಶಶಿನಂ ವೀಕ್ಷ್ಯ ಮಸ್ತಕೇ !**

**ಶಿವ ಉವಾಚ :—**

**ಶ್ರಾಂತಾಸ್ತೇ ಚ ಗಣಾಸ್ತ್ವಂ ಚ ನಂದೀವಾಪಿ ಮಮಾಜ್ಞಯಾ ||೪೦||**

**ಚಂದ್ರೇ ಸ್ಥಿತೇ ಲಲಾಟೇ ಮೇ ವೃಥಾ ಯುದ್ಧಮಭೂದ್ಧಿ ವಃ**

ಗಣಗಳು :—

ದೇವ! ಭಾಲಚಂದ್ರನು ನಿನ್ನ ಸಮೀಪದಲ್ಲೇ ನಿಂತಿರುವನು. ಅಷ್ಟೇ ಅಲ್ಲದೇ ಚಂದ್ರನೂ ಸಹ ನಿನ್ನ ತಲೆಯ ಮೇಲೆಯೇ ಇದ್ದಾನೆ. ಹೀಗಿರುವಾಗ ಇವರಿಬ್ಬರನ್ನು ಕರೆದು ತರಲು ನಮಗೆ ಆಜ್ಞೆ ಇತ್ತುದು ವ್ಯರ್ಥವಾಯಿತಲ್ಲವೇ ? ||೩೯||

ಬ್ರಹ್ಮ :—

ಆಗ ಪರಶಿವನು ಗಣಪತಿಯನ್ನೂ ಚಂದ್ರನನ್ನೂ ಉಪಲಕ್ಷಿಸಿ ಪ್ರಮಥರನ್ನು ನೋಡುತ್ತ

ಶಿವ :—

ಅವಸರದಲ್ಲಿ ನಾನು ಆಜ್ಞೆಯನ್ನಿತ್ತುದರಿಂದ ನೀವೆಲ್ಲ ವ್ಯರ್ಥವಾಗಿ ಶ್ರಮಿಸಿದಂತಾಯಿತು. ಮಯೂರೇಶ! ನೀನು, ನಂದಿ ಎಲ್ಲರೂ ಶ್ರಮಿಸಿದ್ದೀರಿ. ||೪೦||

ಚಂದ್ರ ನನ್ನ ಜಟೆಯಲ್ಲೇ ಇದ್ದಾಗ್ಯೂ ನೀವು ನೀವು ವೃಥಾ ಪರಸ್ಪರ ಹೋರಾಡಿದಂತಾಯಿತು. ಆದುದಂತೂ ಆಗಿಯೇ ಹೋಗಿದೆ. ಇರಲಿ, ಬಿಟ್ಟುಬಿಡಿ.

**ಪ್ರಮಥಾ ಊಚುಃ :—**

**ಅದ್ಯಪ್ರಭೃತಿ ದೇವೇಶ ! ಸ್ವಾಮೀ ನೋಽಸ್ತು ಮಯೂರರಾಟ್ ||೪೧||**

**ಕ ಉವಾಚ :—**

**'ತಥೇ'ತಿ ಶಿವ ಊಚೇ ತಾನ್ 'ಗಣರಾಜೋ'ಽಭವತ್ತು ಸಃ |**
**ನತ್ವಾ ಶಿವಂ ಗಣೇಶಂ ಚ ಗಣೇಶಜನನೀಮಪಿ ||೪೨||**

**ಪ್ರಶಂಸಯಿತ್ವಾ ದೇವೇಶಂ ಮಯೂರೇಶಂ ತಥಾವಿಧಮ್ |**
**ಗರ್ಜಂತೋಽಥ ಗಣಾ ಜಗ್ಮುರ್ಮುದಾ ಸ್ವಂ ಸ್ವಂ ನಿವೇಶನಮ್ ||೪೩||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಮಂಗಲ ದೈತ್ಯ ವಿನಾಶನಂ, ಗಣರಾಜತ್ವಸಂಪಾದನಂ ಚೇ'ತಿ ಷಡಧಿಕ ಶತತಮೋಽಧ್ಯಾಯಃ ಸಮಾಪ್ತಃ**

---

ಗಣಗಳು :—

ಸ್ವಾಮೀ ! ನಮ್ಮಿಂದ ಯಾವುದೊಂದಪರಾಧವೂ ಘಟಿಸಿಲ್ಲ ಎಂಬುದು ತಮ್ಮ ಘನ ಚಿತ್ತಕ್ಕೆ ವೇದ್ಯವಾಗಿದ್ದರೆ ಇಂದಿನಿಂದ ಈ ಮಯೂರೇಶ್ವರನು ನಮಗೆ ಒಡೆಯನಾಗಿರುವಂತೆ ಅನುಗ್ರಹಿಸಬೇಕು. ||೪೧||

ಬ್ರಹ್ಮಾ :—

'ಹಾಗೆಯೇ ಆಗಲಿ' ಎಂದು ಪರಶಿವನು ನುಡಿದು ಅನುಗ್ರಹಿಸಿದನು. ಒಡನೆಯೇ ಮಯೂರೇಶ್ವರನು ಏಳುಕೋಟಿ ಪ್ರಮಥ ಗಣಗಳಿಗೆಲ್ಲ ರಾಜನಾಗಿ 'ಗಣರಾಜ' ಎಂದೆನಿಸಿಕೊಂಡನು. ಅನಂತರ ಗಣಗಳು ಗಂಗಾಧರನಿಗೂ ಗಿರಿಜೆಗೂ ಮತ್ತು ಮಹಾ ಗಣಪತಿಗೂ ವಿನಯದಿಂದ ನಮಸ್ಕರಿಸಿದವು. ||೪೨||

ಮಹಾಮಹಿಮನಾದ ಗಣೇಶನನ್ನು ಬಾಯಿತುಂಬ ಹೊಗಳಿದವು. ಗಣಪತಿಯು ತಮಗೆ ನಾಯಕನಾದುದರಿಂದ ಹರ್ಷಗೊಂಡು ಮೇಲ್ಮೇಲೆ ಗರ್ಜಿಸಿದವು. ಹಾಗೂ ತಮ್ಮ ತಮ್ಮ ನಿವಾಸಗಳಿಗೆ ಹಿಂತಿರುಗಿ ನಡೆದವು. ||೪೩||

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರಖಂಡದಲ್ಲಿ "ಮಂಗಲಾಸುರನ ವಧೆ, ಮತ್ತು ಗಣರಾಜತ್ವ ಪ್ರಾಪ್ತಿ" ಎಂಬಲ್ಲಿಗೆ ನೂರ ಆರನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ಸಪ್ತಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ತತಶ್ಚತುರ್ದಶೇ ವರ್ಷೇ ಗೌತಮಾದ್ಯಾಸ್ಸುರರ್ಷಯಃ |**
**ಆಯಯುರ್ಗಿರಿಜಾಗೇಹಂ ನಾನಾಗಣಯುತಂ ಶಿವಮ್ ||೧||**

**ನಮಸ್ಕೃತ್ಯ ಚ ತಾನಂಬಾ ನಾನಾಸನಗತಾನ್ ಪುರಃ |**
**ಪೂಜಯಿತ್ವಾ ವಿಧಾನೇನ ಪ್ರೋವಾಚ ಹೃದ್ಗತಂ ವಚಃ ||೨||**

|| ಶ್ರೀ ಮಂಗಲಮೂರ್ತಯೇ ನಮಃ

## ೧೦೭ ನೆಯ ಅಧ್ಯಾಯ

ಬ್ರಹ್ಮಾ:—

ಮಹಾಗಣಪತಿಗೆ ಹದಿನಾಲ್ಕನೆಯ ವರ್ಷವು ನಡೆಯುತ್ತಿದ್ದಾಗ ಸಂಭವಿಸಿದ ಒಂದು ಘಟನೆಯನ್ನು ನಿನಗೆ ಹೇಳುವೆನು. ಒಂದು ದಿವಸ ಗೌತಮ ಮೊದಲಾದ ದೇವರ್ಷಿಗಳು ಆದಿದಂಪತಿಗಳ ಮನೆಗೆ ಬಂದು ಪರಿವಾರದೊಡನಿದ್ದ ಪರಶಿವನನ್ನು ಸಂದರ್ಶಿಸಿದರು. ||೧||

ಮಹರ್ಷಿಗಳು ಮನೆಗೆ ಬಂದುದನ್ನು ಕಂಡೊಡನೆಯೇ ಮಹೇಶ್ವರಿಯು ಭಕ್ತಿಯಿಂದ ಅವರಿಗೆ ಪ್ರಣಮಿಸಿದಳು. ಅನಂತರ ಅವರಿಗೆ ಉಚಿತಗಳಾದ ಅನೇಕ ಆಸನಗಳನ್ನು ಕೊಟ್ಟು ಅವರು ಸುಖವಾಗಿ ಕುಳಿತ ಬಳಿಕ ಅರ್ಘ್ಯ, ಪಾದ್ಯಾ-ಚಮನೀಯಗಳಿಂದ ಅರ್ಚಿಸಿ, ಬಹುಕಾಲದಿಂದ ತನ್ನ ಹೃದಯವನ್ನು ಕೊರೆಯುತ್ತಲಿದ್ದ ಒಂದು ವಿಷಯದ ಬಗ್ಗೆ ಹೀಗೆಂದು ಮಾತನಾಡಿದಳು. ||೨||

**ದೇವ್ಯುವಾಚ :—**

**ವಿಘ್ನಭೀತ್ಯಾ ಪರಿತ್ಯಕ್ತಂ ತ್ರಿಸಂಧ್ಯಾಕ್ಷೇತ್ರಮುತ್ತಮಮ್ ।**
**ಅಸ್ಯ ಬಾಲಸ್ಯ ಮೇ ವಿಘ್ನಾ ಅತ್ರಾಪಿ ಬಹವೋಽಭವನ್ ॥೩॥**

**ದಿಶಂತು ವಿಘ್ನರಹಿತಂ ಕರ್ಮ ವಾ ಸ್ಥಾನಮುತ್ತಮಮ್ ।**

**ಮುನಯ ಊಚುಃ :—**

**ಇಂದ್ರಯಾಗೇ ಕೃತೇ ದೇವಿ ! ಸರ್ವವಿಘ್ನಂ ಹರಿಷ್ಯತಿ ॥೪॥**

**ಕ ಉವಾಚ :—**

**ತದೈವ ಕಾರಯಾಮಾಸ ಮಂಡಪಂ ಬಹುವಿಸ್ತರಮ್ ।**

---

ದೇವೀ ;—

ಋಷಿವರ್ಯರೇ ! ಪದೇ ಪದೇ ವಿಘ್ನಗಳು ಬಂದು ಪೀಡಿಸುತ್ತವೆ ಎಂಬ ಭಯದಿಂದ ನಾವು ತ್ರಿಸಂಧ್ಯಾ ಕ್ಷೇತ್ರವನ್ನು ಬಿಟ್ಟು ಇಲ್ಲಿಗೆ ವಾಸಕ್ಕಾಗಿ ಬಂದೆವು. ಇದರಿಂದ ಅಂತಹ ಪವಿತ್ರ ಕ್ಷೇತ್ರವನ್ನೂ ತಮ್ಮಂಥವರ ಸಹವಾಸವನ್ನೂ ಬಿಟ್ಟಂತೆ ಮಾತ್ರ ಆಯಿತೇ ಹೊರತು, ವಿಘ್ನಗಳು ಬೇರೆ ನಮ್ಮನ್ನು ಬಿಡಲೊಲ್ಲವು. ನನಗೂ ನನ್ನ ಕುಮಾರನಿಗೂ ಇದರ ಕಾಟ ತಪ್ಪಿಲ್ಲ. ಇಲ್ಲಿಯೂ ಸಹ ವಿಘ್ನಗಳು ಬಹು ಬಗೆಯಿಂದ ಬರುತ್ತಲೇ ಇವೆ. ॥೩॥

ವಿಘ್ನಗಳು ಬಾರದಂತೆ ಮಾಡಲು ಯಾವುದಾದರೂ ಅನುಷ್ಠಾನವಿದ್ದರಾಗಲಿ, ಅಥವಾ ವಿಘ್ನಗಳೇ ಇಲ್ಲದಿರುವಂತಹ ಸ್ಥಾನವಿದ್ದರಾಗಲಿ, ಅದನ್ನು ಮೊದಲು ದಯೆ ಇಟ್ಟು ತಿಳಿಸಿ.

ಮುನಿಗಳು :—

ವಿಘ್ನಗಳು ಬಾರದಿರುವಂತೆ ಮಾಡಲು ಒಂದು ವ್ರತವಿದೆ. ಇದಕ್ಕೆ "ಐಂದ್ರ ಯಾಗ" ಎಂದು ಹೆಸರು. ಇದನ್ನು ಶ್ರದ್ಧಾ-ಭಕ್ತಿಗಳಿಂದ ಆಚರಿಸಿದ್ದೇ ಆದರೆ, ಸಕಲ ವಿಘ್ನಗಳೂ ಪರಿಹಾರವಾಗುವವು, ॥೪॥

ಬ್ರಹ್ಮ :—

ಮುನಿಗಳು ಉಪದೇಶಿಸಿದ ಐಂದ್ರಯಾಗವನ್ನು ಮಾಡಿಸಲು ಕೂಡಲೇ ಸಂಕಲ್ಪಿಸಿ

ಸಂಭಾರಾನ್ ಕಾರಯಾಮಾಸ ಶಕ್ರಸಂತೋಷಕಾರಕಾನ್ ||೫||

ಆಜ್ಞಾಂ ಗೃಹೀತ್ವಾ ಶಂಭೋಸ್ಸಾ ಪಾರ್ವತೀ ಹರ್ಷನಿರ್ಭರಾ |
ಕಾರಯಾಮಾಸ ವಿಧಿವದಿಂದ್ರಯಾಗಂ ಮಹರ್ಷಿಭಿಃ ||೬||

ಧ್ಯಾನಮಾವಾಹನಂ ಚಕ್ರುರಿಂದ್ರಸ್ಯೈತೇ ಮಹರ್ಷಯಃ |
ಪ್ರಪೂಜುರ್ಗಿರಿಜಾದೇಶಾತ್ಸಾಂಗಮಿಂದ್ರಂ ಗಣಾನಪಿ ||೭||

ಕುಂಡೇ ವಹ್ನಿಂ ಪ್ರತಿಷ್ಠಾಪ್ಯ ಮಂತ್ರೈರೇವ ದ್ವಿಜರ್ಷಭಾಃ |
ಜಪಾನಾಂ ತದ್ದಶಾಂಶೇನ ಜುಹುವುಸ್ತಿಲ-ಪಾಯಸಮ್ ||೮||

ಅದಕ್ಕೆ ಬೇಕಾದ ದೊಡ್ಡ ಚಪ್ಪರವನ್ನು ನಿರ್ಮಿಸುವಂತೆ "ಅಪ್ಪಣೆ" ಕೊಟ್ಟಳು. ಮಂಡಪವು ಬಹಳ ವಿಸ್ತಾರವಾಗಿದ್ದಿತು. ದೇವೇಂದ್ರನಿಗೆತೃಪ್ತಿಯನ್ನುಂಟುಮಾಡುವಂತಹ ಯಾಗೀಯ ಸಕಲ ಸಂಭಾರಗಳನ್ನೂ ಗಮನವಿಟ್ಟು ಸಂಗ್ರಹಿಸಿದಳು. ||೫||

ಅನಂತರ ಪತಿಯ ಬಳಿಗೆ ಬಂದು ಸಂಕಲ್ಪಿಸಿದ ಯಾಗವನ್ನು ಉಪಕ್ರಮಿಸಲು ಅನುಮತಿಯನ್ನು ಬೇಡಿ ಪಡೆದಳು. ಯಾಗವನ್ನಾರಂಭಿಸುವಾಗ ಅವಳು ಬಹಳ ಸಂತುಷ್ಟಚಿತ್ತಳಾಗಿದ್ದಳು. ಋಷಿಗಳನ್ನು ಬರಮಾಡಿಕೊಂಡು ಅವರ ಮೂಲಕ ಯಜ್ಞವನ್ನು ವಿಧಿಯಂತೆ ಆರಂಭಿಸಿದಳು. ||೬||

ವೇದವೇತ್ತರಾದ ಮುನಿಗಳು ಪಾರ್ವತೀದೇವಿಯ ಆಜ್ಞೆಗನುಸರಿಸಿ ದೇವೇಂದ್ರನನ್ನು ಧ್ಯಾನ, ಆವಾಹನ ಮೊದಲಾದ ಕ್ರಮಗಳಿಂದ ಪೂಜಿಸಿದರು. ಅನಂತರ ಅಧಿದೇವತೆ, ಪ್ರತ್ಯಧಿದೇವತೆಗಳನ್ನೂ ಯಥೋಚಿತ ಪೂಜಿಸಿದರು. ||೭||

ಹೋಮಕ್ಕಾಗಿ ನಿರ್ಮಿಸಿದ್ದ ಕುಂಡದಲ್ಲಿ ಮಂತ್ರಗಳಿಂದ ಅಗ್ನಿಯನ್ನು ದ್ವಿಜವರರು ಪ್ರತಿಷ್ಠಿಸಿದರು. ಅಗ್ನಿಯು ಹುತವಾದ ಬಳಿಕ ಎಳ್ಳು ಪಾಯಸ ಇವನ್ನು ಜಪಸಂಖ್ಯೆಯ ಹತ್ತನೆಯ ಒಂದು ಭಾಗದಷ್ಟು ಆಹುತಿಯನ್ನಾಗಿ ಸಮರ್ಪಿಸಿದರು. ||೮||

ಪ್ರಣವಾದ್ಯೈರ್ನಮೋಽಂತೈಶ್ಚ ಸ್ವಾಹಾಂತೈರ್ಮಂತ್ರಸಂಚಯೈಃ ।
ಶಾಂತಿಪಾಠಾನ್ ಪಠಂತಿ ಸ್ಮ ಚತುರ್ವೇದಭವಾನ್ ದ್ವಿಜಾಃ ॥೯॥

ಏತಸ್ಮಿನ್ನಂತರೇ ಬಾಲಃ ಕ್ರೀಡಿತ್ವಾ ಬಾಲಕೈಃ ಸಹ ।
ಯಜ್ಞವಾಟಮುಖೋ ಯಾತಿ ದೈತ್ಯೌ ತು 'ಕಲ-ವಿಂಕಲೌ' ॥೧೦॥

ತಾವತ್ಸಂಮುಖತಾಂ ಯಾತೌ ಮಾಹಿಷಂ ರೂಪಮಾಸ್ಥಿತೌ ।
ಮಹಾರವೌ ಮಹಾಶೃಂಗೌ ಭೀಷಯಂತೌ ಜಗತ್ರಯಮ್ ॥೧೧॥

ಸಟಾಭಿನ್ನಘನೌ ಪುಚ್ಛಾದ್ದಾರಯಂತೌ ಗಿರೀನಥ ।

---

ಪ್ರಣವ (ಓಂಕಾರ) ದಿಂದ ಆರಂಭವಾಗಿ 'ನಮಃ' ಎನ್ನುವವರೆಗೂ ಮಹೇಂದ್ರನ ಮಹಿಮೆಯನ್ನು ಹೊಗಳಿ ಅನಂತರ 'ಸ್ವಾಹಾ' ಎಂದು ಹೇಳಿ ಹೋಮಮಾಡಿದರು. ಶಾಂತಿಕಾರಕ ಮಂತ್ರಗಳನ್ನು ನಾಲ್ಕು ವೇದಗಳಿಂದಲೂ ಉದ್ಧರಿಸಿ ಶ್ರದ್ಧಾಪೂರ್ವಕವಾಗಿ ಪಠಿಸಿದರು. ॥೯॥

ಇಷ್ಟೆಲ್ಲ ಸಂಭ್ರಮ ಇಲ್ಲಿ ನಡೆಯುತ್ತಿರುವ ಸಮಯಕ್ಕೆ ಸರಿಯಾಗಿ ಬಾಲಕರು ಆಟಗಳನ್ನು ಮುಗಿಸಿಕೊಂಡು ಯಾಗಶಾಲೆಯ ಕಡೆಗೆ ಬಂದರು. ಗಣಪತಿಯೂ ಅವರ ಸಂಗಡವಿದ್ದನೆಂದು ಹೇಳಬೇಕಾಗಿಲ್ಲವಷ್ಟೆ ?

ಈ ಬಗೆಯ ಅನುಷ್ಠಾನವು ದೈತ್ಯರಿಗೆ ಸಹನೆಯಾಗಲಿಲ್ಲ. ಏತಕ್ಕೆಂದರೆ ಮಂತ್ರವಿದ್ವೇಷಿಗಳಾದ ದೈತ್ಯರಿಗೆ ಮಂತ್ರೋಚ್ಚಾರಣೆಯ ಶಬ್ದಗಳನ್ನು ಕೇಳಿದೊಡನೆಯೇ ವಿಷವಾಯುವನ್ನು ಸೇವಿಸಿದಂತಾಗಿ ಉಸಿರು ಕಟ್ಟತೊಡಗುವುದು- ಆದುದರಿಂದಲೇ ಮಂತ್ರವೇತ್ತರನ್ನು ಕಂಡರೆ ಇವು ಇಷ್ಟು ಪ್ರಕ್ಷೋಭಗೊಳ್ಳುವುವು ಮತ್ತು ಅವರನ್ನು ನಾಶಗೊಳಿಸಲಿಕ್ಕೆ ಹವಣಿಸುವುವು. ಇರಲಿ, ಯಾಗಮಂಟಪದ ಕಡೆ ಕಲ, ವಿಕಲರೆಂಬ ದೈತ್ಯರಿಬ್ಬರು ಧಾವಿಸಿ ಬಂದರು. ॥೧೦॥

ದೈತ್ಯರು ದೈತ್ಯರಂತೆ ಇರದೆ ಕೊಬ್ಬಿದ ಕೋಣಗಳಂತೆ ಛದ್ಮರೂಪವನ್ನು ಧರಿಸಿ ಬಂದಿದ್ದರು. ಆ ಕೋಣಗಳ ಕಂಠಧ್ವನಿ ಬಹಳ ಕಠೋರವಾಗಿದ್ದಿತು. ಕೊಂಬುಗಳು ಬಾಗಿ ಬಹು ತೀಕ್ಷ್ಣವಾಗಿದ್ದುದರಿಂದ ಇವನ್ನು ಕಂಡು ಮೂರು ಲೋಕದವರೂ ಹೆದರಿದರು. ॥೧೧॥

ತಮ್ಮ ತಲೆಗೂದಲಿನಿಂದ ಮೇಘಮಂಡಲವನ್ನೂ, ಬಾಲಗಳಿಂದ ಪರ್ವತಗಳನ್ನೂ

ನಾಸಾನಿರೋಧಪವನಾಚ್ಚೂರ್ಣಯಂತೌ ದ್ರುಮಾನಪಿ ||೧೨||

ಉಮಾಸುತಂ ಹಂತುಕಾಮೌ ಯಾತೌ ಶೀಘ್ರಂ ತದಂತಿಕಮ್ ।
ಪ್ರಾಯುಧ್ಯೇತಾಂ ತದಾ ತೌ ದ್ವೌ ಮತ್ತಾವಿವ ಮಹಾಗಜೌ ||೧೩||

ತಯೋಃ ಶಬ್ದೇನ ಗಗನಂ ಗರ್ಜತಿ ಸ್ಮ ಯಥಾ ಘನೈಃ ।
ಜಯಂ ಭಂಗಂ ಕ್ರಮೇಣೋಭೌ ಪ್ರಾಪತುರುಧಿರೋಕ್ಷಿತೌ ||೧೪||

ವಿದ್ರುತಾ ಮುನಿಬಾಲಾಸ್ತೇ ತಾಭ್ಯಾಂ ಭೀತಾ ವೃಕಾದಿವ ।
ದೂರಾದ್ದದರ್ಶ ಗಿರಿಜಾಸುತಸ್ತೌ ದೈತ್ಯಪುಂಗವೌ ||೧೫||

'ಕಥಮೇತೌ ಮಹಾದುಷ್ಟೌ ಹನಿಷ್ಯಾಮಿ'ತಿ ಚಿಂತಯನ್ ।

---

ಕೆದರಿ ಉರುಳಿಸುತ್ತಿದ್ದವು. ಮೂಗಿನಿಂದ ಬಿಡುವ ಉಸಿರು ಬಿರುಗಾಳಿಯಂತಿದ್ದು ಮಹಾ ಮಹಾ ವೃಕ್ಷಗಳನ್ನು ಬುಡ ಸಹಿತ ಕಿತ್ತೆಸೆಯುತ್ತಿದ್ದಿತು. ||೧೨||

ದೈತ್ಯರ ಮುಖ್ಯೋದ್ದೇಶ್ಯವೆಂದರೆ ಉಮಾಪುತ್ರನನ್ನು ಕೊಲ್ಲುವುದು. ಅದನ್ನು ಪರ್ಯಾಯವಾಗಿ ಸಾಧಿಸಲಿಕ್ಕೆ ಮೊದಲು ಪರಸ್ಪರ ಹೋರಾಡಲಾರಂಭಿಸಿದರು. ಕಾದಾಡುವ ಆ ಕೋಣಗಳನ್ನು ನೋಡಿದರೆ, ಮತ್ತ ದಿಗ್ಗಜಗಳಂತೆ ಕಂಡುಬರುತ್ತಿದ್ದವು. ||೧೩||

ಕೋಣಗಳು ಅರಚಿದ ಧ್ವನಿಯು ಗಗನಕ್ಕೆ ಮುಟ್ಟಿ ಗುಡುಗಿನಂತೆ ಪ್ರತಿಧ್ವನಿಯನ್ನುಂಟುಮಾಡಿತು. ಒಂದೊಂದು ಸಲ ಒಂದೊಂದು ಕೋಣವು ಸೋಲುತ್ತಲೂ ಮತ್ತೊಮ್ಮೆ ಗೆದೆಯುತ್ತಲೂ ಇದ್ದುದರಿಂದ ಎರಡರ ದೇಹ ಕಣ್ಣು ಎಲ್ಲವೂ ರಕ್ತಮಯವಾಗಿದ್ದಿತು. ಹೀಗೆ ಕಾದಾಡುತ್ತ ಇವು ಮುಂದೆ ಮುಂದೆ ಬಂದವು. ||೧೪||

ಇವನ್ನು ನೋಡಿ ತೋಳನನ್ನು ಕಂಡ ಕುರಿಮರಿಗಳಂತೆ ಮುನಿ ಬಾಲಕರೆಲ್ಲರೂ ಹೆದರಿ ದಿಕ್ಕು ಕೆಟ್ಟು ಓಡಿಹೋದರು. ಬಾಲಕರು ಭಯಗ್ರಸ್ತರಾಗಿ ಓಡಿಹೋಗುತ್ತಿರುವುದನ್ನೂ ಇದಕ್ಕೆ ಕಾರಣರಾದ ಮಹಿಷರೂಪೀ ರಾಕ್ಷಸರನ್ನೂ ದೂರದಲ್ಲಿ ನಿಂದಿದ್ದ ದ್ವೈಮಾತುರನು ನೋಡಿದನು. ||೧೫||

"ಮಹಾದುಷ್ಟರಾದ ಈ ರಕ್ಕಸರನ್ನು ಯಾವ ರೀತಿ ಕೊಲ್ಲಲಿ" ಎಂದು ಕ್ಷಣ

ಪಶ್ಯತ್ಸು ತೇಷು ಬಾಲೇಷು ಚಿಕ್ಷೇಪ ಗಗನೇ ಚ ತೌ ||೧೬||

ಪುಚ್ಛೇ ಗೃಹೀತ್ವಾತಿಬಲೌ ಭ್ರಾಮಯಿತ್ವಾ ಪುನಃ ಪುನಃ |
ಮುಹೂರ್ತಾತ್ಪತಿತೌ ಪೃಥ್ವ್ಯಾಂ ತಾನ್ವಿದಾರ್ಯ ದ್ರುಮಾನಪಿ ||೧೭||

ಶತಧಾ ದೇಹಖಂಡಾನಿ ತಯೋರಾದನ್ವೃಕಾದಯಃ |
ತತಸ್ತೇ ಮುನಿಬಾಲಾಸ್ತಂ ಯಯುರ್ಭಕ್ತ್ಯಾ ಪ್ರತುಷ್ಟುವುಃ ||೧೮||

ಬಾಲಕಾ ಊಚುಃ :—

ಯಸ್ಯ ತತ್ತ್ವಂ ನ ಜಾನಂತಿ ಬ್ರಹ್ಮಾದ್ಯಾ ಮುನಯೋಽಪಿ ಚ |
ಸರ್ವಾಂತರ್ಯಾಮಿಣಸ್ತೇ ತು ಕಥಂ ವಿದ್ಯಾಮಹೇ ವಯಮ್ ? ||೧೯||

ಕಾಲ ಚಿಂತಿಸಿದನು, ಮತ್ತು ಮುಂದೆ ನುಗ್ಗಿ ಬಂದು ಎರಡರ ಬಾಲಗಳನ್ನೂ ಹಿಡಿದು ಗರಗರ ತಿರುಗಿಸಿ ಗಗನಕ್ಕೆ ಎಸೆದುಬಿಟ್ಟನು. ಈ ಅದ್ಭುತ ಹಾಗೂ ಭಯಾನಕ ದೃಶ್ಯವನ್ನು ಬಾಲಕರೂ ಇತರರೂ ನೋಡುತ್ತಲೇ ಇದ್ದರು. ರಾಕ್ಷಸರಾದರೂ ಬಲಿಷ್ಠರಾದವರೆಯಾದರೂ ದೇವನ ಮುಂದೆ ಅವರ ಆಟ ನಡೆಯಲಿಲ್ಲ. ಒಂದು ಮುಹೂರ್ತದವರೆಗೂ ಅವು ಗಗನದಲ್ಲಿ ಎಂಜಲು ಹಂಳೆಗಳಂತೆ ತೂರಾಡಿ ಧೊಪ್ಪನೆ ನೆಲಕ್ಕೆ ಬಿದ್ದವು. ಬಿದ್ದ ಹೊಡೆತಕ್ಕೆ ಕೆಳಗಿದ್ದ ಗಿಡಮರಗಳೆಲ್ಲ ಉದುರಿದವು. ಅಂತೆಯೇ ಕೋಣಗಳ ದೇಹಗಳೂ ಛಿನ್ನ-ಭಿನ್ನವಾಗಿ ಹೋದವು. ||೧೬-೧೭||

ನೂರಾರು ಚೂರುಗಳಾಗಿ ಚದುರಿ ಬಿದ್ದಿದ್ದ ರಾಕ್ಷಸರ ದೇಹಗಳ ಚೂರುಗಳನ್ನು ತೋಳ ಮೊದಲಾದ ಮಾಂಸಾಹಾರಿ ಶ್ವಾಪದಗಳು ಎಳೆದೆಳೆದೊಯ್ದು ತಿಂದು ತೃಪ್ತವಾದವು. ರೆಪ್ಪೆಗಳನ್ನು ಸಹ ಬಡಿಯದೆ ಇದನ್ನೆಲ್ಲ ನೋಡುತ್ತ ನಿಂತಿದ್ದ ಮುನಿಬಾಲಕರು ಮಯೂರೇಶನ ಬಳಿಗೆ ಮೆಲ್ಲನೆ ಬಂದು ಭಕ್ತಿಯಿಂದ ನಮಸ್ಕರಿಸಿದರು ಮತ್ತು ಬಾಯಿ ತುಂಬ ಹೊಗಳಿದರು. ||೧೮||

ಬಾಲಕ :—

ಸೃಷ್ಟಿ ಮೊದಲಾದುವನ್ನು ಮಾಡಬಲ್ಲ ತ್ರಿಮೂರ್ತಿಗಳೂ, ಸರ್ವಜ್ಞರು ತಪಸ್ಸಿದ್ಧರು ಎನಿಸಿದ ಮುನೀಶ್ವರರೂ ಮೊದಲಾದವರಿಗೇ ನಿನ್ನ ಮಹಿಮೆಯನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲದಿರುವಾಗ ಕೇವಲ ಪ್ರಾಕೃತ ಬಾಲಕರಾದ ನಾವು ಸರ್ವಾಂತರ್ಯಾಮಿ! ನಿನ್ನ ಹಿರಿಮೆಯನ್ನು ಹೇಗೆ ತಿಳಿಯ ಬಲ್ಲೆವು ? ||೧೯||

**ಬಾಲ್ಯಾತ್ಪ್ರಭೃತಿ ದೈತ್ಯಾಸ್ತೇ ನಾಶಿತಾಃ ಕೋಟಿಶಸ್ತ್ವಯಾ ।**
**ಏತೌ ಮಹಿಷರೂಪೇಣ ಹಂತುಂ ತ್ವಾಂ ಸಮುಪಾಗತೌ ॥೨೦॥**

**ಮೂಷಕಾವಿವ ಸಂತ್ಯಕ್ತೌ ಪುಚ್ಛೇ ಧೃತ್ವಾ ಸ್ವ-ಲೀಲಯಾ ।**
**ಯಯೋಃಶ್ವಾಸೇನ ಚಲಿತಾಃ ಪರ್ವತಾಶ್ಚ ದ್ರುಮಾ ಧರಾಃ ॥೨೧॥**

**ಕ ಉವಾಚ :—**

**ಮಯೂರೇಶಸ್ತತಃ ಪ್ರಾಯಾದ್ಯಜ್ಞವಾಟಂ ರಮನ್ ರಮನ್ ।**
**ದದರ್ಶೇಂದ್ರಮುಖಂ ರುಷ್ಟೋ ಧ್ವಂಸಯಾಮಾಸ ತತ್ಕ್ಷಣಾತ್ ॥೨೨॥**

ನೀನು ಹುಡುಗನಾಗಿದ್ದಾಗಿನಿಂದಲೂ ನೋಡುತ್ತಲಿರುವೆವು. ಕೋಟಿಗಟ್ಟಲೆ ದುಷ್ಟ ದೈತ್ಯರನ್ನು ನೀನು ಕೊಲ್ಲುತ್ತಲೇ ಬಂದಿರುವೆ. ಈಗಂತೂ ಈ ದೈತ್ಯರು ನಿನ್ನನ್ನು ಕೊಲ್ಲುವುದಕ್ಕಾಗಿ ಕೋಣಗಳ ರೂಪದಿಂದ ಬಂದು ಹವಣಿಸುತ್ತಿದ್ದರು. ॥೨೦॥

ನೀನೋ, ಅಂತಹ ಬಲಿಷ್ಠರನ್ನು ಸಹ ಗಣಿಸದೇ, ಇಲಿಗಳನ್ನು ಬಾಲಹಿಡಿದು ಹೊರಕ್ಕೆಸೆಯುವಂತೆ ಆ ಕೋಣಗಳನ್ನು ಲೀಲೆಯಿಂದಲೇ ಮೇಲಕ್ಕೆಸೆದುಬಿಟ್ಟೆ. ರಾಕ್ಷಸರೇನು ಸಾಮಾನ್ಯರಾದವರೇ? ಒಮ್ಮೆ ಉಸಿರನ್ನು ಬಿಟ್ಟರೂ ಸಾಕು. ದೊಡ್ಡ ದೊಡ್ಡ ಪರ್ವತಗಳು ಮರಗಳು ಸಹ ಹಾರಿಹೋಗುತ್ತಲಿದ್ದವು. ॥೨೧॥

ಬ್ರಹ್ಮ :—

ಬಾಲಕರ ಮಾತುಗಳಾವುವನ್ನೂ ಕಿವಿಗೇ ಹಾಕಿಕೊಳ್ಳದೆ ಅವರೊಂದಿಗೆ ಮೊದಲಿನಂತೆಯೇ ಆಟವಾಡುತ್ತ ಯಾಗಮಂಟಪದ ಕಡೆಗೆ ನಡೆದನು. ಅಲ್ಲಿ ಋಷಿಗಳು ಶ್ರದ್ಧೆಯಿಂದ ನಡೆಸುತ್ತಲಿದ್ದ ಐಂದ್ರಯಾಗವನ್ನು ನೋಡಿದನು. 'ಸರ್ವಹೃದಯ ಗುಹಾಶಯನಾದ ನಾನೇ ಸ್ವತಃ ಇವರ ಸಮೀಪದಲ್ಲಿರುವಾಗಲೂ ಇವರಿಗೆ ಅಜ್ಞಾನ ಕಳೆದಿಲ್ಲವಲ್ಲ?' ಎಂದು ಚಿಂತಿಸಿ ಬಹಳ ಕೋಪಗೊಂಡನು. ಮತ್ತು ತನ್ನ ಮಹಿಮೆಯನ್ನು ಮತ್ತೊಮ್ಮೆ ತೋರಿಸಿ ಇವರಿಗೆ ತತ್ತ್ವವನ್ನು ತಿಳಿಸೋಣವೆಂದು ಸಂಕಲ್ಪಿಸಿ ಮುಂದೆ ನುಗ್ಗಿ ಆ ಯಾಗವನ್ನು ಒಡನೆಯೇ ಧ್ವಂಸ ಮಾಡಿಬಿಟ್ಟನು. ॥೨೨॥

ದೂರೇ ಕ್ಷಿಪ್ತ್ವಾ ಶಕ್ರಮೂರ್ತಿಂ ಪ್ರೋಚೇ ಸರ್ವಾನ್ ಮುನೀಶ್ವರಾನ್ ।
ವೃತೋ ಮುನಿಸುತೈಸ್ಸರ್ವೈಃ
ದೇವ ಉವಾಚ :—
ಕಿಂ ಕರ್ಮ ಕ್ರಿಯತೇಽಮಲಾಃ ! ॥೨೩॥

ಕಿಂ ತುಷ್ಟೇನ ಪ್ರದಾತವ್ಯಂ ವಾಸವೇನಾಖಿಲಾರ್ಥಿನಾ ।
ಅಜಾಪ್ರಾರ್ಥನಯಾ ಕಿನ್ನು ? ಕಾಮಧೇನುಫಲಂ ಭವೇತ್ ? ॥೨೪॥

ಕ ಉವಾಚ :—

ಸ ಆದಚ್ಛೇಷಸಾಮಗ್ರೀಂ ಕೃತ್ವಾ ಶಾಂತಂ ಹುತಾಶನಮ್ ।
ಮುನಯೋ ವಿಸ್ಮಿತಹೃದೋ ವೀಕ್ಷ್ಯ ಚಾಪಲ್ಯಮಸ್ಯ ತತ್ ॥೨೫॥

---

ಅಲ್ಲಿ ಸ್ಥಾಪಿಸಿದ್ದ ಮಹೇಂದ್ರನ ಮೂರ್ತಿಯನ್ನು ಕಿತ್ತು ಬಹುದೂರ ಹೋಗಿ ಬೀಳುವಂತೆ ಎಸೆದು ಬಿಟ್ಟನು. ಅನಂತರ ಮುನಿಗಳ ಕಡೆಗೆ ತಿರುಗಿ ನೋಡಿ ಹೀಗೆಂದು ಅಧಿಕ್ಷೇಪಿಸತೊಡಗಿದನು. ಇವನ ಸಂಗಡಿಗರೆಲ್ಲ ಆ ಸಮಯದಲ್ಲಿ ಮಯೂರೇಶನನ್ನು ಸುತ್ತುವರೆದು ನಿಂದಿದ್ದರು.

ಗಣೇಶ :—

ಅಮಲ ತೇಜಸ್ವಿಗಳೇ ! ಇದಾವ ದೊಡ್ಡ ಕರ್ಮವೆಂದು ತಿಳಿದು ಆಚರಿಸ ಲಾರಂಭಿಸಿರುವಿರಿ ? ॥೨೩॥

ನೀವು ಬೇಡಿದುದನ್ನೆಲ್ಲ ಕೊಡಲು ನಾನು ಸರ್ವದಾ ನಿಮ್ಮ ಬಳಿ ಸಿದ್ಧ ನಾಗಿರುವಾಗ ಇಂದ್ರನನ್ನು ಮೆಚ್ಚಿಸಲೇಕೆ ಪ್ರಯತ್ನಿಸಿರುವಿರಿ ? ಅವನು ತುಷ್ಟನಾದರೆ ಏನನ್ನು ಕೊಡ ಬಲ್ಲನು ? ಆಡನ್ನು ಪ್ರಾರ್ಥಿಸಿದರೆ ಕಾಮಧೇನುವೀಯಬಲ್ಲ ವಸ್ತು ಗಳನ್ನು ಅದು ಕೊಡಬಲ್ಲದೇ ? ॥೨೪॥

ಬ್ರ

ಹೀಗೆಂದು ಹೇಳಿ ಉಳಿದ ಯಾಗೀಯ ದ್ರವ್ಯ (ಸಾಮಗ್ರಿ) ವನ್ನು ತೆಗೆದು ಕೊಂಡು ಹೋಮ ಕುಂಡದಲ್ಲಿ ಒಮ್ಮೆಲೇ ಹಾಕಿ ಪ್ರಜ್ವಲಿಸುತ್ತಿದ್ದ ಮಂತ್ರ ಪೂತ ಹುತಾಶನ (ಅಗ್ನಿ)ನನ್ನು ನಂದಿಸಿಬಿಟ್ಟನು. ಹುಡುಗನ ಈ ಚಾಪಲ್ಯವನ್ನು ಕಂಡು ಮುನಿಗಳೆಲ್ಲ ಚಕಿತರಾದರು. ॥೨೫॥

ಉಮಾನಿವಿಷ್ಟಹೃದಯಾ ನಾಶಕುಸ್ತಂ ಗುಣೇಶ್ವರಮ್ ।
ಉಪಾಲಬ್ಧುಂ ಶಿಕ್ಷಿತುಂ ವಾ ವಕ್ತುಂ ಕ್ರೋಧೇನ ಕಿಂಚನ ॥೨೬॥

ಉಮಾಯೈ ಸರ್ವಮಾಖ್ಯಾಯ ಜಗ್ಮುಃ ಸ್ವಂ ಸ್ವಂ ನಿವೇಶನಮ್ ।
ಶ್ರುತ್ವೇಂದ್ರೇ ಕ್ಷುಬ್ಧಹೃದಯೇ ಯತ್ಸ್ಯಾತ್ತಚ್ಚ ಭವತ್ವಿತಿ ॥೨೭॥

ಸ್ವಾಪಮಾನೇ ಪರಿಜ್ಞಾತೇ ಶಕ್ರಶ್ಚುಕ್ರೋಧ ವೈ ಭೃಶಮ್ ।
ಕ್ರೋಧಸಂರಕ್ತನಯನೋ ದಹನ್ನಿವ ಜಗತ್ತ್ರಯಮ್ ॥೨೮॥

ಆಕಾರ್ಯ ದೇವನಿಚಯಾನುವಾಚ ವಾಕ್ಯಮುತ್ತಮಮ್ ।

ಉಮಾದೇವಿಯಲ್ಲಿ ತಮಗಿದ್ದ ಗೌರವಾದರಭಕ್ತಿಗಳನ್ನು ಗಮನಿಸಿದ ಗೌತಮಾದಿ ಋಷಿಗಳು ಆಕೆಯ ಪ್ರೇಮಪುತ್ರ, ಗಣಪತಿಯನ್ನು ಅವನ ಆ ದುರ್ವರ್ತನೆಗಾಗಿ ಆಕ್ಷೇಪಿಸುವುದಕ್ಕಾಗಲೀ, ಶಿಕ್ಷಿಸುವುದಕ್ಕಾಗಲೀ, ಅಥವಾ ಕೋಪದಿಂದ ಗದುರಿಸಿಕೊಳ್ಳುವುದಕ್ಕಾಗಲೀ ಸಮರ್ಥರಾಗಲಿಲ್ಲ. ॥೨೬॥

ಆದರೆ ಮಾಡುವುದಾದರೂ ಏನು? ನೆಟ್ಟಗೆ ದೇವಿಯ ಬಳಿಗೆ ಬಂದರು. ನಡೆದ ಸಂಗತಿಯನ್ನೆಲ್ಲ ಸ್ವಲ್ಪವೂ ಮರೆಮಾಚದೇ ವಿವರಿಸಿ ತಮ್ಮ ತಮ್ಮ ನಿವಾಸಗಳಿಗೆ ಹೊರಟು ಹೋದರು. 'ಈ ಸಂಗತಿಯನ್ನು ದೇವೇಂದ್ರನು ಕೇಳಿದ್ದಾದರೆ ಏನೇನು ಅನಾಹುತಗಳಾದಾವೋ ತಿಳಿಯದಲ್ಲ? ಯಾರೇನನ್ನು ಮಾಡಲಿಕ್ಕೆ ಬರುವಂತಿದೆ? ದೇವರಿಚ್ಛೆ ಹೇಗಿದೆಯೋ, ಅದರಂತೆ ನಡೆಯಲಿ' ಎಂದು ಪರಸ್ಪರ ಮಾತನಾಡಿಕೊಳ್ಳುತ್ತಲೇ ಇದ್ದರು.

ಗಣಪತಿಯು ತನಗೆ ಅಪಮಾನ ಮಾಡಿದ ಸಂಗತಿ ಆಖಂಡಲನಿಗೆ ತಿಳಿದು ಹೋಯಿತು. 'ತಾನು ದೇವರಾಜನಲ್ಲವೇ ?' ಎಂಬ ದುರಭಿಮಾನ ಅವನನ್ನು ಕೆರಳಿಸಿತು. ಎಂತಹ ಸಾತ್ತ್ವಿಕನಾದರೂ ತನ್ನ ಗೌರವಕ್ಕೆ ಧಕ್ಕೆ ಬರುವ ಪ್ರಸಂಗ ಒದಗಿದರೆ ಅವನು ಚಲಿತನಾಗುವನು. ಪ್ರಕೃತ ದೇವೇಂದ್ರನು ಬಹಳ ಕ್ರುದ್ಧನಾದನು. ಅವನ ಸಹಸ್ರ ಕಣ್ಣುಗಳೂ ಕೆಂಪಾಗಿಹೋದವು. ತ್ರಿಜಗವನ್ನೂ ದಹಿಸಿಬಿಡುವನೋ ಎಂಬಂತೆ ಶತಕ್ರತು ತೋರಿದನು. ॥೨೮॥

ತನ್ನ ಆಪ್ತರಾದವರು ಹಾಗೂ ಇತರ ದೇವತೆಗಳು ಎಲ್ಲರನ್ನೂ ಬರಮಾಡಿಕೊಂಡು ಹೀಗೆಂದು ಹೇಳಿದನು.

ಇಂದ್ರ ಉವಾಚ :—

ಮಮ ಯಾಗೋ ಮುನಿಗಣೈರಾರಬ್ಧಃ ಪರಮಾದರಾತ್ ॥೨೯॥

ಸ ವಿಧ್ವಸ್ತೋ ಗುಣೇಶೇನ ತಸ್ಯ ದ್ರಕ್ಷ್ಯೇಽದ್ಯ ಪೌರುಷಮ್ ।
ರುಷ್ಟೇ ಮಯಿ ಭವೇನ್ನಷ್ಟಂ ತ್ರೈಲೋಕ್ಯಂ ಸಚರಾಚರಮ್ ॥೩೦॥

ದೇವಾ ಊಚುಃ :—

ತವಾಜ್ಞಾ ಚೇನ್ಮಯೂರೇಶಂ ಬದ್ಧ್ವಾನೀಮಃ ಕ್ಷಣೇನ ಹ ।

ಶಕ್ರ ಉವಾಚ :—

ಮಯೂರೇಶಪುರೇ ವಹ್ನೇ ! ಸ್ಥಾನಂ ಮಾಸ್ತು ಕ್ವಚಿತ್ತವ ॥೩೧॥

ಇಂದ್ರ :—

ದೇವತೆಗಳೇ ! ಭೂ-ಲೋಕದಲ್ಲಿ ಮುನಿಗಳೆಲ್ಲ ಸೇರಿ ಆದರ–ವಿಶ್ವಾಸಗಳಿಂದ ನನಗೆ ತೃಪ್ತಿಯನ್ನು ಕೊಡಬಲ್ಲ ಐಂದ್ರಯಾಗವನ್ನು ಮಾಡಲಾರಂಭಿಸಿದರು. ॥೨೯॥

ಆ ಪೋರ, ಗುಣೇಶನಿರುವನಲ್ಲ ! ಅವನ ಪ್ರಸಂಗಾಧಿಕ್ಯದಿಂದ ಆ ಯಾಗವು ಧ್ವಂಸವಾಗಿ ಹೋಯಿತು. ಇರಲಿ, ಅವನ ಪೌರುಷವಾದರೂ ಎಷ್ಟಿದೆಯೋ ಅದನ್ನು ನೋಡಿಯೇ ಬಿಡುತ್ತೇನೆ. ನಾನು ಕುಪಿತನಾದರೆ ಚರಾಚರಾತ್ಮಕವಾದ ತ್ರೈಲೋಕ್ಯವೂ ನಷ್ಟವಾಗಿ ಹೋದೀತು. ಈ ವಿಷಯ ಆ ಬಾಲಕನಿಗೇನು ಗೊತ್ತು ? ॥೩೦॥

ದೇವತೆಗಳು :—

ದೇವೇಂದ್ರ ! ವಿಷಯ ಹೀಗೋ, ? ಸರಿ, ತಿಳಿಯಿತು. ನೀನು ಅಪ್ಪಣೆಯನ್ನೀಯುವುದಾದರೆ ಒಂದೇ ಕ್ಷಣದೊಳಗಾಗಿ ಆ ಮಯೂರೇಶನನ್ನು ಬಂಧಿಸಿ ನಿನ್ನೆದುರು ತಂದು ನಿಲ್ಲಿಸುವೆವು.

ಇಂದ್ರ :—

ಬಹಳ ಸಂತೋಷ. ವೈಶ್ವಾನರ ! ಮಯೂರೇಶ್ವರನಿರುವ ಪುರಿಯಲ್ಲಿ ನೀನು ಇನ್ನು ಇರಬೇಕಾದ ಪ್ರಮೇಯವಿಲ್ಲ. ॥೩೧॥

**ಸರ್ವೇಷಾಂ ಜಾಠರೋऽಪಿ ತ್ವಂ ಲೀನೋ ಭವ ಮಮಾಜ್ಞಯಾ ।**
**ಕ ಉವಾಚ :—**
**ಇತಿ ಶ್ರುತ್ವಾ ವಚಸ್ತಸ್ಯ ಶಕ್ರಸ್ಯ ರುಷಿತಾತ್ಮನಃ ॥೩೨॥**

**ವಹ್ನಿರಂತರ್ಹಿತಸ್ತತ್ರ ಪುರೇऽಪಿ ಜಠರೇऽಪಿ ಚ ।**
**ನಾಪಶ್ಯನ್ಮುನಯೋ ವಹ್ನಿಂ ಮಮಂಥುರ್ಹೋಮಹೇತವೇ ॥೩೩॥**

**ನಾಯಾತೀತಿ ಪರಿಜ್ಞಾಯ ತೇऽಪಕ್ವಂ ಜಕ್ಷುರಾದರಾತ್ ।**
**ನ ಚ ತತ್ಪಚ್ಯತೇ ತೇನ ವ್ಯಥಾ ಭವತಿ ದುರ್ಧರಾ ॥೩೪॥**

**ತತಸ್ತೇ ಮುನಯೋ ಜಗ್ಮುರ್ಮಯೂರೇಶಂ ಕೃಪಾಕರಮ್ ।**
**ನಮಸ್ಕೃತ್ಯಾಬ್ರುವನ್ ಸರ್ವೇ**

---

ಎಲ್ಲರ ಜಠರವನ್ನೂ ತ್ಯಜಿಸಿ ಇದ್ದಕ್ಕಿದ್ದಂತೆಯೇ ಲೀನನಾಗಿ ಹೋಗು. ಇದು ನನ್ನ ಆಜ್ಞೆ.

ಬ್ರಹ್ಮಾ:—

ಕ್ರುದ್ಧನಾದ ದೇವೇಂದ್ರನ ಆಜ್ಞೆಯಾದೊಡನೆಯೇ ॥೩೨॥

ಅಗ್ನಿದೇವನು ಅಂತರ್ಹಿತನಾದನು. ಯಾರ ಮನೆಯಲ್ಲಾಗಲಿ, ಅಥವಾ ಯಾವ ಪ್ರಾಣಿಯ ಹೊಟ್ಟೆಯಲ್ಲಾಗಲಿ ಅಗ್ನಿಯ ಸುಳಿವೇ ಇಲ್ಲದಂತಾಯಿತು. "ಅಗ್ನಿಯು ಅನುಗತವಾಯಿ (ನಂದಿ) ತು" ಎಂದು ಭಾವಿಸಿದ ಮುನಿಗಳು ಹೋಮದ ವೇಳೆಗೆ ಅಗ್ನಿಯನ್ನು ಒದಗಿಸಿಕೊಳ್ಳಲು ಅರಣಿ (The piece of wood taken from the plant Premna Spinosa used for kindling fire by attrition) ಯನ್ನು ತೆಗೆದುಕೊಂಡು ಮಥಿಸಲಾರಂಭಿಸಿದರು. ॥೩೩॥

ಎಷ್ಟು ಶ್ರಮಿಸಿ ಮಥಿಸಿದರೂ ಅಗ್ನಿಯುದಿಸುವ ಚಿಹ್ನೆಯೇ ತೋರಲಿಲ್ಲ. ಹೋಮದ ಕಾಲ ಮೀರುತ್ತ ಬಂದುದರಿಂದ ಹಸಿವನ್ನು ತಡೆಯಲಾರದೇ ಅಪಕ್ವವಾಗಿದ್ದರೂ ಹಾಗೆ ಹಾಗೆಯೇ ತಿಂದುಬಿಟ್ಟರು. ಅಗ್ನಿ ಇದ್ದರಷ್ಟೇ, ಆಹಾರವು ಜೀರ್ಣವಾದೀತು ? ಎಲ್ಲರಿಗೂ ಅಜೀರ್ಣವಾಯಿತು. ಅದನ್ನು ಸಹಿಸುವುದು ಅವರಿಂದ ಸಾಧ್ಯವಾಗದಂತಾಯಿತು. ॥೩೪॥

ಆಗ ಮುನಿಗಳು ಕೃಪಾಳುವಾದ ಮಯೂರೇಶನ ಸಮೀಪಕ್ಕೆ ಬಂದು ನಮಸ್ಕರಿಸಿ ಹೀಗೆಂದು ಹೇಳಿಕೊಂಡರು.

**ಮುನಯ ಊಚುಃ :—**

ಶಕ್ರಾಹೂತೋ ಗತೋಽನಲಃ ||೩೫||

ಜಾಠರೋಽಪಿ ಗತೋ ವಹ್ನಿಃ ಇಂದ್ರಯಾಗೇ ಹತೇ ತ್ವಯಾ |

**ಕ ಉವಾಚ :—**

ಇತ್ಯಾಕರ್ಣ್ಯ ವಚಸ್ತೇಷಾಂ ಪ್ರತ್ಯೇಕಂ ಜಠರೇಽನಲಃ ||೩೬||

ಸೋಽಭವತ್ಸ್ವಧಯಾವಿಷ್ಟಾಃ ಸರ್ವೇ ಜಾತಾಸ್ತು ತತ್ಕ್ಷಣಾತ್ |

ಮಹಾನಸೇಷು ಕುಂಡೇಷು ತಥೈವ ಜ್ವಲಿತೋಽಭವತ್ ||೩೭||

ತತೋ ವಾಯುಂ ನಿನಾಯಾಶು ಶಕ್ರಃ ಕ್ರುದ್ಧೋ ಮಹಾಬಲಃ |

ಪ್ರೇತಭೂತಾ ಪುರೀ ಸರ್ವಾ ಪಂಚಪ್ರಾಣಗತೇಽಭವತ್ ||೩೮||

---

ಮುನಿಗಳು :—

ದೇವರದೇವ, ಮಯೂರೇಶ ! ಇಂದ್ರನು ಕರೆಸಿಕೊಂಡುದರಿಂದ ಅಗ್ನಿಯು ಈ ದೇಶವನ್ನೇ ಬಿಟ್ಟು ಹೊರಟು ಹೋಗಿದ್ದಾನೆ. ||೩೫||

ನೀನು ಇಂದ್ರಯಾಗವನ್ನು ಕೆಡಿಸಿದೆಯಷ್ಟೆ ? ಇದರಿಂದ ದೇವೇಂದ್ರನು ಕುಪಿತನಾಗಿ ಬಾಹ್ಯದಲ್ಲಂತೂ ಇರಲಿ, ಜಾಠರಾಗ್ನಿಯನ್ನೂ ಸಹ ಹಿಂದಕ್ಕೆ ತೆಗೆದುಕೊಂಡಿದ್ದಾನೆ.

ಬ್ರ

ಮುನಿಗಳಾಡಿದ ಈ ಮಾತುಗಳನ್ನು ಕೇಳಿ ದೇವನು ತನ್ನನ್ನು ಯೋಗಶಕ್ತಿಯಿಂದ ಅಗ್ನಿಯನ್ನಾಗಿ ಮಾರ್ಪಡಿಸಿ ಪ್ರತಿಯೊಬ್ಬನ ಜಠರವನ್ನೂ ಪ್ರವೇಶಿಸಿ, ಅವರು ಭಕ್ಷಿಸಿದ ಆಹಾರ-ಪಾನೀಯಗಳನ್ನು ಪಚಿಸತೊಡಗಿದನು. ||೩೬||

ಇದುವರೆಗೂ ಅಜೀರ್ಣರೋಗದಿಂದ ಹೊಟ್ಟೆಯುಬ್ಬರಿಸಿ ಒದೆದಾಡುತ್ತಿದ್ದವರೆಲ್ಲ ಈಗ ಹಸಿವಿನಿಂದ ಕಂಗಾಲಾಗತೊಡಗಿದರು. ಅಡಿಗೆಯಮನೆ, ಹೋಮಶಾಲೆ ಇವೆಲ್ಲ ಅಗ್ನಿಯ ಸಾನ್ನಿಧ್ಯದಿಂದ ಕೂಡಿದವು. ||೩೭||

ಇದರಿಂದ ಶಕ್ರನು ಮತ್ತಷ್ಟು ಖತಿಗೊಂಡು ವಾಯುವನ್ನು ಸೆಳೆದುಕೊಂಡನು. ಜಗತ್ಪ್ರಾಣನನೇ ಇಲ್ಲದಂತಾಗಲು ಜಗವೆಲ್ಲ ತಲ್ಲಣಿಸಿತು. ಪ್ರಾಣಾಪಾನಾದಿ ಪಂಚ

**ಪಂಚಪ್ರಾಣಮಯೋ ದೇವಸ್ತತಸ್ತಾ೯ ಸಮಜೀವಯತ್ ।**
**ತತ ಇಂದ್ರೋಽಬ್ರವೀತ್ಸೂರ್ಯಂ 'ತಾಪಯೈನಾಂ ಪುರೀಂ ಬಹು' ॥೩೯॥**

**ತತಸ್ಸೂರ್ಯೋಽತಪತ್ಸರ್ವಂ ದ್ವಾದಶಾದಿತ್ಯರೂಪವಾ೯ ।**
**ವಾಪೀ-ಕೂಪ-ತಡಾಗೇಷು ನದ್ಯಾಂ ಜಲಮಶೋಷಯತ್ ॥೪೦॥**

**ಜಜ್ವಾಲ ಪೃಥಿವೀ ಸರ್ವಾ ಪುರಗ್ರಾಮವನಾಕರಾ ।**
**ತತಃ ಶೀಘ್ರಂ ಮಯೂರೇಶೋ ಮೇಘೋ ಭೂತ್ವಾ ವವರ್ಷ ಹ ॥೪೧॥**

**ಶಮಯಾಮಾಸ ತಂ ವಹ್ನಿಂ ಮೃತಾಂಶ್ಚ ಸಮಜೀವಯತ್ ।**
**ತತೋ ಹರ್ಷಯುತಾ ಲೋಕಾಃ 'ಸಾಧು ಸಾಧ್ವಿ'ತ್ಯಪೂಜಯ೯ ॥೪೨॥**

---

ವಾಯುಗಳೇ ಇಲ್ಲವಾದ ಕೂಡಲೆ ಮಯೂರೇಶ್ವರಪುರಿಯು ಲೋಕವ್ಯವಹಾರ ಶೂನ್ಯವಾಗಿ ಹೆಣಗಳ ಖನಿಯಾಯಿತು. ॥೩೮॥

ಇದನ್ನರಿತ ಮಯೂರೇಶ್ವರನು ತಾನು ವಾಯುವಾಗಿ ರೂಪಗೊಂಡು ಪ್ರತಿಯೊಂದು ಪ್ರಾಣಿಯ ಶರೀರಗಳಲ್ಲಿದ್ದ ಪ್ರಾಣಮಯ ಕೋಶವನ್ನು ಪ್ರವೇಶಿಸಿ ಎಲ್ಲರನ್ನೂ ಚೇತನಗೊಳಿಸಿದನು. ಆಗ ಇಂದ್ರನು ಸೂರ್ಯದೇವನನ್ನು ಸಮೀಪಕ್ಕೆ ಬರಮಾಡಿಕೊಂಡು ಈ ಊರಿನವರನ್ನೆಲ್ಲ ದಹಿಸಿ ಬಿಡುವಂತೆ ಅಪ್ಪಣೆ ಮಾಡಿದನು. ॥೩೯॥

ದೇವೇಂದ್ರನ ಆಣತಿಯಂತೆ ಸೂರ್ಯದೇವನು ಮಿತ್ರ, ರವಿ ಮೊದಲಾದ ದ್ವಾದಶ ರೂಪಗಳಿಂದಲೂ ಒಮ್ಮೆಲೆ ಉದಿಸಿ ಎಲ್ಲರನ್ನೂ ದಹಿಸಲಾರಂಭಿಸಿದನು. ತನ್ನ ಮಿತಿ ಮೀರಿದ ಕಾವಿನಿಂದ ಆ ಪ್ರದೇಶದಲ್ಲಿದ್ದ ಭಾವಿ, ಕೊಳ, ಕೆರೆ, ನದಿ ಮೊದಲಾದ ಸ್ಥಳಗಳಲ್ಲಿದ್ದ ಜಲವನ್ನೆಲ್ಲ ಶೋಷಿಸಿಬಿಟ್ಟನು, ॥೪೦॥

ಪುರ, ಗ್ರಾಮ ವನ ಮುಂತಾದ ವಿಭಾಗಗಳಿಂದ ಕೂಡಿದ್ದ ಇಡೀ ಭೂಮಿಯೇ ಧಗ–ಧಗ ಜ್ವಲಿಸಲಾರಂಭಿಸಿತು. ಈ ಅನಾಹುತವನ್ನು ಕಂಡು ಮಯೂರೇಶನ್ನು ಬಹಳ ಕರುಣೆಗೊಂಡನು. ಮತ್ತು ಸ್ವಲ್ಪವೂ ವಿಲಂಬಮಾಡದೇ ತಾನು ಮಹಾಮೇಘದ ಸ್ವರೂಪವನ್ನು ತಳೆದು ಕುಂಭ-ದ್ರೋಣಾಕಾರವಾಗಿ ವೃಷ್ಟಿಯನ್ನು ಸುರಿಸಿದನು. ॥೪೧॥

ಸೂರ್ಯನ ಕಿರಣ ತಾಪದಿಂದ ಉದ್ಭವಿಸಿದ ಅಗ್ನಿಯು ಮಳೆಯಿಂದ ಶಮನ

**ಪ್ರತಿಕೂಲಕೃತಂ ಯದ್ಯತ್ತತ್ತತ್ಸರ್ವಂ ನಿರಾಕೃತಮ್ ।**
**ಜ್ಞಾತ್ವಾ ಶಕ್ರೋ ಯಯೌ ದೇವಂ ಮಯೂರೇಶಂ ನನಾಮ ಚ ॥೪೩॥**

**ಬದ್ಧಾಂಜಲಿಪುಟೋಭೂತ್ವಾ ಸ್ತೋತುಂ ಸರ್ವೇಶ್ವರಂ ವಿಭುಮ್ ।**

**ಶಕ್ರ ಉವಾಚ :—**

**ನ ವೇದಾ ನರ್ಷಯೋ ಜಗ್ಮುರ್ಬ್ರಹ್ಮಾದ್ಯಾಸ್ತೇ ಗತಿಂ ವಿಭೋ ! ॥೪೪॥**

**ಸರ್ವಾಂತರ್ಯಾಮಿಣಸ್ಸರ್ವರೂಪಸ್ಯ ಬ್ರಹ್ಮರೂಪಿಣಃ ।**
**ಬ್ರಹ್ಮಾದೀನಾಂ ವಿಶ್ವಸೃಜಾಂ ಕಾರಣಾನಾಂ ಚ ಕಾರಣಮ್ ॥೪೫॥**

ವಾಯಿತು. ಮುಮೂರ್ಷುಗಳೂ ಮೃತರೂ ಎಲ್ಲರೂ ಅಮೃತವರ್ಷದಂತಹ ಈ ವೃಷ್ಟಿಯಿಂದ ಪುನರುಜ್ಜೀವನಗೊಂಡರು. ಆಗ ಲೋಕವೆಲ್ಲ ಹರ್ಷವನ್ನು ಪಡೆದು 'ಸಾಧು, ಸಾಧು' ಎಂದು ಹೊಗಳುತ್ತ ಮಯೂರೇಶ್ವರನನ್ನು ಪೂಜಿಸಿದರು. ||೩೨||

ಮಹೇಂದ್ರನು ಜಗಜ್ಜೀವನಕ್ಕೆ ಯಾವಾವ ರೀತಿಯಿಂದ ಧಕ್ಕೆಯನ್ನುಂಟುಮಾಡಿದ್ದನೋ ಮಯೂರೇಶ್ವರನು ಅವೆಲ್ಲಕ್ಕೂ ಪ್ರತಿಕ್ರಿಯೆಯನ್ನು ತೋರಿ ಜಗತ್ತನ್ನು ರಕ್ಷಿಸಿದ್ದನು. ಆಗ ಮಾತ್ರ ದೇವನ ಮಹಿಮೆ ಇಂದ್ರನಿಗೆ ಅರಿವಾಯಿತು. ಒಡನೆಯೇ ಗಣಪತಿಯ ಬಳಿಗೆ ಧಾವಿಸಿ ಬಂದು ಪ್ರಣಮಿಸಿದನು. ||೪೩||

ಕೈಗಳನ್ನು ಕಟ್ಟಿಕೊಂಡು ಎದ್ದು ನಿಂತು ಸರ್ವೇಶ್ವರನಾದ ವಿಭುವನ್ನು ಹೀಗೆಂದು ಸ್ತುತಿಸಲಾರಂಭಿಸಿದನು.

ಇಂದ್ರ

ವಿಭೋ ! ನಿನ್ನ ಶಕ್ತಿ-ಸಾಹಸಗಳನ್ನು ವೇದಗಳಾಗಲಿ, ವೇದಜ್ಞರಾದ ಮಹರ್ಷಿಗಳಾಗಲಿ ಬ್ರಹ್ಮಾದಿ ದೇವವೃಂದದವರಾಗಲಿ ಅರಿಯರು. ||೪೪||

ನೀನು ಎಲ್ಲ ಜೀವರಾಶಿಗೂ ಅಂತರ್ನಿಯಾಮಕನಾಗಿರುವೆ. ಬ್ರಹ್ಮಾದಿ ಸ್ತಂಬ ಪರ್ಯಂತವಾಗಿ ತೋರಿ ಬರುವ ಈ ವಿಶ್ವವೆಲ್ಲ ನಿನ್ನ ಸ್ವರೂಪವಾಗಿದೆ. ಜಗನ್ನಿರ್ಮಾಪಕರೆನಿಸಿದ ಬ್ರಹ್ಮಾದಿ ದೇವತೆಗಳಿಗೂ, ಅವರಿಗೂ ಕಾರಣಗಳಾದ ಅಪಂಚೀಕೃತ ಸೂಕ್ಷ್ಮ ಭೂತಗಳಿಗೂ ನೀನು ಕಾರಣನಾದವನು. ||೪೫||

ಅಪರಾಧಾರ್ನ್ ಕ್ಷಮಸ್ವಾದ್ಯ ತ್ವಾಮಹಂ ಶರಣಂಗತಃ ।

ಕ ಉವಾಚ :—

ಮಸ್ತಕಂ ಪಾದಯೋರ್ನ್ಯಸ್ಯ ಪ್ರಾರ್ಥಯಾಮಾಸ ಸಾದರಮ್ ॥೪೬॥
ನಿರ್ವಿಕಲ್ಪಂ ಮನಸ್ತಸ್ಯ ಜ್ಞಾತ್ವಾ ಪ್ರಾಹ ಗುಣೇಶ್ವರಃ ।

ಗುಣೇಶ ಉವಾಚ :—

ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಪದೇ ತಿಷ್ಠ ಸುಖಂ ಸ್ವಕೇ ॥೪೭॥

ಕ ಉವಾಚ :—

ತತಃ ಸಂಪೂಜ್ಯ ತಂ ದೇವಂ ನಮಸ್ಕೃತ್ಯ ಶಚೀಪತಿಃ ।
ಪ್ರದಕ್ಷಿಣೀಕೃತ್ಯ ಯಯೌ ಹೃಷ್ಟಸ್ಸನ್ನಮರಾವತೀಮ್ ॥೪೮॥

ನಾನು ಅಜ್ಞ. ತನ್ಮೂಲಕ ಅಪರಾಧವೆಸಗಿದ್ದೇನೆ. ಈಗ ಅರಿವುಂಟಾಯಿತು. ಶರಣು ಬಂದಿದ್ದೇನೆ. ನನ್ನನ್ನು ಕ್ಷಮಿಸಬೇಕು.

ಬ್ರಹ್ಮಾ :—

ಹೀಗೆಂದು ದೈನ್ಯದಿಂದ ಪದೇ ಪದೇ ಹೇಳುತ್ತ ತನ್ನ ತಲೆಯನ್ನು ದೇವನ ಚರಣ ಕಮಲಗಳ ಮೇಲಿರಿಸಿ ಆದರದಿಂದ ಪ್ರಾರ್ಥಿಸಿದನು. ॥೪೬॥

ಇಂದ್ರನ ಮನಸ್ಸು ಪಶ್ಚಾತ್ತಾಪಪೂತವಾಗಿ ತನ್ನ ಚರಣಗಳಲ್ಲಿ ಸರ್ವಾತ್ಮನಾ ಲೀನವಾದುದನ್ನು ಅರಿಯಲು ಸರ್ವಜ್ಞ; ದೇವನಿಗೆ ತಡ ಹಿಡಿಯಲೇ ಇಲ್ಲ. ಆಗ ದೇವ ರಾಜನನ್ನು ಸಮಾಧಾನಪಡಿಸುತ್ತ ಹೀಗೆಂದು ನುಡಿದನು.

ಗಣೇಶ :—

ಭದ್ರ ! ಏಳು, ಏಳು. ನಿನಗೆ ಶ್ರೇಯಸ್ಸುಂಟಾಗಲಿ, ನಿನ್ನ ಲೋಕದಲ್ಲಿ ನೀನು ನೆಮ್ಮದಿಯಿಂದ ರಾಜ್ಯ-ಭೋಗಗಳನ್ನು ಅನುಭವಿಸು. ॥೪೭॥

ಬ್ರಹ್ಮಾ :—

ಅನಂತರ ಶಚೀರಮಣನು ದೇವನನ್ನು ಭಕ್ತಿಯಿಂದ ಅರ್ಚಿಸಿದನು ಪೂಜಾ ನಂತರ ಬಂದು ನಮಸ್ಕರಿಸಿದನು. ತನ್ನ ಲೋಕಕ್ಕೆ ತೆರಳಲು ಅಪ್ಪಣೆಯನ್ನು ಬೇಡಿ

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಗಣಪತಿ ಮಹಿಮಾ ಪ್ರದರ್ಶನಂ' ನಾಮ ಸಪ್ತಾಧಿಕ ಶತತಮೋಽಧ್ಯಾಯಃ ಸಮಾಪ್ತಃ**

ದನು. ದೇವನು ಅನುಜ್ಞೆಯನ್ನೀಯಲು ಸ್ವರ್ಗಕ್ಕೆ ಹಿಂದಿರುಗಿದನು. ಆಗ ಅವನು ಬಹಳ ಹರ್ಷದಿಂದಿದ್ದನು. ||೪೮||

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ 'ಗಣಪತಿ ಮಹಿಮಾ ಪ್ರದರ್ಶನ' ಎಂಬಲ್ಲಿಗೆ ನೂರಏಳನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

## ಅಥ ಅಷ್ಟೋತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ತತಃ ಪಂಚದಶೇ ವರ್ಷೇ ಮಯೂರೇಶೋಽರ್ಭಕೈಃ ಸಹ |**
**ಗತಃ ಸ್ನಾತುಂ ನದೀಂ ಪುಣ್ಯಾಂ ನಾಮ್ನಾ 'ಬ್ರಹ್ಮಕಮಂಡಲು'ಮ್ ||೧||**

**ಸ್ನಾತ್ವಾ ನಿತ್ಯಂ ಸಮಾಪ್ಯಾಶು ಮಾನಸೈಃ ಷೋಡಶೈಃ ಪೃಥಕ್ |**
**ಉಪಚಾರೈಃ ಪುಪೂಜುಸ್ತೇ ಹೃದಿಸ್ಥಂ ಗಣನಾಯಕಮ್ ||೨||**

**ಕೇಚಿತ್ಪದ್ಮಾಸನಗತಂ ಕೇಚಿದ್ಬರ್ಹಿಗತಂ ಚ ತಮ್ |**
**ದಿವ್ಯಗಂಧೈರ್ದಿವ್ಯವಸ್ತ್ರೈರ್ದಿವ್ಯೈಃ ಪುಷ್ಪೈರಪೂಜಯನ್ ||೩||**

---

|| ಶ್ರೀ ಮಂಗಲಮೂರ್ತಯೇ ನಮಃ ||

### ೧೦೮ ನೆಯ ಅಧ್ಯಾಯ

ಬ್ರಹ್ಮಾ:—

ಗಣಪತಿಗೆ ಹದಿನೈದನೆಯ ವರ್ಷ ಆರಂಭವಾಯಿತು. ಮಯೂರೇಶ್ವರನು ಒಂದು ದಿವಸ ತನ್ನ ಜೊತೆಗಾರರೊಂದಿಗೆ ಸ್ನಾನಾದಿಗಳನ್ನು ಮಾಡಿ ಬರಲು, "ಬ್ರಹ್ಮಕಮಂಡಲು" ಎಂದು ಪ್ರಸಿದ್ಧವಾದ ಪುಣ್ಯತಮ ನದಿಗೆ ತೆರಳಿದನು. ||೧||

ಬಾಲಕರೆಲ್ಲ ಬೇಗ ಬೇಗ ಸ್ನಾನಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ಉಪಚಾರ ಸಾಮಗ್ರಿಗಳನ್ನು ಮನಸಾ ಸಂಕಲ್ಪಿಸಿ ತಮ್ಮ ಹೃತ್ಕುಹರಾಶಯನಾದ ಮಹಾಗಣನಾಯಕನನ್ನು ಪ್ರತಿಯೊಬ್ಬ ಬಾಲಕನೂ ಪೂಜಿಸಿದನು. ||೨||

ಕೆಲವು ಬಾಲಕರು ದೇವನನ್ನು ಧ್ಯಾನಿಸುವಾಗ ಪದ್ಮಾಸನದಲ್ಲಿ ಕುಳಿತಂತೆಯೂ ಮತ್ತೆ ಕೆಲವರು ಮಯೂರವಾಹನನನ್ನಾಗಿಯೂ ಭಾವಿಸಿ ಆ ರೂಪವನ್ನೇ ಭಕ್ತಿಯಿಂದ ಅರ್ಚಿಸಿದರು. ಅವರು ಪೂಜೆಗಾಗಿ ಕಲ್ಪಿಸಿಕೊಂಡ ಗಂಧ, ವಸ್ತ್ರ ಮತ್ತು ಪುಷ್ಪಗಳು ದಿವ್ಯವಾಗಿದ್ದವು. ||೩||

ಗಾರ್ಗ್ಯೋ ಮುನಿರ್ಮಂದಿರೇ ತಂ ಧ್ಯಾತ್ವಾ ರತ್ನಾನ್ಯಿತೋಽರ್ಚಯತ್ ।
ಏತಸ್ಮಿನ್ನಂತರೇಽಕಸ್ಮಾತ್ಪಿದಧೇ ದ್ವಾರಮಸ್ಯ ತತ್ ॥೪॥

ಯಾವದುದ್ಘಾಟಯತ್ಯೇವ ತಾವತ್ತದ್ದೃಢತಾಮಗಾತ್ ।
ತತ್ರ ಆಕ್ರಂದನಂ ಚಕ್ರೇ ಸ ಚ ತೇ ಬಾಲಕಾ ಅಪಿ ॥೫॥

ಬಾಲಕಾ ಊಚುಃ :—
ತ್ವಮೇವ ಜನನೀ ತಾತಃ ಕಥಮಭ್ಯಂತರೇ ಸ್ಥಿತಃ ।
ದತ್ವಾ ಕವಾಟಂ ದೇವೇಶ ! ನೋಽಪರಾಧಾನ್ ಕ್ಷಮಸ್ವ ಚ ॥೬॥

ಕ ಉವಾಚ :—
ಏತಸ್ಮಿನ್ನಂತರೇ ದೈತ್ಯೋ ಮಹಾಬಲ–ಪರಾಕ್ರಮಃ ।
ಯಸ್ಯ ಶಬ್ದೇನ ಮಹತಾ ಕಂಪತೇ ಭುವನತ್ರಯಮ್ ॥೭॥

---

ಮುನಿವರ್ಯನಾದ ಗರ್ಗಮುನಿಯು ದೇವಮಂದಿರದಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದನು. ಮಹಾತ್ಮನಾದ ಮುನಿಯು ಸ್ವಯಂ ಸಿದ್ಧಪುರುಷನಾಗಿದ್ದುದರಿಂದ ಕಲ್ಪಿಸಿಕೊಂಡ ವಸ್ತುಗಳೆಲ್ಲವೂ ರೂಪಗೊಳ್ಳುತ್ತ ಪೂಜೋಪಯೋಗಿಯಾದವು. ಇಷ್ಟರಲ್ಲಿ ಒಂದು ಚಮತ್ಕಾರ ನಡೆಯಿತು. ಗರ್ಗನು ಧ್ಯಾನಿಸುತ್ತ ಕುಳಿತಿದ್ದ ಮಂದಿರದ ಬಾಗಿಲು ಇದ್ದಕ್ಕಿದ್ದಂತೆಯೇ ಮುಚ್ಚಿಕೊಂಡಿತು ॥೪॥

ಇದರಿಂದ ಚಕಿತನಾದ ಮುನಿಯು ಬಾಗಿಲನ್ನು ತೆರೆಯಲು ಪ್ರಯತ್ನಿಸಿದಂತೆಲ್ಲ ಅದು ಮತ್ತಷ್ಟು ಭದ್ರವಾಗತೊಡಗಿತು. ಆಗ ಒಳಗಿದ್ದ ಋಷಿ ಮತ್ತು ಬಾಲಕರೆಲ್ಲ ಭಯ ವಿಹ್ವಲರಾಗಿ ಆಕ್ರಂದಿಸಿದರು, ಮತ್ತು ದೇವನನ್ನು ಹೀಗೆಂದು ಪ್ರಾರ್ಥಿಸಿದರು. ॥೫॥

ಬಾಲಕರು :—

ದೇವ, ಗಣಾಧಿಪ! ನೀನೇ ನಮಗೆಲ್ಲ ತಾಯಿ-ತಂದೆಯಾಗಿರುವೆ. ಹೀಗಿರುವಾಗ ನಮ್ಮನ್ನು ಇಲ್ಲಿಯೇ ಬಂಧಿಸಿ ನೀನು ಮಾತ್ರ ಹೊರಕ್ಕೆ ಉಳಿದೆಯಲ್ಲ? ಇದಾವ ನ್ಯಾಯ? ದೇವೇಶ! ದಯೆ ಇಟ್ಟು ಬಾಗಿಲನ್ನು ತೆರೆ. ನಮ್ಮಿಂದ ಏನಾದರೂ ಅಪರಾಧ ಘಟಿಸಿದ್ದರೆ ನಮ್ಮನ್ನು ಕ್ಷಮಿಸು. ॥೬॥

ಬ್ರಹ್ಮ :—

ಇಷ್ಟರಲ್ಲಿ ಮಹಾ ಬಲ-ಪರಾಕ್ರಮವುಳ್ಳ ಒಬ್ಬ ದೈತ್ಯನು ಅಲ್ಲಿಗೆ ಬಂದನು. ಭಯಂಕರವಾದ ಅವನ ಧ್ವನಿಯನ್ನುಕೇಳಿದರೆ ತ್ರಿ-ಭುವನವೂ ನಡುಗುತ್ತಲಿದ್ದಿತು.॥೭॥

**ಸಟಾಭಿನ್ನಘನೋ ದುಷ್ಟೋ ವ್ಯಾಘ್ರರೂಪೀ ಸಮಭ್ಯಗಾತ್ ।**
**ವ್ಯಾದಾಯ ವದನಂ ಘೋರಂ ಗ್ರಸನ್ನಿವ ಜಗತ್ರಯಮ್ ॥೮॥**

**ದೃಷ್ಟ್ವಾ ತಂ ದುದ್ರುವುರ್ಬಾಲಾ ಕ್ರಂದಂತಸ್ತೇ ದಿಶೋ ದಶ ।**
**ಸ ತು ದ್ವಾರಂ ವಿನಿರ್ಭಿದ್ಯ ಮಯೂರೇಶಂ ತಮಾಯಯೌ ॥೯॥**

**ಶಾರ್ದೂಲಸದೃಶಂ ರೂಪಂ ಕೃತ್ವಾಯಾತ್ಸೋऽಪಿ ತಂ ಕ್ಷಣಾತ್ ।**
**ಪಪಾಲ ಸಹಸಾ ವ್ಯಾಘ್ರಃ ಪೃಷ್ಠೇ ಲಗ್ನೋ ಯಯೌ ಚ ಸಃ ॥೧೦॥**

**ಭ್ರಮನ್ ಸ ತು ವನಂ ಯಾತೋ ನಿಕುಂಜೇ ಲೀಯ ತಸ್ಥಿವಾನ್ ।**
**ದೇವೋ ವೃಕ್ಷಂ ಸಮಾರುಹ್ಯ ಕುಂಜಮಧ್ಯೇ ಪಪಾತ ಹ ॥೧೧॥**

---

ಅವನು ತನ್ನ ಮುಂಜುಟ್ಟಿನಿಂದ ಮೇಘಮಂಡಲವನ್ನು ಚಾಲನಮಾಡುವಷ್ಟು ದೀರ್ಘಾಕೃತಿಯುಳ್ಳವನು. ಆ ದುಷ್ಟನು ಮಂದಿರದ ಬಳಿ ಬರುವಾಗ ಹೆಬ್ಬುಹುಲಿಯ ರೂಪದಿಂದ ಬಂದನು. ತೆರೆದ ಅವನ ಘೋರವಾದ ಬಾಯಿಯನ್ನು ನೋಡಿದರೆ ಒಮ್ಮೆಲೇ ಮೂರು ಲೋಕಗಳನ್ನೂ ನುಂಗಿಬಿಡುವನೋ ಎಂಬಂತೆ ತೋರುತ್ತಲಿದ್ದಿತು. ॥೮॥

ಈ ಹೆಬ್ಬುಹುಲಿಯನ್ನು ಕಂಡಕೂಡಲೇ ಹುಡುಗರೆಲ್ಲ ಹೆದರಿ ಘಟ್ಟಿಯಾಗಿ ಅರಚುತ್ತ ಹತ್ತು ದಿಕ್ಕುಗಳಿಗೂ ಓಡಿಹೋದರು. ಆಗ ವ್ಯಾಘ್ರರೂಪೀ ರಕ್ಕಸನು ಬಾಗಿಲನ್ನು ಒಡೆದುಕೊಂಡು ಮಯೂರೇಶನ ಮೇಲೆ ನುಗ್ಗಿಬಂದನು. ॥೯॥

ಸಕಲ ಸಿದ್ಧಿಗಳಿಗೂ ಒಡೆಯನಾದ ದೇವನಿಗೆ ರಾಕ್ಷಸನ ಕೃತ್ರಿಮ ರೂಪಕ್ಕೆ ಪ್ರತಿರೂಪವನ್ನು ಮಾಡುವುದು ಕಷ್ಟವೆನಿಸೀತೇ? ಒಡನೆಯೇ ತಾನು ಶಾರ್ದೂಲ (ಹುಲಿಜಾತಿಯ, ಹುಲಿಗಿಂತಲೂ ಬಹಳ ಪರಾಕ್ರಮಿಯಾದ ಹಿಂಸ್ರಪ್ರಾಣಿ. ಇದನ್ನು 'ಸಿಂಹ' ಎಂದೂ ಅಥವಾ ಅದಕ್ಕಿಂತಲೂ ಪ್ರಬಲವಾದ 'ಶರಭ'ಎಂದೂ ಲಿಂಗ ಪುರಾಣದಲ್ಲಿ ಹೇಳಿದೆ. 'The fabulous animal 'Sharabha') ದಂತೆ ರೂಪವನ್ನು ತಳೆದು ನಿಂತನು. ಇದನ್ನು ನೋಡಿ ಎದೆ ಒಡೆದ ವ್ಯಾಘ್ರವು ಅಲ್ಲಿ ನಿಲ್ಲಲಾರದೇ ಓಡಿತು. ಶಾರ್ದೂಲರೂಪೀ ದೇವನೂ ಅದನ್ನು ಬೆನ್ನಟ್ಟಿ ಓಡಿದನು. ॥೧೦॥

ಹುಲಿಯು ಸುತ್ತಿ ಸುತ್ತಿ ಸಾಕಾಗಿ ಕೊನೆಗೊಂದು ದಟ್ಟವಾದ ಅರಣ್ಯವನ್ನು ಪ್ರವೇಶಿಸಿ ಅಲ್ಲಿದ್ದ ಒಂದು ಪೊದೆಯಲ್ಲಿ ಅವಿತುಕೊಂಡು ಕುಳಿತಿತು. ಬೆನ್ನಟ್ಟಿ

ಉಭಾಭ್ಯಾಂ ವದನಂ ತಸ್ಯ ಕರಾಭ್ಯಾಂ ಜಗೃಹೇ ದೃಢಮ್ ।
ಅನ್ಯಾಭ್ಯಾಂ ಬಹಿರಾನೀಯ ತತಃ ಪರಶುನಾಚ್ಛಿನತ್ ॥೧೨॥

ನಾಸಿಕಾಂ ಶ್ರವಣೇ ಪಾದೌ ಪುಚ್ಛಮುಗ್ರಭವಾವುಭೌ ।
'ನ ಮುಖಂ ದರ್ಶಯೇ'ತ್ಯುಕ್ತ್ವಾ ವಿಸಸರ್ಜ ಗುಣೇಶ್ವರಃ ॥೧೩॥

ನಿಜಂ ರೂಪಂ ಸಮಾಸ್ಥಾಯ ತಥೈವ ವಿಕೃತೋಽಭವತ್ ।
'ಏವಮೇವ ಕರಿಷ್ಯಾಮಿ ತ್ವದ್ದೇಹಮಿ'ತ್ಯುವಾಚ ತಮ್ ॥೧೪॥

ಯಯೌ ನಿಜಾಲಯಂ ದೈತ್ಯೋ ದೇವಃ ಸ್ವಂ ಧಾಮ ಚಾಯಯೌ ।
ತತೋ ಮುನಿಸುತಾ ಭ್ರೇಮುಃ ಕ್ರಂದಂತಃ 'ಕ್ವ ಮಯೂರರಾಟ್?'॥೧೫॥

---

ಬಂದ ಶಾರ್ದೂಲಕ್ಕೆ ಇದರ ಸುಳಿವು ಗೊತ್ತಾದುದರಿಂದ ಪೊದೆಯ ಪಕ್ಕದಲ್ಲಿದ್ದ ಒಂದು ವೃಕ್ಷವನ್ನೇರಿ ಗುರಿನೋಡಿ ಆ ಪೊದೆಯ ನಡುಭಾಗಕ್ಕೆ ಧುಮಿಕಿತು. ॥೧೧॥

ತನ್ನ ಮುಂದಿನ ಎರಡು ಕೈಗಳಿಂದಲೂ ಹುಲಿಯ ಮೂತಿಯನ್ನು ಬಲವಾಗಿ ಹಿಡಿದುಕೊಂಡನು. ಮತ್ತೆರಡು ಕೈಗಳಿಂದ ಹುಲಿಯನ್ನು ದರ ದರ ಎಳೆದು ಪೊದೆಯಿಂದ ಈಚೆಗೆ ತಂದು ತನ್ನ ಪರಶುವನ್ನು ಅದರ ಮೇಲೆ ಪ್ರಯೋಗಿಸಿದನು. ॥೧೨॥

ಹುಲಿಯಾಗಿ ಬಂದಿದ್ದ ರಾಕ್ಷಸನ ಮೂಗು ಕಿವಿಗಳು, ಮುಂದಿನ ಎರಡು ಕಾಲುಗಳು, ಬಾಲ ಇವನ್ನು ಕತ್ತರಿಸಿ ಚೆಲ್ಲಿ 'ಇನ್ನು ಮೇಲೆ ಮತ್ತಾರಿಗೂ ಮುಖವನ್ನು ತೋರಿಸಬೇಡ' ಎಂದು ಗದ್ದರಿಸಿ ಗುಣೇಶ್ವರನು ಅದನ್ನು ಅರೆಜೀವಿಯನ್ನಾಗಿ ಮಾಡಿ ಬಿಟ್ಟು ಬಿಟ್ಟನು. ॥೧೩॥

ಆಗ ದೈತ್ಯನು ತನ್ನ ರೂಪವನ್ನು ತಳೆದು ನಿಂತನು. ಹುಲಿಯಾಗಿದ್ದಾಗ ಉಂಟಾಗಿದ್ದ ವಿಕಾರಗಳು ಈ ದೇಹದಲ್ಲೂ ಕಂಡು ಬಂದವು. ಸಹಿಸಲಾರದ ಕೋಪ ಬಂದಿತು. ಆದರೆ ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿರಲಿಲ್ಲ. ಆದರೂ ಸೆಡೆವು ಬಾಧಿಸಿತಾದ್ದರಿಂದ 'ಇರಲಿ, ಎಂದಾದರೊಮ್ಮೆ ನಿನ್ನ ದೇಹಕ್ಕೂ ಇದೇ ವಿಕಾರವನ್ನುಂಟುಮಾಡುವೆನು' ಎಂದು ಗೊಣಗುತ್ತ ॥೧೪॥

ತನ್ನ ನಿವಾಸಕ್ಕೆ ಹೊರಟು ಹೋದನು. ದೈತ್ಯನು ತೊಲಗಿದ ಬಳಿಕ ದೇವನು ಸ್ವಧಾಮಕ್ಕೆ ತಿರುಗಿ ಬಂದನು. ಇದಾವುದನ್ನೂ ಅರಿಯದ ಬಾಲಕರು 'ಮಯೂರ ರಾಜನು ಎಲ್ಲಿಗೆ ಹೋದನು?' ಎಂದು ಅವನನ್ನು ಹುಡುಕುತ್ತ ಕಾಡು-ಮೇಳ

ಅತಿಶ್ರಾಂತಾ ದ್ರುಮತಲೇ ಸುಚ್ಛಾಯೇ ಪ್ರಾಸ್ವಪಂಸ್ತದಾ ।
'ಅನೇನ ಯಾಸ್ಯತಿ ಪಥಾ ದ್ರಕ್ಷ್ಯಾಮಸ್ತತ್ಪದಾಂಬುಜಮ್' ॥೧೬॥

ಪಾದೌ ದಕ್ಷಿಣತಸ್ತೇಷಾಂ ದೃಷ್ಟ್ವಾ ಚುಕ್ರೋಧ ಭಾನುಜಃ ।
ಅತ್ಯಾರಕ್ತದೃಶೀ ರೋಷಾದ್ಬ್ರಹ್ಮಾಂಡಗ್ರಾಸಸಾಹಸಃ ॥೧೭॥

ಬದ್ಧ್ವಾ ತಾನ್ ಸ್ವಸ್ಥಲಂ ಯಾತೋ ಮಯೂರೇಶಸ್ತತೋऽಗಮತ್ ।
ನಾಪಶ್ಯತ್ತತ್ರ ತಾನ್ ಬಾಲಾನ್ ವಿಸ್ಮಯಂ ಪರಮಂ ಯಯೌ ॥೧೮॥

---

ಗಳನ್ನೆಲ್ಲ ಅಲೆದಲೆದು ಬಂದರು. ದೇವನು ಸಿಕ್ಕಲಿಲ್ಲ. ಆಗ ಅವರಿಗೆ ಮತ್ತಷ್ಟು ಆಯಾಸ-ವ್ಯಥೆಗಳು ಉಂಟಾದವು. ॥೧೫॥

ಶ್ರಮವನ್ನು ತಡೆದುಕೊಳ್ಳಲಾರದೇ ಒಂದು ಮರದ ಬುಡಕ್ಕೆ ಬಂದು ನೋಡಿದರು. ನೆರಳು ನಿಬಿಡವಾಗಿ ಹರಡಿದ್ದಿತು. ಯಾವ ಯೋಚನೆಯನ್ನೂ ಮಾಡದೆ ಅಲ್ಲಿಗೆ ಬಂದು ಸುಖವಾಗಿ ಮಲಗಿ ಬಿಟ್ಟರು. 'ಹೇಗೂ ವಿನಾಯಕನು ಈ ಮಾರ್ಗವನ್ನು ಅನುಸರಿಸಿಯೇ ಆಶ್ರಮಕ್ಕೆ ತೆರಳುವನು. ಆಗ ಅವನ ಪಾದ ಕಮಲಗಳನ್ನು ಕಾಣಬಹುದು' ಎಂದು ಸಂಕಲ್ಪಿಸಿದರು. ॥೧೬॥

ಮೊದಲೇ ಹುಡುಗರು, ಮೇಲಾಗಿ ಆಯಾಸಗೊಂಡಿದ್ದಾರೆ, ಎಂದಮೇಲೆ ಮಲಗಿ ನಿದ್ರಿಸುವ ವಿಷಯದಲ್ಲಿ ನೀತಿ–ನಿಯಮಗಳನ್ನನುಸರಿಸಿಯಾರೇ? ದಕ್ಷಿಣ ದಿಕ್ಕಿಗೆ ಕಾಲುಗಳನ್ನು ಹಾಕಿಕೊಂಡು ಉತ್ತರ ದಿಕ್ಕಿಗೆ ತಲೆಗಳನ್ನಿಕ್ಕಿ ಸುಖವಾಗಿ ನಿದ್ರಿಸಿದರು. ರವಿಜ; ಪ್ರೇತರಾಜನು ಇದನ್ನು ಕಂಡು ಬಾಲಕರ ವಿಷಯದಲ್ಲಿ ಬಹಳ ಕೋಪಗೊಂಡು ಅವರೆಲ್ಲರನ್ನೂ ತನ್ನ ಕ್ರೂರ ದೃಷ್ಟಿಯಿಂದ ನೋಡಿದನು. ಈ ನೋಟವು ಒಮ್ಮೆಲೆ ಭುವನತ್ರಯವನ್ನೂ ದಹಿಸುವಂತಹದು. ॥೧೭॥

ಸ್ವಲ್ಪವೂ ಹಿಂದೆ ಮುಂದೆ ನೋಡದೆ ಅವರನ್ನು ಪಾಶದಿಂದ ಕಟ್ಟಿ ತನ್ನ ನಗರಕ್ಕೆ (ವೈವಸ್ವತ ಪುರಿಗೆ) ತೆಗೆದುಕೊಂಡು ಹೋದನು. ಯಮನು ತೆರಳಿದ ಸ್ವಲ್ಪ

ಚಿಂತಾಂ ಪರಮಿಕಾಂ ಪ್ರಾಪ್ತೋ ವಿನಾ ತೈಃ ಸ ಮಯೂರರಾಟ್ ।
ನ ಸುಖಂ ಕ್ವಾಪಿ ಸಂಪ್ರಾಯಾತ್ತತೋ ಮುನಿಗಣಾ ಯಯುಃ ॥೧೯॥

ಮುನಯ ಊಚುಃ :—

ಕ್ವಾಸ್ಮಾಕಂ ಬಾಲಕಾ ದೇವ ! ಪ್ರಾತರ್ನೀತಾಸ್ತ್ವಯಾಖಿಲಾಃ ।
ವಿನಾ ತೈರ್ನೋ ಗಮಿಷ್ಯಂತಿ ಪ್ರಾಣಾಸ್ತ್ವಯ್ಯಾಗತೇಽಧುನಾ ॥೨೦॥

ಕ ಉವಾಚ :—

ನ ಕಿಂಚಿದೂಚೇ ತಾನ್ ದೇವೋ ಮುಂಚನ್ನಶ್ರು ಮುಹುರ್ಮುಹುಃ ।
ವಿಚಾರ್ಯ ಭಾಸ್ಕರೀಂ ಯಾತಃ ಪುರೀಂ ದೂತೈರ್ನಿವೇದಿತಃ ॥೨೧॥

---

ವೇಳೆಗೆಲ್ಲ ಮಯೂರೇಶನು ಆ ಮಾರ್ಗವಾಗಿ ಹಿಂದಿರುಗಿ ಬಂದು ಬಾಲಕರನ್ನು ಹುಡುಕಿದನು. ಅವರು ಎಲ್ಲಿಲ್ಲೂ ಕಾಣದಿರಲು ಬಹಳ ಆಶ್ಚರ್ಯವನ್ನು ಹೊಂದಿದನು. ॥೧೮॥

"ಬಾಲಕರ ಗತಿ ಏನಾಗಿರಬಹುದು?" ಎಂಬ ಬಗೆ ಹರಿಯಲಾರದ ಚಿಂತೆಯು ದೇವನನ್ನು ಆವರಿಸಿತು. ಮಯೂರೇಶ್ವರನಿಗೆ ಬಾಲಕರಿಲ್ಲದೆ ಕಾಲಕಳೆಯುವುದು ಕಷ್ಟವಾಯಿತು. ಎಲ್ಲೆಲ್ಲಿ ಹೋಗಿ ಕುಳಿತರೂ ನೆಮ್ಮದಿ ಎನಿಸಲಿಲ್ಲ. ದೇವನು ಹೀಗೆ ಪರಿತಪಿಸುತ್ತಿರುವಷ್ಟರಲ್ಲಿ ಅಲ್ಲಿಗೆ ಮುನಿಗಳು ಬಂದರು ಮತ್ತು ತಮ್ಮ ಮಕ್ಕಳ ವಿಷಯವಾಗಿ ದೇವನನ್ನು ಕುರಿತು ಹೀಗೆಂದು ಪ್ರಶ್ನಿಸಿದರು. ॥೧೯॥

ಮುನಿಗಳು :—

ದೇವ! ಬೆಳಿಗ್ಗೆ ಎದ್ದ ಕೂಡಲೇ ಸ್ನಾನಕ್ಕೆಂದು ನಮ್ಮ ಹುಡುಗರನ್ನು ಕರೆದು ಕೊಂಡುಹೋದೆಯಲ್ಲವೇ? ಇದುವರೆಗೂ ಅವರ ಸುಳಿವಿಲ್ಲ. ಅವರಾರೂ ಇಲ್ಲದೆ ನೀನೊಬ್ಬನೇ ಹಿಂದಿರುಗುತ್ತಿರುವುದನ್ನು ನೋಡಿ ನಮಗೆ ಬಹಳ ಗಾಬರಿಯಾಗಿದೆ. ಅವರನ್ನು ನಾವು ಕಾಣದಿದ್ದರೆ ನಮ್ಮ ಪ್ರಾಣಗಳೇ ನಿಲ್ಲಲಾರವು. ॥೨೦॥

ಬ್ರಹ್ಮ:—

ಮುನಿಗಳ ಮಾತಿಗೆ ಉತ್ತರವಾಗಿ ದೇವನು ಯಾವ ಮಾತನ್ನೂ ಆಡಲಿಲ್ಲ. ಬಾಲಕರನ್ನು ಸ್ಮರಿಸಿಕೊಂಡಂತೆಲ್ಲ ಬಹಳ ದುಃಖವೆನಿಸಿ ದೇವನು ಪದೇ ಪದೇ ಕಣ್ಣೀ

**ದೂತಾ ಊಚುಃ :—**

**ಕೋಽಪಿ ಯಾತೋ ಯೋದ್ಧುಕಾಮೋ ಲೋಕತ್ರಯವಿನಾಶಕೃತ್ ।**
**ಉಗ್ರಾರಾವೋ ಮಹಾಬಾಹುರ್ವಾರ್ಯಮಾಣೋ ಬಲಾದ್ಯಮ ! ॥೨೨॥**

**ಯಮ ಉವಾಚ :—**

**ಬ್ರಹ್ಮಾಂಡಂ ಚೂರ್ಣತಾಂ ಯಾತಿ ದಂಡಾಘಾತೇನ ಯಸ್ಯ ಮೇ ।**
**ತಸ್ಯ ಮೇ ಪುರತೋ ಯುದ್ಧಂ ಕಥಂ ಬಾಲ ! ವಿಧಾಸ್ಯಸಿ ? ॥೨೩॥**

---

ರನ್ನು ಸುರಿಸಿದನು. ಏನಾಗಿರಬಹುದೆಂದು ಮನದಲ್ಲೇ ವಿಚಾರಮಾಡಿ ನೋಡಿದನು. ಸಂಗತಿ ಹೊಳೆದುಹೋಯಿತು. ಒಡನೆಯೇ ಸಂಯಮನೀಪುರಕ್ಕೆ ಹಾರಿಹೋದನು. ಮತ್ತು ಅಲ್ಲಿ ಕಂಡ ದ್ವಾರಪಾಲಕರನ್ನು ಕರೆದು ತಾನು ಬಂದಿರುವ ಸಂಗತಿಯನ್ನು ಕೃತಾಂತನಿಗೆ ತಿಳಿಸುವಂತೆ ಹೇಳಿದನು. ॥೨೧॥

ದೂತರು :—

ದೇವ, ಯಮರಾಜ ! ಯಾರೋ, ನಿಮ್ಮೊಡನೆ ಯುದ್ಧ ಮಾಡಲು ಬಯಸಿ ಸನ್ನದ್ಧನಾಗಿ ಬಂದಿದ್ದಾನೆ. ಅವನನ್ನು ನೋಡಿದರೆ ಮೂರು ಲೋಕಗಳನ್ನೂ ವಿನಾಶಗೊಳಿಸಲು ಸಮರ್ಥನಾದವನಂತೆ ತೋರುವನು. ಅವನ ಧ್ವನಿ ಬಹಳ ಗಡುಸು. ಅವನು ನೀಳವಾದ ಬಾಹುದಂಡ ಉಳ್ಳವನು ಎಷ್ಟು ಬಲಾತ್ಕಾರದಿಂದ ಅವನನ್ನು ತಡೆದರೂ ಅವನು ಅಟೋಪಿಸಲೊಲ್ಲನು. ॥೨೨॥

ಯಮ :—

ಯಾಮ್ಯವಾದ ನನ್ನ ಕಾಲದಂಡವನ್ನೊಮ್ಮೆ ನೆಲಕ್ಕೆ ಕುಟ್ಟಿದೆನೆಂದರೆ ಇಡೀ ಬ್ರಹ್ಮಾಂಡವೇ ಪುಡಿ ಪುಡಿಯಾಗಿ ಹೋಗುತ್ತದೆ ಇಂತಹ ದಂಡವನ್ನು ಹಿಡಿದವನು ನಾನು, ನನ್ನೆದುರು ನಿಂತು ಆ ಬಾಲಕ ಯುದ್ಧವನ್ನು ಮಾಡೋಣವೆಂದರೇನು ? ಬಾಯಿಮಾತೇ ಇದು ? ಅಲ್ಲವೇನೋ ಹುಡುಗ ! ॥೨೩॥

ದೇವ ಉವಾಚ :—

ತ್ವಮಾತ್ಮಾನಂ ವರ್ಣಯಸೇ ರಂಕವದ್ಭಾಸಿ ಮೇ ಯಮ ! ।
ಮಮ ವಕ್ರಭ್ರುವಾ ಸರ್ವಂ ಬ್ರಹ್ಮಾಂಡಂ ಚ ವಿನಶ್ಯತಿ ॥೨೪॥

ಕ ಉವಾಚ :—

ಏವಮುಕ್ತ್ವಾ ಮಯೂರೇಶೋ ಯಮಸ್ಕಂಧಂ ರುರೋಹ ಸಃ ।
ಪಾತಯಾಮಾಸ ಮಹಿಷಾತ್ಪಪಾತೋಪರಿ ತತ್ ಕ್ಷಣಾತ್ ॥೨೫॥

ಪರಾಕ್ರಮಂ ತಸ್ಯ ಬುದ್ಧ್ವಾ ಬದ್ಧಾಂಜಲಿಪುಟೋ ಯಮಃ ।
ತುಷ್ಟಾವ ಪರಯಾ ಭಕ್ತ್ಯಾ ಮಯೂರೇಶಂ ಸುರೇಶ್ವರಮ್ ॥೨೬॥

ದೇವ :—

ಯಮ ! ನೀನು ಆತ್ಮಶ್ಲಾಘಿ. ನೀನೆಲ್ಲೋ ಕಟ್ಟು ಬಣ್ಣದವನಿರಬೇಕು. ಹಾಗೆಂದೇ ನನಗೆ ತೋರುತ್ತದೆ. ನನ್ನ ಶಕ್ತಿ ಎಷ್ಟಿದೆ ಎಂಬುದನ್ನು ಹೇಳುತ್ತೇನೆ ಕೇಳು. ನಾನೊಮ್ಮೆ ಭ್ರೂಲತೆಯನ್ನು ಕೊಂಕಿಸಿದೆನೆಂದರೆ ಬ್ರಹ್ಮಾಂಡವೆಲ್ಲ ನಶಿಸಿ ಹೋಗುವುದು. ॥೨೪॥

ಬ್ರಹ್ಮಾ:—

ಹೀಗೆ ಹೇಳಿದವನೇ ಒಮ್ಮೆಲೆ ಮೇಲೆ ನೆಗೆದು ಯಮನ ಹೆಗಲ ಮೇಲೆ ಹತ್ತಿ ಕುಳಿತನು. ಮತ್ತು ಅವನನ್ನು ಅತ್ತಿತ್ತ ಜುಂಗಿಸುತ್ತ ಅಂತೂ ಅವನನ್ನು ಕೋಣದ ಮೇಲಿನಿಂದ ನೆಲಕ್ಕೆ ಕೆಡಹಿದನು. ಯಮನು ಕೆಳಕ್ಕೆ ಬಿದ್ದಕೂಡಲೇ ತಾನೂ ಅವನ ಮೇಲೆ ಹಾರಿ ಕುಳಿತನು. ॥೨೫॥

ದೇವನ ಪರಾಕ್ರಮವನ್ನರಿತು ಯಮನು ಅವನಿಗೆ ಶರಣು ಬರಲು ನಿಶ್ಚಯಿಸಿ ಕೈಗಳನ್ನು ಜೋಡಿಸಿದನು. ಮತ್ತು ಸುರವರೇಣ್ಯ, ಮಯೂರೇಶನನ್ನು ಭಕ್ತ್ಯತಿಶಯ ದಿಂದ ಹೀಗೆಂದು ಸ್ತುತಿಸಿದನು. ॥೨೬॥

**ಯಮ ಉವಾಚ :—**

**ನ ತೇ ರೂಪಂ ವಿದುರ್ದೇವಾ ಬ್ರಹ್ಮಾದ್ಯಾಸ್ಸನಕಾದಯಃ ।**
**'ನೇತಿ ನೇತೀ'ತಿ ವೇದಾಸ್ತ್ವಾಂ ವದಂತಿ ಪರಮೇಶ್ವರಮ್ ॥೨೭॥**

**ಸ್ರಷ್ಟಾರಂ ಪಾಲಕಂ ಸೃಷ್ಟೇಃ ಸಂಹರ್ತಾರಂ ನಿಜೇಚ್ಛಯಾ ।**
**ದೈತ್ಯಾನಾಂ ಸರ್ವದುಷ್ಟಾನಾಂ ನಾಶಕಂ ಸರ್ವರೂಪಿಣಮ್. ॥೨೮॥**

**ಅಕಸ್ಮಾದಪರಾಧಂ ನಃ ಕೃತಂ ಕ್ಷಂತುಂ ತ್ವಮರ್ಹಸಿ ।**

**ಕ ಉವಾಚ :—**

**ಏವಮುಕ್ತ್ವಾ ಪುಪೂಜಾಸೌ ವಸ್ತ್ರೈರತ್ನೈಃ ಫಲೈರಮುಮ್ ॥೨೯॥**

---

ಯಮ :—

ಭಗವನ್! ನಿನ್ನ ಮಹಿಮೆಯನ್ನು ಬ್ರಹ್ಮಾದಿಗಳಾಗಲಿ, ಅಥವಾ ಸನಕಾದಿ ಮಹರ್ಷಿಗಳಾಗಲಿ ಯಾರೂ ಅರಿಯರು. ಸಕಲ ವಿಧ ಜ್ಞಾನಕ್ಕೂ ಮೂಲಾಧಾರವೆನಿಸಿದ ವೇದಗಳಾದರೂ ನಮ್ಮ ತಿಳಿವಿಗಾಗಿ ನಿನ್ನ (ಆತ್ಮ) ಸ್ವರೂಪವನ್ನು ಸ್ಪಷ್ಟವಾಗಿ ತಿಳಿಸಬಹುದಾಗಿದ್ದಿತು. ಹೀಗೆ ಮಾಡುವುದಕ್ಕೆ ಬದಲಾಗಿ " ನೇತಿ ನೇತಿ " ಎಂಬುದಾಗಿ ಪರಮೇಶ್ವರನಾದ ನಿನ್ನನ್ನು ನಿಷೇಧಮುಖೇನ ಹೊಗಳುತ್ತಿವೆ. ॥೨೭॥

ನೀನು ಇಚ್ಛಾಮಾತ್ರದಿಂದಲೇ ಸೃಷ್ಟಿ, ಸ್ಥಿತಿ ಮತ್ತು ಲಯಗಳನ್ನು ಮಾಡುವೆ. ಸ್ವಯಂ ನಿರಾಕಾರಸ್ವರೂಪನಾದ ನೀನು ದುಷ್ಟರಾದ ದೈತ್ಯರನ್ನು ನಿಗ್ರಹಿಸುವುದಕ್ಕಾಗಿ ಯಾವ ಬಗೆಯ ರೂಪವನ್ನು ಬೇಕಾದರೂ ಧರಿಸತಕ್ಕವನಾಗಿರುವೆ. ॥೨೮॥

ನನ್ನಿಂದ ಅಕಸ್ಮಾತ್ತಾಗಿ ಘಟಿಸಿದ ಈ ಮಹದಪರಾಧವನ್ನು ದೇವ! ದಯೆಇಟ್ಟು ಮನ್ನಿಸು.

ಬ್ರಹ್ಮಾ :—

ಹೀಗೆಂದು ಕ್ಷಮೆಯನ್ನು ಯಾಚಿಸಿ ವಿವಿಧ ವಸ್ತ್ರಾಲಂಕರಣಗಳು, ಮತ್ತು ಫಲ-ಪುಷ್ಪಗಳಿಂದ ದೇವನನ್ನು ಪೂಜಿಸಿದನು. ॥೨೯॥

**ಬಾಲಾನಾನೀಯ ತದ್ಧಸ್ತೇ ನಿವೇದ್ಯ ಪುರತಃ ಸ್ಥಿತಃ ।**
**ಆಲಿಲಿಂಗುರ್ಮುದಾ ಸರ್ವೇ ಪರಸ್ಪರಮಥಾಬ್ರುವನ್ ॥೩೦॥**

**ಬಾಲಾ ಊಚುಃ :—**

**ಶ್ರಾಂತಾಸ್ತ್ವದ್ದರ್ಶನಾರ್ಥಾಯ ಬದ್ಧ್ವಾನೀತಾ ಯಮೇನ ಹ ।**
**ತ್ವದ್ದರ್ಶನಾದ್ಬಂಧಮುಕ್ತಾ ಯಾಸ್ಯಾಮೋ ನಿಜಮಂದಿರಮ್ ॥೩೧॥**

**ಕ ಉವಾಚ :—**

**ತತಸ್ತೇ ಸ್ವಾಶ್ರಮಂ ಪ್ರಾಪ್ತಾ ಮಯೂರೇಶಪುರಸ್ಕೃತಾಃ ।**
**ಮಯೂರೇಶಪುರಂ ಯಾತಾ ನಾನಾವಾದಿತ್ರಸಂಕುಲಮ್ ॥೩೨॥**

---

ಅನಂತರ ಒಳಕ್ಕೆ ಹೋಗಿ ಈ ಮೊದಲು ತಾನು ಕೊಂಡು ಹೋಗಿದ್ದ ಮುನಿ ಬಾಲಕರನ್ನೆಲ್ಲ ಕರೆದುತಂದು ದೇವನಿಗೆ ಹಿಂದಿರುಗಿ ಒಪ್ಪಿಸಿ ದೇವನೆದುರು ವಿನಯ ದಿಂದ ನಿಂತನು. ಆ ಕೂಡಲೇ ಪ್ರತಿಯೊಬ್ಬ ಬಾಲಕನೂ ಮುಂದೆ ಬಂದು ದೇವ ನನ್ನು ಅಪ್ಪಿಕೊಂಡನು. ಈ ರೀತಿ ಪರಸ್ಪರವಾಗಿ ಆಲಿಂಗಿಸಿಕೊಂಡ ಬಳಿಕ ಬಾಲಕರು ಹೀಗೆ ನುಡಿದರು. ॥೩೦॥

ಬಾಲಕರು :—

ಮಯೂರೇಶ್ವರ! ನಿನ್ನನ್ನು ಸಂದರ್ಶಿಸಲಿಕ್ಕಾಗಿ ಎಲ್ಲೆಲ್ಲೋ ಅಲೆದಾಡಿದೆವು, ಮತ್ತು ಬಹಳ ಮಟ್ಟಿಗೆ ಪ್ರಯಾಸವನ್ನೂ ಅನುಭವಿಸಿದೆವು. ನಿನ್ನ ಧ್ಯಾನದಲ್ಲಿ ವ್ಯಗ್ರ ರಾದ ನಮ್ಮನ್ನು ಈ ಯಮನು ತನ್ನ ಲೋಕಕ್ಕೆ ಕೊಂಡೊಯ್ದಿದ್ದನು. ನಮ್ಮ ಪುಣ್ಯ. ನಿನ್ನ ದರ್ಶನ ಲಭಿಸಿತು. ಬಂಧನದಿಂದ ಮುಕ್ತರಾಗಿದ್ದೇವೆ. ಎಲ್ಲರೂ ನಡೆಯಿರಿ, ನಮ್ಮ ನಮ್ಮ ಮಂದಿರಗಳಿಗೆ ಹಿಂದಿರುಗೋಣ. ॥೩೧॥

ಬ್ರಹ್ಮಾ :—

ಹೀಗೆಂದು ಹೇಳಿ ಮಯೂರೇಶ್ವರನನ್ನು ಮುಂದಿರಿಸಿಕೊಂಡು ತಮ್ಮ ತಮ್ಮ ಆಶ್ರಮಗಳಿಗೆ ತೆರಳಲು ಮಯೂರೇಶಪುರಿಯನ್ನು ಪ್ರವೇಶಿಸಿದರು. ಇವರು ಬರುವ ವೇಳೆಗೆ ಆ ಪುರದಲ್ಲಿ ಅನೇಕ ಬಗೆಯ ಮಂಗಳವಾದ್ಯಗಳು ಸು–ಸ್ವರದಿಂದ ಧ್ವನಿ ಗೈಯುತ್ತಲಿದ್ದವು. ॥೩೨॥

**ನಾನಾಧ್ವಜ-ಪತಾಕಾಢ್ಯಂ ಪುಷ್ಪಮಾಲಾವಿಭೂಷಿತಮ್**
**ಯಮೋಽಪಿ ಪೃಷ್ಠತೋ ಯಾತಿ ದ್ರಷ್ಟುಂ ತತ್ಕೌತುಕಂ ಮಹತ್ ||೩೩||**

**ಸಮ್ಮುಖಂ ತಸ್ಯ ತೇ ಸರ್ವೇ ಮುನಯೋಽಪಿ ಯಯುಸ್ತದಾ ।**
**ಪುಪೂಜುಸ್ತುಷ್ಟುವುರ್ದೇವಂ ಲಿಲಿಂಗುರ್ಬಾಲಕಾನಪಿ ||೩೪||**

**ಉವಾಚ ದೇವಸ್ತಾನ್ ಸರ್ವಾನ್ ಮುನೀನ್ ಪೂರ್ವಂ ಪ್ರಕುಪ್ಯತಃ ।**
**ದೇವ ಉವಾಚ :—**
**" ಆನೀತಾ ಬಾಲಕಾ ಲೋಕಾದ್ಯಮಸ್ಯ ಕ್ಷಣಮಾತ್ರತಃ ||೩೫||**

---

ನಾಗರಿಕರು ನಗರವನ್ನು ಧ್ವಜ–ಪತಾಕಾದಿಗಳಿಂದ ಮನೋಹರವಾಗಿ ಕಾಣು ವಂತೆ ಅಲಂಕರಿಸಿದ್ದರು ಕೆಲವು ಕಡೆ ತೋರಣಗಳೊಂದಿಗೆ ಪುಷ್ಪಮಾಲಿಕೆಗಳನ್ನೂ ಸೇರಿಸಿ ಕಟ್ಟಿದ್ದರು. ಯಮನಿಗೆ ಇವರ ಉತ್ಸಾಹ, ವೈಭವ ಇವನ್ನು ನೋಡಿ ಇವ ರೊಡನೆ ಆನಂದಿಸಬೇಕೆಂದು ಅತ್ಯುತ್ಸಾಹ ಉಂಟಾದುದರಿಂದ ತಾನೂ ಬಾಲಕರನು ಹಿಂಬಾಲಿಸಿ ನಗರಕ್ಕೆ ಬಂದನು. ||೩೩||

ಬಾಲಕರನ್ನು ಕರೆದುಕೊಂಡು ಗಣಪತಿಯು ನಗರಕ್ಕೆ ಬರುತ್ತಿರುವ ಸಂಗತಿ ಯನ್ನು ಕೇಳಿದಕೂಡಲೆ ಮುನಿಗಳೆಲ್ಲ ಉತ್ಸವಕ್ಕೆ ಎದುರು ಬಂದರು. ದೇವನನ್ನು ವಿವಿಧೋಪಚಾರಗಳಿಂದ ಅರ್ಚಿಸಿ ಮನಃಪೂರ್ವಕವಾಗಿ ಸ್ತುತಿಸಿದರು. ಅನಂತರ ಪ್ರತಿಯೊರ್ವನೂ ತಮ್ಮ ತಮ್ಮ ಮಕ್ಕಳನ್ನು ವಿಶ್ವಾಸದಿಂದ ಆಲಿಂಗಿಸಿಕೊಂಡನು. ||೩೪||

ಈ ಮೊದಲು ತಮ್ಮ ಮಕ್ಕಳನ್ನು ಕಾಣದಿರಲು ಯಾರು ಯಾರು ಎಷ್ಟೆಷ್ಟು ವಿಧದಿಂದ ದೇವನನ್ನು ಅಧಿಕ್ಷೇಪಿಸಿ ತಮಗುಂಟಾದ ಕೋಪವನ್ನು ವ್ಯಕ್ತಪಡಿ ಸಿದ್ದರೋ, ಅವರೆಲ್ಲರೂ ಪ್ರಕೃತ ಪೂಜೆಗೈದು ಸ್ತುತಿಸಲಾರಂಭಿಸಿದ್ದನ್ನು ನೋಡಿದ ದೇವನು ಅವರನ್ನು ಕುರಿತು ಹೀಗೆಂದು ನುಡಿದನು.

ಮಯೂರೇಶ್ವರ :—

ಮುನಿಗಳೇ ! ನಿಮ್ಮ ಬಾಲಕರನ್ನೆಲ್ಲ ಈ ಯಮನು ತೆಗೆದುಕೊಂಡು ತನ್ನ ಲೋಕದಲ್ಲಿ ಸೇರಿಸಿಬಿಟ್ಟಿದ್ದನು. ಅಂಥವರನ್ನು ಪುನರುಜ್ಜೀವನಗೊಳಿಸಿ ಕ್ಷಣಮಾತ್ರ ದಲ್ಲಿ ಇಲ್ಲಿಗೆ ಕರೆದುತಂದಿದ್ದೇನೆ. ||೩೫||

ಮುನಯ ಊಚುಃ :—

ಸರ್ವತ್ರ ರಕ್ಷಸೇ ತ್ವಂ ಹಿ ಸರ್ವಶಕ್ತಿಃ ಸದಾ ಚ ನಃ ।

ಕ ಉವಾಚ :—

ಇತ್ಯುಕ್ತ್ವಾ ತಮನುಜ್ಞಾಪ್ಯ ಸ್ವಾಶ್ರಮಾನ್ಮುನಯೋ ಯಯುಃ ॥೩೬॥

ಯಮೋಽಪಿ ತಂ ನಮಸ್ಕೃತ್ಯ ಸ್ವಾಲಯಂ ಮುದಿತೋಽಗಮತ್ ।
ದೇವೋಽಪಿ ಸ್ವಾಲಯಂ ಪ್ರಾಪ್ಯ ಹರ್ಷಯಾಮಾಸ ಮಾತರಮ್ ॥೩೭॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ರವಿಜಗರ್ವಪರಿಹಾರೋ" ನಾಮಾಷ್ಟೋತ್ತರ ಶತತಮೋಽಧ್ಯಾಯಃ ॥

---

ಮುನಿಗಳು :—

ಭಗವನ್! ನಮ್ಮನ್ನೆಲ್ಲ ಸರ್ವದಾ ರಕ್ಷಿಸತಕ್ಕವನು ನೀನು. ನಾವು ಈ ಲೋಕದಲ್ಲಿದ್ದರೇನು, ಪರಲೋಕಕ್ಕೆ ಹೋದರೇನು? ನಿನ್ನ ರಕ್ಷಣೆಗೆ ಬಾಹ್ಯರಾಗತಕ್ಕವರಲ್ಲವಷ್ಟೆ? ನೀನು ಸರ್ವಶಕ್ತನಾಗಿರುವೆ.

ಬ್ರಹ್ಮಾ:—

ಹೀಗೆಂದು ಸ್ತುತಿಸಿ ದೇವನ ಅನುಮತಿಯನ್ನು ಪಡೆದು ತಮ್ಮ ತಮ್ಮ ಆಶ್ರಮಗಳಿಗೆ ಹಿಂದಿರುಗಿದರು. ॥೩೬॥

ದೇವನ ಪ್ರಭಾವ-ವೈಭವಗಳನ್ನೆಲ್ಲ ಪ್ರತ್ಯಕ್ಷವಾಗಿ ಕಂಡ ಯಮನಿಗೆ ಬಹಳ ಹರ್ಷವಾಯಿತು. ಅವನೂ ಸಹ ದೇವನನ್ನು ವಂದಿಸಿ ಅವನ ಅನುಮತಿಯನ್ನು ಪಡೆದು ತನ್ನ ರಾಜಧಾನಿಗೆ ತೆರಳಿದನು. ಅನಂತರ ಮಯೂರೇಶನು ತನ್ನ ಮನೆಗೆ ಬಂದು ತಾಯಿಯನ್ನು ಸಂತೋಷಗೊಳಿಸಿದನು. ॥೩೭॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ಯಮಗರ್ವಭಂಗ " ಎಂಬಲ್ಲಿಗೆ ನೂರ ಎಂಟನೆಯ ಅಧ್ಯಾಯಾನುವಾದವು ಮುಕ್ತಾಯಗೊಂಡಿತು.

|| ಶ್ರೀ ಗಣೇಶಾಯ ನಮಃ ||

# ಅಥ ನವಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಕದಾಚಿತ್ಪಾರ್ವತೀ ಪ್ರಾಹ ಸುಖಾಸೀನಂ ಮಹೇಶ್ವರಮ್ ।**

**ಪಾರ್ವತ್ಯುವಾಚ :—**

**ಗತಾನಿ ತು ಮಹಾದೇವ ! ವರ್ಷಾಣಿ ದಶ ಪಂಚ ಚ ||೧||**

**ವಿವಾಹಶ್ಚಿಂತ್ಯತಾಮಸ್ಯ ಮಯೂರೇಶಸ್ಯ ಸಾಂಪ್ರತಮ್ ।**
**ಸುಶೀಲಾ ಸುಮುಖೀ ಬಾಲಾ ಮೃಗಾಕ್ಷೀ ಹಂಸಗಾಮಿನೀ ||೨||**

---

|| ಶ್ರೀ ಮಹಾಗಣಪತಯೇ ನಮಃ ||

## ೧೦೯ ನೆಯ ಅಧ್ಯಾಯ

ಬ್ರಹ್ಮ:—

ಹೀಗೆಯೇ ಕಾಲ ಕಳೆಯುತ್ತಿರುವಷ್ಟರಲ್ಲಿ ಒಂದು ದಿವಸ ಪಾರ್ವತೀದೇವಿಯು ಪರಶಿವನ ಬಳಿ ಬಂದಳು. ಆಗ ಸದಾಶಿವನು ಆಸನದಲ್ಲಿ ಸುಖವಾಗಿ ಕುಳಿತಿದ್ದನು. ದೇವಿಯು ಪತಿಯನ್ನು ಕುರಿತು ಹೀಗೆಂದು ನುಡಿದಳು.

ದೇವೀ :—

ಮಹಾದೇವ! ನಮ್ಮ ಮಗುವಿಗೆ ಹದಿನೈದು ವರ್ಷಗಳು ತುಂಬಿಹೋದವು.||೧||

ಇದು ವಿವಾಹೋಚಿತವಾದ ವಯಸ್ಸಲ್ಲವೇ ? ಆದುದರಿಂದ ಪ್ರಕೃತ ಅವನಿಗೆ ವಿವಾಹವನ್ನು ಮಾಡುವ ಬಗ್ಗೆ ಆಲೋಚಿಸಬೇಕು. ಸುಶೀಲಳೂ, ಸುಮುಖಿಯೂ, ಯೌವನವತಿಯೂ, ಮೃಗದಂತೆ ವಿಶಾಲ ಚಪಲನಯನಳೂ, ಹಂಸಪಕ್ಷಿಯಂತೆ ಗಂಭೀರ ಗಮನವುಳ್ಳವಳೂ ||೨||

ಪಿಕವಾಕ್ಸುಮನಾ ತನ್ವೀ ವಧೂಃ ಕ್ವಾಪಿ ವಿಚಾರ್ಯತಾಮ್ ।
ಮನ್ಮಥಾತುಲದೇಹಸ್ಯ ಸರ್ವಾಂಗಸುಂದರಸ್ಯ ಹ ॥೩॥

ಕ ಉವಾಚ :—

ಇತಿ ತದ್ವಚನಂ ಶ್ರುತ್ವಾ "ಸಾಧು, ಸಾಧ್ವಿ"ತ್ಯಭಾಷತ ।
ಸೋಽಚಿಂತಯಚ್ಛುಭಾಂ ಕನ್ಯಾಂ ಮನಸಾ ನಾಪ ಕುತ್ರಚಿತ್ ॥೪॥

ತತಶ್ಚಿಂತಾಂ ಪರಾಂ ಪ್ರಾಪ ತಾವನ್ನಾರದ ಆಗತಃ ।
ಸಂಪೂಜ್ಯ ಚೋಪವೇಶ್ಯೈನಮಾಸನೇ ಶಂಭುರಬ್ರವೀತ್ ॥೫॥

ಪಿಕ (ಕೋಗಿಲೆ)ದಂತೆ ಮಧುರಕಂಠದಿಂದ ಮಾತನಾಡತಕ್ಕವಳೂ ಸುಮನಸ್ಕಳೂ ಮತ್ತು ಸುಂದರಿಯೂ ಆದ ವಧು ಎಲ್ಲಿ ದೊರೆತಾಳೋ ಅದನ್ನು ವಿಚಾರಮಾಡಿ. ನನ್ನ ಸುಕುಮಾರ ಸಾಮಾನ್ಯನಲ್ಲ. ಮನ್ಮಥನಿಗಿಂತಲೂ ಮನೋಹರವಾದ ದೇಹ ಉಳ್ಳವನು. ಸರ್ವಾಂಗಸುಂದರನಾದವನು. ಇಂಥವನಿಗೆ ತಕ್ಕ ಕನ್ಯೆಯನ್ನು ಹುಡುಕಿ. ॥೩॥

ಬ್ರಹ್ಮಾ :—

ದೇವಿಯು ಈ ರೀತಿ ಮಾತನಾಡಿದುದನ್ನು ಕೇಳಿ ಶಂಭು "ಸಾಧು, ಸರಿಯಾಗಿಯೇ ನುಡಿದೆ" ಎಂದು ಹೇಳಿ ತನ್ನ ಒಪ್ಪಿಗೆಯನ್ನು ಸೂಚಿಸಿದನು. ದೇವಿಯು ಸೂಚಿಸಿದಂತಹ ರೂಪಾದಿಗುಣ ಸಂಪನ್ನಳಾದ ಕನ್ಯೆ ಯಾರು ? ಎಲ್ಲಿದ್ದಾಳೆ ? ಎಂಬುದನ್ನು ಮನಸ್ಸಿನಲ್ಲೇ ಚಿಂತಿಸಿ ನೋಡಿದನು. ಅವನಿಗೆ ಯಾವ ಕನ್ಯೆಯೂ ಹೊಳೆಯಲಿಲ್ಲ. ॥೪॥

"ಮುಂದೆ ಏನನ್ನು ಮಾಡುವುದು ?" ಎಂದು ಚಿಂತಾಕ್ರಾಂತನಾಗಿರುವ ಸಮಯಕ್ಕೆ ಸರಿಯಾಗಿ ಬ್ರಹ್ಮಮಾನಸಪುತ್ರನಾದ ನಾರದನು ಅಕಸ್ಮಾತ್ ಅಲ್ಲಿಗೆ ಬಂದನು. ಮನೆಗೆ ಬಂದ ಅತಿಥಿಯನ್ನು ಗೃಹಸ್ಥ ಧರ್ಮಕ್ಕನುಸರಿಸಿ ಯಥೋಚಿತವಾಗಿ ಅರ್ಘ್ಯ-ಪಾದ್ಯಾದಿಗಳನ್ನಿತ್ತು ಅರ್ಚಿಸಿದ ಬಳಿಕ ಶಂಕರನು ನಾರದನನ್ನು ಕುರಿತು ಹೇಗೆಂದು ನುಡಿದನು. ॥೫॥

**ಶಂಭುರುವಾಚ :—**

**ಆಹ್ಲಾದಂ ಪರಮಂ ಪ್ರಾಪ್ತಸ್ತ್ವಾಗಮನತೋ ಮುನೇ ! |**
**ಚಿರಾಗತೋಽಸಿ ಚ ಮುನೇ ! ದಿನಂ ಸ್ಥಾತುಂ ತ್ವಮರ್ಹಸಿ ||೬||**

**ಅತಿ ಸುಂದರಕಾಯಸ್ಯ ತನಯಸ್ಯ ಮಮಾನಘ ! |**
**ಗವೇಷಯ ವಧೂಂ ವಿಪ್ರ ! ಯತಸ್ತ್ರೈಲೋಕ್ಯಗೋ ಭವಾನ್ ||೭||**

**ಕ ಉವಾಚ :—**

**ತಥೈವ ಪಾರ್ವತೀ ಪ್ರಾಹ " ವಧೂಂ ಶೀಘ್ರಂ ವಿಚಾರಯ "**

**ನಾರದ ಉವಾಚ :—**

**ನ ಸ್ಥಾತುಂ ಶಕ್ಯತೇ ಸ್ವಾಮಿನ್ ! ಕರ್ಮಣಾ ದ್ವಿಮುಹೂರ್ತಕಮ್ ||೮||**

---

ಮಹೇಶ್ವರ :—

ವತ್ಸ, ನಾರದ! ಈ ಸಂದರ್ಭದಲ್ಲಿ ನೀನು ಬಂದುದು ನಮ್ಮೆಲ್ಲರಿಗೂ ಮಿತಿ ಮೀರಿದ ಆನಂದವನ್ನುಂಟುಮಾಡಿದೆ. ನೀನು ಬಹಳ ಕಾಲದಿಂದಲೂ ಇತ್ತಕಡೆ ಬಂದೇ ಇಲ್ಲ. ಆದುದರಿಂದ ಒಂದು ದಿನವಾದರೂ ಇಲ್ಲಿಯೇ ಇರು. ||೬||

ಅಪಾಪಹತ, ನಾರದ! ಮತ್ತೊಂದು ವಿಷಯವನ್ನು ಕುರಿತು ನಿನ್ನೊಡನೆ ಪ್ರಸ್ತಾಪಿಸುವೆನು. ಅತಿ ಸುಂದರ ದೇಹಿಯಾದ ನನ್ನ ಕುಮಾರ ಗಣಪತಿಗೆ ವಿವಾಹವನ್ನು ಮಾಡಬೇಕಾಗಿದೆ. ಬ್ರಾಹ್ಮಣವರ್ಯ! ನೀನು ತ್ರಿ-ಲೋಕ ಸಂಚಾರಿಯಾದವನು. ಆದುದರಿಂದ ಯೋಗ್ಯಳಾದ ವಧುವನ್ನು ಹುಡುಕು. ||೭||

ಬ್ರಹ್ಮಾ :—

ಪಾರ್ವತೀದೇವಿಯು ಸಹ ದೇವನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತ " ತ್ವರೆಯಿಂದ ವಧುವನ್ನು ವಿಚಾರಮಾಡಬೇಕು " ಎಂದು ಹೇಳಿದಳು.

ನಾರದ :—

ಸ್ವಾಮಿನ್ ! ಕೆಲಸದ ಗಡಿಬಿಡಿ ಬಹಳವಾಗಿರುವುದರಿಂದ ಎರಡು

**ಏತದರ್ಥಮಹಂ ಪ್ರಾಪ್ತೋ ಬ್ರಹ್ಮಣಾ ಪ್ರೇಷಿತಃ ಶಿವ ! ।**
**ತವ ಪುತ್ರಪ್ರಭಾವಶ್ಚ ಲಾವಣ್ಯಂ ವಯ ಏವ ಚ ॥೯॥**

**ಜ್ಞಾತಂ ಧಾತ್ರಾ ಸಿದ್ಧಿ-ಬುದ್ಧೀ ತಸ್ಮೈ ದಾತುಮಭೀಪ್ಸತಾ ।**
**ಅನಸೂಯಾ ಶಚೀ ಚಾಪಿ ತಯೋರ್ರೂಪೇಣ ಲಜ್ಜಿತೇ ॥೧೦॥**

**ಸಂಜ್ಞಾಭೂದ್ದಂಡಕಾರಣ್ಯೇ ಶಿಲಾಹಲ್ಯಾಪಿ ಸಾಹ್ಯಭೂತ್ ।**
**ಜಾಲಂಧರಸ್ಯ ಯಾ ಪತ್ನೀ ಬೃಂದಾ ಮಾಧವಮೋಹಿನೀ ॥೧೧॥**

**ಸಾಪಿ ವೃಕ್ಷತ್ವಮಾಪನ್ನಾ ಯದ್ರೂಪದರ್ಶನಾದ್ಧರ ! ।**

---

ಮುಹೂರ್ತಗಳು ಕೂಡ ಇಲ್ಲಿರಲು ನನಗೆ ಅವಕಾಶವಿಲ್ಲ. ॥೮॥

ಪರಶಿವ! ವಧುವಿನ ವಿಚಾರವನ್ನು ನಿನ್ನಲ್ಲಿ ಅರಿಕೆಮಾಡಲು ನನ್ನ ಜನಕ; ಬ್ರಹ್ಮದೇವ ನನ್ನನ್ನು ಇಲ್ಲಿಗೆ ಕಳಿಸಿದ್ದಾನೆ. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ನಿನ್ನ ಮಗನ ಪ್ರಭಾವ, ಲಾವಣ್ಯ ಮತ್ತು ವಯಸ್ಸು ಇವೆಲ್ಲ ನನ್ನ ತಂದೆಯ ಮನಸ್ಸಿಗೆ ಬಂದಿವೆ. ॥೯॥

ಆದುದರಿಂದಲೇ ತನ್ನ ಮಾನಸ ಪುತ್ರಿಯರಾದ ಸಿದ್ಧಿ-ಬುದ್ಧಿಯರನ್ನು ಗಣಪತಿಗೆ ಪತ್ನಿಯರನ್ನಾಗಿ ಕೊಡಲು ಅಭಿಪ್ರಾಯ ಪಟ್ಟಿದ್ದಾನೆ. ಅವರು ನಿನ್ನ ಮಗನಿಗೆ ತಕ್ಕವರೋ ಇಲ್ಲವೋ ಎಂಬ ಬಗ್ಗೆ ನೀನು ಚಿಂತಿಸಬೇಕಾಗಿಲ್ಲ. ಸೌಂದರ್ಯವತಿಯರೆಂದು ಪ್ರಖ್ಯಾತರಾದ ಅನಸೂಯೆ, ಶಚೀ ಇವರು ಸಹ ಸಿದ್ಧಿ-ಬುದ್ಧಿಯರ ರೂಪಕ್ಕೆ ನಾಚಿಹೋಗಿದ್ದಾರೆ. ॥೧೦॥

ಅನೇಕ ಮಂದಿ ಸುಂದರಿಯರನ್ನು ಬ್ರಹ್ಮದೇವ ಹಿಂದೆ ಸೃಜಿಸಿದ್ದಾನೆ. ಆ ಪೈಕಿ ದಂಡಕಾರಣ್ಯವಾಸಿ, ಗೌತಮನ ಪತ್ನಿಯಾದ ಅಹಲ್ಯೆಯೊಬ್ಬಳು. ಅವಳೋ ದೇವೇಂದ್ರನ ಮೋಸಕ್ಕೆ ಬಲಿಬಿದ್ದು ಕಲ್ಲಾಗಿ ಬಿದ್ದಳು. ಮತ್ತೊಬ್ಬಳು ಬೃಂದೆ ಮಹಾಸಾಧ್ವೀಶಿರೋಮಣಿ. ಜಲಂಧರ ಅವಳನ್ನು ಲಗ್ನವಾಗಿದ್ದ ಅವಳು ಮಾಧವನನ್ನು ಮೋಹಿಸಿದಳು. ॥೧೧॥

ಪರಿಣಾಮವೇನಾಯಿತು ? ಕೊನೆಗೆ ತುಳಸಿಯು ಗಿಡವಾಗಿ ಉಳಿದಳು. ಇವ

**ಅನ್ಯಾ ನಾನಾ ವರಾ ಗೌರಿ ! ನಾಗತಾ ಬ್ರಹ್ಮಣೋ ಹೃದಿ ||೧೨||**

**ನೈತಾದೃಶಂ ಕ್ವಾಪಿ ದೇವಿ ! ಸೌಂದರ್ಯಂ ಶೌರ್ಯಮೇವ ಚ |**
**ತಯೋರ್ಯೋಗೇನ ಚ ತವ ಸುತಃ ಶೋಭಾಮವಾಪ್ನುಯಾತ್ ||೧೩||**

**ರತ್ನ-ಕಾಂಚನಯೋರ್ಯದ್ವದ್ಯಥಾ ಮುಕ್ತಾ-ಪ್ರವಾಲಯೋಃ |**

**ಕ ಉವಾಚ :—**

**ಏವಂ ನಾರದವಾಕ್ಯೇನ ಸ ತುತೋಷ ಹರಃ ಶಿವಾ ||೧೪||**

**ಶಿವ ಉವಾಚ :—**

**ಸಮ್ಯಗುಕ್ತಂ ಮುನೇ ! ವಾಕ್ಯಂ ವಾಂಛಿತಾರ್ಥಕರಂ ಶುಭಮ್ |**

---

ರಾರ ರೂಪವೂ ಬ್ರಹ್ಮನ ಮನಸ್ಸಿಗೆ ರುಚಿಸಲಿಲ್ಲ. ತಾಯಿ, ಗೌರಿ ! ಇನ್ನೂ ಅನೇಕ ಮಂದಿ ಸುಂದರಿಯರನ್ನು ಸ್ಮರಿಸಿಕೊಂಡು ನೋಡಿದ. ಯಾವುದೂ "ಸರಿ" ಎನಿಸದ್ದರಿಂದ ಪ್ರಕೃತ "ಸಿದ್ಧಿ–ಬುದ್ಧಿ"ಯರನ್ನು ಸೃಜಿಸಿದ್ದಾನೆ. ||೧೨||

ಈ ಸಿದ್ಧಿ ಬುದ್ಧಿಯರಂತಹ ರೂಪಶಾಲಿನಿಯರನ್ನು ನಾನೆಲ್ಲೂ ಕಂಡಿರುವುದಿಲ್ಲ. ಅವರಿಗಿರತಕ್ಕ ಮಾಯಾಶಕ್ತಿಯೂ ಗಣನೀಯವಾದುದೇ, ಅದರಲ್ಲಿ ಸಂದೇಹವಿಲ್ಲ. ಇವರಿಬ್ಬರನ್ನು ಪತ್ನಿಯರನ್ನಾಗಿ ಪಡೆದ ನಿಮ್ಮ ಮಗ; ಗಣಪತಿಯು ಹೆಚ್ಚು ಶೋಭಾಮಯನಾಗುವನು. ||೧೩||

ರತ್ನವು ಸುವರ್ಣದ ಹಿನ್ನೆಲೆಯಲ್ಲಿ ಹೆಚ್ಚು ಪ್ರಕಾಶಿಸುವುದಿಲ್ಲವೇ? ಮುಕ್ತಾಫಲ, ಪ್ರವಾಲಗಳು ಸೇರಿದರೆ ಎಷ್ಟು ಒಪ್ಪವಾಗಿ ಕಾಣುವುವು ?

ಬ್ರಹ್ಮ :—

ನಾರದನು ಆಡಿದ ಈ ಮಾತುಗಳನ್ನು ಕೇಳಿ ಶಿವ–ಪಾರ್ವತಿಯರು ಸಂತುಷ್ಟರಾದರು. ||೧೪||

ಮುನೇ. ನಾರದ ! ನೀನು ಬಹಳ ಸಮಂಜಸವಾದುದನ್ನೇ ಆಡಿದೆ. ನಾವು

ಕ ಉವಾಚ :—

ಶಿವೋऽಪಿ ತತ್ಕ್ಷಣಾದೇವ ವೃಷಾರೂಢಃ ಸಮಾಹ್ವಯತ್ ॥೧೫॥

ಇಂದ್ರಾದೀನ್ ದೇವನಿಚಯಾನ್ ಗೌತಮಾದೀನ್ ಮುನೀನಪಿ ।
ಅರ್ಧಾಂಗೇ ಪಾರ್ವತೀಂ ಗೃಹ್ಯ ಯಯೌ ಹರ್ಷಸಮನ್ವಿತಃ ॥೧೬॥

ಶಿಖಂಡಿನಂ ಸಮಾರುಹ್ಯ ಮಯೂರೇಶಃ ಪುರೋ ಯಯೌ ।
ನಾರದಸ್ತು ತಪೋಯೋಗಾದಂತರಿಕ್ಷಚರೋ ಯಯೌ ॥೧೭॥

ಸಪ್ತಕೋಟಿಗಣಾಃ ಕ್ರೀಡಾಂ ಕುರ್ವಂತೋऽಭಿಯಯುಸ್ತದಾ ।
ನಾನಾಯುಧಧರಾ ಹರ್ಷಾದ್ಗರ್ಜಯಂತೋ ದಿಶೋ ದಶ ॥೧೮॥

---

ಯಾವ ಶುಭಕಾರ್ಯವನ್ನು ಮಾಡಬೇಕೆಂದು ಬಯಸಿ ಚಿಂತಿಸುತ್ತಲಿದ್ದೆವೋ, ಆ ಇಷ್ಟವನ್ನು ಸಾಧಿಸುವುದಕ್ಕೆ ಬಹಳ ಸಹಕಾರಿಯಾಗಿದೆ.

ಬ್ರಹ್ಮಾ :—

ಹೀಗೆ ಹೇಳಿ ಒಡನೆಯೇ ವೃಷಭವನ್ನೇರಿ ಮದುವೆಗೆ ಹೊರಡಲು ಆಪ್ತರನ್ನೆಲ್ಲ ಆಹ್ವಾನಿಸಿದನು. ॥೧೫॥

ಇಂದ್ರಾದಿ ಮೂವತ್ತು ಮೂರು ಕೋಟಿ ದೇವತೆಗಳೂ, ಗೌತಮಾದಿ ಮುನಿಗಳೂ ಆಹೂತರಲ್ಲಿ ಸೇರಿದವರೇ. ತನ್ನ ವಾಮಭಾಗದ ದೇಹದಲ್ಲಿ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಅತ್ಯಂತ ಉತ್ಸಾಹ-ಸಂತೋಷಗಳಿಂದ ಪ್ರಯಾಣ ಹೊರಟನು. ॥೧೬॥

ಮಹಾಗಣಪತಿಯು ತನ್ನ ವಾಹನ ಮಯೂರವನ್ನೇರಿ ಕುಳಿತುಕೊಂಡು ಎಲ್ಲರಿಗಿಂತಲೂ ಮುಂದುಗಡೆ ನಡೆದನು. ನಾರದನು ತನ್ನ ತಪೋಮಹಿಮೆಯಿಂದ ಅಂತರಿಕ್ಷಮಾರ್ಗವಾಗಿ ನಡೆಯುತ್ತ ಇವರನ್ನು ಅನುಸರಿಸಿದನು ॥೧೭॥

ಏಳು ಕೋಟಿ ಪ್ರಮಥ ಗಣದವರು ಕುಣಿದಾಡುತ್ತ ದಿಬ್ಬಣದಲ್ಲಿ ಭಾಗವಹಿಸಿದರು. ಇವರು ತಮ್ಮ ತಮ್ಮ ಚಿತ್ರ–ವಿಚಿತ್ರಾಯುಧಗಳನ್ನು ಧರಿಸಿಯೇ ಇದ್ದರು. ಅವರಿಗೆ ಮಿತಿಮೀರಿ ಸಂತೋಷವುಂಟಾಗಿದ್ದಿತಾದುದರಿಂದ ಆಗಾಗ್ಗೆ "ಕೇಕೇ"

ವಾದ್ಯತ್ಸು ಸರ್ವವಾದ್ಯೇಷು ರಜಸಾಚ್ಛಾದಿತೇ ರವೌ ।
ಅಷ್ಟಾಶೀತಿಸಹಸ್ರಾಣಿ ಮುನಯೋಽಪಿ ಯಯುರ್ಮುದಾ ॥೧೯॥

ಗಂಡಕೀನಗರಂ ಸರ್ವೇ ಗಂತುಕಾಮಾ ವ್ಯಲೋಕಯನ್ ।
ಗುಲ್ಮಂ ಮಾರ್ಗೇ ರಕ್ಷಸಾಂ ತೇ ಸಪ್ತಕೋಟಿಗಣಾನ್ವಿತಮ್ ॥೨೦॥

ನಭಃಸ್ಪರ್ಶಿಮುಖಾನಾಂ ಚ ಸರ್ವದಾ ಕಾಲಧಿಕ್ಕೃತಾಮ್ ।
ನಿಶಾಚರಾಃ ಶುಶ್ರುವುಸ್ತೇ ಸೇನಾಯಾಸ್ತು ರವಂ ದೃಢಮ್ ॥೨೧॥

ಸುಪ್ತೋತ್ಥಿತಾಶ್ಚ ಸನ್ನದ್ಧಾ ಯಯುರ್ರಣವಿಧಿತ್ಸಯಾ ।

---

ಹೊಡೆವುದು, ಹಾಡುವುದು ಗರ್ಜಿಸುವುದು ಇತ್ಯಾದಿಗಳಿಂದ ಹತ್ತು ದಿಕ್ಕುಗಳನ್ನೂ ಪ್ರತಿಧ್ವನಿಗೊಳಿಸುತ್ತ ನಡೆದರು. ॥೧೮॥

ಸಕಲ ವಿಧ ಮಂಗಲವಾದ್ಯಗಳೂ ಭೋರ್ಗರೆಯುತ್ತಲಿದ್ದವು. ಜನರ ಕಾಲ್ತುಳಿತದಿಂದಾಗಿ ಭೂಮಿಯ ಧೂಳಿ ಮೇಲೆದ್ದು ರವಿಮಂಡಲವನ್ನು ಮುಚ್ಚಿತು. ಎಂಭತ್ತೆಂಟು ಸಹಸ್ರ ಮುನಿಗಳೂ ಹರ್ಷಭರಿತರಾಗಿ ನಡೆಯುತ್ತಲಿದ್ದರು. ॥೧೯॥

ಗಂಡಕೀನಗರವನ್ನು ಕುರಿತು ಇವರೆಲ್ಲರೂ ಪ್ರಯಾಣ ಹೊರಟವರು. ಮಾರ್ಗ ಮಧ್ಯೆ ನಡೆಯುವಾಗ ಅಲ್ಲೊಂದು ಪೊದೆಯನ್ನು ಕಂಡರು. ಅದರಲ್ಲಿ ಏಳು ಕೋಟಿ ರಾಕ್ಷಸರ ಗುಂಪು ವಾಸವಾಗಿದ್ದಿತು. ॥೨೦॥

ಅವರ ಆಕೃತಿಯನ್ನಷ್ಟು ವರ್ಣಿಸಲೇಬೇಕಾಗಿದೆ. ಪ್ರತಿಯೊಬ್ಬ ರಾಕ್ಷಸನ ಮುಖವೂ ಬಹು ಸುಲಭವಾಗಿ ಮುಗಿಲನ್ನು ಮುಟ್ಟುತ್ತಲಿದ್ದಿತು. ಅವರು ಸರ್ವದಾ ಉಗ್ರಮುಖಿಗಳಾಗಿದ್ದುದರಿಂದ ಆ ವಿಷಯದಲ್ಲಿ ಕಾಲಪುರುಷನನ್ನೂ ಧಿಕ್ಕರಿಸುತ್ತಲಿದ್ದರು. ಇಂತಹ ನಿಶಾಚರರು ಹಾಡುತ್ತ, ಕುಣಿಯುತ್ತ ಚಕ್ಕಂದದಿಂದ ಬರುತ್ತಲಿದ್ದ ದೇವಸೇನೆಯ ಕೋಲಾಹಲ ಶಬ್ದವನ್ನು ಸ್ಪಷ್ಟವಾಗಿ ಕೇಳಿದರು. ॥೨೧॥

ಅಸುರರು ಪರಮ ತಾಮಸ ಪ್ರಕೃತಿಯವರಾದುದರಿಂದ ಆಹಾರಾರ್ಜನೆಯ ಸಮಯವನ್ನುಳಿದು ಬಾಕೀ ಕಾಲದಲ್ಲೆಲ್ಲ ನಿದ್ರೆಮಾಡುವುದೇ ಅವರ ಸ್ವಭಾವ. ಅವರು ಎಚ್ಚರದಿಂದಿರುವಷ್ಟು ಕಾಲವೂ ಯಾವ ಪ್ರಾಣಿಗೂ ಸುಖದಿಂದ ಬಾಳಿಯೇನೆಂಬ

**ರಾಕ್ಷಸಾ ಊಚುಃ :—**

**ಕಸ್ಯ ಯೂಯಂ ? ಕುತೋ ಯಾತ ! ಕುತ ಆಗಮನಂ ಚ ವಃ ॥೨೨॥**

**ವಿನಾಜ್ಞಾಂ ನ ಪುರೇ ಗಂತುಂ ದಾಸ್ಯಾಮಃ ಸ್ವಾಮಿನಶ್ಚ ನಃ ।**

**ಮಯೂರೇಶ ಉವಾಚ :—**

**ಸ್ವತಂತ್ರಾ ಅಂತಕಾ ದೈತ್ಯ–ರಕ್ಷಸಾಂ ಸಾಧುಪಾಲಕಾಃ ॥೨೩॥**

**ಅತೋ ಯಚ್ಛಂತು ನೋ ಮಾರ್ಗಂ ನೋ ಚೇನ್ನಾಶಂ ವ್ರಜಿಷ್ಯಥ ।**

---

ಧೈರ್ಯ–ನೆಮ್ಮದಿಗಳಿರುವುದಿಲ್ಲ. ಆದುದರಿಂದಲೇ ಪ್ರಕೃತಿಯು ಅಂಥವರಿಗೆ ಹೆಚ್ಚು ಕಾಲ ನಿದ್ರೆಬರುವಂತಹ ಮಬ್ಬನ್ನು ಅನುಗ್ರಹಿಸಿರುತ್ತಾಳೆ. ಪ್ರಕೃತ ಸುಖವಾಗಿ ನಿದ್ರೆಗೈಯ್ಯುತ್ತಲಿದ್ದ ರಾಕ್ಷಸ–ಪಿಶಾಚಗಳೆಲ್ಲ ದಿಬ್ಬಣದವರ ಗದ್ದಲಕ್ಕೆ ಎಚ್ಚರವನ್ನು ಹೊಂದಿದರು. ಮತ್ತು ಒಡನೆಯೇ ಯುದ್ಧಕ್ಕೂ ಸಿದ್ಧರಾದರು.

ರಾಕ್ಷಸರು :—

ಯಾರೋ ನೀವು ? ಎಲ್ಲಿಗೆ ಹೋಗುತ್ತಲಿರುವಿರೋ ? ಎಲ್ಲಿಂದ ಇಲ್ಲಿಗೆ ಬಂದಿರೋ ? ॥೨೨॥

ಇದು ನಮ್ಮ ಸ್ವಾಮಿಯ ನಗರ. ಅವನ ಆಜ್ಞೆ ಇಲ್ಲದೆ ಇದನ್ನು ಪ್ರವೇಶಿಸಲು ನಿಮ್ಮನ್ನು ನಾವು ಅನುಮತಿಸುವುದಿಲ್ಲ.

ಮಯೂರೇಶ :—

ನಾವಾರೆಂದು ಕೇಳಿದಿರಲ್ಲವೇ ? ನಿಮ್ಮಂಥವರಿಗೆ ಯಮ ಸ್ವರೂಪರು. ಸಾಧು ಜನರನ್ನು ಸಂರಕ್ಷಿಸತಕ್ಕವರು. ನಾವು ಸರ್ವಾತ್ಮನಾ ಸ್ವತಂತ್ರರು. ನಮ್ಮನ್ನು ನಿಯಮಿಸುವವನು ಎಲ್ಲೂ, ಯಾರೂ ಎಂದಿಗೂ ಇರುವುದಿಲ್ಲ. ॥೨೩॥

ಪ್ರತಿಯಾಗಿ ಮಾತನಾಡದೇ ನಮಗೆ ಮುಂದೆ ಹೋಗಲು ಮಾರ್ಗಕೊಟ್ಟರೋ, ಇನ್ನು ಕೆಲವು ಕಾಲವಾದರೂ ಜೀವದೊಂದಿಗೆ ಇರುವಿರಿ. ಇಲ್ಲವಾದರೆ ನಿಮ್ಮ ಅವತಾರ ಈಗಲೇ ಮುಗಿಯಿತೆಂದು ತಿಳಿಯಿರಿ.

**ಕ ಉವಾಚ :—**

**ಏತಸ್ಮಿನ್ನಂತರೇ ಪ್ರಾಪ್ತೋ ವಿಕೃತೋ “ ಹೇಮ ”ನಾಮಕಃ ॥೨೪॥**

**ಅಸುರೋಽಥಾಬ್ರವೀದ್ದೇವಂ**

**ಹೇಮ ಉವಾಚ :—**

**ಏಕಾಕೀ ಪ್ರಹಿತಃ ಪುರಾ ॥**

**ಇದಾನೀಂ ರಾಕ್ಷಸೈಸ್ಸಾರ್ಧಮಾದಾಸ್ಯೇ ಜೀವಿತಂ ತವ ॥೨೫॥**

**ಕ ಉವಾಚ :—**

**ಉವಾಚ ರಾಕ್ಷಸಾನ್ ಸೋಽಥ**

---

ಬ್ರಹ್ಮಾ :—

ಇಷ್ಟರಲ್ಲಿ ಆ ಸ್ಥಳಕ್ಕೆ ಮತ್ತೊಬ್ಬ ರಕ್ಕಸನು ಬಂದನು. ಅವನು ಹಿಂದೆ ದೇವನನ್ನು ಕೆಣಕಿ ಕಿವಿ–ಮೂಗುಗಳನ್ನು ಕುಯ್ಯಿಸಿಕೊಂಡ ಹೇಮ. ॥೨೪॥

ಹಿಂದೆ ತನಗೆ ದೇವನಿಂದುಂಟಾದ ಅವಮಾನದ ಆಂತರಿಕ ಗಾಯವು ರಕ್ಕಸನಿಗೆ ಇನ್ನೂ ಮಾಯ್ದಿರಲಿಲ್ಲ. ಅಂದು ತಾನೊಬ್ಬನೇ ಸಿಕ್ಕಿಬಿದ್ದಿದ್ದನು. ತನಗುಂಟಾದ ಅಪಮಾನದ ಸೇಡನ್ನು ಎಂದಾದರೊಮ್ಮೆ ತೀರಿಸಿಕೊಳ್ಳುವೆನೆಂದು ಓಡಿಹೋಗುವಾಗ ಹೇಳಿಯೂ ಇದ್ದನು. ಇಂದು ಮಯೂರೇಶ್ವರನೊಬ್ಬನೇ ಪರಿವಾರದೊಂದಿಗಿರುವ ತನಗೆ ದೊರೆತನೆಂದೂ, ಇವನಿಗೆ ಪ್ರತೀಕಾರವನ್ನೆಸಗಲು ಇದೇ ಸಕಾಲವೆಂದೂ ಭಾವಿಸಿ ಹುಮ್ಮಸ್ಸಿನಿಂದಲೂ, ಆತ್ಮವಿಶ್ವಾಸದಿಂದಲೂ ಹೀಗೆಂದು ನುಡಿದನು.

ಹೇಮ :—

ಬಾಲಕ ! ಹಿಂದೆ ನಾನೊಬ್ಬನೇ ನಿನ್ನ ಕೈಯಿಗೆ ಸಿಕ್ಕಿದ್ದೆ. ಈಗ ಬಾ. ನನ್ನ ಪೌರುಷವನ್ನು ತೋರಿಸುತ್ತೇನೆ. ನನಗೆ ಪ್ರಕೃತ ಸಾಕಷ್ಟು ರಾಕ್ಷಸರ ಬಲವಿದೆ. ನಿನ್ನ ಜೀವವನ್ನೇ ಹೀರಿಬಿಡುವೆನು. ॥೨೫॥

ಬ್ರಹ್ಮಾ :—

ಹೀಗೆಂದು ದೇವನನ್ನು ಮೂದಲಿಸಿ ರಾಕ್ಷಸರನ್ನು ಕುರಿತು ಇಂತು ಹೇಳಿದನು.

**ಹೇಮ ಉವಾಚ :—**

**ನಾನಾ ದೈತ್ಯಾ ಹತಾ ಬಲಾತ್ ।**
**ಅಹಂ ಚ ವಿಕೃತೋಽನೇನ ಯತೋಽಹಂ ಹನ್ಮಿ ತಂ ಜವಾತ್ ॥೨೬॥**

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಚುಕ್ರೋಧ ಸ ಮಯೂರರಾಟ್ ।**
**ಮುನಿಪುತ್ರಾನ್ ಸಮಾಜ್ಞಾಪ್ಯ " ಯುದ್ಧ್ಯಧ್ವಂ ಮೇಽಹ್ಯನುಗ್ರಹಾತ್ ' ॥೨೭॥**
**ಕುಶಾನುದ್ಯಮ್ಯ ತೇ ಹರ್ಷಾದ್ಯುದ್ಧಂ ಕರ್ತುಂ ಸಮುದ್ಯತಾಃ ।**
**ಉವಾಚ ಪೃಷ್ಠತೋ ದೇವೋ 'ಘ್ನಂತು ಬಾಲಾಃ! ಕುಶೈರಿಮಾನ್ " ॥೨೮॥**

---

ಹೇಮ :—

ಇವನನ್ನು ಸಾಧು ಬಾಲಕನೆಂದು ಭಾವಿಸಬೇಡಿ. ಎಷ್ಟೋ ಮಂದಿ ದೈತ್ಯರನ್ನು ಬಲಾತ್ಕಾರದಿಂದ ಕೊಂದಿದ್ದಾನೆ. ನಾನೂ ಒಮ್ಮೆ ಇವನ ಕೈಯಿಗೆ ಸಿಕ್ಕಿಕೊಂಡು ಇದೋ, ಕಿವಿ–ಮೂಗುಗಳನ್ನೆಲ್ಲ ಹರಿಸಿಕೊಂಡು ಬಂದಿದ್ದೇನೆ. ಅಂದಿನಿಂದ ಜನರು ನನ್ನನ್ನು " ವಿಕೃತ " ಎಂದೇ ಕರೆಯಲಾರಂಭಿಸಿದರು. ಆದುದರಿಂದ ಈಗಲೇ ನಾನು ಇವನನ್ನು ಕೊಂದುಬಿಡುವೆನು ॥೨೬॥

ಬ್ರಹ್ಮಾ :—

ವಿಕೃತನಾಡಿದ ಆ ಉನ್ಮತ್ತಾಲಾಪವನ್ನು ಕೇಳಿ ಮಯೂರೇಶ್ವರನು ಸಿಟ್ಟಿನಿಂದ ಸಿಡಿದೆದ್ದನು. ಮತ್ತು ತನ್ನ ಮಿತ್ರರಾದ ಮುನಿಪುತ್ರರನ್ನು ಸಮೀಪಕ್ಕೆ ಕರೆದು " ಮಿತ್ರರೇ ! ನಿಮಗೆ ನನ್ನ ಅನುಗ್ರಹವಿದೆ. ಹೆದರದೆ ಇವರೊಂದಿಗೆ ಯುದ್ಧವನ್ನು ಮಾಡಿ " ಎಂದು ಅಪ್ಪಣೆಮಾಡಿದನು. ॥೨೭॥

ದೇವನಾಡಿದ ಉತ್ಸಾಹಕರ ಮಾತುಗಳಿಂದ ಹುಡುಗರು ಬಹಳ ಹುರುಪುಗೊಂಡರು. ಆಡುವ ಹುಡುಗರು, ಅವರಿಗೆ ಪಾಪ, ಆಯುಧಗಳೆಲ್ಲಿಂದ ಬರಬೇಕು ? ಅತ್ತಿತ್ತ ನೋಡಿದರು. ಅಲ್ಲಿ ಬೆಳೆದಿದ್ದ ದರ್ಭೆಯ ಕಂತೆಗಳನ್ನೇ ಕಿತ್ತುಕೊಂಡು ಆಯುಧವನ್ನಾಗಿ ಮಾಡಿಕೊಂಡರು. ದೇವನು ಸರ್ವಾತ್ಮನಾ ಅವರಿಗೆ ಬೆಂಬಲಿಗನಾಗಿ ನಿಂತನು. ಮತ್ತು ಅವರು ಹಿಡಿದಿದ್ದ ಹುಲ್ಲುಕಡ್ಡಿಗಳಲ್ಲಿ ಅನೇಕ ದಿವ್ಯಾಯುಧಗಳ ತೈಕ್ಷ್ಣ್ಯವನ್ನು

**ಮಂತ್ರಿತಾಸ್ತೇ ಕುಶಾಸ್ತೇಷಾಂ ಮಸ್ತಕಾನಚ್ಛಿನ್ನ್ ಬಹೂನ್ ।**
**ತೇಷಾಂ ಶಸ್ತ್ರಾಣಿ ಕುಂಠಾನಿ ಜಾತಾನಿ ತದನುಗ್ರಹಾತ್ ॥೨೯॥**

**ಜಾಯಂತೇ ತಾವದೇತೇ ತಾನ್ ಕುಶೈರ್ಜಘ್ನುಸ್ತು ರಾಕ್ಷಸಾನ್ ।**
**ಖಂಡಶಸ್ತೇ ನಿಪೇತುರ್ನ್ಯೇ ಛಿನ್ನಬಾಹೂರುಜಾನವಃ ॥೩೦॥**

**ವ್ಯಸ್ಮಯಂತ ಚ ರಕ್ಷಾಂಸಿ 'ತೃಣೈರ್ಮೃತ್ಯುಂ ವ್ರಜಂತಿ ಕಿಮ್ ?' ।**
**ಏವಂ ಸರ್ವೇ ಹತಾ ಬಾಲೈರಖಿಲಾ ರಾಕ್ಷಸಾಸ್ತದಾ ॥೩೧॥**

---

ತನ್ನ ಪ್ರಭಾವದಿಂದ ಸಂಕ್ರಾಂತಿಗೊಳಿಸಿ "ಬಾಲಕರೆ! ಹಿಂಜರಿಯ ಬೇಡಿ, ಈ ಕುಶಾಗ್ರಗಳಿಂದಲೇ ರಾಕ್ಷಸರನ್ನು ಸದೆಬಡಿಯಿರಿ" ಎಂದು ಉತ್ತೇಜಿಸುತ್ತ ವಿನೋದ ವನ್ನು ನೋಡತೊಡಗಿದನು. ಹುಡುಗರು ಮಿತಿಮೀರಿ ಹರ್ಷಗೊಂಡು ಯುದ್ಧ ವನ್ನಾಡಿದರು. ॥೨೮॥

ಕುಶಾಗ್ರಗಳು ಮಂತ್ರಮಹಿಮಾಪೂರಿತವಾದುವಾಗಿದ್ದುದರಿಂದ ಹರಿತವಾದ ಖಡ್ಗಗಳಂತೆ ಎದುರಾಳಿಗಳಾದ ರಾಕ್ಷಸರ ತಲೆಗಳನ್ನು ಸರಸರ ಕತ್ತರಿಸಲಾರಂಭಿ ಸಿದವು "ವಿಷಮಪ್ಯಮೃತಂ ಭವೇತ್ಕದಾಚಿದಮೃತಂ ವಾ ವಿಷಮೀಶ್ವರೇಚ್ಛಯಾ" ಎಂಬ ಮಾತು ಸುಳ್ಳಲ್ಲ. ವ್ಯಾಸ! ಮುಂದೆ ಕೇಳು. ರಾಕ್ಷಸರು ತಮ್ಮ ಶಸ್ತ್ರ ಗಳಿಂದ ಬಾಲಕರನ್ನು ಎಷ್ಟೇ ಬಲವಾಗಿ ಹೊಡೆಯಲಿ, ಅದರಿಂದ ಬಾಲಕರಿಗೆ ಏಟಾ ಗುವುದೊತ್ತಟ್ಟಿಗಿರಲಿ, ಅವರ ಆಯುಧಗಳೇ ಮೊಂಡು ಬೀಳಲಾರಂಭಿಸಿದವು. ಇದೆಲ್ಲ ನಡೆದುದು ಮಯೂರೇಶ್ವರನ ಅನುಗ್ರಹ ವಿಶೇಷದಿಂದಲೇ ಹೊರತು ಬೇರೆ ಯಾವ ಕಾರಣದಿಂದಲೂ ಅಲ್ಲ. ॥೨೯॥

ಈ ಸಂದರ್ಭವನ್ನರಿತ ಮೇಲಂತೂ ಬಾಲಕರು ಅತ್ಯುತ್ಸಾಹಿಗಳಾಗಿ ರಾಕ್ಷಸ ರನ್ನು ಹೊಡೆಯುತ್ತ ಅವರ ಪಾದ, ಜಾನು, ಊರು ಇತ್ಯಾದಿಗಳನ್ನೆಲ್ಲ ತುಂಡು ತುಂಡಾಗಿ ಕತ್ತರಿಸಿ ಚಲ್ಲಿದರು. ಭಂಗಹೊಂದಿದ ದೈತ್ಯರು ಅಲ್ಲಲ್ಲೇ ನೆಲಕ್ಕೆ ಉರುಳ ತೊಡಗಿದರು. ॥೩೦॥

"ಹುಲ್ಲಿನಿಂದ ಹೊಡೆದರೆ ಹತರಾಗೋಣವೆಂದರೇನು?" ಎಂದು ರಾಕ್ಷಸರು ಆಶ್ಚರ್ಯಪಟ್ಟರು ಹೀಗೆ ಆಲೋಚಿಸುತ್ತಿರುವಷ್ಟರಲ್ಲಿ ಆ ಪೈಕಿ ರಾಕ್ಷಸರನೇಕರು ಹುಲ್ಲಿ

**ಜಗರ್ಜುಸ್ತೇ ಮಯೂರೇಶಂ ಪ್ರಾಪುರ್ನತ್ವಾಸ್ಯಪೂಜಯನ್ ।**

**ಬಾಲಾ ಊಚುಃ :—**

**ಆಜ್ಞಯಾ ನಿಹತಾಃ ಸರ್ವೇ ರಾಕ್ಷಸಾಸ್ತ್ವತ್ಪ್ರಸಾದತಃ** ||೩೨||

**ಪುನರಾಜ್ಞಾಂ ನಃ ಪ್ರಯಚ್ಛ ಕರಿಷ್ಯಾಮೋ ಗುಣೇಶ್ವರ ! ।**

**ಕ ಉವಾಚ :—**

**ಆಶ್ಚರ್ಯಂ ಪರಮಂ ಜಗ್ಮುರ್ಮುನಯೋ ಯೇ ಸಮಾಗತಾಃ** ||೩೩||

---

ನಿಂದ ಏಟುಗಳನ್ನು ತಿನ್ನುತ್ತ ಒಬ್ಬೊಬ್ಬರಾಗಿ ರಣಭೂಶಾಯಿಯಾದರು. ಕೆಲವೇ ಕ್ಷಣಗಳಲ್ಲಿ ರಾಕ್ಷಸರೆಲ್ಲ ಮಡಿದರು. ಮಾದರಿಗೆ ಸಹ ಒಬ್ಬ ದೈತ್ಯನೂ ಉಳಿಯ ಲಿಲ್ಲ. ||೩೧||

ರಣಮತ್ತರಾದ ಮುನಿಬಾಲಕರು ವಿಜಯೋತ್ಸಾಹದಿಂದ ಮತ್ತೆ ಮತ್ತೆ ಗರ್ಜಿಸಿದರು. ಆದರೆ ಆ ವೇಳೆಗೆ ರಾಕ್ಷಸರ ಪೈಕಿ ಯಾರೂ ಉಳಿದೇ ಇರಲಿಲ್ಲ. ಇದನ್ನು ಕಂಡು ಬಾಲಕರು ಭಾಲಚಂದ್ರನ ಬಳಿಗೆ ಬಂದು ಪದೇ ಪದೇ ನಮಸ್ಕರಿಸಿ ಪೂಜಿಸುತ್ತ ಹೀಗೆಂದರು.

ಬಾಲಕರು :—

ದೇವ ! ನಿನ್ನ ಆಜ್ಞೆಯ ಪ್ರಕಾರ ನಾವು ರಾಕ್ಷಸರೊಡನೆ ಹೋರಾಡಿದೆವು. ಅವರನ್ನು ಕೊಂದೂ ಹಾಕಿದೆವು. ಈ ಕೆಲಸ ನಮ್ಮಿಂದ ಸಾಧಿಸಿದುದು ನಿನ್ನ ಪ್ರಸಾದ ವಿಶೇಷದಿಂದ. ||೩೨||

ಭಗವನ್, ಗುಣೇಶ್ವರ ! ಮತ್ತಾವ ಕಾರ್ಯವನ್ನು ಮಾಡಬೇಕಾಗಿದ್ದರೂ ಆಜ್ಞೆಯನ್ನು ಕೊಡು, ಈಗಲೇ ನಡೆಸಿಯೇ ಬಿಡುವೆವು.

ಬ್ರಹ್ಮಾ :-

ತಮ್ಮ ಉಸಿರಿಗೆ ತಾವೇ ಹೆದರಿ ನಡುಗುವ ಸ್ವಭಾವದವರಾದ ಈ ಬಾಲಕರು ಇಂದು ಈ ರೀತಿ ಧೈರ್ಯವನ್ನೂ, ರಣಕೌಶಲವನ್ನೂ ತೋರಿಸಿದುದು ಮಾತ್ರವಲ್ಲದೆ

**ದೃಷ್ಟ್ವಾ ಬಾಲೈರ್ಹತಾನ್ ಸರ್ವಾನ್ ರಾಕ್ಷಸಾನ್ ಕುಶಸಂಚಯೈಃ ।**
**ಪಾರ್ವತೀ ವೃಷಭಾತ್ತಸ್ಮಾದವರುಹ್ಯಾಲಿಲಿಂಗ ತಮ್ ॥೩೪॥**

**ಶಿವೋಽಪಿ ಪ್ರಾಬ್ರವೀದ್ದೇವಂ**

**ಶಿವ ಉವಾಚ :—**

**ದೃಷ್ಟಸ್ತೇಽದ್ಯ ಪರಾಕ್ರಮಃ ।**
**ತವ ವೀರ್ಯಹತಾಃ ಪೂರ್ವಂ ನಿಹತಾ ಬಾಲಕೈಃ ಕುಶೈಃ ॥೩೫॥**

**ಬ್ರಹ್ಮಾದೀನಾಮಗಮ್ಯಸ್ತೇ ಪ್ರಭಾವೋ ಗಿರಿಜಾಸುತ ! ।**
**ನ ಜ್ಞಾಯತೇ ಮಯಾ ವಾಪಿ ಕಿಂ ಕಿಮಗ್ರೇ ಕರಿಷ್ಯಸಿ ? ॥೩೬॥**

---

"ಮತ್ತೆ ಹೋರಾಡುವೆವು" ಎಂದು ಗರ್ಜಿಸಿದುದನ್ನು ಕೇಳಿ ಅಲ್ಲಿಗೆ ಬಂದ ಮುನಿಗಳು ಅತ್ಯಾಶ್ಚರ್ಯಪಟ್ಟರು. ॥೩೩॥

ಮುನಿಬಾಲಕರು ದರ್ಭೆಗಳಿಂದ ರಾಕ್ಷಸರನ್ನೆಲ್ಲ ಕೊಂದುದನ್ನು ನೋಡಿ ಪಾರ್ವತೀದೇವಿಯು ನಂದಿಕೇಶ್ವರನ ಮೇಲಿನಿಂದ ಕೆಳಕ್ಕಿಳಿದು ಬಂದು ಈ ಕಾರ್ಯಗಳಿಗೆಲ್ಲ ಹಿನ್ನೆಲೆಯಾದ ಹೇರಂಬನನ್ನು ಬಿಗಿದಪ್ಪಿದಳು. ॥೩೪॥

ಪರಶಿವನಿಗೂ ಬಹಳ ಹರ್ಷವೆನಿಸಿತು. ಗಣಪತಿಯನ್ನು ಕುರಿತು ಈರೀತಿ ಮಾತನಾಡಿ ತನ್ನ ಮೆಚ್ಚುಗೆಯನ್ನು ವ್ಯಕ್ತಗೊಳಿಸಿದನು.

ಪರಶಿವ :—

ಗಣಪತೆ! ನಿನ್ನ ಪರಾಕ್ರಮವೆಷ್ಟಿದೆ ಎಂಬುದನ್ನು ಈ ದಿನ ಪ್ರತ್ಯಕ್ಷವಾಗಿ ಕಂಡುದಾಯಿತು. ಈ ಯುದ್ಧದಲ್ಲಿ ಬಾಲಕರನ್ನು ನೀನು ನಿಮಿತ್ತಗೊಳಿಸಿದೆ. ಈ ಪೂರ್ವದಲ್ಲೇ ನೀನು ನಿನ್ನ ವೀರ್ಯದಿಂದ ರಾಕ್ಷಸರನ್ನು ಕೊಂದುಬಿಟ್ಟಿದ್ದೆ. ನಿನ್ನಿಂದ ವಿನಿಹತರಾದ ಈ ದೈತ್ಯರನ್ನು ಈ ಬಾಲಕರು ಕುಶಗಳನ್ನು ಪ್ರಯೋಗಿಸಿ ಮೃತರನ್ನೇ ಮಾರಣಮಾಡಿದರು. ॥೩೫॥

ಗಿರಿಜಾಸುತ! ನಿನ್ನ ಪ್ರಭಾವವೆಷ್ಟು ಎಂಬುದನ್ನು ಬ್ರಹ್ಮಾದಿ ದೇವೋತ್ತಮರು ಸಹ ತಿಳಿಯಲಾರರು. ಹೆಚ್ಚೇನು? ನಾನು ನಿನಗೆ ಜನಕನಾಗಿದ್ದರೂ ನನಗೇ

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ರಾಕ್ಷಸವಧೋನಾಮ' ನವಾಧಿಕ ಶತತಮೋಽಧ್ಯಾಯಸ್ಸಮಾಪ್ತಃ**

---

ಯಾವುದೂ ತಿಳಿಯದಂತಾಗಿದೆ ಎಂದ ಮೇಲೆ ಇತರರ ಪಾಡೇನು? ಅದು ಸರಿ. ಮುಂದೆ ಎಂತೆಂತಹ ಅದ್ಭುತ ಕೆಲಸಗಳನ್ನು ಮಾಡುವೆಯೋ ಎಂಬುದು ಯಾರಿಗೆ ಗೊತ್ತು? ||೩೭||

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ "ರಾಕ್ಷಸರ ವಧೆ" ಎಂಬಲ್ಲಿಗೆ ನೂರ ಒಂಭತ್ತನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಜಯಶಾಲೀ ಮಯೂರೇಶೋ ಯಾತ್ಯಗ್ರೇ ಹರ್ಷನಿರ್ಭರಃ ।**
**ಪೃಷ್ಠತೋ ಯಾಂತಿ ಬಾಲಾಸ್ತೇ ತತೋ ವೃಷಗತಃ ಶಿವಃ ॥೧॥**

**ಗೌತಮಾದ್ಯಾ ಮುನಿಗಣಾ ಲಗ್ನಸಿದ್ಧ್ಯೈ ಯಯುಸ್ತತಃ ।**
**ಗರ್ಜಂತೋ ಗರ್ಜಯಂತಸ್ತೇ ದಿಶಶ್ಚ ವಿದಿಶೋಽಪಿ ಚ ॥೨॥**

**ಯೋಜನಾವಧಿ ಗಂಡಕ್ಯಾ ಅವರುಹ್ಯ ಶಿಖಂಡಿನಃ ।**

---

॥ ಶ್ರೀ ಮಹಾಗಣಪತಯೇ ನಮಃ ॥

## ೧೧೦ ನೆಯ ಅಧ್ಯಾಯ

ಬ್ರ

ದಿಬ್ಬಣದ ಈ ಪರಿವಾರ ಮತ್ತೆ ಮುಂದೆ ಪ್ರಯಾಣವನ್ನು ಬೆಳೆಸಿತು. ಎಲ್ಲರಿಗೂ ಮುಂದುಗಡೆ ಜಯಶಾಲಿಯಾದ ಮಯೂರೇಶ್ವರನು ಹರ್ಷಭರಿತನಾಗಿ ನಡೆದಿದ್ದನು. ಹಿಂದುಗಡೆ ಅವನ ಮಿತ್ರರಾದ ಮುನಿಬಾಲಕರು ನಡೆಯುತ್ತಲಿದ್ದರು. ಇವರ ಹಿಂಬದಿಯಲ್ಲಿ ಪರಮೇಶ್ವರನು ವೃಷಭಾರೂಢನಾಗಿ ಬರುತ್ತಿದ್ದನು. ॥೧॥

ಎಲ್ಲಕ್ಕೂ ಹಿಂದೆ ಗೌತಮಾದಿ ಮುನಿಗಳು. ಎಲ್ಲರ ಧ್ಯೇಯವೂ ಲಗ್ನವನ್ನು ಸಾಧಿಸಲಿಕ್ಕಾಗಿ ಎಂಬುದನ್ನು ಒತ್ತಿ ಹೇಳಬೇಕಿಲ್ಲವಷ್ಟೇ? ಉತ್ಸಾಹದಿಂದ ಹೊರಟವರೆಂದ ಬಳಿಕ ಮೌನವಾಗಿ ನಡೆಯುವುದಕ್ಕೆ ಸಾಧ್ಯವೇ? ದಿಗ್ವಿದಿಕ್ಕುಗಳಿಂದ ಪ್ರತಿಧ್ವನಿ ಬರುವಷ್ಟು ಗಟ್ಟಿಯಾಗಿ ಗರ್ಜಿಸುತ್ತಲಿದ್ದರು. ॥೨॥

ಹೀಗೆ ಅನೇಕ ಯೋಜನಗಳಷ್ಟು ಮಾರ್ಗವನ್ನು ಕ್ರಮಿಸಿದ ಬಳಿಕ ಗಂಡಕೀ ನಗರಕ್ಕೆ ಒಂದು ಯೋಜನದಷ್ಟು ಮಾರ್ಗವಿದೆ ಎನ್ನುವಾಗಲೇ ಗಣಪತಿಯು ತನ್ನ ವಾಹನವಾದ ಮಯೂರದ ಮೇಲಿನಿಂದ ಕೆಳಕ್ಕೆ ಇಳಿದನು. ಒಡನೆಯೇ ಅವನಿಗಾಗಿ

ಅತಿಷ್ಠತ್ಸ ಮಯೂರೇಶೋ ಮಹಾರ್ಘಾಸನಮುತ್ತಮಮ್ ||೩||

ತತಃ ಸರ್ವಾನುಪಾವೇಶ್ಯ ಶಿವಂ ಗಣಮುನೀಶ್ವರಾನ್ ।
ವಾದ್ಯತ್ಸು ಸರ್ವವಾದ್ಯೇಷು ತಾನಾಹ ಸ ಮಯೂರರಾಟ್ ||೪||

ಮಯೂರೇಶ ಉವಾಚ :—

ಸಿಂಧುನಾ ನಿಹಿತಾಃ ಕಾರಾಗೃಹೇ ಶಕ್ರಾದಿದೇವತಾಃ ।
ವಿನಾ ತನ್ಮೋಚನಂ ಲಗ್ನಸಿದ್ಧಿರ್ನೈವ ಭವಿಷ್ಯತಿ ||೫||

ಅತಸ್ತನ್ಮೋಚನಾರ್ಥಾಯ ಪ್ರೇಷ್ಯತಾಂ ಸಿಂಧವೇ ಮಹಾನ್ ।
ಬುದ್ಧಿಮಾನ್ ಸ ಗೃಹೀತ್ವಾ ಚೇದಾಗಚ್ಛೇತ್ತಾನ್ ಸುರಾನಥ ||೬||

ತದಾ ಸಾಮ್ನೈವ ಸರ್ವೇಷಾಂ ಕುಶಲಂ ಹಿ ಭವಿಷ್ಯತಿ ।

---

ಅಲ್ಲಿ ದಿವ್ಯವಾದ ಒಂದು ಆಸನವು ಸಿದ್ಧವಾಯಿತು. ಅದರ ಮೇಲೆ ಸುಖವಾಗಿ ದೇವನು ಮಂಡಿಸಿದನು. ||೩||

ಅನಂತರ ಎಲ್ಲರನ್ನೂ ಕುಳಿತುಕೊಳ್ಳುವಂತೆ ಹೇಳಿದನು. ಪರಶಿವ, ಮುನಿಗಳು ಎಲ್ಲರನ್ನೂ ಸನಿಯದಲ್ಲಿ ಕುಳ್ಳಿರಿಸಿದನು. ಸಕಲ ವಿಧ ಮಂಗಳವಾದ್ಯಗಳೂ ಘೋರ್ಗರೆದವು. ಆಗ ತನ್ನವರನ್ನೆಲ್ಲ ಕುರಿತು ಮಯೂರರಾಜನು ಹೀಗೆಂದು ನುಡಿದನು. ||೪||

ಮಯೂರೇಶ್ವರ :—

ಸಿಂಧುದೈತ್ಯನಿಂದ ಪರಾಜಿತರಾದ ಬಳಿಕ ಇಂದ್ರಾದಿ ದೇವತೆಗಳು ಅವನ ನಗರದಲ್ಲಿ ಕಾರಾಗೃಹವಾಸವನ್ನು ಅನುಭವಿಸುತ್ತಲಿದ್ದಾರೆ. ಅವರನ್ನು ಬಂಧನದಿಂದ ಬಿಡುಗಡೆಮಾಡುವವರೆಗೂ ಈ ಲಗ್ನಕಾರ್ಯವು ನಡೆಯುವಂತಿಲ್ಲ.

ಆದುದರಿಂದ ನಮ್ಮ ಪೈಕಿ ಬಹಳ ಬುದ್ಧಿಶಾಲಿಯಾದ ಒಬ್ಬನನ್ನು ದೈತ್ಯನ ಬಳಿಗೆ ನಿಯೋಗ ಕಳಿಸಿ, ಆ ದೇವತೆಗಳನ್ನು ಬಿಡುಗಡೆಮಾಡಲು ಯತ್ನಿಸಿ ಹೋದವನು ತನ್ನ ಬುದ್ಧಿಚಾತುರ್ಯದಿಂದ ಅವರನ್ನೇನಾದರೂ ಬಿಡಿಸಿಕೊಂಡು ಬಂದರೆ ಆಗ ||೬||

ಕೇವಲ ಸಾಮೋಪಾಯದಿಂದಲೇ ಎಲ್ಲರಿಗೂ ಕುಶಲ ಉಂಟಾಗುವುದು. ಒಂದು

**ನೋ ಚೇದ್ಯುದ್ಧೇನ ಜೇಷ್ಯಾಮೋ ರಣೇ ಸಿಂಧುಂ ಮಹಾಬಲಮ್ ॥೭॥**

**ಮೋಚಯಿಷ್ಯಾಮಿ ತಾನ್ ದೇವಾಂಸ್ತತೋ ಲಗ್ನಂ ಭವಿಷ್ಯತಿ ।**

**ಕ ಉವಾಚ :—**

**ಏವಂ ತದ್ವಚನಂ ಶ್ರುತ್ವಾ ಪ್ರಾಹುಃ ಸರ್ವೇ ಗುಣೇಶ್ವರಮ್ ॥೮॥**

**ಸರ್ವ ಊಚುಃ :—**

**ಸಮ್ಯಗುಕ್ತಂ ಮಯೂರೇಶ ! ಸುಧಯಾ ಸದೃಶಂ ವಚಃ ।**
**ಬಾಲಭಾವೇಽಪಿ ತೇ ಬುದ್ಧಿರ್ಬೃಹಸ್ಪತಿಸಮಾ ಶುಭಾ ॥೯॥**

---

ವೇಳೆ ರಾಕ್ಷಸನು ನಮ್ಮ ಪ್ರತಿನಿಧಿಯ ಹಿತೋಕ್ತಿಯನ್ನು ಕೇಳದೇ ದೇವತೆಗಳನ್ನು ಬಂಧನದಿಂದ ಬಿಡುಗಡೆಮಾಡದಿದ್ದರೆ ಮುಂದಿನ ಉದ್ಯಮ ಯುದ್ಧವೆಂಬುದು ತಿಳಿದ ಮಾತೇ ಆಗಿದೆ. ಸಿಂಧುದೈತ್ಯ ಮಹಾಬಲಿಷ್ಠನಾಗಿರಬಹುದು. ಆದರೇನು ? ನಮಗೆ ಅವನ ಗಣನೆ ಇದೆಯೇನು ? ॥೭॥

ಅವನನ್ನು ಜಯಿಸಿ ಆ ದೇವತೆಗಳನ್ನು ಬಂಧನದಿಂದ ಬಿಡಿಸುವೆನು. ಅವರೂ ಬಂದ ನಂತರವೇ ಲಗ್ನ ನಡೆಯಲಿ.

ಬ್ರಹ್ಮಾ :—

ಗುಣೇಶ್ವರನಾಡಿದ ಈ ಮಾತುಗಳನ್ನು ಕೇಳಿ ಎಲ್ಲರೂ ಒಮ್ಮೆಲೇ ಹೀಗೆಂದು ನುಡಿದರು. ॥೮॥

ಜನರು :—

ಮಯೂರೇಶ್ವರ ! ನೀನಾಡಿದ ಮಾತುಗಳು ಅಮೃತಕ್ಕೆ ಸದೃಶವಾದುವು. ಸರಿಯಾದ ಮಾತನ್ನೇ ಆಡಿದೆ. ವಯಸ್ಸಿನಲ್ಲಿ ಚಿಕ್ಕವನಾಗಿದ್ದರೂ ನಿನ್ನ ಬುದ್ಧಿಯು ಸುರಗುರು, ಬೃಹಸ್ಪತ್ಯಾಚಾರ್ಯರಿಗೆ ಸಮಾನವಾದುದು. ಆದುದರಿಂದಲೇ ಶುಭಕರವಾದ ಈ ಮಾತುಗಳು ನಿನ್ನ ಮುಖದಿಂದ ಹೊರಟಿವೆ. ॥೯॥

**ಪುಷ್ಪದಂತಂ ಮಹಾಬುದ್ಧಿಂ ನೀತಿಶಾಸ್ತ್ರವಿಶಾರದಮ್ ।**
**ಪ್ರೇಷ್ಯತಾಂ ಸಿಂಧುನಿಕಟೇ ದೇವಮೋಚನಹೇತವೇ ॥೧೦॥**

**ವಕ್ತಾರಂ ಬಲಿನಂ ಶ್ರೇಷ್ಠಂ ಸ್ತೋತ್ರಸಂತೋಷಿತೇಶ್ವರಮ್ ।**

**ಕ ಉವಾಚ :—**

**ತತ ಊಚೇ ಪುಷ್ಪದಂತೋ ಮಯೂರೇಶಂ ಸುರೇಶ್ವರಮ್ ॥೧೧॥**

**ಪುಷ್ಪದಂತ ಉವಾಚ :—**

**ಮಹಿಮಾ ತೇ ಮಯೂರೇಶ ! ಮನೋವಾಚಾಮಗೋಚರಃ ।**
**ಜಾನಂತಿ ನ ಜನಾ ಮಾಯಾಮೋಹಿತಾಸ್ತವ ನಿತ್ಯದೃಕ್ ॥೧೨॥**

---

ನಮ್ಮ ಪೈಕಿ ಮಹಾಬುದ್ಧಿಶಾಲಿ, ಸಕಲ ನೀತಿಗಳನ್ನೂ ತಿಳಿದವನು ಎಂದರೆ ಪುಷ್ಪದಂತನೊಬ್ಬನೇ ಸರಿ. ದೈತ್ಯನಾದ ಸಿಂಧುವಿನ ಬಳಿಗೆ ಹೋಗಿ ಸುರವರರನ್ನು ಬಿಡುಗಡೆ ಮಾಡಿಸಿಕೊಂಡು ಬರುವ ಹೊಣೆಯನ್ನು ಹೊರಲಿಕ್ಕೆ ಇವನು ಅರ್ಹ ನಾಗಿದ್ದಾನೆ. ಆದುದರಿಂದ ಇವನನ್ನೇ ಈ ಕೆಲಸಕ್ಕೆ ಕಳಿಸಿ. ॥೧೦॥

ಇವನ ವಕ್ತೃತ್ವ ಸಾಮರ್ಥ್ಯ, ಬಲ, ಶ್ರೇಷ್ಠವಾದ ಗುಣಗಳು, ಮತ್ತು ಸ್ತೋತ್ರಮಾಡಿದುದರಿಂದಲೇ ಪರಮೇಶ್ವರನನ್ನು ಒಲಿಸಿಕೊಂಡುದು ಇತ್ಯಾದಿ ಸಂಗತಿ ಎಲ್ಲವೂ ಸರ್ವವಿದಿತವಾಗಿದೆ.

ಬ್ರಹ್ಮಾ:—

ಆಗ ಪುಷ್ಪದಂತನು ಮುಂದೆ ಬಂದು ಸುರೇಶ್ವರನಾದ ಮಯೂರೇಶ್ವರನನ್ನು ಕುರಿತು ಹೀಗೆಂದು ವಿಜ್ಞಾಪಿಸಿಕೊಂಡನು. ॥೧೧॥

ಪುಷ್ಪದಂತ :—

ಭಗವನ್, ಮಯೂರೇಶ್ವರ! ನಿನ್ನ ಮಹಿಮೆಯು ವಾಙ್ಮನೋಽತೀತವಾಗಿದೆ. ನಿತ್ಯನೂ, ದೃಕ್ಸ್ವರೂಪನೂ ಆದ ನಿನ್ನನ್ನು ಮಾಯಾಮೋಹಿತರಾದ ಮುಗ್ಧ ಜನರು ಅರಿಯಲಾರರು. ॥೧೨॥

**ಭೂ—ಭಾರಹರಣಾರ್ಥಂ ತ್ವಮವತೀರ್ಣಃ ಶಿವಾಲಯೇ ।**
**ನ ಮಾಂ ಪ್ರೇಷಯ ತತ್ರ ತ್ವಮನ್ಯಂ ಪ್ರೇಷಯ ಸಾಂಪ್ರತಮ್ ॥೧೩॥**

**ಅಪಾರಸೇನಯಾ ಯುಕ್ತಂ ಸಿಂಧುದೈತ್ಯಂ ಮಹಾಬಲಮ್ ।**
**ಉದ್ಧತಂ ಬಲಿನಂ ದ್ರಷ್ಟುಮಹಂ ಶಕ್ಯಾಮಿ ನ ಕ್ವಚಿತ್ ॥೧೪॥**

**ಯುದ್ಧಮೇವ ಕರಿಷ್ಯಾಮಿ ತತೋ ದೋರ್ದಂಡತೇಜಸಾ ।**
**ಯದಿ ಸಾಮ್ನಾ ಭವೇತ್ಕಾರ್ಯಂ ಯುದ್ಧಂ ತತ್ರ ವೃಥಾ ಮತಮ್ ॥೧೫॥**

**ದಾನಂ ಭೇದೋ ವೃಥಾ ದಂಡೋ ನೀತಿರೇಷಾ ಸನಾತನೀ ।**

ದುಷ್ಟ ದೈತ್ಯರ ಬಾಹುಳ್ಯದಿಂದ ಭೂಮಿಗೆ ಉಂಟಾದ ಭಾರವನ್ನು ಪರಿಹರಿಸಲಿಕ್ಕಾಗಿ ಪರಶಿವನ ಮಂದಿರದಲ್ಲಿ ನೀನು ಅವತರಿಸಿರುವೆ. ದೇವ ! ಸಿಂಧು ದೈತ್ಯನ ಬಳಿಗೆ ನನ್ನನ್ನು ದೂತನನ್ನಾಗಿ ಕಳಿಸಬೇಡ. ಪ್ರಕೃತ ಮತ್ತೆ ಯಾರನ್ನಾದರೂ ಈ ಕಾರ್ಯಕ್ಕೆ ನಿಯೋಜಿಸು. ॥೧೩॥

ಅಪಾರಸೈನ್ಯದಿಂದ ಕೂಡಿದ ಮಹಾಬಲಶಾಲಿಯೂ ಬಲದಿಂದ ಉನ್ಮತ್ತನೂ ಆದ ಆ ಸಿಂಧುದೈತ್ಯನನ್ನು ಸಹನೆಯಿಂದ ನೋಡಲು ನನ್ನಿಂದ ಎಂದೆಂದಿಗೂ ಸಾಧ್ಯವಾಗಲಾರದು. ॥೧೪॥

ಅಂಥವರನ್ನು ಕಂಡಕೂಡಲೇ ನನ್ನ ಭುಜಗಳು ಏಕಪ್ರಕಾರವಾಗಿ ಸ್ಫುರಿಸಲಾರಂಭಿಸುವವು. ಪ್ರಕ್ಷುಭಿತಸ್ವಭಾವದವನಾದ ನಾನು ಹಾಗೇನಾದರೂ ಯುದ್ಧವನ್ನಾರಂಭಿಸಿದೆನೆಂದರೆ ದೂತಕಾರ್ಯವೇ ಕೆಟ್ಟುಹೋದೀತು. ಸಾಮೋಪಾಯದಿಂದಲೇ ಕಾರ್ಯ ಸಾಧಿಸುವಂತಿದ್ದರೆ ಆಗ ಯುದ್ಧೋದ್ಯಮವು ವ್ಯರ್ಥವಲ್ಲವೇ ? ॥೧೫॥

ಸಾಮ, ದಾನ—ಭೇದಗಳು ಸಾಧಿಸದಿದ್ದಾಗ ಮಾತ್ರ ದಂಡನೀತಿಯನ್ನು ಉಪಯೋಗಿಸುವುದು ಸನಾತನವಾದ ಧರ್ಮವಾಗಿದೆ.

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಮುವಾಚ ಪಾರ್ವತೀಪತಿಃ ॥೧೬॥**

**ಶಿವ ಉವಾಚ :—**

**ಸಮ್ಯಗುಕ್ತಃ ಪುಷ್ಪದಂತ! ನೀತಿಮಾರ್ಗಃ ಪುರಾತನಃ ।**
**ಕ್ರೋಧವಾನ್ನ ಕ್ಷಮಃ ಸಾಮ್ನಿ ಕೇವಲಂ ಬಲವಾನ್ ಪರಃ ॥೧೭॥**

**ಧರಿಷ್ಯತಿ ಮಹಾದುಷ್ಟಂ ಪ್ರೇಷಿತಶ್ಚೇತ್ಷಡಾನನಃ ।**
**ಪ್ರೇಷಿತೋ ವೀರಭದ್ರಶ್ಚೇತ್ಕ್ರೋಧಮೇವ ಕರಿಷ್ಯತಿ ॥೧೮॥**

**ಶೃಂಗೀ ಚೇತ್ಪ್ರೇಷಿತಸ್ತತ್ರ ಸಂಹಾರಂ ಸ ವಿಧಾಸ್ಯತಿ ।**

---

ಬ್ರಹ್ಮಾ :—

ಪುಷ್ಪದಂತನಾಡಿದ ಸಮಂಜಸವಾದ ಈ ಮಾತುಗಳನ್ನು ಮೆಚ್ಚುತ್ತ ಪಾರ್ವತೀ ರಮಣನು ಹೀಗೆಂದು ಮಾತನಾಡಿದನು. ॥೧೬॥

ಶಿವ :—

ಪುಷ್ಪದಂತ ಸನಾತನವಾದ ಈ ನೀತಿಮಾರ್ಗವನ್ನು ನೀನು ಚೆನ್ನಾಗಿ ಅರಿತಿರುವೆ. ಆದುದರಿಂದಲೇ ಸ್ಪಷ್ಟವಾಗಿ ಮಾತನಾಡಿದೆ. ಕೋಪಿಷ್ಠನಾದವನು ಸೌಮ್ಯತನದಿಂದ ಸಾಧಿಸಬಹುದಾದ ಕಾರ್ಯಗಳಿಗೆ ನಿಯೊಗ ಹೋಗಲು ಎಂದೆಂದಿಗೂ ಅರ್ಹನಲ್ಲ. ಅಂಥವನಿಂದ ಶ್ರಮಸಾಧ್ಯವಾದ ಮತ್ತಾವ ಕೆಲಸವನ್ನಾದರೂ ಮಾಡಿಸಬಹುದು. ॥೧೭॥

ಕುಮಾರ; ಷಣ್ಮುಖನನ್ನು ಬೇಕಾದರೆ ಈ ಕಾರ್ಯಸಾಧನೆಗೆ ಕಳಿಸಬಹುದಿತ್ತು. ಅವನೂ ಸಹ ನಿನ್ನಂತೆಯೇ. ದುಷ್ಟರನ್ನು ಕಂಡೊಡನೆಯೇ ಯಾವ ಮಾತನ್ನೂ ಆಡದೆ ದರ ದರ ಎಳೆದು ತಂದುಬಿಡುವನು. ಹೋಗಲಿ, ವೀರಭದ್ರನನ್ನು ಕಳಿಸೋಣ ಎಂದರೆ ಅವನು ಸಿಡಿಲಿನ ಮರಿ. ಪ್ರಸಂಗವು ಮತ್ತಿಷ್ಟು ವಿಕೋಪಕ್ಕೇ ಹೋಗಿಬಿಡುವುದು. ಅವನ ಸ್ವಭಾವವೇ ಅಂತಹದು. ॥೧೮॥

ಸಂಧಾನಕ್ಕೆ ಶೃಂಗಿಯನ್ನು ಕಳಿಸೋಣವೆಂದರೆ ಅವನು ನಿಮ್ಮೆಲ್ಲರಿಗಿಂತಲೂ

**ಪ್ರಮಥಃ ಪ್ರೇಷಿತೋ ಮತ್ತೋ ನ ಜಾನೇ ಕಿಂ ಕರಿಷ್ಯತಿ ? ||೧೯||**

**ಪ್ರೇಷಿತಶ್ಚೇದ್ಭೂತರಾಜೋ ಭೀಷಯಿಷ್ಯತಿ ತಾಂ ಸಭಾಮ್ ।**
**ಸ್ತ್ರೀಸಂಭೋಗರತಃ ಸ್ಯಾತ್ತು ಪ್ರೇಷಿತೋ ರಕ್ತಲೋಚನಃ ||೨೦||**

**ಕ ಉವಾಚ :—**

**ತತೋಽಬ್ರವೀನ್ಮಯೂರೇಶೋ ನಿರಸ್ತೇಷು ಚ ತೇಷು ಚ ।**

**ಗಣೇಶ ಉವಾಚ: —**
**ನಂದೀ ಸಮುದ್ರಗಂಭೀರೋ ಧೈರ್ಯೇ ಪರ್ವತಸನ್ನಿಭಃ ||೨೧||**

**ಬುದ್ಧ್ಯಾ ಬೃಹಸ್ಪತಿಸಮೋ ಜಂಭಾರಿಸದೃಶೋ ಬಲೇ ।**

ತೀಕ್ಷ್ಣಸ್ವಭಾವದವನು. ಕಾರಣವಿರಲಿ, ಇಲ್ಲದಿರಲಿ, ಸಂಹಾರಕಾರ್ಯವೇ ಅವನ ಮಾತಿನ ಮಂಗಲಾಚರಣೆ. ಪ್ರಮಥನೇ ಹೋಗಿ ಬರಲೆಂದೆನೋ. ಸರಿ, ಅವನು ಮೊದಲೇ ಉನ್ಮತ್ತನು- ಏನೇನನ್ನಾದರೂ ಮಾಡಿಬಿಡುವನು. ಇವನ ವಿಷಯದಲ್ಲಿ ನನಗೇ ಧೈರ್ಯ ಸಾಲದು. ||೧೯||

ಭೂತರಾಜನನ್ನೇ ಕಳಿಸಿ ನೋಡೋಣವೆಂದರೆ ಮೊದಲೇ ಭಯಂಕರಾಕಾರನಾದ ಅವನು ಮಾತನಾಡುವುದಕ್ಕೆ ಮುಂಚಿತವಾಗಿಯೇ ಸಭಿಕರನ್ನೆಲ್ಲ ಹೆದರಿಸಿ ಓಡಿಸಿ ಬಿಡುವನು. ಆ ಮೇಲೆ ಯಾರೊಡನೆ ಸಂಧಾನವನ್ನು ಮಾಡುವುದು ? ಉಳಿದವನೆಂದರೆ " ರಕ್ತಲೋಚನ ". ಅವನೋ ಅತಿಕಾಮಿ, ಸದಾ ಸ್ತ್ರೀವ್ಯಾಮೋಹದಲ್ಲೇ ತೊಳಲತಕ್ಕವನು. ||೨೦||

ಬ್ರಹ್ಮಾ:—

ಶಿವನ ಈ ಮಾತುಗಳನ್ನು ಕೇಳಿ ತನ್ನ ತಂದೆಯು ಪ್ರಮಥಮುಖಂಡರನ್ನೆಲ್ಲ ನಿರಾಕರಿಸಿದ ಬಳಿಕ ತಾನು ತನ್ನ ಅಭಿಮತವನ್ನು ವ್ಯಕ್ತಪಡಿಸಿದನು.

ಗಣೇಶ :—

ನಮ್ಮ ನಂದಿ ಇರುವನಲ್ಲ? ಅವನ ಸ್ವಭಾವ ಸಮುದ್ರದಂತೆ ಗಂಭೀರವಾದುದು ಧೈರ್ಯದಲ್ಲಿ ಅವನು ಮಹಾಮೇರು ಪರ್ವತಕ್ಕೆ ಸದೃಶನಾದವನು. ||೨೧||

ಬುದ್ಧಿಯಲ್ಲಿ ಬೃಹಸ್ಪತಿಯನ್ನೂ ಮೀರಿಸಿದವನು. ದೇವರಾಜನಿಗೆ ಸರಿ ಎನಿಸಿದ

ಧೂರ್ತಃ ಪರಾಶಯಜ್ಞಾತಾ ಪ್ರೇಷ್ಯತಾಂ ಸಾಮಹೇತವೇ ||೨೨||

ಶಿವ ಉವಾಚ :—

ಸಮ್ಯಗುಕ್ತಂ ಮಯೂರೇಶ ! ಜ್ಞಾತಾಸಿ ಗುಣದೋಷಯೋಃ ।
ನಂದಿನೇ ದೀಯತಾಂ ವಸ್ತ್ರಂ ರತ್ನಾನಿ ವಿವಿಧಾನಿ ಚ ||೨೩||

ಕ ಉವಾಚ :—

ತತೋ ದದೌ ಮಯೂರೇಶಸ್ತಾನಿ ತಸ್ಯ ಶಿವಾಜ್ಞಯಾ ।
ಆಜ್ಞಾಪಯಾಮಾಸ ಚ ತಂ

ಮಯೂರೇಶ ಉವಾಚ :—

ಗಚ್ಛ ಸಿಂಧುಂ ಮಹಾಬಲಮ್ ||೨೪||

---

ಬಲವುಳ್ಳವನು. ಮಹಾ ಚಾಣಾಕ್ಷನಾದುದರಿಂದ ಪರರ ಹೃದಯದಲ್ಲೇನಿದೆ ಎಂಬುದನ್ನು ಬಹು ಬೇಗನೆ ಅರಿಯತಕ್ಕವನು. ಸಾಮೋಪಾಯದಲ್ಲಿ ಇವನ ಚತುರನಾದವನು. ಇವನನ್ನೇ ಸಿಂಧುವಿನ ಬಳಿಗೆ ಕಳಿಸಿರಿ. ||೨೨||

ಶಿವ :—

ಮಯೂರೇಶ ! ಸರಿಯಾಗಿ ಮಾತನಾಡಿದೆ. ಜನರ ಗುಣ-ದೋಷಗಳನ್ನೆಲ್ಲ ನೀನು ಬಹಳ ಸರಿಯಾಗಿ ಅರಿತಿರುವೆ. ಎಲ್ಲಿ ! ವಸ್ತ್ರ, ವಿವಿಧರತ್ನಗಳಿಂದ ಕೂಡಿದ ತಾಂಬೂಲವನ್ನು ಮೊದಲು ನಂದಿಗೆ ಕೊಡಿ. ||೨೩||

ಬ್ರಹ್ಮಾ :—

ಪರಶಿವನ ಆಜ್ಞೆಯಂತೆ ಮಯೂರೇಶನು ಸ್ವತಃ ಆ ತಾಂಬೂಲವನ್ನು ಕೈಯಿಗೆ ತೆಗೆದುಕೊಂಡು ನಂದಿಯ ಕೈಯ್ಯಲ್ಲಿ ಕೊಟ್ಟು ಹೀಗೆಂದು ಆಜ್ಞೆಮಾಡಿದನು.

ಮಯೂರೇಶ :—

ನಂದೀ ! ನೀನು ಮಹಾಬಲಶಾಲಿಯಾದ ಆ ಸಿಂಧುದೈತ್ಯನ ಸಮೀಪಕೆ ಹೋಗು. ||೨೪||

ಯಥಾ ದೇವಾ ವಿಮುಚ್ಯಂತೇ ತಥಾ ನೀತಿರ್ವಿಧೀಯತಾಮ್ ।

ಕ ಉವಾಚ :—

ಸ ತು ನತ್ವಾ ಮಯೂರೇಶಂ ಶಿವಾಂ ಚ ಶಿವಮೇವ ಚ ॥೨೫॥

ಗಣಾನ್ ಸರ್ವಾನ್ ಮಹಾವಾಕ್ಯೈಃ ಸ್ತುತ್ವಾ ತಂ ಚ ಶಿವಂ ಶಿವಾಮ್ ।
ಉವಾಚ ಬುದ್ಧಿಸಂಪನ್ನೋ ದಿಷ್ಟ್ಯೇಚಿಕಿಮಿದಂ ವಚಃ ॥೨೬॥

ನಂದ್ಯುವಾಚ :—

ಸ ಮಹಾನ್ ಜಾಯತೇ ಲೋಕೇ ಯಸ್ಯ ವಃ ಸ್ಯಾದನುಗ್ರಹಃ ।
ಅತೋಽಹಂ ಶ್ರೇಷ್ಠತಾಂ ನೀತಃ ಸಾಧಯಿಷ್ಯೇ ಪ್ರಯೋಜನಮ್ ॥೨೭॥

---

ಯಾವ ರೀತಿ ಮಾತುಗಳನ್ನಾಡಿದರೆ ದೇವತೆಗಳು ಬಂಧನದಿಂದ ಬಿಡುಗಡೆಯನ್ನು ಹೊಂದಿಯಾರೋ, ಆ ತರಹದ ನೀತಿಯನ್ನು ಪ್ರಯೋಗಿಸು.

ಬ್ರಹ್ಮಾ :—

ಗಣಪತಿಯ ಆಜ್ಞಾವಚನವನ್ನು ಕೇಳಿದೊಡನೆಯೇ ನಂದಿಯು ಎದ್ದು ನಿಂತು ಮಯೂರೇಶನನ್ನೂ, ಪಾರ್ವತೀದೇವಿ; ಮತ್ತು ಪರಶಿವನನ್ನು ಭಕ್ತಿಯಿಂದ ವಂದಿಸಿದನು. ॥೨೫॥

ಅನಂತರ ತನಗೆ ಹಿರಿಯರಾದ ಸಹೋದ್ಯೋಗಿ ಪ್ರಮಥಗಳನ್ನು ವಂದಿಸಿದನು. ಮಹಾಬುದ್ಧಿಸಂಪನ್ನನಾದುದರಿಂದ ಉಪನಿಷದ್ವಾಕ್ಯಗಳನ್ನು ಉಚ್ಚರಿಸುತ್ತ ಶಿವ-ಶಿವೆಯರನ್ನು ಸ್ತುತಿಸಿದನು. ದೈವವೇ ನಂದಿಯ ಮುಖದಿಂದ ಈ ರೀತಿಯ ಸ್ತೋತ್ರವನ್ನು ನುಡಿಸಿತು. ॥೨೬॥

ನಂದೀ :—

ಜಗಜ್ಜನನೀ-ಜನಕರೇ! ಯಾರು ನಿಮ್ಮ ಅನುಗ್ರಹಕ್ಕೆ ಪಾತ್ರರಾಗುವರೋ ಅವರು ಲೋಕದಲ್ಲಿ ಮಹಾಮಹಿಮರೆನಿಸುವರು. ಆ ಕಾರಣದಿಂದಲೇ ಇಂದು

ವಃ ಪ್ರಸಾದೇನ ಭೂಗೋಲಂ ವಿಧಾಸ್ಯೇ ಸ್ಮುಬ್ಜಮಂಜಸಾ ।
ಶೇಷಂ ಸೂರ್ಯಂ ವೋ ನಿಕಟೇ ಆನಯಿಷ್ಯೇ ನ ಸಂಶಯಃ ॥೨೮॥

ಕ ಉವಾಚ :—

ಏವಮುಕ್ತ್ವಾ ಯಯೌ ನಂದೀ ಸಿಂಧುದೈತ್ಯಂ ಬಲಾನ್ವಿತಃ ।
ಗತಃ ಸ ನಗರದ್ವಾರಂ ಮನೋವೇಗೇನ ಧೈರ್ಯವಾನ್ ॥೨೯॥

ಧ್ಯಾಯನ್ ಗಣೇಶಂ ಶಂಭು ಚ ಶಿವಾಂ ಸರ್ವಾರ್ಥಸಾಧಿಕಾಮ್ ।
ಋತಾಂ ಕರ್ತುಂ ಪ್ರತಿಜ್ಞಾಂ ತಾಂ ಪ್ರಾರ್ಥಯಾಮಾಸ ಚೇತಸಿ ॥೩೦॥

ನಾನು ಶ್ರೇಷ್ಠವಾದ ಈ ಸ್ಥಾನವನ್ನು ಗಳಿಸಿದ್ದೇನೆ. ಈಗ ಅಪ್ಪಣೆಯಾದಂತೆ ಕಾರ್ಯವು ಪ್ರಯೋಜನಕಾರಿಯಾಗುವ ಹಾಗೆ ಮಾಡಿಕೊಂಡು ಬರುವೆನು. ॥೨೭॥

ನಿಮ್ಮ ಅನುಗ್ರಹ ಒಂದಿದ್ದರೆ ಇಡೀ ಈ ಭೂಮಿಯನ್ನು ಮುಷ್ಟಿಯಲ್ಲಿ ಅಡಕವಾಗುವಂತೆ ಒಡನೆಯೇ ಮಾಡಬಲ್ಲೆ. ಭೂಮಿಯನ್ನು ಹೊತ್ತ ಶೇಷನನ್ನು, ಜಗಜ್ಜ್ಯೋತಿಗಳಾದ ಸೂರ್ಯ–ಚಂದ್ರರನ್ನೂ ಹಿಡಿದು ನಿಮ್ಮ ಬಳಿಗೆ ತರಬಲ್ಲೆ. ಇದರಲ್ಲಿ ಸಂಶಯವೇ ಇಲ್ಲ. ॥೨೮॥

ಬ್ರಹ್ಮ:—

ಹೀಗೆ ಹೇಳಿ ನಂದಿಯು ಸಾಕಷ್ಟು ಸೈನ್ಯವನ್ನು ಸಂಗಡ ಕರೆದುಕೊಂಡು ಸಿಂಧು ದೈತ್ಯನ ಬಳಿಗೆ ಹೋದನು. ಮಹಾಧೈರ್ಯಶಾಲಿಯಾದ ನಂದಿಯು ಮನೋವೇಗದಿಂದ ದಾರಿ ನಡೆಯುತ್ತ ಹೋಗಿ ಸಿಂಧುದೈತ್ಯನ ರಾಜಧಾನಿಯ ಮಹಾದ್ವಾರವನ್ನು ಸಮೀಪಿಸಿದನು. ॥೨೯॥

"ನಾನು ಎಲ್ಲರೆದುರು ಮಾಡಿದ ಪ್ರತಿಜ್ಞೆ ಸತ್ಯವಾಗಲಿ, ಸುಳ್ಳಾಗುವುದು ಬೇಡ" ಎಂಬುದಕ್ಕಾಗಿ ಮಹಾಗಣಪತಿಯನ್ನೂ, ಶಂಭುವನ್ನೂ, ಸರ್ವಾರ್ಥಸಿದ್ಧಿಕರಳಾದ ಜಗದಂಬೆಯನ್ನೂ ಮನಸ್ಸಿನಲ್ಲೇ ಧ್ಯಾನಮಾಡಿ "ಅನುಗ್ರಹಿಸಿ" ಎಂದು ಮನದಲ್ಲೇ ಪ್ರಾರ್ಥಿಸಿದನು. ॥೩೦॥

**ಇತಿ ಶ್ರೀ ಗಣೇಶ ಪುರಾಣೇ ಉತ್ತರಖಂಡೇ ದಶಾಧಿಕ ಶತತಮೋಽಧ್ಯಾಯಃ ||**

ಇಲ್ಲಿಗೆ ಶ್ರೀ ಗಣೇಶ ಪುರಾಣ ಉತ್ತರಖಂಡದಲ್ಲಿ " ದೇವತಾಬಂಧವಿಮೋಚನ ಪ್ರಯತ್ನ ವರ್ಣನೆ " ಎಂಬಲ್ಲಿಗೆ ನೂರ ಹತ್ತನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥೈಕಾದಶೋತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಪ್ರಾಯಾತ್ಸಭಾಂ ಮಹಾರಮ್ಯಾಂ ದ್ವಾರಪಾಲನಿವೇದಿತಃ ।**
**ನಂದೀ ನನಂದ ತಂ ದೃಷ್ಟ್ವಾ ದೈತ್ಯಂ ಸಿಂಧುಂ ಸಭಾಗತಮ್ ॥೧॥**

**ಮಹಾವೀರೈಃ ಪರಿವೃತಂ ನಾನಾಶಸ್ತ್ರೇಷುಪಾಣಿಭಿಃ ।**
**ವಾರಾಂಗನಾನೃತ್ಯರತಂ ವೀಜ್ಯಮಾನಂ ನೃಭಿರ್ಮುದಾ ॥೨॥**

॥ ಶ್ರೀ ಮಂಗಲಮೂರ್ತಯೇ ನಮಃ

## ೧೧೧ ನೆಯ ಅಧ್ಯಾಯ

ಬ್ರಹ್ಮಾ:—

ಮಹಾ ದ್ವಾರಪಾಲಕನು ನಿರ್ದೇಶಿಸಿದ ಮಾರ್ಗವಾಗಿ ನಂದಿಯು ಅಸುರನ ಸಿಂಧುದೈತ್ಯನ ಸಭಾಂಗಣವನ್ನು ಪ್ರವೇಶಿಸಿದನು. ಸಭಾಸ್ಥಾನವು ಬಹಳ ರಮಣೀಯವಾಗಿದ್ದಿತು. ಆ ಸಭಾ ಮಧ್ಯೆ ಕುಳಿತಿದ್ದ ದೈತ್ಯಾಧಿಪತಿ; ಸಿಂಧುವನ್ನು ನೋಡಿ ನಂದಿಯು ಸಂತೋಷಪಟ್ಟನು. ॥೧॥

ಅವನ ಸೈನಿಕರಾದ ವೀರಾಗ್ರಣಿಗಳು ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ಹಿಡಿದು ಕೊಂಡೇ ರಾಕ್ಷಸನನ್ನು ಸುತ್ತುವರಿದು ಕುಳಿತಿದ್ದರು. ರಾಜನ ಎದುರುಗಡೆ ವೇಶ್ಯೆಯು ನರ್ತಿಸುತ್ತಿದ್ದಳು. ರಾಜನು ನೃತ್ಯವನ್ನು ಕಣ್ಣು ತುಂಬ ನೋಡುವುದರಲ್ಲಿ ಆಸಕ್ತ ಚಿತ್ತನಾಗಿದ್ದನು. ಪರಿವಾರದವರು ದೈತ್ಯನಿಗೆ ಚಾಮರದ ಮೂಲಕ ಮಂದವಾಗಿ ಗಾಳಿಯನ್ನು ಬೀಸುತ್ತಲಿದ್ದರು. ॥೨॥

ವಾದ್ಯತ್ಸು ಸರ್ವವಾದ್ಯೇಷು ನಾದನಾದಿತದಿಕ್ಷು ಚ ।
ದೃಷ್ಟ್ವಾ ತಂ ನಂದಿನಂ ಕೇಚಿನ್ಮೇನಿರೇ ರವಿಮಾಗತಮ್ ॥೩॥

ಮಹಾಕಾಯಂ ಮಹಾವೀರಂ ವೀಕ್ಷ್ಯ ಕೇಚಿಚ್ಚಕಂಪಿರೇ ।
ಜಗರ್ಜುರಪರೇ ತತ್ರ ಭೀಷಯಂತೋ ಬಲಾದಮುಮ್ ॥೪॥

ನ ಬಿಭೇತಿ ಮಹಾಧೈರ್ಯೋನ್ನಂದೀ ಸ್ವ-ಬಲಗರ್ವಿತಃ ।
ಕರಸಂಜ್ಞಾರ್ಪಿತಂ ನಂದೀ ಭೇಜ ಆಸನಮುತ್ತಮಮ್ ॥೫॥

ಸರ್ವೇ ತಟಸ್ಥತಾಂ ಯಾತಾಶ್ಚಿತ್ರಗಾ ಇವ ಪುತ್ತಲಾಃ ।
ಬುದ್ಧ್ವಾ ತದಿಂಗಿತಂ ಪ್ರಾಹ ನಂದೀ ವಾಚಸ್ಪತಿಃ ಪರಃ ॥೬॥

ಎಲ್ಲ ವಿಧ ವಾದ್ಯಗಳೂ ಧ್ವನಿಗೈಯ್ಯುತ್ತಲಿದ್ದುದರಿಂದ ದಿಕ್ಕುಗಳಲ್ಲೆಲ್ಲ ಪ್ರತಿಧ್ವನಿಯಾಗುತ್ತಲಿದ್ದಿತು. ಸಭಿಕರಲ್ಲನೇಕರು ಮಹಾತೇಜಸ್ವಿಯಾದ ನಂದಿಯನ್ನು ನೋಡಿ ಸೂರ್ಯನೇ ಕೆಳಕ್ಕಿಳಿದು ಬಂದನೆಂದು ತಿಳಿದರು. ॥೩॥

ನಂದಿಯ ದೇಹ ಪರಿಪುಷ್ಟವಾಗಿದ್ದುದರಿಂದಲೂ ಬಲ-ಪರಾಕ್ರಮಗಳು ಅವನ ಪ್ರತ್ಯವಯವಗಳಲ್ಲೂ ಎದ್ದು ಕಾಣುತ್ತಲಿದ್ದುದರಿಂದಲೂ ಕೆಲವರು ಇವನನ್ನು ನೋಡಿ ನಡುಗಿಹೋದರು. ಯುದ್ಧಕುತೂಹಲಿಗಳಾದ ಮತ್ತೆ ಕೆಲವರು ಉತ್ಸಾಹಗೊಂಡು ಗಟ್ಟಿಯಾಗಿ ಗರ್ಜಿಸುತ್ತ ನಂದಿಯನ್ನು ಹೆದರಿಸಿದರು. ॥೪॥

ನಂದಿಯು ಮಹಾಬಲಶಾಲಿಯಾದುದರಿಂದಲೂ ಮತ್ತು ತನ್ನ ಬಲ-ವೀರ್ಯಗಳಲ್ಲಿ ಅವನಿಗೆ ಬಹಳ ನಂಬುಗೆ ಇದ್ದುದರಿಂದಲೂ ರಾಕ್ಷಸರ ಗೊಡ್ಡು ಗರ್ಜನೆಗೆ ಹೆದರದೆ ಧೈರ್ಯದಿಂದ ಕುಳಿತಿದ್ದನು. ಅಷ್ಟರಲ್ಲಿ ದೈತ್ಯರಾಜನು ಹಸ್ತವನ್ನು ನಿರ್ದೇಶಿಸಿ ಅತ್ಯುತ್ತಮವಾದ ಒಂದು ಆಸನವನ್ನು ತೋರಿಸಲು ಅದನ್ನು ನಂದಿಯು ಅಲಂಕರಿಸಿದನು. ॥೫॥

ಹೊಸಬನು ತಮ್ಮ ಪೈಕಿಯವನಾಗಿರದಿದ್ದರೂ ತಮ್ಮ ಒಡೆಯ ಆಸನವನ್ನಿತ್ತು ಗೌರವಿಸಿದುದನ್ನು ಕಂಡು ಚಿತ್ರಗಳಲ್ಲಿ ಬರೆದ ಬೊಂಬೆಗಳಂತೆ ಸಭಿಕರು

**ನಂದ್ಯುವಾಚ :—**

**ನಾನಾ ಸಭಾ ದೃಷ್ಟಪೂರ್ವಾ ನೇದೃಶಾಸ್ತಾಸು ಮೂಢಕಾಃ ।**
**ಯೂಯಂ ಸರ್ವೇಽತಿಬಲಿನಃ ಶ್ರಿಯಾ ಪರಮಶೋಭಿತಾಃ ॥೭॥**

**ಸುಂದರಾಃ ಕಾಮಸದೃಶಾ ಬುದ್ಧ್ಯಾ ಹೀನಾ ವೃಕಾ ಇವ ।**
**ಸಭಾಯಾಮಾಗತಃ ಸಾಧುರಸಾಧುರ್ದುರ್ಬಲೋ ಬಲೀ ॥೮॥**

**ಪ್ರಷ್ಟವ್ಯೋ ಮಾನನೀಯಶ್ಚ ನೀತಿರೇಷಾ ಸನಾತನೀ ।**
**ನ ಸಾ ದೃಷ್ಟಾ ಸಭಾಮಧ್ಯೇ ಅತೋ ಮೇ ವಿಃಸ್ಮಿತಂ ಮನಃ ॥೯॥**

---

ತೂಷ್ಣೀಂಭಾವವನ್ನು ವಹಿಸಿದರು. ಸಾಕ್ಷಾದ್ಬೃಹಸ್ಪತಿಯೋ ಎಂಬಂತೆ ಇದ್ದ ನಂದಿಯು ರಾಜನ ಇಂಗಿತವನ್ನರಿತು ತನ್ನ ಪರಿಚಯವನ್ನು ತಾನೇ ಹೇಳಿಕೊಳ್ಳಲು ಆರಂಭಿಸಿದನು. ||೬||

ನಂದೀ :—

ಮೂಢ ಸಭಿಕರೇ ! ಇದುವರೆಗೆ ನಾನು ಎಷ್ಟೆಷ್ಟೋ ದೊಡ್ಡ ದೊಡ್ಡ ಸಭೆಗಳನ್ನು ನೋಡಿರುವೆನು. ಇದರಂತಹವು ಆ ಸಭೆಗಳಲ್ಲ. ನೀವು ಬಹಳ ಬಲಿಷ್ಠರಾದವರು. ಐಶ್ವರ್ಯದಿಂದ ಶೋಭಿಸುವವರು ||೭||

ನೋಡಲು ಮನ್ಮಥನಂತೆ ಸುಂದರರೂಪವುಳ್ಳವರು. ಆದರೇನು ? ಒಬ್ಬನಿಗಾದರೂ ಬುದ್ಧಿಯೇ ಇಲ್ಲ. ತೋಳದಂತೆ ದೇಹವನ್ನು ವ್ಯರ್ಥವಾಗಿ ಬೆಳೆಸಿದ್ದೀರಿ. ಸಭೆಯ ಮರ್ಯಾದೆ ಎಂತಹುದೆಂಬುದೇ ನಿಮಗೆ ಗೊತ್ತಿಲ್ಲ. ಸಭೆಗೆ ಹೊರಗಿನವರಾರಾದರೂ ಬಂದರೆ ಯಾವ ರೀತಿ ನಡೆದುಕೊಳ್ಳಬೇಕೆಂಬ ಕಲ್ಪನೆ ಸಹ ನಿಮ್ಮ ಮೆದುಳಿನಲ್ಲಿಲ್ಲ. ಬಂದವನು ಸಾಧುವೇ ? ಅಸಾಧುವೇ ? ಬಲಿಷ್ಠನೇ ಅಥವಾ ನಿರ್ಬಲನೇ ? ಎಂಬುದನ್ನರಿತು ||೮||

ಅವನನ್ನು ಕುಶಲಪ್ರಶ್ನೆಯ ಮೂಲಕ ಉಪಚರಿಸಿ ಗೌರವಿಸಬೇಕು. ಇದೇ ಪರಂಪರೆಯಿಂದ ಬಂದಿರತಕ್ಕ ಧರ್ಮ. ಆ ನೀತಿಯೇ ಈ ಸಭೆಯಲ್ಲಿ ಕಂಡುಬಾರದ್ದರಿಂದ ನನ್ನ ಮನಸ್ಸಿಗೆ ಬಹಳಮಟ್ಟಿಗೆ ಆಶ್ಚರ್ಯವೆನಿಸಿದೆ. ||೯||

**ವೃಥಾ ಸಭಾಸದಸ್ಸರ್ವೇ ವೃಥಾಮಾತ್ಯಾಶ್ಚ ನಾಗರಾಃ ।**
**ನಾಯಂ ಧರ್ಮೋ ರಾಜ್ಞ ಏವ ಸಭ್ಯಾನಾಂ ಕೃತ್ಯಮೇವ ತತ್ ॥೧೦॥**

**ಕ ಉವಾಚ :—**

**ಇತಿ ತದ್ವಚನಂ ಶ್ರುತ್ವಾ ಸಿಂಧುಃ ಪ್ರೋವಾಚ ನಂದಿನಮ್ ।**

**ಸಿಂಧುರುವಾಚ :—**

**ಪದ್ಮಯೋನೇರಿವ ತವ ಮತಿರ್ದೃಷ್ಟಾ ಗುಣಾಕರ ! ॥೧೧॥**

**ಕಸ್ಯ ತ್ವಂ, ಕುತ ಆಯಾತಃ, ಕಿಮರ್ಥಂ ವಾ ವೃಷೇಶ್ವರ ! ।**
**ತೇಜಸಾ ವಹ್ನಿಸದೃಶಃ ಪಂಚಾಸ್ಯ ಇವ ವಿಕ್ರಮೇ ॥೧೨॥**

ನೀವು ಸಭಾಸದರಾದುದು ವ್ಯರ್ಥವೇ ಸರಿ. ಇದರಂತೆ ಇವರು ಮಂತ್ರಿಗಳಾದುದೂ ಸಾರ್ಥಕವಿಲ್ಲ. ಆಡಳಿತಗಾರರಾದ ನೀವೇ ಹೀಗಿದ್ದ ಮೇಲೆ ನಾಗರಿಕರು ಎಷ್ಟರಮಟ್ಟಿಗೆ ಸುಸಂಸ್ಕೃತರಾದಾರು ? ಬಂದ ಅತಿಥಿಗಳನ್ನು ಕರೆದು ಕುಳ್ಳಿರಿಸಿ ಆದರೋಪಚಾರಗಳನ್ನು ತೋರಿಸತಕ್ಕದ್ದು ರಾಜನ ಕರ್ತವ್ಯವಲ್ಲ. ಸಭಿಕರಾದವರೇ ಇದನ್ನು ಮಾಡತಕ್ಕದ್ದು. ॥೧೦॥

ಬ್ರಹ್ಮಾ :—

ನಂದಿಯಾಡಿದ ಮೂದಲಿಕೆಯ ಮಾತುಗಳನ್ನು ಕೇಳಿ ದೈತ್ಯೇಂದ್ರ; ಸಿಂಧು ರಾಜನು ನಂದಿಯನ್ನು ಕುರಿತು ತಾನೇ ಪ್ರಸ್ತಾಪಮಾಡತೊಡಗಿದನು.

ಸಿಂಧು :—

ಗುಣಾಢ್ಯ ! ಬ್ರಹ್ಮದೇವನಂತೆ ನಿನ್ನ ಬುದ್ಧಿ ನಿಷ್ಕೃಷ್ಟವಾದುದು. ಇದನ್ನು ನಾನು ಅರಿತಿದ್ದೇನೆ. ॥೧೧॥

ನೀನು ಯಾರ ಕಡೆಯವನು ? ಎಲ್ಲಿಂದ ಬಂದಿರುವೆ ? ವೃಷೇಶ್ವರ ! ಪ್ರಕೃತ ನೀನು ನನ್ನಿಂದ ಯಾವ ಪ್ರಯೋಜನವನ್ನು ಬಯಸಿ ಇಲ್ಲಿಗೆ ಆಗಮಿಸಿರುವೆ. ನಿನ್ನ ತೇಜಸ್ಸು ಜ್ವಲಿಸುವ ಅಗ್ನಿಯಂತಿದೆ. ಪರಾಕ್ರಮದಲ್ಲಿ ಸಿಂಹದಂತಿರುವೆ. ॥೧೨

**ನಂದ್ಯುವಾಚ :—**

**ಸುರಭೇಃ ಕಾಮರೂಪಾಯಾ ಅಪತ್ಯಂ ನಂದಿನಾಮಕಮ್ ।**
**ವಿದ್ಧಿ ಮಾಂ ಗಿರಿಜಾನಾಥವಾಹಂ ಬ್ರಹ್ಮಾಂಡಭೇದಿನಮ್ ॥೧೩॥**

**ಮಯೂರೇಶೋ ಧರಾಭಾರಹರೋ ದುಷ್ಟನಿಬರ್ಹಣಃ ।**
**ಅವತೀರ್ಣಃ ಶಿವಗೃಹೇ ಬಾಲ್ಯಾತ್ಪ್ರಭೃತಿ ದೈತ್ಯಹಾ ॥೧೪॥**

**ಶೇಷೋ ಮೂಕೋಽಭವತ್ತಸ್ಯ ಪ್ರತಾಪವರ್ಣನೇಽಬ್ಜಜಃ ।**
**ಸಮುದ್ರಮಥನಾದ್ಯದ್ವದ್ರತ್ನಜಾತಂ ಬಹಿರ್ಯಯೌ ॥೧೫॥**

**ತದ್ವನ್ನೀತಿಂ ವಿಮಥ್ಯಾದ್ಯ ಕಾರ್ಯಸಿದ್ಧಿಂ ವಿಚಾರಯ ।**
**ಆಜ್ಞಾಂ ಶ್ರುಣು ಮಯೂರೇಶಪ್ರೇಷಿತಾಂ ಬಲವತ್ತರಾಮ್ ॥೧೬॥**

---

ನಂದೀ :—

ದೈತ್ಯರಾಜ ! ಇಚ್ಛಾಸ್ವರೂಪಿಣಿಯಾದ ಸುರಧೇನು; ಸುರಭಿಯ ಮಗ ನಾನು. ನನ್ನ ಹೆಸರು ನಂದೀ. ಗಿರಿಜಾನಾಥನಿಗೆ ನಾನು ವಾಹನವಾಗಿದ್ದೇನೆ. ಅವನ ಅನುಗ್ರಹದಿಂದ ಬ್ರಹ್ಮಾಂಡವನ್ನು ನಹ ಭೇದಿಸುವಂತಹ ಶಕ್ತಿ ನನ್ನಲ್ಲಿದೆ. ॥೧೩

ಭೂಮಿಯ ಭಾರವನ್ನು ಪರಿಹರಿಸಲಿಕ್ಕಾಗಿ ದುಷ್ಟನಿಗ್ರಹ–ಶಿಷ್ಟಪರಿಪಾಲನೆಯ್ಯೇ ಧ್ಯೇಯವಾಗಿಯುಳ್ಳ ಮಯೂರೇಶ್ವರನು ಪರಮೇಶ್ವರನ ಮಂದಿರದಲ್ಲಿ ಅವತರಿಸಿದ್ದಾನೆ. ಅವನು ಬಾಲ್ಯದಿಂದಲೂ ದುಷ್ಟರಾದ ದೈತ್ಯರನ್ನು ನಿಗ್ರಹಿಸುತ್ತಲೇ ಬಂದಿದ್ದಾನೆ. ॥೧೪॥

ಅವನ ಪ್ರತಾಪವನ್ನು ವರ್ಣಿಸುವ ಪ್ರಸಂಗ ಬಂದಾಗ ಎರಡು ಸಹಸ್ರ ನಾಲಿಗೆಯುಳ್ಳ ಆದಿಶೇಷ, ಲೋಕಪಿತಾಮಹನಾದ ಕಮಲೋದ್ಭವ ಇವರೆಲ್ಲ ಮೂಕರಾಗಿ ಹೋಗುತ್ತಾರೆ. ಕ್ಷೀರಸಮುದ್ರವನ್ನು ಮಥಿಸಿದಾಗ ಅತ್ಯಪೂರ್ವವಾದ ಚಿಂತಾಮಣಿ ರತ್ನ ಹೇಗೆ ಉದಿಸಿಬಂದಿತೋ, ॥೧೫॥

ಹಾಗೆ ರಾಜನೀತಿ ಎಂಬ ಸಮುದ್ರವನ್ನು ಮಥಿಸಿ " ಕಾರ್ಯಸಿದ್ಧಿ " ರೂಪವಾದ ದಿವ್ಯರತ್ನವನ್ನು ಹೊರತೆಗೆವ ಬಗ್ಗೆ ವಿಚಾರವನ್ನು ಮಾಡು . ಮಯೂರೇಶ್ವ

**ಆಜ್ಞಾಭಂಗೇ ತಸ್ಯ ಭವೇದ್ವಿನಾಶೋ ಯಸ್ಯ ಕಸ್ಯಚಿತ್ ।**
**ಯತಃ ಸ ಸೃಜತೇ ವಿಶ್ವಂ ಪಾತಿ ಹಂತಿ ಚರಾಚರಮ್ ॥೧೭॥**

**ತ್ವಯಾ ವಿನಿಹಿತಾಃ ಕಾರಾಗೃಹೇ ದೇವಗಣಾ ಬಲಾತ್ ।**
**ಪದಾನಿ ತೇಷಾಂ ಲಬ್ಧಾನಿ ಭಾಗ್ಯಂ ಸ್ಯಾತ್ಕಿಮತಃ ಪರಮ್ ? ॥೧೮॥**

**ಇದಾನೀಂ ವೈರನಿರ್ಮೋಕಂ ವಿಚಾರ್ಯ ಕರ್ತುಮರ್ಹಸಿ ।**
**ಮೋಚಯಾಶು ಸುರಾನ್ ಸರ್ವಾನ್ ಆಜ್ಞಯಾ ಸ್ವಾಮಿನೋ ಮಮ ॥೧೯॥**

---

ರನು ನಿನಗೆ ತಿಳಿಸಲು ಒಂದು ಆಜ್ಞಾವಚನವನ್ನು ನನ್ನೊಡನೆ ಹೇಳಿ ಕಳಿಸಿದ್ದಾನೆ. ಅದು ಬಹಳ ಪ್ರಬಲವೂ ಶ್ರೇಯಸ್ಕರವೂ ಆದ ಆಜ್ಞೆ. ಅದನ್ನು ಯಾರೂ ಉದಾಸೀನದೃಷ್ಟಿಯಿಂದ ನೋಡತಕ್ಕದ್ದಲ್ಲ. ॥೧೬॥

ಅವನ ಮಹಿಮೆಯನ್ನು ತತ್ತ್ವತಃ ತಿಳಿದವರಾರೂ ಆಜ್ಞಾಭಂಗವನ್ನು ಮಾಡಿರುವುದಿಲ್ಲ. ಅವಿವೇಕದಿಂದ ಆಜ್ಞೆಯನ್ನು ಉಲ್ಲಂಘಿಸಿದವರು ಸರ್ವಾತ್ಮನಾ ನಾಶವನ್ನು ಹೊಂದುತ್ತಾರೆ. ಅವನು ಸಾಮಾನ್ಯ ವ್ಯಕ್ತಿಯಲ್ಲ. ಜಗತ್ತಿನ ಸೃಷ್ಟಿ ಸ್ಥಿತಿ–ಲಯ ಕಾರ್ಯಗಳೆಲ್ಲ ಅವನ ಅಧೀನದಲ್ಲಿವೆ. ॥೧೭॥

ಇಂದ್ರಾದಿ ಸಮಸ್ತ ದೇವತೆಗಳ ಮೇಲೂ ಯುದ್ಧವನ್ನು ಹೂಡಿ, ಪರಾಜಯಗೊಳಿಸಿ ನಿನ್ನ ರಾಜಧಾನಿಯ ಸೆರೆಮನೆಯಲ್ಲಿ ಅವರನ್ನು ನೀನು ಬಲಾತ್ಕಾರದಿಂದ ಬಂಧನದಲ್ಲಿ ಇರಿಸಿರುವೆಯಷ್ಟೆ ? ಮತ್ತು ಅವರು ಬಹು ಹಿಂದಿನಿಂದಲೂ ಅನುಭವಿಸಿಕೊಂಡು ಬಂದ ಪದವಿಗಳನ್ನೆಲ್ಲ ಅಧೀನಪಡಿಕೊಂಡು, ಪ್ರಕೃತ ನೀನೇ ಆಯಾ ಸ್ಥಾನಗಳಿಗೆ ಅಧಿಕಾರಿಯಾಗಿರುವೆ. ಇದಕ್ಕಿಂತಲೂ ಹೆಚ್ಚಿನ ಭಾಗ್ಯ ಮತ್ತೇನಿದೆ ? ॥೧೮॥

ದೇವ–ದಾನವರಿಗೆ ಅನಾದಿಕಾಲದಿಂದಲೂ ಬೆಳೆದುಬಂದಿರುವ ವೈರವನ್ನು ವಿಚಾರಪೂರ್ವಕವಾಗಿ ನಿರ್ಮೂಲಗೊಳಿಸಲಿಕ್ಕೆ ಪ್ರಕೃತ ಸುಸಮಯವಾಗಿದೆ. ನೀನು ಉದಾಸೀನಮಾಡದೆ ಇದಕ್ಕೆ ಪ್ರಯತ್ನವನ್ನು ಮಾಡು. ಇದೇನೂ ಅಂತಹ ಕಠಿಣವಾದ ಕೆಲಸವಲ್ಲ. ನನ್ನ ಪ್ರಭು ಹೇಗೂ ಆಜ್ಞೆಯನ್ನು ಮಾಡಿದ್ದಾನೆ. ಈ ಸು-ಸಂಧಿಯನ್ನು ಸಾಧಿಸಿಕೊಂಡು ಬಂಧಿತರಾದ ದೇವತೆಗಳನ್ನು ಒಡನೆಯೇ ಬಿಡುಗಡೆ ಮಾಡಿಬಿಡು. ಎಲ್ಲವೂ ಒಂದೇ ಕ್ಷಣದಲ್ಲಿ ಸರಿಹೋಗುವುದು. ॥೧೯॥

ತ್ರಿಪುರೇಣ ಕೃತಂ ವೈರಂ ಶಿವೇನ ಸಹ ತತ್ಕ್ಷಣಾತ್ ।
ಹಿರಣ್ಯಕಶಿಪುಂ ಸ್ತಂಭೇಽವತೀರ್ಯ ಹತವಾನ್ ಹರಿಃ ॥೨೦॥

ತಾರಕೇಣ ಜಿತಾ ದೇವಾ ಅತಿಷ್ಠತ್ತತ್ಪದೇ ಸ್ವಯಮ್ ।
ಸ್ಕಂದೇನ ನಿಹತೋ ಯುದ್ಧೇ ಕ್ಷಣೇನ ತಾರಕೋ ಬಲಾತ್ ॥೨೧॥

ಅತೋ ದತ್ವಾ ಸುರಾನ್ ಮಹ್ಯಂ ತಿಷ್ಠ ಸ್ಥಾನೇ ಸುಖಂ ಚಿರಮ್ ।

ಕ ಉವಾಚ :—

ಏವಂ ನಂದಿವಚಃ ಶ್ರುತ್ವಾ ಚುಕ್ರೋಧ ಸಿಂಧುದೈತ್ಯರಾಟ್ ॥೨೨॥

---

ದೇವನೊಡನೆ ವೈರವನ್ನು ಸಾಧಿಸಿದವರ ಪರಿಸ್ಥಿತಿ ಏನಾಯಿತೆಂಬುದನ್ನು ಪ್ರಕೃತ ನಿನಗೆ ನೆನಪುಮಾಡಿಕೊಡುತ್ತೇನೆ, ಕೇಳು. ಹಿಂದೆ ತ್ರಿಪುರನೆಂಬ ಬಲಿಷ್ಠ ದೈತ್ಯನು ಪರಶಿವನನ್ನು ದ್ವೇಷಿಸಿದ ಪರಿಣಾಮವಾಗಿ ಒಂದೇ ಕ್ಷಣದಲ್ಲಿ ಶಿವನಿಂದ ಹತನಾಗಿಹೋದನು. ಹಿರಣ್ಯಕಶಿಪು ಎಂತಹ ಪ್ರಬಲ ರಾಕ್ಷಸ? ಅವನನ್ನು ನಿಗ್ರಹಿಸಲು ಹರಿಯು ಕಂಭದಿಂದ ಅವತರಿಸಿ ಬಂದು ಕೊಂದನು. ॥೨೦॥

ತಾರಕಾಸುರ ನಿನ್ನಂತೆಯೇ ಎಲ್ಲ ದೇವತೆಗಳನ್ನೂ ಪರಾಜಯಗೊಳಿಸಿ, ತಾನು ಆಯಾ ಸ್ಥಾನಗಳನ್ನು ಆಕ್ರಮಿಸಿ ಕುಳಿತಿದ್ದನು. ದೇವಸೇನಾನಿ ಷಡಾನನನು ಅವನೊಡನೆ ಯುದ್ಧವನ್ನು ಮಾಡಿ ಒಂದೇ ಕ್ಷಣದಲ್ಲಿ ಅವನನ್ನು ಬಲಾತ್ಕಾರದಿಂದ ಕೊಂದುಬಿಟ್ಟನು. ॥೨೧॥

ನೀನು ಅವರಂತೆ ದೇವನ ಕೋಪಕ್ಕೆ ಬಲಿಯಾಗಬಾರದು. ಮೊದಲು ಸುರರನ್ನೆಲ್ಲ ಬಿಡುಗಡೆಮಾಡಿ, ಅವರನ್ನು ನನಗೆ ಒಪ್ಪಿಸು. ನೀನು ಚಿರಕಾಲ ನಿನ್ನ ಈ ಸ್ಥಾನದಲ್ಲಿ ಸುಖವಾಗಿ ನೆಲೆಸಿರು.

ಬ್ರಹ್ಮಾ:—

ನಂದಿಯಾಡಿದ ಮಾತುಗಳನ್ನು ಕೇಳಿ ಸಿಂಧುದೈತ್ಯನು ಕೋಪದಿಂದ ಸಿಡಿದುಬಿದ್ದನು. ॥೨೨॥

**ಉವಾಚ ರಕ್ತನಯನೋ ವಮನ್ನಿವ ಹುತಾಶನಮ್ ।**
**ಸಿಂಧುರುವಾಚ :—**
**ಚಾತುರ್ಯಂ ಬಹುಧಾ ದೃಷ್ಟಂ ತ್ವದೀಯಂ ವೃಷನಂದನ ||೨೩||**
**ಪ್ರಸಂಗಂ ನೈವ ಜಾನಾಸಿ ಯತೋ ವಾಚಸ್ಪತೇರಪಿ ।**
**ಅಜ್ಞಾನಾತ್ಪ್ರಕೃತಾರ್ಥಸ್ಯ ವಚೋ ಯಾತಿ ವೃಥಾರ್ಥತಾಮ್ ||೨೪||**
**ಬಾಲಸ್ಯ ತವ ವಾಕ್ಯೇನ ಸ್ವಾಮಿನಸ್ತೇಽಪಿ ವಾಕ್ಯತಃ ।**
**ಮೋಚಯೋಽಯಂ ಕಥಂ ದೇವಾನ್ ಯಾವತ್ಸೋಽಪಿ ನ ನಿರ್ಜಿತಃ ||೨೫||**
**ಪ್ರಮಾಣಂ ಕಿಂತು ತೇ ವಾಕ್ಯಂ ತೃಣಾದವನಚಾರಿಣಃ ।**
**ಕ್ವ ತೇ ಗಿರೀಶಸ್ತ್ರತ್ಪುತ್ರೋ ವೃಥಾ ಭೀತಿಃ ಪ್ರದರ್ಶ್ಯತೇ ||೨೬||**

ಕಣ್ಣುಗಳು ಕೆಂಪಡರಿದವು. ನೋಡಿದರೆ ಬೆಂಕಿಯನ್ನುಗುಳುವ ಯಂತ್ರದಂತೆ ಕಂಡುಬಂದನು. ಕೋಪಾವೇಶದಿಂದಲೇ ನಂದಿಗೆ ಹೀಗೆಂದು ಉತ್ತರ ಹೇಳಿದನು.

ಎ ಎತ್ತೇ! ನಿನ್ನ ಬಹು ಮಾತಿನ ಚಮತ್ಕಾರವೆಲ್ಲ ನಮಗೆ ತಿಳಿದು ಹೋಯಿತು. ||೨೩||

ಪ್ರಸಂಗದ ಪರಿಜ್ಞಾನ ನಿನಗೆ ಇರುವುದಿಲ್ಲ. ಆದುದರಿಂದಲೇ ಬೃಹಸ್ಪತಿಯಂತೆ ಕಲಿತ ಮಾತುಗಳನ್ನೆಲ್ಲ ಆಡುತ್ತಿರುವೆ. ಪ್ರಕೃತಾರ್ಥವನ್ನರಿಯದೆ ಆಡುವ ಮಾತುಗಳೆಲ್ಲ ವ್ಯರ್ಥವಾಗುವುವು. ||೨೪||

ನೀನೋ, ಅವಿವೇಕಿಯಾದ ಹುಡುಗ. ನಿನ್ನಂಥವನನ್ನು ದೂತನನ್ನಾಗಿ ಕಳಿಸಿಕೊಡಬೇಕಿದ್ದರೆ ನಿನ್ನ ಸ್ವಾಮಿ ಎನಿಸಿದವನು ಎಷ್ಟರಮಟ್ಟಿಗೆ ಹುಡುಗಾಟಿಕೆಯ ಸ್ವಭಾವದವನಿರಬಹುದು ? ಜವಾಬ್ದಾರಿಯನ್ನರಿಯದ ನಿಮ್ಮಂಥವರು ಹೇಳಿದರೆ ದೇವತೆಗಳನ್ನು ನಾನು ಮುಕ್ತಗೊಳಿಸಲು ಸಾಧ್ಯವೇ ? ಈ ಕೆಲಸ ಅಷ್ಟು ಸುಲಭವೇ ? ಅದಾರನ್ನೋ "ನಿನ್ನ ಸ್ವಾಮಿ" ಎಂದು ಹೇಳಿದೆಯಲ್ಲ ? ಅವನಿಗೆ ರಟ್ಟೆಯಲ್ಲಿ ಶಕ್ತಿ ಇದ್ದರೆ, ನನ್ನೊಡನೆ ಹೋರಾಡಲಿ, ನನ್ನನ್ನು ಸೋಲಿಸಿ ಬೇಕಾದರೆ ದೇವತೆಗಳನ್ನು ಬಿಡಿಸಿಕೊಂಡು ಹೋಗಲಿ. ಓಹೋ ! ಅವನೊಬ್ಬನನ್ನು ಜಯಿಸಬೇಕಾದುದು ಉಳಿದಿದೆಯಲ್ಲವೇ ? ||೨೫||

ಅವನನ್ನೇನೋ "ಮಹಾಮಹಿಮ, ಸೃಷ್ಟಿ, ಸ್ಥಿತಿಲಯಗಳನ್ನು ಮಾಡಬಲ್ಲವನು, ದುಷ್ಟನಿಗ್ರಹಕ್ಕಾಗಿಯೇ ಅವತರಿಸಿದವನು" ಇತ್ಯಾದಿಯಾಗಿ ಬಾಯಿ ತುಂಬ

**ಲಾಂಗಲೇ ಯೋಜಯಾಮ್ಯದ್ಯ ದೌತ್ಯೇನ ನಾಗತೋ ಯದಿ ।**
**ಯದಿ ಮೇ ವಕ್ರತಾಂ ಯಾಯಾದ್ಭ್ರುಕುಟೀ ಕ್ರೋಧತೋ ವೃಷ! ॥೨೭॥**
**ತದಾ ತ್ರಿ-ಭುವನಂ ನಶ್ಯೇತ್ಕಾ ತತ್ರ ಗಣನಾ ತಯೋಃ ? ।**
**ರುಷ್ಟಃ ಸೃಗಾಲಃ ಕಿಂ ಕುರ್ಯಾದಪ್ರಿಯಂ ಸಿಂಹ-ನಾಗಯೋಃ ॥೨೮॥**
**ಕ ಉವಾಚ :—**
**ಏವಂ ಶಬ್ದಶರೈರ್ವಿದ್ಧೋ ನಂದೀ ಕ್ರೋಧಾದಥಾಬ್ರವೀತ್ ।**
**ನಂದ್ಯುವಾಚ :—**
**ವಿಪರೀತಾಂ ಮತಿಂ ತೇಽದ್ಯ ಲಕ್ಷಯಾಮ್ಯಸುರಾಧಮ ! ॥೨೯॥**

---

ವರ್ಣಿಸಿದೆಯಲ್ಲವೇ ? ನಿನ್ನ ಮಾತಿನಿಂದ ಇವನ್ನೆಲ್ಲ ಹೇಗೆ ನಂಬುವುದು ? ನೀನೋ, ಅತ್ಯಲ್ಪ ಪ್ರಾಣಿ. ಸಾರವಿಲ್ಲದ ಹುಲ್ಲನ್ನು ಮೇಯಿದು ಜೀವಿಸಿರತಕ್ಕವನು. ಗಿರೀಶನೆಂದೆಯಲ್ಲ, ಅವನಾರೋ ? ಅವನ ಮಗನಾರೋ ? ವ್ಯರ್ಥಪ್ರಲಾಪದಿಂದ ನನ್ನನು ಭಯಪಡಿಸುವೆಯ ? ॥೨೬॥

ಏನೋ ಪಾಪ ! ದೂತನಾಗಿ ಬಂದಿರುವೆ. ಹೋಗಲಿ ಎಂದು ಕ್ಷಮಿಸಿ ಸುಮ್ಮನಿದ್ದೇನೆ. ನೀನು ದೂತನಾಗಿ ಇಲ್ಲಿಗೆ ಬಾರದಿದ್ದದ್ದರೆ ಪುಷ್ಟವಾದ ಗೂಳಿ ಎಂದು ತಿಳಿದು ನೇಗಿಲಿಗೆ ಕಟ್ಟಿಸಿ ನಿನ್ನನ್ನು ಭೂ-ವ್ಯವಸಾಯಕ್ಕೆ ಉಪಯೋಗಿಸಿಕೊಳ್ಳುತ್ತಲಿದ್ದೆ, ತಿಳಿಯಿತೋ? ಏಯ್ ಬಸವ ! ನಾನಾರೆಂದು ತಿಳಿದೆ ? ನಾನೊಮ್ಮೆ ಕೋಪಗೊಂಡು ಹುಬ್ಬನ್ನು ಗಂಟುಹಾಕಿದೆನೆಂದರೆ ॥೨೭॥

ತ್ರಿಭುವನಗಳೂ ಒಮ್ಮೆಲೇ ನಾಶವನ್ನು ಹೊಂದಿಯಾವು. ಗೊತ್ತೋ ? ಹೀಗಿರುವಾಗ ಅನಾಮಧೇಯರಾದ ಅವರಿಬ್ಬರ ಗಣನೆ ನನಗಿದ್ದೀತೇನೋ; ದಡ್ಡ ? ಕ್ಷುದ್ರ ಜಂತು ನರಿ ಕೋಪಗೊಂಡು ಹಾರಾಡಿದರೆ, ಅದರಿಂದ ಆನೆ, ಸಿಂಹಗಳಂತಹ ಬಲಿಷ್ಠ ಮೃಗಗಳಿಗೆ ಹಾನಿಯುಂಟಾದೀತೇನೋ ? ॥೨೮॥

ಬ್ರಹ್ಮಾ :—

ರಾಕ್ಷಸನಾಡಿದ ಮುಳ್ಳಿನಂತಹ ಈ ಮಾತುಗಳು ನಂದಿಯ ಹೃದಯಕ್ಕೆ ನಾಟಿದವು. ಸಹಿಸಲಾರದಷ್ಟು ಕೋಪ ಉಂಟಾಯಿತು. ರಾಕ್ಷಸನನ್ನು ಧಿಕ್ಕರಿಸುತ್ತ ಹೀಗೆಂದು ಮಾತನಾಡಿದನು.

ನಂದೀ :—

ಏಯ್, ಅಧಮ ರಾಕ್ಷಸ ! ಇಂದು ನಿನ್ನ ಬುದ್ಧಿ ಬದಲಾಯಿಸಿ ಹೋದಂತೆ ನನಗೆ ತೋರುತ್ತದೆ. ॥೨೯॥

ಸನ್ನಿಪಾತೀವ ವಿಕಲಂ ವಲ್ಗಸೇ ಮರಣೋನ್ಮುಖಃ ।
ಪೂರ್ವಂ ಸಾಮ ಪ್ರಯೋಕ್ತವ್ಯಮಿತಿ ತೇನಾಹಮೀರಿತಃ ॥೩೦॥

ತ್ವಯಿ ನೀತಿರ್ವೃಥಾ ಜಾತಾ ಉಪದೇಶೋ ಯಥಾ ಖಲೇ !
ಯದಿ ನಿಂದಾ ಪ್ರಯುಕ್ತಾ ತೇ ಮಯೂರೇಶೇ ಶಿವೇಽಪಿ ಚ ॥೩೧॥

ಕ್ಷೀಣಮಾಯುಸ್ತಯಾ ತೇಽದ್ಯ ನ ಯುದ್ಧೇ ಜಯಮೇಷ್ಯಸಿ ।
ಇದಾನೀಂ ಹನ್ಮಿ ತ್ವಾಂ ಮೂಢ ! ನಾಜ್ಞಾಸ್ತಿ ಸ್ವಾಮಿನೋ ಮಮ ॥೩೨॥

ನಾಯಕೇನ ನ ಹಂತವ್ಯೋ ದೂತಸ್ತೇನಾಪಿ ನಾಯಕಃ ।

---

ಮರಣಕಾಲ ಸನ್ನಿಹಿತವಾದರೆ ಮನುಷ್ಯನ ಸ್ವಾಭಾವಿಕ ಗುಣಗಳೆಲ್ಲ ಬದಲಾಯಿಸುತ್ತವೆಂದು ತಿಳಿದವರಾಡುವ ಮಾತು ಸುಳ್ಳಲ್ಲ. ಇಲ್ಲವಾಗಿದ್ದರೆ ಸನ್ನಿಪಾತಜ್ವರ ಪೀಡಿತನಂತೆ ಎಚ್ಚರದಪ್ಪಿ ಹೀಗೆಲ್ಲ ನೀನು ಮಾತನಾಡುತ್ತಲಿದ್ದೆಯ ? ನಿನ್ನೊಡನೆ ಸಾಮೋಪಾಯದಿಂದ ಮೊದಲು ವರ್ತಿಸಬೇಕೆಂದು ದೇವನು ಆಜ್ಞೆಮಾಡಿದ್ದನಾದುದರಿಂದ ನಾನು ಅದನ್ನೇ ಪ್ರಯೋಗಿಸಬೇಕಾಯಿತು. ॥೩೦॥

"ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ ॥ ಉಪದೇಶೋಹಿ ಮೂರ್ಖಾಣಾಂ ಪ್ರಕೋಪಾಯ ನ ಶಾಂತಯೇ" ಎಂಬ ಮಾತು ಇಂದು ಸತ್ಯವಾಗಿದೆ. ನಿನ್ನಂತಹ ಮೂರ್ಖನೊಡನೆ ವ್ಯವಹರಿಸುವಾಗ ಸಾಮಾದ್ಯುಪಾಯಗಳು ಉಪಯೋಗವಿಲ್ಲ. ಖಲನಿಗೆ ಉಪದೇಶ ಹೇಗೆ ವ್ಯರ್ಥವೋ ಅಂತೆಯೇ ನಿನ್ನಲ್ಲಿ ನೀತಿಯನ್ನು ಪ್ರಯೋಗಿಸಿದ್ದರ ಪರಿಣಾಮವಾಯಿತು. ನೀನೇನಾದರೂ ಮಯೂರೇಶನನ್ನಾಗಲೀ, ಪರಶಿವನನ್ನಾಗಲೀ ನಿಂದಿಸಿದೆ ಎಂದರೆ ॥೩೧॥

ನಿನ್ನ ಆಯೂರೇಖೆ ಕ್ಷಯಿಸಿತೆಂತೇ ತಿಳಿ. ಉನ್ಮತ್ತತೆಯಿಂದ ನೀನು ಯುದ್ಧವನ್ನು ಬೇಕಾದರೂ ಮಾಡಬಹುದು. ಆ ರೀತಿ ಮಾಡಿದೆಯಾದರೂ ನಿನಗೇನೂ ಜಯ ದೊರೆಯುವುದಿಲ್ಲ. ಮೂಢ ! ನಿನ್ನನ್ನು ಈ ಕ್ಷಣದಲ್ಲೇ ಕೊಂದುಬಿಡುತ್ತಲಿದ್ದೆ. ಆದರೆ ಹಾಗೆ ಮಾಡಲು ನನ್ನ ಪ್ರಭುವಿನ ಆಜ್ಞೆ ಇರುವುದಿಲ್ಲ. ವಿಧಿ ಇಲ್ಲದೆ ಸುಮ್ಮನಿರಬೇಕಾಗಿದೆ. ॥೩೨॥

ನಾಯಕ ದೂತನನ್ನು ಕೊಲ್ಲಬಾರದು. ಇದರಂತೆ ದೂತನು ನಾಯಕನನ್ನು ಕೊಲ್ಲಬಾರದು. ಇದೇ ಯುದ್ಧ ನೀತಿ.

ಕ ಉವಾಚ :—

ಇತ್ಯುಕ್ತ್ವಾ ಪಾತಯನ್ ದೈತ್ಯಾನ್ನಂದೀ ನಿಃಶ್ವಾಸವಾಯುನಾ ||೩೩||

ಕ್ರೋಧೇನ ತಮುಪೃಷ್ಟ್ವೈವ ಪ್ರತಸ್ಥೇ ಹರ್ಷನಿರ್ಭರಃ |

ಸಾನ್ನಿಧ್ಯಂ ಪ್ರಾಪ ದೇವಸ್ಯ ಮಯೂರೇಶಸ್ಯ ತತ್ಕ್ಷಣಾತ್ ||೩೪||

ದೂರಾದ್ದದರ್ಶ ದೇವೋಽಪಿ ಪ್ರಾಹ " ನಂದೀ ಸಮಾಗತಃ " |

ಪ್ರಣಿಪತ್ಯಾಬ್ರವೀದ್ದೇವಂ ವೃತ್ತಾಂತಂ ಸರ್ವಮಾದಿತಃ ||೩೫||

ನಂದ್ಯುವಾಚ :—

ಬಹುಧಾ ಬೋಧಿತೋ ದೈತ್ಯೋ ನ ಸ್ವೀಚಕ್ರೇ ವಚೋ ಮಮ |

ನಿರ್ಭರ್ತ್ಸಿತೋ ಬಹುವಿಧಂ ತೇನಾಹಂ ಚ ಮಯಾ ಚ ಸಃ ||೩೬||

ಬ್ರಹ್ಮಾ:—

ಹೀಗೆ ನುಡಿದು ಒಮ್ಮೆ ಘಟ್ಟಿಯಾಗಿ ನಿಃಶ್ವಾಸವನ್ನು ಬಿಟ್ಟನು, ಇದರ ವೇಗಕ್ಕೆ ಸಿಂಧುದೈತ್ಯನ ಅನುಯಾಯಿ. ದೈತ್ಯರೆಲ್ಲ ನೆಲಕ್ಕೆ ಉರುಳಿ ಬಿದ್ದರು. ||೩೩||

ನಂದಿಗೆ ಕ್ರೋಧ ಮಿತಿಮೀರಿ ಬಂದಿತಾದುದರಿಂದ ಒಂದು ಕ್ಷಣಕಾಲ ಸಹ ಅಲ್ಲಿ ನಿಲ್ಲಲು ಅವನ ಮನಸ್ಸು ಒಡಂಬಡಲಿಲ್ಲ. ದೈತ್ಯನೊಡನೆ ಪುನಃ ಯಾವ ಮಾತನ್ನೂ ಆಡದೇ ಸಭೆಯನ್ನು ಬಿಟ್ಟು ಹೊರಕ್ಕೆ ಬಂದನು. " ಸಿಂಧುವೂ ನಾಶ ಹೊಂದುವ ಕಾಲ ಸಮೀಪಿಸಿತು. " ಎಂದು ಮನದಲ್ಲೇ ಚಿಂತಿಸುತ್ತ ಬಹಳ ಹರ್ಷ ಗೊಂಡನು. ಮತ್ತು ಒಂದು ಕ್ಷಣದೊಳಗಾಗಿಯೇ ದೇವರ ದೇವ ; ಮಯೂರೇಶ್ವರನ ದಿವ್ಯ ಸನ್ನಿಧಿಗೆ ಹಾರಿ ಬಂದನು. ||೩೪||

ಇವನು ಕೋಪದಿಂದ ಉಸಿರು ಬಿಡುತ್ತ ಓಡೋಡಿ ಬರುತ್ತಿರುವುದನ್ನು ದೇವನು ದೂರದಿಂದಲೇ ಕಂಡು " ಇದೋ, ನಂದಿ ಬಂದ " ಎಂದು ಹೇಳಿದನು. ಅಷ್ಟರಲ್ಲಿ ನಂದಿ ಬಂದು ಭಕ್ತಿಯಿಂದ ಪ್ರಣಮಿಸಿ, ನಡೆದ ಎಲ್ಲ ವೃತ್ತಾಂತವನ್ನೂ ಮೊದಲಿನಿಂದ ಹೇಳಿದನು. ||೩೫||

ನಂದೀ :—

ನಾನೂ ಬಹಳ ಪ್ರಯತ್ನಿಸಿ ದೈತ್ಯನಿಗೆ ಬಹು ವಿಧದಿಂದ ಉಪದೇಶವನ್ನು ಮಾಡಿದೆ. ಅವನು ನನ್ನ ಮಾತುಗಳನ್ನು ಅಂಗೀಕರಿಸಲಿಲ್ಲ. ನನ್ನನ್ನು ಬಹಳ ಗದ್ದರಿಸಿದ. ನಾನೂ ಸಹಿಸಲಾರದೇ ಅವನನ್ನು ಪ್ರತಿಯಾಗಿ ಜಬರಿಸಿದೆ. ||೩೬||

ಸ್ಯೈಜ್ಜೇ ಘಟೇ ಯಥಾ ಬಿಂದುಸ್ತಸ್ಮಿನ್ ಸರ್ವಂ ವೃಥಾ ಭವೇತ್ ।
ಕ ಉವಾಚ :—
ಇತಿ ತದ್ವಚನಂ ಶ್ರುತ್ವಾ ಪ್ರಯಾತಸ್ಯ ಯಥಾಗತಮ್ ॥೩೭॥
ಜಹರ್ಷ ಸ ಮಯೂರೇಶೋ ದೈತ್ಯಮರ್ದನಲಾಲಸಃ ।
ಆಜ್ಞಾಪಯತ್ಸ ಯುದ್ಧಾಯ ಪ್ರಮಥಾದೀನ್ ಗಣಾಂಸ್ತಥಾ ॥೩೮॥
ಮಯೂರೇಶ ಉವಾಚ :—
ಇದಾನೀಂ ಸಿಂಧುನಗರೇ ಯುದ್ಧಂ ಕರ್ತುಂ ಸಮುತ್ಸುಕಾಃ ।
ಗರ್ಜಂತು ವೀರಶಬ್ದೈಶ್ಚ ಮೋಚಿತುಂ ಬಂಧನಾತ್ಸುರಾನ್ ॥೩೯॥
ಹತ್ವಾ ಸಿಂಧುಂ ಚ ಸಬಲಂ ಮೋಚಿತುಂ ಚಾಖಿಲಾನ್ ಸುರಾನ್ ।

---

ಮೊಗುಚಿ ಹಾಕಿದ ಗಡಿಗೆಯಲ್ಲಿ ಒಂದು ತೊಟ್ಟು ಸಹ ನೀರು ಹೇಗೆ ನಿಲ್ಲಲಾರದೋ, ಅದರಂತೆ ಅವನಲ್ಲಿ ನಮ್ಮ ಹಾಗೂ ಇತರರ ಪ್ರಯತ್ನವೆಲ್ಲ ವ್ಯರ್ಥವೇ ಆಗುವುದು.

ಬ್ರಹ್ಮಾ:—

ಸಂಧಾನಕ್ಕಾಗಿ ಹೋಗಿದ್ದ ನಂದಿಯಾಡಿದ ಮಾತುಗಳನ್ನೆಲ್ಲ ಮಯೂರೇಶ್ವರನು ಕೇಳಿದನು. ॥೩೭॥

ಮಯೂರೇಶ್ವರನಿಗೆ ದೈತ್ಯರನ್ನು ಮರ್ದಿಸುವುದೆಂದರೆ ಬಹಳ ಉತ್ಸಾಹ. ಅದೇ ಕಾರ್ಯಕ್ಕಾಗಿಯೇ ಅವತರಿಸಿದ ದೇವನು "ಸಿಂಧುವನ್ನು ನಿಗ್ರಹಿಸುವ ಸು-ಸಂಧಿ ಒದಗಿತಲ್ಲ" ಎಂಬುದನ್ನರಿತು ಬಹಳ ಹರ್ಷಿಸಿದನು. ಒಡನೆಯೇ ಪ್ರಮಥ ಗಣಗಳ ಕಡೆ ತಿರುಗಿ ಯುದ್ಧಕ್ಕೆ ಸಿದ್ಧರಾಗುವುದಕ್ಕಾಗಿ ಹೀಗೆಂದು ಅಪ್ಪಣೆಮಾಡಿದನು ॥೩೮॥

ಮಯೂರೇಶ :—

ಈಗ ಸಿಂಧುದೈತ್ಯನ ನಗರಕ್ಕೆ ಜೈತ್ರಯಾತ್ರೆಗಾಗಿ ಹೊರಡತಕ್ಕದ್ದು. ಎಲ್ಲರೂ ಈ ಕಾರ್ಯದಲ್ಲಿ ಉತ್ಸಾಹಗೊಂಡು ವೀರರಿಗೆ ಉಚಿತವಾದ ರೀತಿಯಲ್ಲಿ ಸಿಂಹನಾದವನ್ನು ಮಾಡಿರಿ. ಸುರರನ್ನು ಬಂಧನದಿಂದ ಬಿಡಿಸಲಿಕ್ಕಾಗಿ ಈಗ ಸಮರೋನ್ಮುಖರಾಗಬೇಕಾಗಿದೆ. ॥೩೯॥

ಅವನ ಮೇಲೆ ಯುದ್ಧವನ್ನು ಮಾಡಿ ಪರಿವಾರ ಸಹಿತ ರಾಕ್ಷಸನನ್ನು ಕೊಂದು ಬಿಡೋಣ, ಎಂದರೆ ದೇವತೆಗಳನ್ನು ಸುಲಭವಾಗಿ ಬಂಧನದಿಂದ ಬಿಡಿಸಿದಂತೆ ಆಗುವುದು.

ಕ ಉವಾಚ :—

ಮುನೀನಾಂ ತ್ವರಮಾಣಾನಾಂ ಗತಂ ಸ್ವಾಶ್ರಮಮಂಡಲಮ್ ||೪೦||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಯುದ್ಧವಿಚಾರವರ್ಣನಂ
ನಾಮೈಕಾದಶಾಧಿಕಶತತಮೋಽಧ್ಯಾಯಸ್ಸಮಾಪ್ತಃ

---

ಬ್ರಹ್ಮಾ:—

ಈ ಮಾತುಗಳನ್ನು ಕೇಳಿದ ಋಷಿಗಳು ' ಇದೆಲ್ಲ ಮುಗಿಯುವ ವರೆಗೂ ನಾವು ಇಲ್ಲಿದ್ದು ಮಾಡಬೇಕಾದುದೇನು ? " ಎಂದು ಅವಸರಗೊಂಡು ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ||೪೦||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ ' ಯುದ್ಧ ವಿಚಾರ ವರ್ಣನೆ '
ಎಂಬಲ್ಲಿಗೆ ನೂರ ಹನ್ನೊಂದನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ದ್ವಾದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ .—**

**ಶಿಖಂಡಿನಂ ಸಮಾರುಹ್ಯ ಮಯೂರೇಶಃ ಪರೇ ದಿನೇ ।**
**ಆಯುಧಾನಿ ಚ ಚತ್ವಾರಿ ಪ್ರಗೃಹ್ಯ ಕರಪಂಕಜೇ ॥೧॥**

**ಜಗರ್ಜ ಘನವದ್ಘೋರಂ ಯಯೌ ರಣಚಿಕೀರ್ಷಯಾ ।**
**ಶಿವೋಽಪಿ ಗರ್ಜನ್ ಸಹಸಾ ವೃಷಾರೂಢೋ ಯಯೌ ತದಾ ॥೨॥**

**ಸಪ್ತಕೋಟಿಗಣಾಃ ಪಶ್ಚಾತ್ಸನ್ನದ್ಧಾ ಯಯುರೋಜಸಾ ।**
**ತತೋ ನಂದೀ ಪ್ರಾಹ**

---

|| ಶ್ರೀ ಮಹಾಗಣಪತಯೇ ನಮಃ ||

## ೧೧೨ ನೆಯ ಅಧ್ಯಾಯ

ಬ್ರಹ್ಮಾ :—

ಮರುದಿನ ಮಯೂರೇಶ್ವರನು ತನ್ನ ವಾಹನವಾದ ಮಯೂರವನ್ನೇರಿ, ತನ್ನ ನಾಲ್ಕು ಕೈಗಳಲ್ಲೂ ದಿವ್ಯಾಯುಧಗಳನ್ನು ಹಿಡಿದುಕೊಂಡು ॥೧॥

ಮಹಾಮೇಘದಂತೆ ಒಮ್ಮೆ ಘಟ್ಟಿಯಾಗಿ ಗರ್ಜಿಸಿದನು. ಸಿಂಧುದೈತ್ಯನ ಮೇಲೆ ರಣವನ್ನು ಘೋಷಿಸುವ ನಿಶ್ಚಯವನ್ನು ಹೊಂದಿದ್ದ ಗಣಪತಿಯು ಉತ್ಸಾಹ ದಿಂದ ಹೊರಟನು. ಪರಶಿವನೂ ಸಹ ತನ್ನ ಮಗನ ಗರ್ಜನೆಯಿಂದ ಉತ್ತೇಜಿತ ನಾಗಿ ತನ್ನ ವಾಹನವಾದ ವೃಷಭವನ್ನೇರಿ ಗರ್ಜಿಸುತ್ತಲೇ ಮುಂದೆ ಹೊರಟನು. ॥೨॥

ಪ್ರಭುಗಳಿಬ್ಬರೂ ಹೊರಟುದನ್ನು ಕಂಡು ಏಳು ಕೋಟಿ ಕೆಚ್ಚುಳ್ಳ ಪ್ರಮಥ ಗಣದವರೂ ಯುದ್ಧಸನ್ನದ್ಧರಾಗಿ ಅವರನ್ನು ಹಿಂಬಾಲಿಸಿದರು. ಉತ್ಸಾಹದ ಭರದಲ್ಲಿ ಮುನ್ನುಗ್ಗುತ್ತಲಿದ್ದವರನ್ನೆಲ್ಲ ಕುರಿತು ನಂದಿಯು ಎಚ್ಚರಿಸುತ್ತ ಹೀಗೆಂದು ಮಾತ ನಾಡಿದನು.

**ನಂದ್ಯುವಾಚ :—**

**ತತ್ರ ನ ಗಂತುಂ ಸಹಸಾರ್ಹಥ ||೩||**

**ಗಣಾನಾಂ ನಾಯಕೇ ವೀರಭದ್ರೇ ಚ ಮಯಿ ತಿಷ್ಠತಿ |**

**ಪ್ರಮಥೇ ವಾ ವಿದ್ಯಮಾನೇ ಶಕ್ತೋ ಹಂತುಂ ಸುರದ್ವಿಷಾಮ್ ||೪||**

**ಪಶ್ಯಂತು ಸೇವಕಮಹಸ್ತತೋ ಯಾಂತು ಸು–ಸಂಯುಗಮ್ |**

**ಕ ಉವಾಚ :—**

**ಭಾರತೀಮೇವಮಾಕರ್ಣ್ಯ ದೇವೋ ನಂದೀರಿತಾಂ ತದಾ ||೫||**

**ಉವಾಚ ಪರಮಪ್ರೀತಃ**

**ದೇವ ಉವಾಚ :—**

**ಸಾಧು, ಸಾಧು ತ್ವಯೋದಿತಮ್ |**

**ಪರಾಕ್ರಮವತಸ್ಸಿಂಧೋರ್ದ್ರಷ್ಟವ್ಯಸ್ತು ಪರಾಕ್ರಮಃ ||೬||**

ನಂದೀ :—

ಹುಂಬತನದಿಂದ ಯಾರೂ ಒಮ್ಮೆಲೇ ಮುನ್ನುಗ್ಗಿ ಹೋಗಬೇಡಿ. ||೩||

ಪ್ರಮಥಗಳಿಗೆಲ್ಲ ನಾಯಕನಾದ ವೀರಭದ್ರನಿದ್ದಾನೆ. ಸ್ವತಃ ನಾನಿದ್ದೇನೆ. ಪ್ರಮಥನಿದ್ದಾನೆ. ನಮ್ಮೆಲ್ಲರಿಗೂ ಸುರವಿದ್ವೇಷಿಯಾದ ಆ ದೈತ್ಯಾಧಮನನ್ನು ನಿಗ್ರಹಿಸುವ ಸಾಮರ್ಥ್ಯವಿರುತ್ತದೆ. ||೪||

ಇದುವರೆಗೂ ಸೇವಕರಾದ ನಮಗೆ ನಮ್ಮ ನಿಜವಾದ ಶಕ್ತಿ-ಮಹಿಮೆಗಳನ್ನು ಪ್ರದರ್ಶಿಸುವ ಸು-ಸನ್ನಿವೇಶವೇ ಬಂದಿರುವುದಿಲ್ಲ. ಇಂದು ನಮ್ಮ ಶಕ್ತಿ-ಸಾಹಸಗಳನ್ನಾದರೂ ನೋಡುವಿರಂತೆ. ಅನಂತರ ಬೇಕಾದರೆ ಯುದ್ಧಕ್ಕೆ ಬರುವಿರಂತೆ.

ಬ್ರ

ನಂದಿಯಾಡಿದ ವೀರೋಚಿತ ಮಾತುಗಳನ್ನು ದೇವನು ಕೇಳಿ ||೫||

ಬಹಳ ಸಂತುಷ್ಟನಾದನು. ಮತ್ತು ನಂದಿಯನ್ನು ಪ್ರಶಂಸಿಸುತ್ತ ಹೀಗೆಂದನು.

ದೇವ :—

ನಂದಿ ! ನೀನು ಸರಿಯಾಗಿಯೇ ಮಾತನಾಡಿದೆ. ಹಾಗೂ ಮಾಡಬಹುದಾಗಿದ್ದಿತು. ಆದರೆ ಪರಾಕ್ರಮಶಾಲಿ ಎನಿಸಿದ ಸಿಂಧುದೈತ್ಯನ ಪರಾಕ್ರಮವೆಷ್ಟಿದೆಯೋ ಅದನ್ನು ತಿಳಿಯಲು ನನಗೂ ಕುತೂಹಲವಿದೆ. ||೬||

ಇತಿ ಯಾಮಿ ಪುರೋ ನಂದಿನ್ ! ಯೂಯಂ ಯಾಂತು ಸಹೈವ ನಃ ।
ಕ ಉವಾಚ :—
ತತಸ್ತು ಭೂತರಾಜೋಽಥ ಪುಷ್ಪದಂತೋಽಪಿ ವೀರ್ಯವಾನ್ ॥೭॥
ಈಯತುಃ ಪುರತಸ್ತಸ್ಯ ಕೋಟಿಸಂಖ್ಯಾಯುತಾ ಗಣಾಃ ।
ವೀರ್ಯಶ್ರಿಯಾ ದೀಪ್ಯಮಾನಾಃ ಸರ್ವೇ ವೀರಾ ಮದಾನ್ವಿತಾಃ ॥೮॥
ಆಕ್ರಮಂತೋ ದಿಗಂತಾನ್ ವೈ ಗರ್ಜಂತೋ ಘನವದ್ಭೃಶಮ್ ।
ಭಾರೇಣ ಶೇಷಶೀರ್ಷಾಣಿ ನಾಮಯಂತೋ ಧರಾಮಪಿ ॥೯॥
ಕ್ರೋಧಾನಲಂ ವಮಂತಸ್ತೇ ಪ್ರಾಪುಸ್ತಾಂ ಗಂಡಕೀಂ ಪುರೀಮ್ ।
ದೈತ್ಯಗುಲ್ಮೇ ನಿಪೇತುಸ್ತೇ ದಶಕೋಟ್ಯಸುರೈರ್ಯುತೇ ॥೧೦॥

---

ಈ ಕಾರಣದಿಂದ ನಾನು ಮುಂದೆ ಹೊರಡುತ್ತೇನೆ. ನೀವೆಲ್ಲ ನಮ್ಮೊಂದಿಗೆ ಬನ್ನಿ.

ಬ್ರಹ್ಮಾ:—

ಅನಂತರ ಮಹಾವೀರ್ಯಶಾಲಿಗಳಾದ ಭೂತರಾಜ, ಪುಷ್ಪದಂತರು. ॥೭॥

ದೇವನ ಎದುರಿಗೆ ಬಂದು ತಾವು ಯುದ್ಧಕ್ಕೆ ಸಿದ್ಧರಾಗಿದ್ದುದನ್ನರಿಕೆಮಾಡಿಕೊಂಡು ಅವನನ್ನು ಹಿಂಬಾಲಿಸಿದರು. ಕೋಟಿಗಟ್ಟಲೆ ಇದ್ದ ಗಣಗಳೂ ಉತ್ಸಾಹದಿಂದ ಕೋಲಾಹಲಮಾಡುತ್ತ ನಡೆದವು. ಪ್ರತಿಯೊಬ್ಬ ಯೋಧನ ಮುಖದ ಮೇಲೂ ವೀರಶ್ರೀ ಉಕ್ಕಿ ಕಾಣುತ್ತಲಿದ್ದಿತು. ಅವರು ಮಹಾ ತೇಜಸ್ವಿಗಳಾಗಿದ್ದರು. ಎಲ್ಲ ವೀರರೂ ಮದಿಸಿಹೋಗಿದ್ದರು. ॥೮॥

ಆ ಪ್ರಚಂಡ ಸೇನೆಯು ಪೂರ್ಣ ಪ್ರವಾಹದಂತೆ ದಿಗಂತದವರೆಗೂ ವ್ಯಾಪಿಸಿದ್ದಿತು. ಅವರು ಆಕ್ರಮಿಸಿದ ಸ್ಥಳವನ್ನು ಯಾರೊಬ್ಬರೂ ಕಣ್ಣೆತ್ತಿ ಸಹ ನೋಡುವಂತಿರಲಿಲ್ಲ. ಪ್ರತಿಯೊಬ್ಬನೂ ಮೇಘದಂತೆ ಗಂಭೀರವಾಗಿ ಗರ್ಜಿಸುತ್ತಲಿದ್ದನು, ಅವರೆಲ್ಲರ ಭಾರ ಕೇಂದ್ರೀಕೃತವಾದುದರಿಂದ ಭೂಮಿಯ ವಿಶಿಷ್ಟ ಭಾರವನ್ನೂ ಹೊತ್ತಿದ್ದ ಆದಿಶೇಷನ ಹೆಡೆಗಳೂ ಒಮ್ಮೆ ಬಾಗಿದವು. ಭೂಮಿಯೂ ಕುಗ್ಗಿತು. ॥೯॥

ಬೆಂಕಿಯಂತಿದ್ದ ತಮ್ಮ ಕೋಪವನ್ನು ಉಸಿರು ಬಿಡುವುದರ ಮೂಲಕ ಬಾಯಿಯಿಂದ ಉಗುಳುತ್ತಿದ್ದರು. ಇಂತಹ ದೇವಸೇನೆಯು ಧಾವಿಸುತ್ತ ಗಂಡಕೀಪುರವನ್ನು ಪ್ರವೇಶಿಸಿತು. ಹತ್ತಾರು ಕೋಟಿ ದೈತ್ಯಸೇನೆಯು ಯಾವ ಪೊದೆಯಲ್ಲಿ ಬೀಡುಬಿಟ್ಟು ಅವಿತುಕೊಂಡು ಕುಳಿತಿದ್ದಿತೋ, ಆ ಸ್ಥಳದ ಮೇಲೆ ಎಲ್ಲರೂ ಒಮ್ಮೆಲೇ ಧುಮಿಕಿದರು. ॥೧೦॥

ತತಸ್ತತ್ರಾಭವದ್ಯುದ್ಧಂ ತುಮುಲಂ ರೋಮಹರ್ಷಣಮ್ ।
ಶಸ್ತ್ರಾಸ್ತ್ರೈರ್ಬಾಣನಿಚಯೈರ್ಭಿಂಡಿಪಾಲ-ಪರಶ್ವಧೈಃ ॥೧೧॥
ಕೇಷಾಂಚಿನ್ಮಸ್ತಕಾ ಭಿನ್ನಾಃ ಪಾದಾ ಹಸ್ತಾಸ್ತಥೋರವಃ ।
ಜಾನು-ಜಂಘಾಶ್ಚ ಗುಲ್ಫಾಶ್ಚ ಭಗ್ನಾಃ ಕೇಽಪಿ ಗತಾಸವಃ ॥೧೨॥
ನಿಪತ್ಯ ಪುನರುತ್ಥಾಯ ಪ್ರಾಯುದ್ಧ್ಯನ್ ಸ್ವ-ಪರೈಸ್ಸಹ ।
ಏವಂ ನಿಪತಿತಾ ದೈತ್ಯಾ ಅಸಂಖ್ಯಾತಾ ಗತಾಸವಃ ॥೧೩॥
ಪಲಾಯ್ಯ ನಿರ್ಗತಾಃ ಕೇಚಿದಾಚಖ್ಯುಸ್ಸಿಂಧವೇಽಖಿಲಮ್ ।
ಸಭಾಮಧ್ಯೇ ವೀರಗಣೈರುಪವಿಷ್ಟಾಯ ಕೇಚನ ॥೧೪॥

---

ಒಡನೆಯೇ ಉಭಯ ಪಕ್ಷದವರಿಗೂ ತುಮುಲವಾದ ಕದನವು ಆರಂಭವಾಯಿತು. ನೋಡಿದವರಿಗೆ ರೋಮಾಂಚಕಾರಕವಾದುದು ಆಗ ನಡೆದ ಯುದ್ಧ. ಅವರು ಉಪಯೋಗಿಸಿದ ಆಯುಧಗಳೆಂದರೆ ಅನೇಕ ಬಗೆಯ ಶಸ್ತ್ರಾಸ್ತ್ರಗಳು, ಬಾಣ ಭರ್ಚಿಗಳ ಸಮುದಾಯ, ಭಿಂಡಿಪಾಲ, ಪರಶ್ವಧಗಳು. ॥೧೧॥

ಈ ಯುದ್ಧದಲ್ಲಿ ಯೋಧರನೇಕರಿಗೆ ತಲೆಬುರುಡೆಗಳು ಒಡೆದವು. ಕಾಲು ತೊಡೆ ಇವನ್ನು ಮುರಿಸಿಕೊಂಡವರೆಷ್ಟೋ ಮಂದಿ. ಜಾನು—ಜಂಘೆ ಗುಲ್ಫ ಇವನ್ನು ಕಳೆದುಕೊಂಡವರು ಗಣನೆಗೆ ಸಿಕ್ಕುತ್ತಿರಲಿಲ್ಲ. ಕೆಲವರಂತೂ ಉಸಿರನ್ನೇ ಕಳೆದುಕೊಂಡು ಮುಂದಿನ ಯಾವ ಯೋಚನೆಯೂ ಇಲ್ಲದೆ, ರಣರಂಗದಲ್ಲಿ ದೀರ್ಘನಿದ್ರಾಸಕ್ತರಾದರು. ॥೧೨॥

ಆಹತರಾಗಿ ನೆಲಕ್ಕುರುಳಿದ ಸೈನಿಕರನೇಕರು ಮತ್ತೆ ಮೇಲಕ್ಕೆದ್ದು ತಮ್ಮವರು, ಪರರು ಎಂಬ ಪರಿಜ್ಞಾನವಿಲ್ಲದೆ ಎದುರಿಗೆ ಸಂಧಿಸಿದವರೊಡನೆ ಮನಸ್ವಿಯಾಗಿ ಹೋರಾಡಿದರು. ದೈತ್ಯಸೇನೆಯಲ್ಲಿ ನೆಲಕ್ಕುರುಳಿ ಪ್ರಾಣಗಳನ್ನು ಕಳೆದುಕೊಂಡವರ ಸಂಖ್ಯೆಯು ಗಣನಾತೀತವಾಗಿದ್ದಿತು. ॥೧೩॥

ದೇವವೀರರ ಹೊಡೆತಗಳನ್ನು ತಡೆಯಲಾರದೆಯೂ, ತಮ್ಮ ಸಹೋದ್ಯೋಗಿಗಳಿಗುಂಟಾದ ಪರಿಣಾಮ, ಅಂತ್ಯವನ್ನು ಕಂಡು ಹೆದರಿದವರಾಗಿಯೂ ಇದ್ದ ಕೆಲವು ದೈತ್ಯಯೋಧರು ತಮ್ಮ ರಾಜನಿಗೆ ಸುದ್ದಿಯನ್ನು ತಿಳಿಸುವನೆಪವನ್ನುಮುಂದೆ ಮಾಡಿಕೊಂಡು ಓಡಿಹೋದರು. ಆ ಸಮಯದಲ್ಲಿ ಸಿಂಧುದೈತ್ಯನು ಮಹಾವೀರ್ಯಶಾಲಿಗಳೊಡನೆ ಸಭೆಯಲ್ಲಿ ಕುಳಿತಿದ್ದನು. ಅರೆಜೀವರಾದ ಸೈನಿಕರು ಎಲ್ಲ ಯುದ್ಧ ವೃತ್ತಾಂತವನ್ನೂ ಹೆದರುತ್ತ ಅವನಿಗೆ ಹೇಳಿದರು. ॥೧೪॥

ಶಸ್ತ್ರಘಾತೈಸ್ಸ್ರವದ್ರಕ್ತಾಃ ಪುಷ್ಪಿತಾ ಇವ ಕಿಂಶುಕಾಃ ।
ತತ್ರಾಗತ್ಯ ಮೃತಾಃ ಕೇಚಿತ್ಕೇಚಿದ್ಧೈರ್ಯಾತ್ತಮಬ್ರುವನ್ ॥೧೫॥

ದೈತ್ಯಾ ಊಚುಃ:—
ನಗರದ್ವಾರಗುಲ್ಮೇ ತು ದಶಕೋಟಿನಿಶಾಚರಾಃ ।
ನಿವೃತ್ತಾಶ್ಶಸ್ತ್ರಸಂಘಾತೈರ್ಯುದ್ಧಂ ಕೃತ್ವಾ ಪರಸ್ಪರಮ್ ॥೧೬॥
ಯದಾ ಶೈಲಭಿದೋ ಯುದ್ಧಮಭೂತ್ತತ್ರ ಜಯೋಽಭವತ್ ।
ಉಪವಿಷ್ಟೋಽಸಿ ಕಿಂ ತೂಷ್ಣೀಂ ಸಿಂಧೋ ! ಸ್ವಹಿತಮಾಚರ ॥೧೭॥
ಆರಾಮಾ ರಿಪುಭಿರ್ದಗ್ಧಾಃ ಗೃಹಾಣಿ ಚ ಪ್ರತೋಲಿಕಾಃ ।
ಅಂಧಕಾರೇ ಧೂಲಿಕೃತೇ ಪ್ರಾಪಲನ್ವಹ್ನಿತೇಜಸಾ ॥೧೮॥
ಭುಂಜಂತೋ ನಿದ್ರಿತಾಃ ಕೇಚಿನ್ನಿರ್ಯಯುರ್ನಗರಾದ್ಬಹಿಃ ।

---

ಇವರ ದೇಹಗಳು ಶಸ್ತ್ರಾಸ್ತ್ರಗಳ ಹೊಡೆತದಿಂದ ಕೊಚ್ಚಿಹೋಗಿದ್ದವು. ಆಯಾ ಘಾಯಗಳಿಂದ ರಕ್ತವು ಧಾರಾಕಾರವಾಗಿ ಸುರಿದು ಅಲ್ಲಲ್ಲಿ ಹೆಪ್ಪುಗಟ್ಟಿದ್ದಿತು. ಕೆಲವು ಪ್ರಬಲ ಗಾಯಗಳಿಂದ ಇನ್ನೂ ರಕ್ತ ಸೋರುತ್ತಲೇ ಇದ್ದಿತು. ಅವರನ್ನು ನೋಡಿದರೆ ಅರಳಿದ ಕೆಂಪು ಹುವ್ವಿನ ಮರದಂತೆ ತೋರುತ್ತಿದ್ದರು. ರಾಕ್ಷಸನ ಸಭೆಗೆ ಬಂದನಂತರ ಅಲ್ಲಿಯೇ ಬಿದ್ದು ಬಹು ಮಂದಿ ರಾಕ್ಷಸರು ಮೃತರಾದರು. ಧೈರ್ಯಶಾಲಿಗಳಾದ ಕೆಲವರು ಮುಂದೆ ಬಂದು ಹೀಗೆಂದು ನುಡಿದರು. ॥೧೫॥

ದೈತ್ಯಸೈನಿಕರು :—
ನಮ್ಮ ನಗರದ ದ್ವಾರದ ಬಳಿ ರಕ್ಷಣೆಗಾಗಿ ಸೈನಿಕರ ಬೀಡು ಇರುವುದು ಸರಿಯಷ್ಟೇ? ಆ ಹತ್ತಾರು ಕೋಟಿ ಸೈನಿಕರು ತಮ್ಮ ಬಳಿ ಇರುವ ಶಸ್ತ್ರಾಸ್ತ್ರಗಳಿಂದ ಪರಸ್ಪರ ಹೋರಾಡಿ ಎಲ್ಲರೂ ಸತ್ತುಹೋದರು ॥೧೬॥

ಹಿಂದೆ ನೀನು ಇಂದ್ರನೊಂದಿಗೆ ಯುದ್ಧಮಾಡಿದ್ದಾಗ ವಿಜಯ ದೊರೆತಿದ್ದಿತು. ಪ್ರಾಯಃ ಅದೇ ಕೊನೆಯ ಜಯ ಎಂದು ಕಾಣಿಸುತ್ತದೆ. ಸಿಂಧುರಾಜ ! ಪರಿಸ್ಥಿತಿ ಈ ರೀತಿ ವಿಷಮಿಸಿರುವಾಗ ನೀನು ಕೈಕಟ್ಟಿಕೊಂಡು ಸುಮ್ಮನೆ ಕುಳಿತಿರುವೆಯಲ್ಲ? ನಿನ್ನ ಹಿತವಾವುದೋ ಅದನ್ನು ಪ್ರಕೃತ ಆಚರಿಸು. ॥೧೭॥

ಶತ್ರುಗಳು ನಿನ್ನ ವಿಹಾರಭೂಮಿಯಾಗಿದ್ದ ರಾಜೋದ್ಯಾನವನ್ನು ಸುಟ್ಟಿದ್ದಾರೆ. ನಾಗರಿಕರ ಮನೆ-ಮಠಗಳೆಲ್ಲ ಧ್ವಂಸವಾಗಿ ಹೋಗಿವೆ. ಅವರ ಕಾಲ್ತುಳಿತಕ್ಕೆ ಭೂಮಿಯ ಧೂಳಿ ಮೇಲಕ್ಕೆದ್ದು ಕತ್ತಲು ಕವಿದುಹೋಗಿದೆ. ಬೆಂಕಿಯ ಝಳಕ್ಕೆ ಹೆದರಿ ಜನರೆಲ್ಲರೂ ಓಡೋಡಿ ಹೋಗುತ್ತಿದ್ದಾರೆ. ॥೧೮॥

ನಾಗರಿಕರ ಪೈಕಿ ಊಟಮಾಡುತ್ತಿದ್ದವರೂ, ನಿದ್ರಿತರೂ ಓಡೋಡಿ ಊರನ್ನು

ಬಾಲಾನಾದಾಯ ಪಪಲುಸ್ತ್ಯಕ್ತ್ವಾ ಭೋಗಂ ಚ ಕೇಚನ ||೧೯||

ವಿಃಸ್ರಸ್ತವಸನಾಃ ಕೇಚಿದ್ಧ್ಯಾನಸ್ಥಾ ವಹ್ನಿನಾ ಹುತಾಃ ।
ತತ್ರಾಪಿ ನಿಧನಂ ಜಗ್ಮುರ್ನಾನಾಶಸ್ತ್ರಪ್ರಹಾರತಃ ||೨೦||

ಧನಂಜಯಂ ಸರ್ವದಿಕ್ಷು ವೀಕ್ಷ್ಯ ಪೌರಾ ಭಯಾತುರಾಃ ।
ಮೇನಿರೇ ಪ್ರಲಯಂ ಪ್ರಾಪ್ತಂ ದಹ್ಯತೇ ಸಕಲಾ ಪುರೀ ||೨೧||

ಕ ಉವಾಚ :—

ಏವಂ ದೂತಮುಖಾಚ್ಛ್ರುತ್ವಾ ಸಿಂಧುರ್ಜೃಂಭಾಮಥಾಕರೋತ್ ।
ಖಾದನ್ನಿವ ಮೃಗಾನ್ ಸಿಂಹಃ ಪರ್ವತೇಂದ್ರವಿನಿರ್ಗತಃ ||೨೨||

ಉವಾಚ ' ದುರ್ಧರಾ ಸೇನಾ ದೃಶ್ಯತೇ ಕಿಂ ಭವಿಷ್ಯತಿ ? ।
ದಿದೀಪೇ ಕ್ರೋಧಾನಲತೋ ಗ್ರಸನ್ನಿವ ತ್ರಿವಿಷ್ಟಪಮ್ ||೨೩||

ಬಿಟ್ಟು ಹೊರಕ್ಕೆ ನಡೆದರು. ಚಿಕ್ಕ ಚಿಕ್ಕ ಮಕ್ಕಳನ್ನು ಎತ್ತಿಕೊಂಡು ಓಡುತ್ತ ಲಿದ್ದ ಸ್ತ್ರೀಜನರ ಶೋಚನೀಯ ಪರಿಸ್ಥಿತಿ ವರ್ಣನಾತೀತವಾಗಿದೆ. ಸುಖ ಭೋಗಾಸಕ್ತರಾದವರನೇಕರು ಅವನ್ನೆಲ್ಲ ಅಲ್ಲೇ ತ್ಯಜಿಸಿ ಓಡಿದರು ||೧೯||

ಓಡುವ ರಭಸದಲ್ಲಿ ಅನೇಕರ ವಸ್ತ್ರಗಳೆಲ್ಲ ಕಳಚಿಹೋದವು. ಮಾನದ ಮೇಲೆ ಸಹ ಅವರಿಗೆ ಗಮನ ಉಳಿಯಲಿಲ್ಲ. ಧ್ಯಾನಾಸಕ್ತರಾದ ಕೆಲವರು ಆ ಬೆಂಕಿ ಯಲ್ಲಿ ಬೆಂದುಹೋದರು. ಅಗಸೆಯ ಬಾಗಿಲನ್ನು ದಾಟಿಹೋದವರ ಪರಿಸ್ಥಿತಿಯೂ ನೆಮ್ಮದಿಯಿಂದಿರಲಿಲ್ಲ. ಸೈನಿಕರ ಕೈಯಿಗೆ ಸಿಕ್ಕಿದರು. ತಮ್ಮಲ್ಲಿದ್ದ ಬಗೆಬಗೆಯ ಶಸ್ತ್ರಾಸ್ತ್ರಗಳಿಂದ ನಿರಪರಾಧಿಗಳನ್ನೆಲ್ಲ ಕೊಚ್ಚಿ ಕೊಚ್ಚಿ ಚೆಲ್ಲಿದರು. ||೨೦||

ದಿಙ್ಮಾಲೆಗಳಲ್ಲೆಲ್ಲ ಅಗ್ನಿಜ್ವಾಲೆಯು ಹಬ್ಬಿಹೋಗಿದ್ದುದನ್ನು ಕಂಡು ಅದರಿಂದ ತಪ್ಪಿಸಿಕೊಳ್ಳಲು ಮಾರ್ಗ ಕಾಣದೇ ನಾಗರಿಕರು ದಂಗುಬಡಿದು "ಪ್ರಾಯಃ ಇದು ಪ್ರಲಯಕಾಲವೇ ಸರಿ. ಇಲ್ಲವಾಗಿದ್ದರೆ ಇಡೀ ನಗರವು ಇದ್ದಕ್ಕಿದ್ದಂತೆ ಉರಿಯೋಣ ವೆಂದರೇನು? " ಎಂದು ತಿಳಿದರು. ||೨೧||

ಬ್ರಹ್ಮಾ :—

ದೂತರ ಮುಖದಿಂದ ಹೊರಟ ಈ ಮಾತುಗಳನ್ನು ಕೇಳಿ ಸಿಂಧುದೈತ್ಯನು ಒಮ್ಮೆ ದೊಡ್ಡದಾಗಿ ಆಕಳಿಸಿದನು. ಇದನ್ನು ನೋಡಿದರೆ ಮೃಗಗಳನ್ನು ತಿನ್ನುವುದ ಕ್ಕೋಸ್ಕರ ಪರ್ವತದ ಗುಹೆಯಿಂದ ಹೊರಹೊರಟ ತೆರೆದ ಬಾಯಿಯ ಸಿಂಹವೋ ಎಂಬಂತೆ ಕಂಡುಬಂದಿತು. ||೨೨||

' ದುರ್ಧರವಾದ ಸೇನೆಯೊಂದನ್ನು ಕಂಡಮಾತ್ರಕ್ಕೆ ಇಷ್ಟೇಕೆ ಹೆದರಬೇಕು? ಅದ

ಸಿಂಧುರುವಾಚ :—

ಸಿಂಹಸ್ಯಾಗ್ರೇ ಕಿಂ ಶಶಕಃ ಕರಿಷ್ಯತಿ ಪರಾಕ್ರಮಮ್ ।
ಮೇರೋಃ ಕಿಂ ಶಲಭಃ ಕುರ್ಯಾಚ್ಚಾಲನಂ ಜಂಬುಕೋಽಪಿ ವಾ ॥೨೪॥
ಕಾಲಸ್ಯ ಮಮ ಕಿಂ ಕುರ್ಯಾದ್ಬಾಲೋಽಯಂ ತು ಮಯೂರರಾಟ್ ।

ಕ ಉವಾಚ :—

ಇತ್ಯುಕ್ತ್ವಾ ಕ್ಷ್ವೇಡಿತೇನಾಸೌ ನಾದಯನ್ನಿದಿಶೋ ದಿಶಃ ॥೨೫॥
ಚಿಂತಾತುರಃ ಕ್ಷಣಂ ತಸ್ಥೌ ಮುನಿರ್ಮೌನಮಿವಾಸ್ಥಿತಃ ।
ತತೋ ವೀರಾಃ ಸಿಂಧುದೈತ್ಯಂ ಪ್ರಾಬ್ರುವನ್ ಕ್ರೋಧಮೂರ್ಛಿತಾಃ ॥೨೬॥

---

ರಿಂದ ನಮಗೇನು ಹಾನಿಯಾದೀತು ?' ಎಂದು ನುಡಿವಾಗ ಕೋಪವು ವೃದ್ಧಿಯಾಗಿ ತಾನೇ ತಾನಾಗಿ ತಾಂಡವವಾಡಿತು. ಸಿಟ್ಟಿನಿಂದ ಸಿಂಧು ಉರಿದನು. ಸ್ವರ್ಗ ಲೋಕವನ್ನು ಆಹುತಿಯನ್ನಾಗಿ ತೆಗೆದುಕೊಂಡು ಬಿಡುವನೋ ಎಂಬಂತಿದ್ದಿತು, ಅವನ ಆ ರೂಪ ಮತ್ತು ಆರ್ಭಟ. ॥೨೩॥

ಸಿಂಧು :—

ಏನು ? ದೇವಸೇನೆಯ ಧಾಳಿಯೋ ಇದು ? ಸಿಂಹದ ಎದುರು ಮತ್ತೊಂದು ಪ್ರಾಣಿಗೆ ಆಹಾರವಾಗಲು ಯೋಗ್ಯವಾದ ಕ್ಷುದ್ರಪ್ರಾಣಿ; ಮೊಲ ತನ್ನ ಪೌರುಷವನ್ನು ತೋರಿಸಬಂದರೆ ಆಗುವ ಪರಿಣಾಮವೇನು ? ಅದರ ವಧೆ : ಮೇರು ಪರ್ವತವನ್ನು ದೀಪದ ಹುಳುವಾಗಲಿ, ಅಥವಾ ನರಿಯಾಗಲೀ ಅಲುಗಾಡಿಸಲು ಶಕ್ತಿಯನ್ನು ಹೊಂದಿವೆಯೇ ? ॥೨೪॥

ನಾನೋ, ಎಲ್ಲರಿಗೂ ಯಮಸ್ವರೂಪನಾಗಿದ್ದೇನೆ. ಇಂತಹ ಪ್ರತಾಪಿಯಾದ ನನಗೆ ಶುದ್ಧ ಹುಡುಗ; ಆ ಮಯೂರರಾಜನು ಏನನ್ನು ಮಾಡಿಯಾನು ?

ಬ್ರಹ್ಮಾ :—

ಹೀಗೆಂದು ನುಡಿದು ಒಮ್ಮೆ ಘಟ್ಟಿಯಾಗಿ ಚಪ್ಪಾಳೆಯನ್ನು ಹೊಡೆದನು. ಈ ಶಬ್ದದಿಂದ ದಿಗ್ದಿದಿಕ್ಕುಗಳೆಲ್ಲ ಪ್ರತಿಧ್ವನಿಗೈದವು. ॥೨೫॥

ಒಂದು ಕ್ಷಣ ಕಾಲ ಚಿಂತಿಸುತ್ತ ನಿಂತನು. ನೋಡಿದರೆ ಮೌನವ್ರತಾವಲಂಬಿಯಾದ ಮುನಿಯೋ ಎಂಬಂತೆ ತೋರಿಬರುತ್ತಿದ್ದನು. ಇದನ್ನು ನೋಡಿ ಇತರ ವೀರರಿಗೆ ಸಹನೆಯಾಗಲಿಲ್ಲ. ಕ್ರೋಧದಿಂದ ಮೈಮರೆತರು ಮತ್ತು ಸಿಂಧುದೈತ್ಯನನ್ನು ಕುರಿತು ವರಟುತನದಿಂದ ಹೀಗೆ ನುಡಿದರು. ॥೨೬॥

**ದೈತ್ಯಾ ಊಚುಃ :—**

**ಆಜ್ಞಾಂ ದೇಹಿ ಮಯೂರೇಶಂ ಜೇಷ್ಯಾಮಃ ಕ್ಷಣಮಾತ್ರತಃ ।**
**ತವ ಪ್ರತಾಪಾತ್ರೈಲೋಕ್ಯಂ ವಶಂ ನೇಷ್ಯಾಮ ಸಾಂಪ್ರತಮ್ ॥೨೭॥**
**ಸಿಂಧುರುವಾಚ :—**
**ಸಮ್ಯಗುಕ್ತಂ ಮಹಾವೀರಾ ಮಮಾಪಿ ರಿಪುದರ್ಶನೇ ।**
**ಮನ ಉತ್ಕಂಠಿತಂ ಯಸ್ಮಾತ್ಸೈನ್ಯೇನ ಯುದ್ಧ್ಯತಾಮಿಹ ॥೨೮॥**
**ತತಃ ಸರ್ವೇ ಪುರೋ ಯಾತಾ ಗರ್ಜಂತೋ ವೀರಸತ್ತಮಾಃ ।**
**ಅಸಂಖ್ಯಾತಾಃ ಶಸ್ತ್ರಧರಾಶ್ಚತುರಂಗಬಲಾನ್ವಿತಾಃ ॥೨೯॥**
**ಹಯಾರೂಢಃ ಸಿಂಧುದೈತ್ಯಃ ಕ್ರೋಧ–ಹರ್ಷಸಮನ್ವಿತಃ ।**
**ವಮರ್ನ ಕ್ರೋಧಾನಲಂ ವಕ್ತ್ರಾನ್ನೇತ್ರಾಭ್ಯಾಂ ರಣದುರ್ಮದಃ ॥೩೦॥**

---

ದೈತ್ಯವೀರರು :—

ಮೊದಲು ನಮಗೆ ಆಜ್ಞೆಯನ್ನು ಕೊಡು. ಒಂದು ಕ್ಷಣಮಾತ್ರದಲ್ಲೇ ಆ ಮಯೂರೇಶ್ವರನನ್ನು ಜಯಿಸಿ ಬರುತ್ತೇವೆ, ಪ್ರತಾಪಶಾಲಿಯಾದ ನಿನ್ನ ಬೆಂಬಲ ಒಂದಿದ್ದರೆ ಸಾಕು, ಮೂರು ಲೋಕಗಳನ್ನು ಬೇಕಾದರೂ ಈಗಲೇ ವಶಪಡಿಸಿಕೊಂಡು ಬರುತ್ತೇವೆ. ॥೨೭॥

ಸಿಂಧು :—

ಮಹಾವೀರರೇ ! ನಿಮ್ಮ ಪೌರುಷಕ್ಕೆ ಉಚಿತವಾದ ರೀತಿಯಲ್ಲೇ ನೀವು ಮಾತನಾಡಿದಿರಿ. ಬಹಳ ಸಂತೋಷ. ಆದರೆ ಆ ಶತ್ರು ಎಷ್ಟರಮಟ್ಟಿಗೆ ವೀರ್ಯಶಾಲಿ ಎಂಬುದನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ನನ್ನ ಮನಸ್ಸೂ ಹಾತೊರೆಯುತ್ತಿದೆ. ಆದುದರಿಂದ ಇರತಕ್ಕ ಈ ಸೈನಿಕರೊಂದಿಗೆ ಪ್ರಕೃತ ನೀವು ನನ್ನೊಡನೆ ಬಂದು ಯುದ್ಧವನ್ನು ಮಾಡುತ್ತಲಿರಿ. ॥೨೮॥

ಬ್ರಹ್ಮ :—

ಅನಂತರ ಎಲ್ಲ ವೀರೋತ್ತಮರೂ ಗರ್ಜಿಸುತ್ತ ದೈತ್ಯನ ಮುಂದೆ ನಡೆದರು. ಅವರನ್ನು ಹಿಂಬಾಲಿಸಿ ಚತುರಂಗ ಸೈನಿಕರು ತಮ್ಮ ತಮ್ಮ ಶಸ್ತ್ರಾಸ್ತ್ರಗಳೊಂದಿಗೆ ಹೊಸ ಉತ್ಸಾಹದಿಂದ ಯುದ್ಧಕ್ಕೆ ತೆರಳಿದರು. ಸೈನಿಕರನ್ನು ಎಣಿಸುವುದಕ್ಕೆ ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ॥೨೯॥

ಸಿಂಧುದೈತ್ಯನು ತನ್ನ ಕುದುರೆಯನ್ನೇರಿ ಎಲ್ಲರನ್ನೂ ಉತ್ತೇಜಿಸುತ್ತ ಮುನ್ನುಗ್ಗಿ ನಡೆದನು. ಕೋಪವನ್ನು ಮುಖ–ಕಣ್ಣುಗಳಿಂದ ಉಗುಳುತ್ತಲಿದ್ದನು. ಯುದ್ಧವೆಂದ ಕೂಡಲೇ ಅವನಿಗೆ ಪಾಶವೀಮದವೇರಿತು. ॥೩೦॥

**ಯುಯಾವಶ್ವಂ ಪುರೋಧಾಯ ಮನೋವೇಗಂ ಮಹಾಧನಮ್ ॥೩೧॥**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ರಣೋತ್ಸಾಹವರ್ಣನಂ' ನಾಮ ದ್ವಾದಶಾಧಿಕ ಶತತಮೋಽಧ್ಯಾಯಸ್ಸಮಾಪ್ತಃ**

---

ರಾಕ್ಷಸನೇರಿದ್ದ ಕುದುರೆ ಬಹಳ ಬೆಲೆ ಬಾಳತಕ್ಕದ್ದು. ಮನಸ್ಸಿನಂತೆ ಅಚಿಂತ್ಯ ವೇಗದಿಂದ ಓಡತಕ್ಕದ್ದು. ಅದನ್ನು ಏರಿದ್ದ ಸಿಂಧುದೈತ್ಯನು ಶತ್ರುಗಳ ಕಡೆಗೆ ಮುನ್ನುಗ್ಗಿದನು. ॥೩೧॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ರಣೋತ್ಸಾಹ ವರ್ಣನೆ' ಎಂಬಲ್ಲಿಗೆ ಹನ್ನೆರಡನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ತ್ರಯೋದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಪದಾತಯಃ ಪುರೋ ಯಾಂತಿ ಕಂಪಯಂತೋ ವಸುಂಧರಾಮ್ ।**
**ವಿಕರಾಲಮುಖಾ ವೀರಾಃ ಸಿಂದೂರಾರುಣಮಸ್ತಕಾಃ ॥೧॥**

**ಕೇಚಿನ್ನಿಬದ್ಧ ಕವಚಾ ಮುಕ್ತಕೇಶಾಃ ಸು–ದಾರುಣಾಃ ।**
**ಕೇಚಿನ್ನಿಬದ್ಧಕಟಿಯಃ ಕೇಚಿಚ್ಚಂದನಚರ್ಚಿತಾಃ ॥೨॥**

**ನಾನಾಶಸ್ತ್ರಪ್ರಹರಣಾ ನಾನಾಯುದ್ಧವಿಶಾರದಾಃ ।**
**ಪುರೋ ಯಾಂತಿ ಗಜಾ ಮತ್ತಾ ಧಾತುಚಿತ್ರಇವಾದ್ರಯಃ ॥೩॥**

---

|| ಶ್ರೀ ಮಂಗಲಮೂರ್ತಯೇ ನಮಃ ||

## ೧೧೩ ನೆಯ ಅಧ್ಯಾಯ

ಬ್ರಹ್ಮಾ:—

ಪದಾತಿ ಸೈನ್ಯದವರು ಎಲ್ಲರಿಗೂ ಮುಂದೆ ನಡೆದರು. ಅವರ ಕಾಲ್ತುಳಿತಕ್ಕೆ ಭೂಮಿಯು ಕಂಪಿಸುತ್ತಲಿದ್ದಿತು. ಅವರಲ್ಲಿ ಪ್ರತಿಯೋರ್ವನ ಮುಖವೂ ಬಹಳ ವಿಕಾರವಾಗಿದ್ದಿತು. ಅವರ ತಲೆಗಳು ಕೆಂಪು ಬಣ್ಣದ ಕೂದಲುಗಳಿಂದ ಕೂಡಿದ್ದು ವಾಗಿ ನೋಡಿದರೆ ಬಹಳ ಭಯಂಕರವಾಗಿ ತೋರುತ್ತಲಿದ್ದವು. ||೧||

ಕೆಲವರು ತಮ್ಮ ದೇಹಗಳಿಗೆ ಆಯುಸ ಕವಚಗಳನ್ನು ತೊಟ್ಟುಕೊಂಡಿದ್ದರು. ತಲೆಗೂದಲನ್ನು ಗಂಟುಹಾಕದೆ ಹರವಿಕೊಂಡದ್ದರಿಂದ ಮತ್ತಷ್ಟೂ ಭಯಂಕರಾಕಾರರಾಗಿ ತೋರಿದರು. ಕೆಲವರು ಸೊಂಟಕ್ಕೆ ಪಟ್ಟಿಗಳನ್ನು ಕಟ್ಟಿಕೊಂಡಿದ್ದರು. ಮತ್ತೆ ಕೆಲವರು ಯುದ್ಧಕ್ಕೆ ಬರುವಾಗ ಸಹ ತಮ್ಮ ಭೋಗಲಾಲಸೆಯನ್ನು ಬಿಡಲಾರದೆ ದೇಹಕ್ಕೆಲ್ಲ ಸುಗಂಧಿ ಚಂದನವನ್ನು ಚರ್ಚಿಸಿಕೊಂಡಿದ್ದರು. ||೨||

ಪ್ರಸಂಗೋಚಿತವಾಗಿ ಯಾವ ಬಗೆಯ ಶಸ್ತ್ರಾಸ್ತ್ರಗಳನ್ನು ಬೇಕಾದರೂ ಪ್ರಯೋಗಿಸಲು ಬಲ್ಲವರವರು. ಅನೇಕ ಸಂದರ್ಭಗಳಲ್ಲಿ ಯುದ್ಧವನ್ನು ಮಾಡಿ ವಿಶೇಷ ಅನುಭವವನ್ನು ಪಡೆದವರಾಗಿದ್ದರು. ಸೇನೆಯ ಮುಂಭಾಗದಲ್ಲಿ ಗಜಸೇನೆಯು

**ದೀರ್ಘದಂತಾ ವಿಭಾಂತಿ ಸ್ಮ ಭೂಷಣೈರ್ವಿವಿಧೈರಪಿ ।**
**ಘಂಟಾನಾದೈರ್ಜನಂ ಸರ್ವಂ ಬಧಿರಂ ಚಕ್ರುರಂಜಸಾ ॥೪॥**

**ಚೂರ್ಣಯಂತೋ ಗಿರೀನ್ ವೃಕ್ಷಾನ್ ಯಯುಃ ಶುಂಡಾಪ್ರಹಾರತಃ ।**
**ಲಸತ್ಕುಂಭಾಃ ಪತಾಕಾಢ್ಯೈಶ್ಚಿತ್ರಧ್ವಜವಿರಾಜಿತಾಃ ॥೫॥**

**ತತೋಽಶ್ವಾಶ್ಚ ಖುರಾಘಾತೈಶ್ಚೂರ್ಣಯಂತೋ ವಸುಂಧರಾಮ್ ।**
**ಹೇಷಿತೈರ್ನಾದಯಂತೋ ವೈ ಗಗನಂ ಚ ದಿಶೋ ದಶ ॥೬॥**

**ಸುವರ್ಣರತ್ನಮುಕ್ತಾಭಿರ್ಭೂಷಿತಂ ವ್ಯೋಮಚಾರಿಣಃ ।**
**ಅಧಿಷ್ಠಾತಾ ಮಹಾಯೋಧೈಸ್ತನುತ್ರಾಣಪ್ರಶೋಭಿಭಿಃ ॥೭॥**

---

ಹೊರಟಿದ್ದಿತು. ಆ ಗುಂಪಿನಲ್ಲಿದ್ದ ಪ್ರತಿಯೊಂದು ಆನೆಯೂ ಧಾತು (ಕಬ್ಬಿಣ) ನಿರ್ಮಿತ ಪರ್ವತದಂತೆ ತೋರುತ್ತಿದ್ದಿತು. ।೩॥

ನೀಳವಾದ ಕೊಂಬುಗಳಿಂದ ಆ ಆನೆಗಳು ಬಹಳ ಸುಂದರವಾಗಿ ತೋರುತ್ತಲಿದ್ದವು. ಅವಕ್ಕೆ ಮಾಹುತರು ಅನೇಕ ಆಭರಣಗಳನ್ನು ತೊಡಿಸಿ ಅಲಂಕರಿಸಿದ್ದರು. ಅವು ತಮ್ಮ ಕೊರಳಲ್ಲಿ ಕಟ್ಟಿದ್ದ ದೊಡ್ಡ ದೊಡ್ಡ ಘಂಟೆಗಳನ್ನು ಪದೇ ಪದೇ ಶಬ್ದಮಾಡಿ ದೈತ್ಯರಿಗೆ ಜಯವನ್ನು ಕೋರಿದಂತೆ ಮಾಡುತ್ತಲಿದ್ದವು. ಘಂಟೆಗಳ ಶಬ್ದವು ರಣರಂಗದಲ್ಲಿದ್ದವರನ್ನೆಲ್ಲ ಕಿವುಡರನ್ನಾಗಿ ಮಾಡಿತು. ॥೪॥

ಇವು ನಡೆವಾಗ ಸುಮ್ಮನಿರದೇ ತಮ್ಮ ಸೊಂಡಿಲನ್ನು ಅತ್ತಿತ್ತ ಚಾಲನಮಾಡಿ ಅಪ್ಪಳಿಸುತ್ತ ದೊಡ್ಡ ದೊಡ್ಡ ಮರಗಳು, ಪರ್ವತಗಳು ಇವನ್ನೆಲ್ಲ ಪುಡಿ ಪುಡಿ ಮಾಡಿದವು. ಆನೆಗಳ ಕುಂಭಸ್ಥಳ ಪರಿಪುಷ್ಟವಾಗಿದ್ದವು. ರಾಜನ ಕುರುಹನ್ನು ಸೂಚಿಸುವ ಬಣ್ಣ ಬಣ್ಣದ ಪತಾಕೆಗಳು ಧ್ವಜಗಳು ಇವು ಎಲ್ಲರಿಗೂ ಕಾಣುವಂತೆ ಆನೆಗಳ ಮೇಲೆ ಇರಿಸಿದ್ದರು. ಇವು ಆನೆಗಳಿಗೆ ಒಂದು ಬಗೆ ಅಲಂಕಾರವಾಗಿದ್ದವು. ॥೫॥

ಅನಂತರ ಹೊರಟುದೆಂದರೆ ಅಶ್ವದ ಪಡೆ. ಅವು ಬಹಳ ವೇಗವುಳ್ಳವು ಮತ್ತು ಸು-ಸಂಸ್ಕೃತವೂ ಆಗಿದ್ದವು. ಕುದುರೆಗಳು ತಮ್ಮ ಖುರ (ಗೊರಸು) ಪುಟಗಳಿಂದ ಭೂಮಿಯನ್ನು ಲಲವಾಗಿ ತುಳಿಯುತ್ತ ನೆಲದ ಮಣ್ಣನ್ನೆಲ್ಲ ಅಗೆದುಬಿಟ್ಟವು. ಹೇಷಾರವದಿಂದ ದಿಕ್ಕುಗಳನ್ನೆಲ್ಲ ಪ್ರತಿನಾದಗೊಳಿಸಿದವು. ॥೬॥

ಅಶ್ವಗಳಿಗೆ ತೊಡಿಸಿದ್ದ ಆಭರಣಗಳು ಮುತ್ತು-ರತ್ನಗಳಿಂದ ಖಚಿತವಾದುವು. ಅವು ಸಾಮರ್ಥ್ಯದಲ್ಲಿ ಎಳ್ಳಷ್ಟೂ ಕಡಿಮೆಯಾಗಿರಲಿಲ್ಲ. ಗಗನದಲ್ಲಿ ನಹ ಅಪ್ರತಿಹತ

ನಾನಾಶಸ್ತ್ರಧರೈರ್ವೀರೈಃ ಪರಸೇನಾವಿಮರ್ದಿಭಿಃ ।
ತತಸ್ತು ರಥಿನೋ ಜಗ್ಮುಃ ಶಸ್ತ್ರಾಸ್ತ್ರೈರುಪಶೋಭಿನಃ ॥೮॥
ಸಹಿತಾ ಯುದ್ಧಮಾರ್ಗಜ್ಞೈರ್ವರೈಃ ಸಾರಥಿಭಿರ್ಮೃಧೇ ।
ಮುಕ್ತಾ ಮಣಿಮಯಾ ಮಾಲಾ ವಹಂತೋ ಗಂಧಮಾಲಿನಃ ॥೯॥
ಧನುಸ್ಕಂಧಾಸ್ತೂಣಭೃತೋ ಭಲ್ಲಹಸ್ತಾಃ ಸಖಂಗಕಾಃ ।
ಶಸ್ತ್ರಪ್ರಭಾಭಿರ್ನೇತ್ರಾಣಿ ಛಾದಯಂತೋ ಜನಸ್ಯ ಹ ॥೧೦॥
ಏವಂ ಸೇನಾ ಸಮಾಯಾತಾ ಗರ್ಜಯಂತೀ ದಿಶೋ ದಶ ।
ಭೂತರಾಜೇನ ಸಾ ದೃಷ್ಟಾ ಪುಷ್ಪದಂತೇನ ವಾಹಿನೀ ॥೧೧॥

---

ಗತಿಯುಳ್ಳವು. ಮಹಾಯೋಧರು ತಮ್ಮ ಯುದ್ಧಕವಚಗಳನ್ನು ಹಾಕಿಕೊಂಡು ಅವನ್ನೇರಿ ಕುಳಿತಿದ್ದರು. ಅಶ್ವದ ಘನತೆಗೆ ತಕ್ಕಂತಹ ಆರೋಹಿಯೂ ಇದ್ದುದರಿಂದ ಅವು ಮತ್ತಷ್ಟು ಶೋಭಿಸಿದವು. ॥೭॥

ಆ ವೀರರು ನಾನಾಶಸ್ತ್ರಗಳನ್ನು ಪ್ರಯೋಗಿಸಬಲ್ಲವರು. ಪರಸೇನೆಗಳನ್ನು ನಾಮನಿರ್ವಿಶೇಷಗೊಳಿಸತಕ್ಕವರು. ಕುದುರೆಯ ಪಡೆಯ ಹಿಂದಿನಿಂದ ಅತಿರಥ ಮಹಾರಥರು ಹೊರಟರು. ಅವರು ತಾವು ಧರಿಸಿದ್ದ ಆಯುಧಗಳನ್ನು ಸರ್ವದಾ ಬೀಸುತ್ತಲೆ ಇರುತ್ತಿದ್ದುದರಿಂದ ಶತ್ರುಸಂಹಾರ ಕಾರ್ಯವು ವಿಶೇಷ ಗುರಿಯನ್ನಪೇಕ್ಷಿಸದೆ ಸಾಧಿಸುತ್ತಲೇ ಇದ್ದಿತು. ॥೮॥

ರಥಗಳನ್ನು ನಡೆಸುವ ವಿದ್ಯೆಯಲ್ಲಿ ಅತ್ಯಂತ ಪ್ರಾವೀಣ್ಯವುಳ್ಳ ಸಾರಥಿಗಳು ಅವನ್ನು ಏರಿ ಕುಳಿತಿದ್ದರು. ಆ ರಥಗಳಿಗೆ ಬಗೆಬಗೆಯ ಮುತ್ತಿನ ಹಾರಗಳನ್ನು ಹಾಕಿ ಅಲಂಕಾರವನ್ನು ಮಾಡಿದ್ದರು. ॥೯॥

ಯೋಧರು ಬಂಗಾರದ ಬಿಲ್ಲುಗಳನ್ನು ತಮ್ಮ ಹೆಗಲಿಗೆ ಹಾಕಿಕೊಂಡಿದ್ದರು. ಹರಿತವಾದ ಬಾಣಗಳಿಂದ ತುಂಬಿದ ಬತ್ತಳಿಕೆಗಳು ಯೋಧರ ಬೆನ್ನನ್ನಲಂಕರಿಸಿದ್ದವು. ಒಂದು ಕೈಯಲ್ಲಿ ಭಲ್ಲಾಯುಧ, ಮತ್ತೊಂದರಲ್ಲಿ ವರೆಕಳಚಿದ ಖಡ್ಗ ಇವನ್ನು ಧರಿಸಿ ನೋಡುವವರಿಗ್ಯೆಕೃತಾಂತನಂತೆ ಕಂಡುಬರುತ್ತಿದ್ದರು. ಮತ್ತು ತಮ್ಮ ಶಸ್ತ್ರಾಸ್ತ್ರಗಳ ಹೊಳಪಿನಿಂದ ಜನರ ಕಣ್ಣುಗಳನ್ನು ಕುಕ್ಕುತ್ತಲಿದ್ದರು. ॥೧೦॥

ಈ ರೀತಿಯಾಗಿ ಸೇನೆಯು ಗರ್ಜಿಸುತ್ತ, ತನ್ಮೂಲಕ ದಶ ದಿಕ್ಕುಗಳೂ ಗರ್ಜಿಸುವಂತೆ ಮಾಡುತ್ತ ಮಯೂರೇಶ್ವರಾದಿಗಳು ಇದ್ದ ಸ್ಥಳಕ್ಕೆ ಬಂದಿತು. ಈ ಸೇನೆಯನ್ನು ಎಲ್ಲರಿಗಿಂತಲೂ ಮೊದಲು ನೋಡಿದವರೆಂದರೆ ಭೂತರಾಜ ಮತ್ತು ಪುಷ

**ಮಯೂರೇಶಮುಖೌ ಯಾತೌ ತತೋ ಭೀತ್ವಾ ಪಲಾಯಿತೌ ।**

**ತಾವೂಚತುಃ :—**

**ತವಾಜ್ಞಯಾ ಪುರೋಯಾತಾವಾವಾಭ್ಯಾಂ ನಿಹತಾ ಚಮೂಃ ॥೧೨॥**

**ಗುಲ್ಮಸ್ಥಾ ನಗರದ್ವಾರಿ ದಗ್ಧಂ ಚ ನಗರಂ ಬಹು ।**

**ಪ್ರತಾಪಂ ನೌ ಸಮಾಕರ್ಣ್ಯ ಸಿಂಧುಸ್ಸ್ವಯಮುಪಾಗತಃ ॥೧೩॥**

**ಚತುರಂಗಾಂ ಚಮೂಂ ಗೃಹ್ಯ ನಾನಾಶಸ್ತ್ರಾಸ್ತ್ರಧಾರಿಣೀಮ್ ।**

**ತತೋ ಭೀತ್ವಾ ಭವಂತಂ ಚ ಸಮಾಯಾತೌ ಮಹಾಬಲ ! ॥೧೪॥**

**ಕ ಉವಾಚ :—**

**ಸಿಂಧುಸೈನ್ಯಸಮುದ್ರೋಽಥ ವದತೋರೇವಮೇತಯೋಃ ।**

**ದದೃಶೇ ಪೂರ್ವದಿಗ್ಭಾಗೇ ದುಸ್ತರಶ್ಶಸ್ತ್ರಯೋಧಿಭಿಃ ॥೧೫॥**

---

ದಂತರು. ಅವರು ಈ ಮೊದಲು ಬಹಳಮಟ್ಟಿಗೆ ಪ್ರತಾಪವನ್ನು ಬೀರಿ ನಗರ ರಕ್ಷಕರನ್ನೆಲ್ಲ ಹಣ್ಣುಮಾಡಿದ್ದರೂ ಸಿಂಧುರಾಜನ ಮೂಲಬಲವನ್ನು ಕಂಡು ಎದೆ ನಡುಗಿ ಹೋದರು. ಮತ್ತು ಈ ವಿಷಯವನ್ನು ಮಯೂರೇಶ್ವರನಿಗೆ ಆದಷ್ಟು ಶೀಘ್ರ ತಿಳಿಸಲು ಓಡುತ್ತ ಬಂದರು.

ಭೂತರಾಜ, ಪುಷ್ಪದಂತರು :—

ಭಗವನ್! ನಿನ್ನ ಆಜ್ಞೆಯಂತೆ ನಾವು ಮೊದಲು ಮುಂದೆ ಹೋಗಿ ಲತಾಗುಲ್ಮಗಳಲ್ಲಡಗಿ ಕುಳಿತಿದ್ದ ರಾಕ್ಷಸಸೇನೆಯನ್ನೆಲ್ಲ ಧ್ವಂಸಗೊಳಿಸಿಬಿಟ್ಟೆವು. ॥೧೧-೧೨॥

ಹೀಗೆ ಕೊಂದ ಸೈನಿಕರನ್ನು ನಗರದ್ವಾರದಲ್ಲೇ ಬಿಸುಟು ನಗರದ ಬಹುಭಾಗವನ್ನು ದಹಿಸಿಬಿಟ್ಟೆವು. ನಾವು ತೋರಿದ ಈ ಧಾಳಿಯ ಸುದ್ದಿಯನ್ನೂ, ನಮ್ಮ ಪರಾಕ್ರಮದ ಹಿರಿಮೆಯನ್ನೂ ಕೇಳಿದ ಸಿಂಧುದೈತ್ಯನು ತಾನೇ ಯುದ್ಧಕ್ಕೆ ಬಂದುಬಿಟ್ಟಿದ್ದಾನೆ. ॥೧೩॥

ಬರುವಾಗ ಒಬ್ಬನೇ ಬರದೇ ತನ್ನ ಚತುರಂಗ ಸೇನೆಯನ್ನೂ ಸಂಗಡ ಕರೆದು ತಂದಿದ್ದಾನೆ. ಅವನ ಸೈನಿಕರೆಲ್ಲರೂ ನಾನಾಬಗೆಯ ಶಸ್ತ್ರಾಸ್ತ್ರಗಳನ್ನು ಧರಿಸಿ ಯುದ್ಧಸಜ್ಜರಾಗಿದ್ದಾರೆ ಅವರೆಲ್ಲರನ್ನೂ ನೋಡಿ ನಮ್ಮಂತಹ ವೀರಶ್ರೇಷ್ಠರಿಗೂ ಎದೆನಡುಗಿದ್ದರಿಂದ ಇಲ್ಲಿಯವರೆಗೆ ಓಡಿಬರುವ ಪ್ರಸಂಗ ಬಂದಿತೆಂದ ಬಳಿಕ ಅಳ್ಳೆದೆಯ ಇತರರ ಪಾಡೇನು ? ಮಹಾಬಲಶಾಲಿಯೇ! ಇದ್ದ ಸಂಗತಿಯನ್ನು ಅರಿಕೆಮಾಡಿದ್ದೇವೆ. ॥೧೪॥

ಬ್ರ

ಭೂತರಾಜ ಪುಷ್ಪದಂತರು ದೇವನೆದುರು ಇಷ್ಟನ್ನೆಲ್ಲ ಹೇಳುತ್ತಿರುವಾಗಲೇ

ತತೋ ಹರ್ಷಯುತೋ ಜ್ಞಾತ್ವಾ ದೈತ್ಯವೃತ್ತಂ ಸಮಾಸತಃ ।
ನೀಲಕಂಠಂ ಸಮಾರುಹ್ಯ ಮಯೂರೇಶೋ ಯಯೌ ಪುರಃ ॥೧೬॥

ಆಯುಧಾನಿ ಚ ಚತ್ವಾರಿ ಚತುರ್ದೋರ್ಷು ಪ್ರಗೃಹ್ಯ ಸಃ ।
ಸನ್ನದ್ಧಾ ಗಣಕೋಟ್ಯಸ್ತಾ ಧನುರ್ಬಾಣಾಸಿಪಾಣಯಃ ॥೧೭॥

ಪರಿವಾರ್ಯ ಸ್ಥಿತಾ ದೇವಂ ನೀಲಕಂಠಂ ವೃಷಸ್ಥಿತಮ್ ।
ಮುನೀಶ್ವರಾಃ ಸ್ತುವಂತಿ ಸ್ಮ ದದುರಾಶೀರ್ವಚೋಽಪಿ ತಮ್ ॥೧೮॥

ಉಭಯೋಸ್ಸೇನಯೋರ್ವಾದ್ಯಘೋಷಕೋಲಾಹಲೋ ಮಹಾನ್ ।
ಪರಸ್ಪರಂ ಸಂಪದಂ ತಾಂ ವೀಕ್ಷ್ಯ ಸೇನೇ ಸು–ವಿಸ್ಮಿತೇ ॥೧೯॥

---

ಸಿಂಧುದೈತ್ಯನು ಸಮುದ್ರದಂತಿರುವ ತನ್ನ ಸೈನ್ಯವನ್ನು ಕರೆದುಕೊಂಡು ಅಲ್ಲಿಗೆ ಬರುತ್ತಿರುವುದು ಕಾಣಿಸಿತು. ಅವನ ಸೇನೆಯನ್ನು ಎದುರಿಸುವುದು ಎಂಥವರಿಗೂ ಕಷ್ಟಕರ ಕೆಲಸವಾಗಿದ್ದಿತು, ಅವನು ಪೂರ್ವದಿಗ್ಭಾಗದಿಂದ ಬಂದನು. ॥೧೫॥

ದೈತ್ಯನ ಮೂಲಬಲದ ಶಕ್ತಿಯನ್ನು ಮತ್ತು ಸಿಂಧುವಿನ ಪರಾಕ್ರಮಾದಿಗಳನ್ನೂ ಕೇಳಿ "ತನಗೆ ಸಮನಾದ ಶತ್ರು ಒಬ್ಬನು ದೊರೆತನೆ"ಂದು ತಿಳಿದು ದೇವನು ಬಹಳ ಹೃಷ್ಟನಾದನು- ಒಡನೆಯೇ ತನ್ನ ವಾಹನವಾದ ನೀಲಕಂಠ (ನವಿಲ) ನನ್ನೇರಿ ಎಲ್ಲರಿಗೂ ಮುಂದೆ ಯುದ್ಧಕ್ಕೆ ಹೊರಟುಬಿಟ್ಟನು. ॥೧೬॥

ನಾಲ್ಕು ಬಗೆಯ ಆಯುಧಗಳನ್ನೂ ತನ್ನ ನಾಲ್ಕು ಕೈಗಳಲ್ಲೂ ಧರಿಸಿದನು. ಮಯೂರೇಶನು ಯುದ್ಧೋದ್ಯಮಿಯಾಗಿ ಮುಂದೆ ಒಬ್ಬನೇ ಹೊರಟುದನ್ನು ನೋಡಿ ಕೋಟಿಗಟ್ಟಲೆ ಇದ್ದ ಪ್ರಮಥ ಗಣದವರು ತಮ್ಮ ತಮ್ಮ ಕೈಗಳಲ್ಲಿ ಧನುಸ್ಸು, ಹರಿತ ಬಾಣ ಇವನ್ನು ಹಿಡಿದುಕೊಂಡು ಯುದ್ಧಸನ್ನದ್ಧರಾಗಿ ದೇವನನ್ನು ಹಿಂಬಾಲಿಸಿದರು. ॥೧೭॥

ತಮ್ಮ ನಾಯಕರಾದ ಮಯೂರೇಶ್ವರ, ಮಹಾದೇವರಿಗೆ ಶತ್ರುಸೈನ್ಯದವರಿಂದ ಯಾವ ವಿಧವಾದ ಅಪಾಯವೂ ಆಗಬಾರದೆಂಬುದಕ್ಕಾಗಿ ಅವರಿಬ್ಬರನ್ನೂ ಸುತ್ತುಗಟ್ಟಿಕೊಂಡು ನಿಂತರು. ಋಷಿಗಳು ಮಯೂರೇಶ್ವರನನ್ನು ಬಾಯಿತುಂಬ ಹೊಗಳುತ್ತ "ವಿಜಯಶಾಲಿಯಾಗು" ಎಂದು ಹೃತ್ಪೂರ್ವಕವಾಗಿ ಹರಸಿದರು. ॥೧೮॥

ಸೇನೆಗಳೆರಡೂ ಪರಸ್ಪರರನ್ನು ಸಂಧಿಸಿದ ಕೂಡಲೇ ಉಭಯ ಪಕ್ಷಗಳಲ್ಲೂ ಸ್ಫೂರ್ತಿಯುಂಟಾಯಿತು. ರಣವಾದ್ಯಗಳು ಮೊಳಗಲಾರಂಭಿಸಿದವು. ಅದರ ಕರ್ಕಶ ಶಬ್ದ ದೊಡ್ಡ ಕೋಲಾಹಲವನ್ನೇ ಎಬ್ಬಿಸಿತು. ಸೇನಾಸುವ್ಯವಸ್ಥೆ, ವೀರಶ್ರೀ. ಗಜ

ಅಸಂಖ್ಯಾತಂ ಬಲಂ ವೀಕ್ಷ್ಯ ತುತೋಷ ಸ ಮಯೂರರಾಟ್ ।
ಯದುಕ್ತಂ ನಂದಿನಾ ಪೂರ್ವಂ ತದ್ದೃಷ್ಟಂ ಸರ್ವಮೇವ ಹಿ ॥೨೦॥
ತತೋ ನಂದೀ ಮಯೂರೇಶಂ ನತ್ವಾ ಗರ್ಜನ್ಮುಹುರ್ಯಯೌ ।
ನಭೋಮಾರ್ಗೇಣ ಸೈನ್ಯೇಷು ಚಿಚ್ಛೇದ ವೀರಮಸ್ತಕಾನ್ ॥೨೧॥
ಶೃಂಗಾಘಾತೇನ ಮಹತಾ ಹಯಮಸ್ಯಾಹನದ್ದೃಢಮ್ ।
ಶೀಘ್ರಮುಡ್ಡೀಯ ಚ ಯಯೌ ಮಯೂರೇಶಂ ಯಥಾಕ್ಷತಃ ॥೨೨॥
ಆಶ್ಚರ್ಯಂ ಚಕ್ರಿರೇ ಸರ್ವೇ ಗಣಾ'ಸ್ಸಾಧ್ವಿ'ತಿ ಶಂಸಿರೇ ।
ಛತ್ರಂ ಚ ಪಾತಯಾಮಾಸ ನಂದೀ ಶೃಂಗಪ್ರಹಾರತಃ ॥೨೩॥

---

ತುರಗಾದಿಗಳಿಗೆ ಧರಿಸಿದ ಬೆಲೆಬಾಳುವ ಆಭರಣಗಳು ಇವನ್ನು ಕಂಡು ಪರಸ್ಪರರು ವಿಸ್ಮಯಗೊಂಡರು. ॥೧೯॥

ತನ್ನ ಎದುರಿಗೆ ಅಸಂಖ್ಯಾತವಾಗಿ ನಿಂತಿದ್ದ ಶತ್ರುವಿನ ವಾಹಿನಿಯನ್ನು ಕಂಡು ಮಯೂರೇಶ್ವರನು ಬಹಳ ಹರ್ಷಗೊಂಡನು. ಈ ಮೊದಲು ಸಿಂಧುವಿನ ಸೇನಾ ಸಂಪದವನ್ನು ನಂದಿಯು ಹೇಗೆಲ್ಲ ವರ್ಣಿಸಿದ್ದನೋ, ಅದೆಲ್ಲವನ್ನೂ ಅಂದು ದೇವನು ಪ್ರತ್ಯಕ್ಷವಾಗಿ ನೋಡಿದನು. ॥೨೦॥

ಆ ಸಮಯಕ್ಕೆ ಸರಿಯಾಗಿ ನಂದಿಯು ದೇವನ ಬಳಿಗೆ ಬಂದು ಆತನ ಅಡಿದಾವರೆಗಳಿಗೆ ನಮಿಸಿ ಮೇಲೆ ಮೇಲೆ ಗರ್ಜಿಸುತ್ತ ಅಂತರಿಕ್ಷಕ್ಕೆ ಹಾರಿನಿಂತು ಶತ್ರು ಸೈನ್ಯದಲ್ಲಿದ್ದ ವೀರರ ತಲೆಗಳನ್ನೆಲ್ಲ ಕತ್ತರಿಸಿ ಚೆಲ್ಲಿದನು. ॥೨೧॥

ಮೊನೊಚಾದ ತನ್ನ ದೀರ್ಘ ಸುದೃಢ ಶೃಂಗಗಳಿಂದ ಬಲವಾಗಿ ಆಘಾತಿಸಿ ಸಿಂಧುದೈತ್ಯನು ಏರಿದ್ದ ಬೆಟ್ಟದಂತಹ ಕುದುರೆಯನ್ನು ತಿವಿದು ಕೊಂದು ಮತ್ತೆ ಅಂತರಿಕ್ಷಕ್ಕೆ ನೆಗೆದು ಮಯೂರೇಶ್ವರನ ಪಾದ ಮೂಲಕ್ಕೆ ವೇಗದಿಂದ ಬಂದು ನಿಂತನು. ಅವನು ಇಷ್ಟು ಯುದ್ಧವನ್ನು ಮಾಡಿದ್ದರೂ ಸ್ವತಃ ಸ್ವಲ್ಪವೂ ಗಾಯಗೊಳ್ಳದೆ ಹಿಂದಿರುಗಿದ್ದನು. ॥೨೨॥

ನಂದಿಯ ಅಸಮಾನವಾದ ಈ ಶಕ್ತಿ-ಸಾಹಸಗಳನ್ನು ಕಂಡು ಉಭಯಪಕ್ಷದವರೂ ಅಚ್ಚರಿಗೊಂಡರು. ಪ್ರಮಥಗಣದವರು "ಸಾಧು ಸಾಧು" ಎಂಬುದಾಗಿ ಪ್ರಶಂಸಿಸಿದರು. ಅವನು ತನ್ನ ಕೊಂಬಿನಿಂದ ತಿವಿದು ರಾಕ್ಷಸನ ರಥದ ಮೇಲಿದ್ದ ಶ್ವೇತ ಛತ್ರವನ್ನೂ ಕೆಡಹಿದ್ದನು. ॥೨೩॥

ಪತಿತೇ ಸ್ವೇ ಚ ಛತ್ರೇ ಚ ಸಿಂಧುರಶ್ವಾಂತರೇ ಗತಃ ।
ಧಾರಯಾಮಾಸ ಚ ತದಾ ಛತ್ರಮನ್ಯನ್ಮಹಾಧನಮ್ ॥೨೪॥

ಆಶ್ಚರ್ಯಂ ಪರಮಂ ಮೇನೇ ನಂದಿನಃ ಕರ್ಮಣಾಸುರಃ ।
ಚುಕ್ರೋಧ ಸ ಮಹಾವೀರಾನ್ "ಕ್ವ ಗತೋ ವಃ ಪರಾಕ್ರಮಃ ?" ॥೨೫॥

ಏವಮಾಕರ್ಣ್ಯ ತದ್ವಾಕ್ಯಂ ಕೌಸ್ತುಭೋ ಮೈತ್ರ ಏವ ಚ ।
ಅಮಾತ್ಯೌ ತಂ ನಮಸ್ಕೃತ್ಯ ಸೇನಯಾ ಚತುರಂಗಯಾ ॥೨೬॥

ತಾವೂಚತುಃ :—

ಮಾ ಚಿಂತಾಂ ಕುರು, ಸಿಂಧೋ ! ತ್ವಂ ವಿಧಾಸ್ಯಾವೋ ರಿಪುಕ್ಷಯಮ್ ।
ಅನ್ಯಥಾ ನ ಮುಖಂ ನಾಥ ! ದರ್ಶಯಾವಃ ಕಥಂಚನ ॥೨೭॥

---

ತನ್ನ ಶ್ವೇತಛತ್ರಿಯು ಕಳಚಿಬಿದ್ದ ಬಳಿಕ ಸಿಂಧುದೈತ್ಯನು ಸತ್ತುಹೋದ ತನ್ನ ಮೊದಲಿನ ಕುದುರೆಯನ್ನು ಬಿಟ್ಟು ಬೆಟ್ಟದಂತಹ ಮತ್ತೊಂದು ಅಶ್ವವನ್ನೇರಿ ಕುಳಿತನು. ಮತ್ತು ಮೊದಲಿಗಿಂತಲೂ ಹೆಚ್ಚಿನ ಬೆಲೆಬಾಳುವ ಮತ್ತೊಂದು ಶ್ವೇತಛತ್ರವನ್ನು ಹಿಡಿಸಿಕೊಂಡನು. ॥೨೪॥

ನಂದಿಯ ಚಾಪಲ್ಯ, ಯುದ್ಧಕೌಶಲ ಧೈರ್ಯ ಇತ್ಯಾದಿಗಳನ್ನು ನೋಡಿ ವೀರಾಗ್ರಣಿ ಎನಿಸಿದ ಸಿಂಧುದೈತ್ಯನು ಸಹ ಬಹಳ ಆಶ್ಚರ್ಯಪಟ್ಟನು. ನಂದಿಯು ಯಾರ ಕೈಯಿಗೂ ಸಿಕ್ಕದಂತೆ ಸಾಧಿಸಿದ ಸಾಹಸಕಾರ್ಯವನ್ನು ತಡೆಗಟ್ಟಲು ತಮ್ಮ ಪೈಕಿ ಯಾರೊಬ್ಬರಿಗೂ ಸಾಮರ್ಥ್ಯವಿಲ್ಲದೆ ಹೋದುದಕ್ಕಾಗಿ ಬಹಳ ಕೋಪ ಬಂದಿತ. ಸಿಟ್ಟಿನಿಂದ ಅವಡುಗಚ್ಚುತ್ತ " ನಿಮ್ಮ ಬಲ-ಪರಾಕ್ರಮಗಳೆಲ್ಲ ಎಲ್ಲಿಗೆ ಹೋದವು? " ಎಂದು ವೀರಯೋಧರ ಮೇಲೆ ಹರಿಹಾಯ್ದನು. ॥೨೫॥

ಅರಸನಾಡಿದ ಅಧಿಕ್ಷೇಪದ ಈ ಮಾತುಗಳನ್ನು ಕೇಳಿ ವೀರರಿಗೆ ಬಹಳ ಅವಮಾನವಾಯಿತು. ಒಡನೆಯೇ ದೈತ್ಯನ ಮಂತ್ರಿಗಳಾದ ಕೌಸ್ತುಭ ಮತ್ತು ಮೈತ್ರ ಎಂಬುವರಿಬ್ಬರೂ ತಮ್ಮ ತಮ್ಮ ಅಧೀನದಲ್ಲಿದ್ದ ಚತುರಂಗ ಸೇನೆಯೊಂದಿಗೆ ದೈತ್ಯನ ಬಳಿಗೆ ಬಂದು ಅವನಿಗೆ ನಮಸ್ಕರಿಸಿ ಹೀಗೆಂದು ಧೈರ್ಯ ಹೇಳಿದರು. ॥೨೬॥

ಮಂತ್ರಿಗಳು :—

ರಾಜನ್, ಸಿಂಧೋ ! ನೀನು ಚಿಂತಿಸಬೇಕಾಗಿಲ್ಲ. ನಾವಿಬ್ಬರೂ ಮುಂದೆ ಹೋಗಿ ರಿಪುಗಳನ್ನೆಲ್ಲ ಈಗಲೇ ಧ್ವಂಸಗೊಳಿಸಿ ಹಿಂದಿರುಗುವೆವು. ನಾಥ! ಕದಾಚಿತ್

ಈ ಉವಾಚ :—

ಏವಮುಕ್ತ್ವಾ ಪ್ರಚಲಿತೌ ಪರಸೈನ್ಯನಿಬರ್ಹಣೌ ।
ಪದಾತೀನಾಂ ಗಣಾ ಯಾತಾ ಬ್ರಹ್ಮಾಂಡಾಸ್ಫೋಟತತ್ಪರಾಃ ॥೨೮॥

ನ್ಯುಬ್ಜ ತಾಮಿಚ್ಛವೋ ನೇತುಂ ಭೂಗೋಲಂ ರಣದುರ್ಮದಾಃ ।
ಕೌಸ್ತುಭೋಽಥ ಮಯೂರೇಶಂ ಯಾತೋ ಮೈತ್ರಶ್ಚ ಪಾತಿತುಮ್ ॥೨೯॥

ಶರವರ್ಷೈಃ ಪರಿಚ್ಛಾದ್ಯ ಯಾತಾವಸ್ಯಾಂತಿಕಂ ಯದಾ ।
ವೀರಭದ್ರಸ್ತದಾಯಾತೋ ಯೋದ್ಧುಂ ಸ ಚ ಷಡಾನನಃ ॥೩೦॥

ಅಸಂಖ್ಯಸೇನಯಾ ಯುಕ್ತೌ ಗರ್ಜಯಂತೌ ದಿಶೋ ದಶ ।
ನಿಜಘ್ನತುರುಭೌ ರೋಷಾತ್ಸಿಂಧುಂ ನಾನಾಪ್ರಹಾರತಃ ॥೩೧॥

---

ರಿಪು ಸೈನ್ಯದಿಂದ ನಾವೇ ಸೋತು ಹೋಗುವುದಾದರೆ, ಪುನಃ ನಿನಗೆ ಮುಖವನ್ನು ತೋರಿಸುವುದಿಲ್ಲ. ॥೨೭॥

ಬ್ರಹ್ಮಾ:—

ಹೀಗೆ ಹೇಳಿ ಅವರಿಬ್ಬರೂ ಯುದ್ಧಕ್ಕೆ ತೆರಳಿದರು. ಅವರು ಸಾಮಾನ್ಯರಲ್ಲ. ಶತ್ರುಗಳನ್ನು ನಿಗ್ರಹಿಸುವುದೆಂದರೆ ಅವರ ದೃಷ್ಟಿಯಲ್ಲಿ ಅದೊಂದು ವಿನೋದದ ಕೆಲಸ. ಇವರು ಯುದ್ಧರಂಗಕ್ಕೆ ನುಗ್ಗಿದೊಡನೆಯೇ ಪದಾತಿಸೈನ್ಯವು ಇವರಿಬ್ಬರನ್ನೂ ಹಿಂಬಾಲಿಸಿ ನಡೆಯಿತು. ಇಡೀ ಬ್ರಹ್ಮಾಂಡವನ್ನು ಸಹ ಭೇದಿಸಿ ಬಿಡಬಲ್ಲೆವೆಂಬ ದೃಢನಿಶ್ಚಯವುಳ್ಳವರವರು. ॥೨೮॥

ಸಪ್ತದ್ವೀಪಗಳ ವರೆಗೂ ಹರಡಿರುವ ಈ ಭೂಮಂಡಲವನ್ನು ಚಾಪೆಯಂತೆ ಸುರಳಿ ಸುತ್ತಿಬಿಡೋಣವೆಂದೇ ಪ್ರಯತ್ನಿಸತಕ್ಕಷ್ಟು ಶೂರರು. ರಣರಂಗಕ್ಕಿಳಿದರೆಂದರೆ ಸ್ವ-ಪರರೆಂಬುದನ್ನೂ ಗಣಿಸದೆ ಹೋರಾಡುವಷ್ಟು ಹುಂಬರು. ಕೌಸ್ತುಭ ಮೈತ್ರರಿಬ್ಬರೂ ಮುಂದೆ ನುಗ್ಗಿ ಬಂದು ಗಣಪತಿಯನ್ನು ಒಮ್ಮೆಲೆ ಕೆಡಹಿ ಬಿಡೋಣವೆಂದು ಪ್ರಯತ್ನಿಸಿದರು. ॥೨೯॥

ಮೇಲ್ಮೇಲೆ ನೂರಾರು ಕೂರಂಬುಗಳನ್ನು ಒಮ್ಮೊಮ್ಮೆಗೆ ಪ್ರಯೋಗಿಸುತ್ತ ದೇವನ ಸಮೀಪಕ್ಕೆ ಬರುವಷ್ಟರಲ್ಲಿ ಪರಮೋಗ್ರಪ್ರತಾಪಿಯಾದ ವೀರಭದ್ರ ಮತ್ತು ದೇವಸೇನಾನಿಯಾದ ಷಡಾನನರು ಪ್ರತಿ ಯುದ್ಧಕ್ಕಾಗಿ ಬಂದು ಅಸುರರಿಬ್ಬರನ್ನೂ ಆಕ್ರಮಿಸಿ ನಿಂತರು. ॥೩೦॥

ಇವರೂ ತಮ್ಮ ಅಪರಿಮಿತ ಗಣಸೇನೆಯನ್ನು ಹೊರಡಿಸಿಕೊಂಡೇ ಬಂದಿದ್ದರು. ಇವರ ಈ ಕಲಕಲಶಬ್ದ ಸಿಂಹನಾದಗಳು ಹತ್ತು ದಿಕ್ಕುಗಳನ್ನೂ ವ್ಯಾಪಿಸಿ, ಅವೂ ಸಹ

ಕೌಸ್ತುಭೋಽಪ್ಯಥ ಮೈತ್ರಶ್ಚ ಜಘ್ನತುಸ್ತೌ ಪರಸ್ಪರಮ್ ।
“ಸಹಸ್ವ, ಮಾರಯಸ್ವೇ”ತಿ ವ್ಯಾಹರಂತಃ ಪರಸ್ಪರಮ್ ॥೩೨॥

ಶಸ್ತ್ರೈರಸ್ತ್ರೈರನೇಕೈಶ್ಚ ತಾಭ್ಯಾಂ ಯುದ್ಧಮಕುರ್ವತಾಮ್ ।
ಶರವ್ರಾತೈರ್ಭಿಂಡಿಪಾಲೈಃ ಪರಿಘೈರ್ಮುಸಲೈರಪಿ ॥೩೩॥

ನಾನಾಸೇನಾಚರಾ ಜಘ್ನುಃ ಪರಸ್ಪರವಧೇಪ್ಸವಃ ।
ನಷ್ಟೇಷು ಸರ್ವಶಸ್ತ್ರೇಷು ಶರೇಷು ಚ ಪರಸ್ಪರಮ್ ॥೩೪॥

ಮಲ್ಲಯುದ್ಧಂ ಪ್ರಚಕ್ರುಸ್ತೇ ಜೀವಗ್ರಾಹಮಮಾರಯನ್ ।
ವ್ಯಸವಃ ಪಾತಿತಾಃ ಕೇಚಿದ್ವೇಮೂ ರಕ್ತಂ ಮುಖಾದ್ಬಹು ॥೩೫॥

ಗರ್ಜಿಸುವಂತೆ ಮಾಡಿದರು. ಷಡಾನನ ವೀರಭದ್ರರಿಬ್ಬರೂ ಅತಿ ರುಷ್ಟರಾಗಿ ಶಸ್ತ್ರಾಸ್ತ್ರಗಳನ್ನು ಬಗೆಬಗೆಯಾಗಿ ಪ್ರಯೋಗಿಸಿ ಸಿಂಧುವಿನ ಮಂತ್ರಿಗಳನ್ನು ಹಣಿದರು. ॥೩೧॥

ಕೌಸ್ತುಭ- ಮೈತ್ರರಿಬ್ಬರೂ ರೊಚ್ಚಿಗೆದ್ದು ಇವರಿಬ್ಬರನ್ನೂ ಬಲವಾಗಿ ಬಡಿದರು. “ಸಹಿಸಿಕೋ, ಇದೋ ಸತ್ತೆ” ಎಂದು ಪರಸ್ಪರವಾಗಿ ಒಂದೊಂದು ಪ್ರಹಾರಕ್ಕೂ ಮೂದಲಿಸುತ್ತಲಿದ್ದರು. ॥೩೨॥

ಪ್ರತಿಯೊಬ್ಬನೂ ನೂರಾರು, ಸಹಸ್ರಾರು ಸಲ ಶಸ್ತ್ರಗಳನ್ನು ಪ್ರಯೋಗಿಸಿದನು. ಅವು ಕೆಂದದಂತಾಗಲು ಅಸ್ತ್ರಗಳನ್ನು ಪ್ರಯೋಗಿಸುವನು. ಹೀಗೆ ಇವರು ದ್ವೇಷದಿಂದ ಯುದ್ಧಮಾಡುತ್ತಲಿದ್ದುದರ ಪರಿಣಾಮವಾಗಿ ಬಾಣಗಳು, ಭಿಂಡಿಪಾಲ, ಪರಿಘ, ಮುಸಲ ಮೊದಲಾದ ಆಯುಧಗಳ ಏಟುಗಳಿಗೆ ಸಿಕ್ಕು ॥೩೩॥

ಸೇನೆಯಲ್ಲಿದ್ದವರನೇಕರು ತಲೆ, ಕಣ್ಣು, ಮೂಗು, ಮೈ-ಕೈಗಳನ್ನು ಮುರಿದುಕೊಂಡರು. ಪ್ರತಿಯೊಬ್ಬನೂ ಎದುರಾಳಿಗಳನ್ನು ಬಲಿಹಾಕೋಣವೆಂದೇ ನಿಶ್ಚಯಿಸಿ ಯತ್ನಿಸುತ್ತಿದ್ದನು. ಶತ್ರುಗಳ ಕಡಿತಕ್ಕೆ ಸಿಕ್ಕು ಆತ್ಮಾರ್ಪಣಮಾಡುತ್ತಲೂ ಇದ್ದನು. ಹೋರಾಟದಲ್ಲಿ ಶಸ್ತ್ರಾಸ್ತ್ರಗಳೆಲ್ಲ ಮುರಿದುಹೋಗಿ ಬರಿಗೈಯಾದಾಗಲೂ ಉತ್ಸಾಹ ಕುಂದದ ಆ ವೀರರು ಪರಸ್ಪರವಾಗಿ ॥೩೪॥

ಮಲ್ಲಯುದ್ಧವನ್ನು ಮಾಡುತ್ತ ತಮ್ಮ ಸೇಡನ್ನು ತೀರಿಸಿಕೊಳ್ಳಲು ಹವಣಿಸಿದರು. ಮತ್ತು ಎದುರಾಳಿಯ ಪ್ರಾಣವನ್ನು ತೆಗೆಯುವವರೆಗೂ ತಾವು ಹಾಕಿದ ಪಟ್ಟನ್ನು ಬಿಡುತ್ತಿರಲಿಲ್ಲ. ಈ ಯುದ್ಧದಲ್ಲಿ ಅಸುವಳಿದವರನೇಕರು. ಮತ್ತೆ ಕೆಲವರು ಮರ್ಮಪ್ರದೇಶಕ್ಕೆ ಬಿದ್ದ ಏಟುಗಳನ್ನು ಸಹಿಸಲಾರದೇ ಬಾಯಿಯಿಂದ ಧಾರಾಕಾರವಾಗಿ ರಕ್ತವನ್ನು ಕಾರಿದರು. ॥೩೫॥

ಪಾದಂ ಪಾದೇನ ಜಘ್ನುಸ್ತೇ ಸ್ಕಂಧಂ ಸ್ಕಂಧೇನ ಚಾಪರೇ ।
ಪೃಷ್ಠಂ ಪೃಷ್ಠೇನ ಕೇಚಿಚ್ಚ ಹಸ್ತಂ ಹಸ್ತೇನ ಚಾಪರೇ ॥೩೬॥
ಮಸ್ತಕಂ ಮಸ್ತಕೇನೈವ ಕೂರ್ಪರಂ ಕೂರ್ಪರೇಣ ಚ ।
ಪತಿತಾಃ ಪಾತ್ಯಮಾನಾಶ್ಚ ಮೃತಾ ಭಗ್ನಾಶ್ಚ ಚೂರ್ಣಿತಾಃ ॥೩೭॥
ಛಿನ್ನಕಂಠಾ ಭಿನ್ನಭುಜಾ ಭಗ್ನಜಂಘೋರುಬಾಹವಃ ।
ಏವಂ ನಷ್ಟೇಷು ಸೈನ್ಯೇಷು ಸಿಂಧುಸೇನಾ ಜಯಂ ಯಯೌ ॥೩೮॥
ಜಯಶಬ್ದೈಃ ಸ್ತೂಯಮಾನೈರ್ಬಂದಿಭಿರ್ವಾದ್ಯನಿಃಸ್ವನೈಃ ।
ಸಿಂಧುದೈತ್ಯೇಶ್ವರಂ ಯಾತಾವಮಾತ್ಯೌ ಮಿತ್ರ-ಕೌಸ್ತುಭೌ ॥೩೯॥

---

ತಮ್ಮ ಕಾಲುಗಳಿಂದ ಶತ್ರುವಿನ ಪಾದಗಳನ್ನು ಒದೆದು ಅವನನ್ನು ಭೂಮಿಗೆ ಕೆಡಹುವರು. ತಮ್ಮ ಭುಜವನ್ನು ಮತ್ತೊಬ್ಬನ ಭುಜಕ್ಕೆ ಬಲವಾಗಿ ಅಪ್ಪಳಿಸಿ ಅವನು ಜೋಲಿಹೋಗಿ ಬೀಳುವಂತೆ ಮಾಡುವರು. ಬೆನ್ನಿಗೆ ಬೆನ್ನನ್ನು ತಗುಲಿಸಿ ಉಜ್ಜುವರ ನೇಕರು. ತಮ್ಮ ಕೈಗಳಿಂದ ವಿಪಕ್ಷೀಯನ ಕೈಗಳನ್ನು ತಿರುವುವರು. ॥೩೬॥

ಬಲಿಷ್ಠ ಟಗರುಗಳಂತೆ ತಲೆಯಿಂದ ತಲೆಗೆ ಡಿಕ್ಕಿ ಹೊಡೆದುಕೊಳ್ಳುವರು. ಮಂಡಿಯಿಂದ ಮೊಣಕೈಗಳಿಂದ ತಿವಿದಾಡಿದವರೆಷ್ಟೋ ಮಂದಿ ಯೋಧರ ಪೈಕಿ ಬಿದ್ದವರೂ ಬೀಳುತ್ತಲಿರುವವರೂ, ಬೀಳಿಸತಕ್ಕವರೂ, ಅಂಗಾಂಗಗಳನ್ನು ಮುರಿದುಕೊಂಡವರೂ, ಪುಡಿಪುಡಿಯಾದವರೂ ಬಹು ಮಂದಿ. ವಿಶೇಷವಾಗಿ ಸತ್ತವರೇ ಹೆಚ್ಚು॥೩೭॥

ಕೆಲವೆಡೆ ಗಂಟಲು ಹರಿಸಿಕೊಂಡವರು ಬಿದ್ದಿದ್ದರೆ, ಮತ್ತೆ ಕೆಲವು ಕಡೆ ತೋಳು ಕತ್ತರಿಸಿ ಹೋದವರ ಗುಂಪು ಕಾಣಿಸುವುದು. ಮೊಣಕಾಲು-ಕಣಕಾಲುಗಳಿಲ್ಲದವರಿಗಿಂತಲೂ ಹೊಟ್ಟೆ ಒಡೆದು ಹೋದವರನ್ನೂ, ಕರುಳೇ ಈಚೆಗೆ ಬಂದವರನ್ನೂ ನೋಡಿದರೆ “ನಮಗೆ ಯೋಧಜನ್ಮವೇ ಬೇಡ” ಎಂದು ಧಾರಾಳವಾಗಿ ಹೇಳಿಕೊಳ್ಳಬಹುದಾಗಿದ್ದಿತು. ಹೀಗೆ ಬಿರುಸಾಗಿ ನಡೆದ ಯುದ್ಧದಲ್ಲಿ ದೇವಸೇನೆ ಬಹುಮಟ್ಟಿಗೆ ನಾಶ ಹೊಂದಿ ಹೋದುದರಿಂದ ಸಿಂಧುಸೇನೆಯು ತಾತ್ಕಾಲಿಕವಾಗಿ ಜಯವನ್ನು ಸಂಪಾದಿಸಿತು. ॥೩೮॥

ಜಯವನ್ನು ಸೂಚಿಸಲಿಕ್ಕಾಗಿ ರಣವಾದ್ಯಗಳು ಭೋರ್ಗರೆದವು. ಹೊಗಳು ಭಟರು ಸೇನೆಯ ಯುದ್ಧಕೌಶಲವನ್ನು ಹಾಡಿ ತೋರಿಸಿದರು. ಅಭೂತಪೂರ್ವವಾದ ಜಯವು ತಮಗೆ ದೊರೆತೊಡನೆಯೇ ಸಂತುಷ್ಟರಾದ ಸಿಂಧುದೈತ್ಯನ ಮಂತ್ರಿದ್ವಯ; ಮಿತ್ರ-ಕೌಸ್ತುಭರು ತಮ್ಮ ಸ್ವಾಮಿಯ ಬಳಿಗೆ ಹೋದರು. ॥೩೯॥

ಅಪರೇ ನಿಶ್ಚಯಯುದ್ಧ್ಯಂತ ದೇವಸೈನ್ಯೇನ ದಾನವಾಃ ।
ಪಲಾಯಮಾನಾಂ ತಾಂ ಸೇನಾಂ ನಿಜಘ್ನುಶ್ಶರಸಂಚಯೈಃ ॥೪೧॥

ಪುನರಾವೇಶಮಾಪನ್ನೌ ವೀರಭದ್ರ-ಷಡಾನನೌ ।
ಗರ್ಜಂತೌ ಗರ್ಜಯಂತೌ ಚ ಗಗನಂ ಚ ದಿಶೋ ದಶ ॥೪೨॥

ನಿಘ್ನಂತೌ ರಿಪುಸೇನಾಂ ತಾಂ ನಿರ್ದಹಂತೌ ಕೃತಾಂತವತ್ ।
ಅಂಧಕಾರೇ ಮಹಾಘೋರೇ ನ ಪ್ರಾಜ್ಞಾಯತ ಕಿಂಚನ ॥೪೩॥

ಸ್ವಾನ್ ಪರಾನಪಿ ಜಘ್ನುಸ್ತೇ ಯುದ್ಧ್ಯಮಾನಾ ಮಹಾಬಲಾಃ ।
ಭಗ್ನಾಯಾಂ ಸಿಂಧುಸೇನಾಯಾಂ ಚಕ್ರತುರ್ಜಯನಿಸ್ಸ್ವನಮ್ ॥೪೪॥

---

ಇತ್ತ ದೇವಸೇನೆಯಲ್ಲಿ ಪ್ರಮುಖರಾದ ನಂದೀ-ಷಣ್ಮುಖರು ಮಯೂರೇಶನನ್ನು ಕಾಣುವುದಕ್ಕಾಗಿಯೂ ಅವನಿಂದ ಅನುಮತಿ ಪಡೆದು ಶತ್ರುಗಳನ್ನು ಸದೆಬಡಿಯಲಿಕ್ಕಾಗಿಯೂ ಧಾವಿಸಿ ದೇವನ ಸಮೀಪವನ್ನು ಸೇರಿದರು. ಅಷ್ಟರಲ್ಲಿ ಸೂರ್ಯದೇವನು ಅಸ್ತಮಿತನಾದುದರಿಂದ ಅಂದಿನ ಯುದ್ಧವು ಅಷ್ಟಕ್ಕೇ ನಿಂತಿತು. ॥೪೦॥

ಆದರೆ ದೈತ್ಯರಲ್ಲಿ ಕೆಲವು ಮಂದಿ ವೀರರ ಯುದ್ಧೋತ್ಸಾಹವು ಇನ್ನೂ ಕುಂದಿರಲಿಲ್ಲವಾದ್ದರಿಂದ ದೇವಸೇನೆಯನ್ನು ಅವರು ಹಣಿಯಲಾರಂಭಿಸಿದರು. ದೇವಸೇನೆಯವರು ದೈತ್ಯರ ಉಪಟಳವನ್ನು ತಾಳಲಾರದೇ ಓಡತೊಡಗಿದರು. ದೈತ್ಯರು ಅಲ್ಲಿಗೂ ತೃಪ್ತರಾಗದೇ ಓಡುತ್ತಲಿದ್ದವರನ್ನು ಹಿಂಬಾಲಿಸಿದರು. ಆದರೂ ಅವರು ಕೈಗೆ ಸಿಕ್ಕದಾಗಲು, ಅವರ ಮೇಲೆ ಹರಿತವಾದ ಬಾಣಗಳನ್ನು ಪ್ರಯೋಗಿಸಿ ಅವರನ್ನು ನೆಲಕ್ಕೆ ಕೆಡಹಿದರು ॥೪೧॥

ತಮ್ಮ ಸೈನಿಕರಿಗುಂಟಾಗುತ್ತಿರುವ ಈ ಭಂಗವನ್ನು ನೋಡಿ ಸಹಿಸಲಾರದೇ ಪುನಃ ಆವೇಶಗೊಂಡ ವೀರಭದ್ರ-ಷಡಾನನರು ಗರ್ಜಿಸುತ್ತಲೂ ತನ್ಮೂಲಕ ಗಗನ, ಹತ್ತು ದಿಕ್ಕುಗಳು ಇವನ್ನು ಪ್ರತಿಧ್ವನಿಗೈಯುವಂತೆ ಮಾಡುತ್ತಲೂ ಶತ್ರುಗಳ ಮೇಲೆ ಬಿದ್ದರು. ॥೪೨॥

ಈ ಸಾರೆ ಅವರಿಗುಂಟಾದ ಅಸಹನೆ ಉತ್ಸಾಹ ಇವು ವರ್ಣನಾತೀತವಾಗಿದ್ದವು. ಶತ್ರುಸೈನಿಕರನ್ನು ಬಲವಾಗಿ ಘಾತಿಸಿದರು, ತಮ್ಮ ಕೋಪಾಗ್ನಿಯಿಂದ ಎಲ್ಲರನ್ನೂ ದಹಿಸಲಾರಂಭಿಸಿದರು, ಆ ಸಮಯದಲ್ಲಿ ಇವರು ಯಮನಿಗೇನೂ ಕಡಿಮೆಯಾಗಿರಲಿಲ್ಲ. ಕತ್ತಲು ಮೈಗೆ ತಗುಲುವಷ್ಟು ಹರಡಿಬಿಟ್ಟದ್ದರಿಂದ ಅಲ್ಲೇನೇನು ನಡೆಯುತ್ತಿದೆ ಎಂಬುದು ಯಾರೊಬ್ಬರಿಗೂ ತಿಳಿಯಲಿಲ್ಲ. ॥೪೩॥

ದೈತ್ಯಾಮಾತ್ಯೌ ಪುನರ್ಯಾತೌ ಮರಣೇ ಕೃತನಿಶ್ಚಯೌ ।
ಪ್ರೇರಯಾಮಾಸತುರುಭೌ ನಿಜಾಶ್ವೌ ಪರವಾಹಿನೀಮ್ ॥೪೫॥

ಕಿರಂತೌ ಶರಜಾಲಾನಿ ಜಘ್ನತುಃ ಕರವಾಲತಃ ।
ತತಃ ಷಡಾನನೋ ದೃಷ್ಟ್ವಾ ತಯೋರತಿಪರಾಕ್ರಮಮ್ ॥೪೬॥

ಮುಷ್ಟಿಘಾತೇನ ತೌ ಹತ್ವಾ ನಿಜಸೇನಾಮುಗಾಜ್ಜವಾತ್ ।
ಮಿತ್ರಸ್ತು ಭೂಮಿಮಗಮದ್ವಮನ್ರಕ್ತಂ ಮುಖಾದ್ಬಹು ॥೪೭॥

ತಥಾವಿಧಂ ಚ ತಂ ದೃಷ್ಟ್ವಾ ಕೌಸ್ತುಭೋ ಯೋದ್ಧುಮಾಗತಃ ।
ಷಡಾನನಮುಖೋ ರೋಷಾನ್ನಿಜಘ್ನೇ ಕರವಾಲತಃ ॥೪೮॥

---

ಮಹಾಬಲಿಷ್ಠರಾದ ದೈತ್ಯನ ಸೈನಿಕರು ಯುದ್ಧಮಾಡುವ ಹುಂಬತನದಲ್ಲಿ ಪರಕೀಯರೊಂದಿಗೆ ಲೆಖ್ಖವಿಲ್ಲದಷ್ಟು ಸ್ತ್ರೀಯರನ್ನೂ ತುಂಡರಿಸಿ ಚಲ್ಲಿದರು. ಹೀಗಾದುದರಿಂದ ದೈತ್ಯಸೇನೆಯು ತನ್ನಷ್ಟಕ್ಕೆ ತಾನೇ ಕ್ಷಯಿಸಿ ಹೋಯಿತು ಆಗ ದೇವತೆಗಳು ಯಾದೃಚ್ಛಿಕವಾಗಿ ತಮಗೆ ಜಯ ದೊರೆತುದನ್ನು ಕಂಡು ಜಯಘೋಷ ಮಾಡಿದರು ॥೪೪॥

ಇದನ್ನು ಕೇಳಿ ಬೆರಗಾದ ದೈತ್ಯಮಂತ್ರಿಗಳು ಅರ್ಧದಾರಿಯಿಂದಲೇ ಹಿಂದಿರುಗಿ ರಣರಂಗಕ್ಕೆ ಬಂದರು. ಈ ಸಾರೆ ಅವರು ಬರುವಾಗ ಸಾಯುವೆನೆಂದೇ ನಿಶ್ಚಯಿಸಿದ್ದರು. ರಣಕ್ಷೇತ್ರಕ್ಕೆ ಬಂದಕೂಡಲೇ ತಮ್ಮ ಕುದುರೆಗಳನ್ನು ಹುರಿದುಂಬಿಸಿ ಶತ್ರುಸೇನೆಯನ್ನು ನುಗ್ಗಿ ಹೋಗುವಂತೆ ಪ್ರೇರಿಸಿದರು. ॥೪೫॥

ಅನೇಕಾನೇಕ ಬಾಣಗಳನ್ನು ಚೆಲ್ಲಿ ಬಲೆಯನ್ನು ಬೀಸಿದಂತೆ ಮಾಡಿದರು. ಅನೇಕ ವಿಧ ಖಡ್ಗಗಳಿಂದ ಶತ್ರುಗಳನ್ನು ಕೊಚ್ಚಲಾರಂಭಿಸಿದರು. ಇತ್ತಕಡೆ ಸೇನೆಯಲ್ಲಿದ್ದ ಷಡಾನನನು ರಾಕ್ಷಸನ ಮಂತ್ರಿಗಳ ಅಸಾಧಾರಣ ಪರಾಕ್ರಮವನ್ನು ನೋಡಿದನು. ॥೪೬॥

ಷಡಾನನನು "ಇವರನ್ನು ಇನ್ನು ಹೆಚ್ಚು ಕಾಲ ಉಳಿಯಗೊಡಬಾರದೆಂ"ದು ನಿಶ್ಚಯಿಸಿ ಮುನ್ನುಗ್ಗಿ ತನ್ನ ವಜ್ರಮುಷ್ಟಿಯಿಂದ ಅವರಿಬ್ಬರನ್ನೂ ಬಲವಾಗಿ ಗುದ್ದಿದನು. ಒಡನೆಯೇ ಅವರು ಮೂರ್ಛಿತರಾದರು. ಇಷ್ಟಾದ ಕೂಡಲೇ ಸ್ಕಂದನು ತನ್ನ ಶಿಬಿರಕ್ಕೆ ಹೊರಟುಹೋದನು. ಮಂತ್ರಿಗಳ ಪೈಕಿ ಮಿತ್ರನು ನೆಲಕ್ಕುರುಳಿ ಬಾಯಿಯಿಂದ ತನ್ನ ದೇಹದಲ್ಲಿದ್ದ ರಕ್ತವನ್ನೆಲ್ಲ ಕಾರುತ್ತ ನೆಲಕ್ಕೆ ಬಿದ್ದನು. ತನ್ನ

ತಸ್ಮಿನ್ಮೂರ್ಛಾಮವಾಪ್ತೇ ತು ವೀರಭದ್ರೋಽಭ್ಯಯುದ್ಧ್ಯತ ।
ಕೌಸ್ತುಭಃ ಪ್ರಾಹನದ್ರೋಷಾಚ್ಛರಾಘಾತೈರನೇಕಶಃ ॥೪೯॥
ಸೋಽಪಿ ತಂ ಪ್ರಾಹನನ್ಮುಷ್ಟ್ಯಾ ಭೂಮೌ ಚೈನಮಪಾತಯತ್ ।
ಹತೇ ತಸ್ಮಿನ್ನನಂದಾಸೌ ವೀರಭದ್ರೋ ಮಹಾಬಲಃ ॥೫೦॥
ಪಲಾಲ ದೈತ್ಯಸೇನಾ ಸಾ ಹತೇ ಮಿತ್ರೇ ಚ ಕೌಸ್ತುಭೇ ।
ತಮುದಂತಂ ಶಸ್ತ್ರಹತಾಃ ಸ್ರವಂತೋ ರುಧಿರಂ ಬಹು ॥೫೧॥
ನ್ಯವೇದಯನ್ ದೈತ್ಯರಾಜಸಿಂಧವೇ ದೇವಶತ್ರವೇ ।
ವಾಚಾವಿಸ್ಪಷ್ಟಯಾ ದುಃಖಾಚ್ಛಸ್ತ್ರಾಘಾತಕೃತಾದ್ಭೃಶಮ್ ॥೫೨॥

---

ಸಂಗಡಿಗನು ಈ ತೆರನಾದ ದುರ್ದಶೆಗೆ ಈಡಾಗಿ ಒದೆದಾಡಿದುದನ್ನು ನೋಡಿ ಕೌಸ್ತುಭನು ಮುಂದೆ ಬಂದು ಹೋರಾಡಲಾರಂಭಿಸಿ ತನ್ನ ಕೈಖಡ್ಗದಿಂದ ಕುಮಾರಸ್ವಾಮಿಯನ್ನು ಸಂಧಿಸಿ ಬಲವಾಗಿ ಹೊಡೆದನು. ॥೪೭–೪೮॥

ಕೌಸ್ತುಭನ ಹೊಡೆತಕ್ಕೆ ಕಾರ್ತಿಕೇಯನು ಕುಸಿದುಬಿದ್ದು ಮೂರ್ಛೆಗೊಂಡನು. ಅದನ್ನರಿತ ವೀರಭದ್ರ ಮುಂದೆ ಬಂದು ಯುದ್ಧವನ್ನಾಡಿದನು. ಆಗಂತೂ ಕೌಸ್ತುಭನಿಗೆ ರೋಷ ಮಿತಿಮೀರಿ ಬಂದಿತು. ಮೇಲ್ಮೇಲೆ ಶರಗಳನ್ನು ಬಿಟ್ಟು ವೀರಭದ್ರನನ್ನು ನೋಯಿಸಿದನು. ॥೪೯॥

ನಂದಿಯು ಸಹ ಷಡಾನನನಂತೆ ವಜ್ರಮುಷ್ಟಿಯಿಂದ ಕೌಸ್ತುಭನನ್ನು ಒಮ್ಮೆ ಬಲವಾಗಿ ಗುದ್ದಿ ನೆಲಕ್ಕೆ ಕೆಡಹಿದನು. ಇದರಿಂದ ಕೌಸ್ತುಭನ ಅವತಾರ ಸಮಾಪ್ತಿಯಾಯಿತು. ಅವನು ಸತ್ತಕೂಡಲೇ ಮಹಾಬಲಿಷ್ಠನಾದ ವೀರಭದ್ರನು ಹರ್ಷಾತಿರೇಕಗೊಂಡನು. ॥೫೦॥

ಉಳಿದೊಬ್ಬ ತಮ್ಮ ನಾಯಕ ನೆಲಕ್ಕೆ ಬಿದ್ದಕೂಡಲೇ ದೈತ್ಯಸೇನೆಯು ಚದುರಿ ಓಡಿಹೋಯಿತು. ಅರೆಮುರಿದ ದೇಹಗಳ ಪೈಕಿ ಕೆಲವು ದೈತ್ಯರು ಸಿಂಧುದೈತ್ಯನ ಸಮೀಪಕ್ಕೆ ಹೋಗಿ ನಿಂತರು. ಶಸ್ತ್ರದ ಕಡಿತವು ದೇಹದಲ್ಲೆಲ್ಲ ಬಿದ್ದುದರಿಂದ ಅಲ್ಲಿಂದ ರಕ್ತವು ಧಾರಾಕಾರವಾಗಿ ಸುರಿಯುತ್ತಲಿದ್ದಿತು. ಅವರು ಯುದ್ಧದ ಸಂಗತಿಯನ್ನು ॥೫೧॥

ದೇವಶತ್ರುವಾದ ಸಿಂಧುದೈತ್ಯನಿಗೆ ನಿವೇದಿಸಿದರು. ಶಸ್ತ್ರಾಸ್ತ್ರಗಳ ಹೊಡೆತದಿಂದ ನಿರ್ವಿಣ್ಣರಾಗಿದ್ದ ಆ ಸೈನಿಕರ ಬಾಯಿಯಿಂದ ಮಾತುಗಳು ಸಹ ಸ್ಪಷ್ಟವಾಗಿ ಹೊರಡುತ್ತಿರಲಿಲ್ಲ. ॥೫೨॥

**ಜಯಮಾಕಾಂಕ್ಷಿತೇ ನಿತ್ಯಂ ಮಿತ್ರ–ಕೌಸ್ತುಭಯೋರ್ಭೃಶಮ್ ||೫೩||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಮಿತ್ರ–ಕೌಸ್ತುಭವಧ ವರ್ಣನಂ ' ನಾಮ ತ್ರಯೋದಶಾಧಿಕ ಶತತಮೋಽಧ್ಯಾಯಃ**

---

ತನ್ನ ಮಂತ್ರಿಗಳಾದ ಮಿತ್ರ–ಕೌಸ್ತುಭರಿಂದ ಸರ್ವದಾ ಜಯವನ್ನೇ ನಿರೀಕ್ಷಿಸುತ್ತಲಿದ್ದ ಸಿಂಧುರಾಜನಿಗೆ ಇಂದು ಇಂತಹ ಸುದ್ದಿ ಮುಟ್ಟಿದ್ದರಿಂದ ಅವನು ಬಹಳ ದುಃಖಿತನಾದನು. ||೫೩||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ಮಿತ್ರ–ಕೌಸ್ತುಭರ ವಧವರ್ಣನೆ" ಎಂಬಲ್ಲಿಗೆ ನೂರ ಹದಿಮೂರನೆಯ ಅಧ್ಯಾಯಾನುವಾದವು ಮುಗಿಯಿತು.

|| ಶ್ರೀ ಗಣೇಶಾಯ ನಮಃ ||

# ಅಥ ಚತುರ್ದಶಾಧಿಕ ಶತತಮೋಽಧ್ಯಾಯಃ

**ವೀರಾ ಊಚುಃ :—**

**ನಾನಾಶಸ್ತ್ರಪ್ರಹರಣೌ ಮೃತೌ ತೌ ಮಿತ್ರ-ಕೌಸ್ತುಭೌ ।**
**ಅಸಂಖ್ಯಾತಾ ಹತಾ ಸೇನಾ ತಾಭ್ಯಾಂ ನಿಶಿ ದಿವಾಪಿ ಚ ॥೧॥**

**ತತೋ ರಿಪುಬಲಾದ್ದುಷ್ಟಾ ವೀರೌ ದ್ವೌ ಸಮುಪಸ್ಥಿತೌ ।**
**ತಾಭ್ಯಾಂ ಬಲಿಭ್ಯಾಂ ನಿಹತಾ ನಿಜಸೇನಾ ವಿಮರ್ದಿತಾ ॥೨॥**

**ಯಯೋಃ ಕರಪ್ರಹಾರಾಭ್ಯಾಂ ಗತೌ ತೌ ಯಮಸಾದನಮ್ ।**
**ದೃಷ್ಟ್ವಾ ನಾನಾವಿಧಾ ಸೈನ್ಯಾ ನ ದೃಷ್ಟಾ ತಾದೃಶೌ ಸುರೌ ॥೩॥**

---

|| ಶ್ರೀ ಮಂಗಲಮೂರ್ತಯೇ ನಮಃ ||

## ೧೧೪ ನೆಯ ಅಧ್ಯಾಯ

ವೀರರು :—

ರಾಜ! ಕೇಳು. ನಮ್ಮ ಸೇನಾನಾಯಕರಾಗಿದ್ದ ಮಿತ್ರ-ಕೌಸ್ತುಭರು ಸಾಮಾನ್ಯದವರಾಗಿರಲಿಲ್ಲ. ನಾನಾವಿಧ ಶಸ್ತ್ರಗಳನ್ನು ಹೇಗೆ ಬೇಕೆಂದರೆ ಹಾಗೆ ಪ್ರಯೋಗಿಸ ಬಲ್ಲವರು. ಅಂಥವರು ಮೃತರಾಗಿ ಹೋದರು. ಸಾಯುವುದಕ್ಕೆ ಮೊದಲು ಕ್ಷಣದವರೆಗೂ ಘನ-ಘೋರವಾಗಿ ಕದನಮಾಡಿದರು. ಹಗಲು ರಾತ್ರಿಗಳೆಂಬ ಪರಿವೇ ಅವರಿಗಿರಲಿಲ್ಲ. ಅವರು ಕೊಂದಷ್ಟು ಶತ್ರು ಸೈನಿಕರನ್ನು ಹಿಂದೆ ಮತ್ತಾರೂ ಕೊಂದಿರಲಿಲ್ಲ, ||೧||

ಮಿತ್ರ-ಕೌಸ್ತುಭರ ಉತ್ಸಾಹ, ಶಕ್ತಿಪ್ರಯೋಗ ಇವನ್ನು ಕಂಡು ಸಹಿಸದೆ ಶತ್ರುಸೇನೆಯಿಂದ ದುಷ್ಟರಾದ ವೀರರಿಬ್ಬರು ಮುನ್ನುಗ್ಗಿ ನಮ್ಮ ಸೇನೆಯ ಕಡೆಗೆ ಬಂದರು. ಮೊದಮೊದಲು ಇತರ ಕ್ಷುದ್ರ ಸೈನಿಕರನ್ನೆಲ್ಲ ತಮ್ಮ ಕೈಲಿದ್ದ ಖಡ್ಗದಿಂದ ಸವರಿ ಹಾಕಿದರು. ಬರಬರುತ್ತ ನಮ್ಮ ಎಲ್ಲ ಸೇನೆಯೂ ಹೆಸರಿಲ್ಲದೇ ಹೋಯಿತು. ||೨||

ಅವರು ಕೊನೆಗೆ ತಮ್ಮ ಮುಷ್ಟಿಯಿಂದ ಬಲವಾಗಿ ಗುದ್ದಿದ್ದರ ಪರಿಣಾಮವಾಗಿ ಮಿತ್ರ ಕೌಸ್ತುಭರಿಬ್ಬರೂ ಒಮ್ಮೆಲೆ ಯಮನ ನಗರಕ್ಕೆ ತೆರಳಿದರು. ನಮ್ಮ ಆಯುಷ್ಯದಲ್ಲಿ ನಾವು ಎಷ್ಟೆಷ್ಟೋ ವಿಧ ಸೈನಿಕರನ್ನು ಕಂಡಿದ್ದೇವೆ. ಅವರೊಡನೆ ಹೋರಾಡಿದ್ದೇವೆ. ಆದರೆ, ಈ ವೀರರಂಥವರನ್ನು ನಾವು ಎಲ್ಲಿಯೂ ಕಂಡಿಲ್ಲ. ||೩||

**ಸಿಂಧುರುವಾಚ :—**

**ಯೌ ದೃಷ್ಟ್ವಾ ಸ ಬಿಭೇತಿಸ್ಮ ಕೃತಾಂತೋ ಭೂತಹಾರಕಃ ।**
**ತೌ ಕಥಂ ಕರಘಾತೇನ ಮೃತೌ ಶಂಸತ ಸೈನಿಕಾಃ ! ॥೪॥**

**ಪರಾಕ್ರಮಮಿದಾನೀಂ ಮೇ ಪಶ್ಯಂತಿ ಸರ್ವಸೈನಿಕಾಃ ।**
**ರಣಭೂಮೌ ನರ್ತಯಿಷ್ಯೇ ಶಿರಃ ಶತ್ರೋರ್ನ ಸಂಶಯಃ ॥೫॥**

**ಚಕ್ರಯುದ್ಧಂ ಕರಿಷ್ಯಾಮಿ ಚಕ್ರಪಾಣೇರ್ಯತಃ ಸುತಃ ।**

**ಕ ಉವಾಚ :—**

**ಇತ್ಯುಕ್ತ್ವಾ ಹಯಮಾರುಹ್ಯ ಮಯೂರೇಶಂ ಯಯೌ ಖಲಃ ॥೬॥**

**ಅಸಂಖ್ಯಕೋಟ್ಯೋ ದೈತ್ಯಾನಾಂ ಪುರೋ ಯಾತಾ ಮಹಾಬಲಾಃ ।**
**ಯೋದ್ಧುಕಾಮಾಸ್ಸುರೇಂದ್ರೇಣ ಶಿವಪುತ್ರೇಣ ದುರ್ಧರಾಃ ॥೭॥**

---

ಸಿಂಧು :—

ಸಕಲ ಭೂತಗಳನ್ನೂ ಅಂತಗೊಳಿಸತಕ್ಕ ಅಂತಕನಂತಹ ಪ್ರಬಲತರ ವ್ಯಕ್ತಿಯು ಸಹ ಯಾರನ್ನು ನೋಡಿದ ಮಾತ್ರದಿಂದಲೇ ಹೆದರಿ ನಡುಗುತ್ತಿದ್ದನೋ, ಅಂತಹ ದೈತ್ಯವೀರರು ಕೇವಲ ಕೈಗುದ್ದಿನಿಂದ ಸತ್ತುದು ಹೇಗೆ? ಸೈನಿಕರೇ! ಮೊದಲು ಹೇಳಿ ॥೪॥

ಇರಲಿ, ಹೇಗೇ ಸತ್ತಿರಲಿ, ಯಾರೇ ಕೊಂದಿರಲಿ, ಇದಕ್ಕೆ ನಾನು ಪ್ರತೀಕಾರವನ್ನು ಮಾಡತಕ್ಕವನೇ ಸರಿ. ಇಂದು ನನ್ನ ಪೌರುಷವನ್ನು ಪ್ರತಿಯೊಬ್ಬ ಸೈನಿಕನೂ ನೋಡಲಿ, ಶತ್ರುವಿನ ರುಂಡವನ್ನು ರಣಕ್ಷೇತ್ರದಲ್ಲಿ ಕುಣಿಯುತ್ತಿರುವಂತೆ ಮಾಡುವೆನು. ಇದರಲ್ಲಿ ಸಂಶಯವೇ ಇಲ್ಲ. ॥೫॥

ನನ್ನ ತಂದೆಗೆ ಅನ್ವರ್ಥವಾದ ಹೆಸರು "ಚಕ್ರಪಾಣಿ" ಆತನ ಮಗನಾದ ನಾನು ಸಹ ಚಕ್ರಯುದ್ಧದಲ್ಲಿ ಪ್ರವೀಣನಾಗಿದ್ದೇನೆ. ಇಂದು ಚಕ್ರವನ್ನೇ ಆಯುಧವನ್ನಾಗಿ ಉಪಯೋಗಿಸಿಕೊಂಡು ಯುದ್ಧವನ್ನು ಮಾಡುವೆನು.

ಬ್ರಹ್ಮ :—

ಹೀಗೆ ನುಡಿದು ಬೆಟ್ಟದಂತಹ ತನ್ನ ಕುದುರೆಯನ್ನೇರಿ ಆ ಖಲನು ಮಯೂರೇಶನು ನಿಂದಿದ್ದೆಡೆಗೆ ಧಾವಿಸಿ ನಡೆದನು. ॥೬॥

ಸಿಂಧುದೈತ್ಯನು ಮುಂದುವರೆದುದನ್ನು ನೋಡಿ ಮಹಾಬಲಿಷ್ಠರಾದ ಅಸಂಖ್ಯಕೋಟಿ ದೈತ್ಯ ಸೈನಿಕರು ಯುದ್ಧೋತ್ಸಾಹಿಗಳಾಗಿ ಮುಂದೆ ಮುಂದೆ ನಡೆದು

ತತೋ ನಂದೀ ಪುಷ್ಪದಂತೌ ಯೋದ್ಧುಂ ಯಾತೌ ಮಹಾಬಲೌ ।
ಭೂತರಾಜಶ್ಚ ವಿಕಟೋ ದಶಲಕ್ಷೈಶ್ಚ ಯೋಧಿಭಿಃ ||೮||
ಚಪಲೋಽಪ್ಯರ್ಧಲಕ್ಷೇಣ ಯೋದ್ಧುಕಾಮೋಽಭಿನಿರ್ಯಯೌ ।
ಷಡಾನನೋ ವೀರಭದ್ರೋಽಸಂಖ್ಯಸೇನಾಸಮಾಯುತೌ ||೯||
ಈಯತುರ್ಯುದ್ಧಬಲಿನೌ ನಾನಾಶಸ್ತ್ರಧರಾವುಭೌ ।
ಸಪ್ತವ್ಯೂಹಾನ್ ಸಮಾಲೋಕ್ಯ ಪ್ರಾವ್ಯೂಹನ್ ದೈತ್ಯಸೈನಿಕಾಃ ||೧೦||
ಗಂಧಾಸುರೋಽಥ ಮದನಕಾಂತೋ ವೀರಧ್ವಜಸ್ತಥಾ ।
ಮಹಾಕಾಯಶ್ಚ ಶಾರ್ದೂಲೋ ಧೂರ್ತನಾಮಾಥ ಸಪ್ತಮಃ ||೧೧||

---

ಬಂದರು. ಅವರೆಲ್ಲರ ಗಮನವೂ ಸುರೇಶ್ವರ ; ಗಣಪತಿಯೊಡನೆ ಯುದ್ಧಮಾಡುವ ವಿಷಯದಲ್ಲೇ ಲೀನವಾಗಿದ್ದಿತು. ||೭||

ಇತ್ತ ದೇವಸೇನೆಯಲ್ಲಿ ಗಣ್ಯರೆನಿಸಿದ ನಂದೀ ಪುಷ್ಪದಂತರು ಯುದ್ಧಕ್ಕಾಗಿ ಮುಂದೆ ಬಂದರು. ಅವರಿಬ್ಬರೂ ಮಹಾಬಲಿಷ್ಠರಾದವರು. ಇವರಂತೆ ಭೂತ ರಾಜ, ವಿಕಟರೂ ಮುಂದೆ ಬಂದರು. ಪ್ರತಿಯೊಬ್ಬ ನಾಯಕನೊಡನೆಯೂ ಹತ್ತು ಹತ್ತು ಲಕ್ಷ ನಿಷ್ಣಾತ ಯೋಧರ ಗುಂಪು ಸಹಾಯಕ್ಕಾಗಿ ಬಂದಿದ್ದಿತು. ||೮||

ಚಪಲನೆಂಬ ವೀರನು ತನ್ನಧೀನದಲ್ಲಿದ್ದ ಐವತ್ತು ಸಾವಿರ ಸೈನಿಕರೊಂದಿಗೆ ಯುದ್ಧಕ್ಕಾಗಿ ಮುಂದೆ ಬಂದನು. ಷಡಾನನ, ವೀರಭದ್ರರು ತಮ್ಮ ಅಸಂಖ್ಯ ಸೇನೆಯನ್ನು ಸಂಗಡ ಕರೆದುಕೊಂಡು ಯುದ್ಧರಂಗದಲ್ಲಿ ಸಿದ್ಧರಾಗಿ ನಿಂದರು. ||೯||

ಕಾರ್ತಿಕೇಯ, ವೀರಭದ್ರರು ಯುದ್ಧದಲ್ಲಿ ದುರ್ಮದರಾದವರು. ಯಾರಿಗೂ ಅರಿವಾಗದಂತಹ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸಬಲ್ಲವರು ಮತ್ತು ಆ ಬಗೆಯ ಗುಪ್ತಾಸ್ತ್ರಗಳನ್ನು ಸರ್ವದಾ ಧರಿಸಿದವರು. ದೇವ ಸೇನಾನಾಯಕರಾದ ಸ್ಕಂದ, ವೀರಭದ್ರ, ಚಪಲ ವಿಕಟ, ಭೂತರಾಜ, ಪುಷ್ಪದಂತ ಹಾಗೂ ನಂದಿ ಈ ಏಳು ಜನರೂ ತಮ್ಮ ತಮ್ಮ ಸೈನ್ಯದೊಡನೆ ಏಳು ವ್ಯೂಹಗಳನ್ನು ರಚಿಸಿಕೊಂಡು ಮುಂದೆ ಬಂದುದನ್ನು ಕಂಡು ದೈತ್ಯನ ಸೈನಿಕರೂ ತಮ್ಮ ಸೇನೆಯನ್ನು ಏಳು ಭಾಗವಾಗಿ ವಿಂಗಡಿಸಿ ಶತ್ರುಗಳೊಂದಿಗೆ ಕಾದಾಡಲು ಪ್ರತಿಯಾಗಿ ವ್ಯೂಹಗಳನ್ನು ರಚಿಸಿ ಕೊಂಡರು. ||೧೦||

ಏಳು ವ್ಯೂಹಗಳಿಗೆ ಕ್ರಮವಾಗಿ ಗಂಧಾಸುರ, ಮದನಕಾಂತ, ವೀರರಾಜ, ಧ್ವಜಾ ಸುರ, ಮಹಾಕಾಯ, ಶಾರ್ದೂಲ ಮತ್ತು ಧೂರ್ತರೆಂಬ ಏಳು ಮಂದಿ ಅಸುರ ವೀರರು ನಾಯಕರಾಗಿ ನಿಂತರು. ||೧೧||

ಸಪ್ತವ್ಯೂಹಾನ್ ಪುರಸ್ಕೃತ್ಯ ಯುಯುಧುಸ್ತಾನ್ ಸಮಾಗತಾನ್ ।
ಬಾಣವೃಷ್ಟ್ಯಾ ಸಮಾಚ್ಛಾದ್ಯ ಭಲ್ಲಾಗ್ರೈಸ್ತಾನ್ನಿಜಘ್ನಿರೇ ॥೧೨॥
ಭಿಂಡಿಪಾಲಹತಾಃ ಕೇಚಿನ್ನಿಪೇತುರ್ಧರಣೀತಲೇ ।
ಷಡಾನನೇನ ಯುಯುಧೇ ಬಲಾದ್ಗಂಧಾಸುರೋ ಬಲೀ ॥೧೩॥
ವೀರಭದ್ರೇಣ ಮದನಕಾಂತೋಽಪಿ ಯುಯುಧೇ ರಣೇ ।
ನಂದೀ ಚ ವೀರರಾಜಶ್ಚ ಯುಯುಧಾತೇ ಪರಸ್ಪರಮ್ ॥೧೪॥
ಧ್ವಜಾಸುರಃ ಪುಷ್ಪದಂತೌ ಶಸ್ತ್ರಾಸ್ತ್ರೈರ್ಬಾಣಸಂಚಯೈಃ ।
ಭೂತರಾಜೋ ಮಹಾಕಾಯೋ ಯುಯುಧಾತೇ ಪರಸ್ಪರಮ್ ॥೧೫॥
ಧೂರ್ತಶ್ಚ ವಿಕಟಶ್ಚೈವ ದ್ವಂದ್ವಯುದ್ಧಮಕುರ್ವತಾಮ್ ।
ಚಪಲೇನ ಹತೋ ರೋಷಾಚ್ಛಾರ್ದೂಲೋ ನ್ಯಪತದ್ಭುವಿ ॥೧೬॥

---

ಯುದ್ಧವಾರಂಭವಾಗುವ ಮುನ್ನ ಉಭಯ ವ್ಯೂಹಗಳೂ ಒಬ್ಬರನ್ನೊಬ್ಬರು ಎದುರಿಸಿ ತಮ್ಮ ತಮ್ಮ ಕೈಗಳಲ್ಲಿದ್ದ ಆಯುಧಗಳನ್ನು ಒಮ್ಮೆಲೇ ಪ್ರಯೋಗಿಸಿದರು ಮಳೆ ಸುರಿದಂತೆ ಬಾಣಗಳನ್ನು ಆತತಾಯಿಗಳ ಮೇಲೆ ಪ್ರಯೋಗಿಸುವುದು, ಬಾಣದಿಂದ ಎದುರಾಳಿಗಳು ಸ್ತಂಭಿತರಾದ ಕೂಡಲೇ ಅವರನ್ನು ಭಲ್ಲಾಯುಧದ ತುದಿಯಿಂದ ಇರಿದು ಕೊಲ್ಲುವುದು ಹೀಗೆ ಪ್ರತಿಯೊಬ್ಬನೂ ಬಹಳ ಜಾಗರೂಕತೆಯಿಂದ ಯುದ್ಧವನ್ನು ಆರಂಭಿಸಿದನು. ॥೧೨॥

ಕೆಲವರು ಭಲ್ಲಾಯುಧದ ತಿವಿತದಿಂದಲೂ, ಮತ್ತೆ ಕೆಲವರು ಭಿಂಡಿಪಾಲದ ಹೊಡೆತದಿಂದಲೂ ಭಿನ್ನ ದೇಹಿಗಳಾಗಿ ನೆಲಕ್ಕೆ ಉರುಳಿದರು. ಷಡಾನನನೊಂದಿಗೆ ಮಹಾಬಲಿಷ್ಠನಾದ ಗಂಧಾಸುರನು ಹೋರಾಡಿದನು. ॥೧೩॥

ಪ್ರತಾಪಶಾಲಿಗಳಾದ ವೀರಭದ್ರ, ಮದನಕಾಂತರು ರಣಶಿರಸ್ಸಿನಲ್ಲಿ ಯುದ್ಧ ಮಾಡಿದರು. ವೀರರಾಜ, ನಂದಿ ಇವರು ಪರಸ್ಪರ ಹೋರಾಡಿದರು. ॥೧೪॥

ಧ್ವಜಾಸುರ–ಪುಷ್ಪದಂತರು ತಾವು ಕಲಿತ ಶಸ್ತ್ರಾಸ್ತ್ರ ಪ್ರಯೋಗಗಳ ಚಾತುರ್ಯವನ್ನು ಒಬ್ಬರಿಗೊಬ್ಬರು ಪ್ರದರ್ಶಿಸತೊಡಗಿದರು. ಮತ್ತೊಂದು ಕಡೆ ಭೂತರಾಜ, ಮಹಾಕಾಯರು ಪರಸ್ಪರ ಕದನವಾಡಿದರು. ॥೧೫॥

ಧೂರ್ತ, ವಿಕಟರು ವೀರ್ಯ-ಪರಾಕ್ರಮಗಳಲ್ಲಿ ಒಬ್ಬರನ್ನು ಮತ್ತೊಬ್ಬರು ಮೀರಿಸತಕ್ಕವರು. ಇವರಿಬ್ಬರೂ ಎದುರಾಗಿ ದ್ವಂದ್ವ ಯುದ್ಧವನ್ನು ಮಾಡಿದರು.

ಪುನಃ ಸಂಜ್ಞಾಮವಾಪ್ಯೈನಂ ಸೋಽಪಿ ಖಡ್ಗೇನ ಚಾಹನತ್ ।
ಮೂರ್ಛಾಮವಾಪ ಮಹತೀಂ ಚಪಲಶ್ಚಪಲೋ ಯುಧಿ ॥೧೭॥

ಪ್ರವೃತ್ತೇ ದ್ವಂದ್ವಯುದ್ಧೇ ತು ಯುಯುಧಾತೇ ಬಲೇ ಉಭೇ ।
ಜಘ್ನತುಃ ಶಸ್ತ್ರಸಂಘಾತೈರ್ಬಾಣಜಾಲೈಃ ಪರಸ್ಪರಮ್ ॥೧೮॥

' ಸಹಸ್ವ, ಜಹಿ ಮಾ ಭೈಸ್ತ್ವಂ, ಹತಃ ಸ್ವರ್ಗಂ ಸಮೇಷ್ಯಸಿ ' ।
ಕ್ಷೀಣೇಷು ಶಸ್ತ್ರ-ಬಾಣೇಷು ಲತ್ತಾಭಿರ್ಮುಷ್ಟಿಭಿಃ ಪುನಃ ॥೧೯॥

ಯುಯುಧುಸ್ಸರ್ವಸೈನ್ಯಾನಿ ನಾಶಯಂತಿ ಪರಸ್ಪರಮ್ ।
ಕಶ್ಚಿಚ್ಚ ಚರಣೌ ಧೃತ್ವಾ ಪೋಥಯಾಮಾಸ ವೈರಿಣಮ್ ॥೨೦॥

---

ಚಪಲನು ಕೋಪಾವೇಶಗೊಂಡು ಒಮ್ಮೆ ಹೊಡೆಯಲು ಶಾರ್ದೂಲನು ತಲೆಸುತ್ತಿ ನೆಲಕ್ಕೆ ಉರುಳಿ ಬಿದ್ದನು. ಅವನಿಗೆ ಕೆಲಕಾಲ ಮೂರ್ಛೆಯೇ ಬಂದುಬಿಟ್ಟಿತು. ॥೧೬॥

ಸ್ವಲ್ಪ ಹೊತ್ತಿನಲ್ಲೇ ಮೂರ್ಛೆಯಿಂದ ತಿಳಿದೆದ್ದನು. ಕೂಡಲೇ ಶಾರ್ದೂಲನು ಬಹಳ ಕುಪಿತನಾಗಿ ತನ್ನ ಕೈಯ್ಯಲ್ಲಿದ್ದ ಖಡ್ಗದಿಂದ ಎದುರಾಳಿ ಚಪಲನನ್ನು ಹೊಡೆದನು. ಯುದ್ಧದಲ್ಲಿ ಚಪಲತೆಯಿಂದ ವರ್ತಿಸುತ್ತಲಿದ್ದ ಚಪಲನು ಶಾರ್ದೂಲನ ಖಡ್ಗಪ್ರಹಾರವನ್ನು ತಡೆದುಕೊಳ್ಳಲಾರದೆ ನೆಲಕ್ಕೆ ಬಿದ್ದನು. ಅವನಿಗೆ ಪ್ರಬಲತರವಾದ ಮೂರ್ಛೆಯು ಬಂದಿತು. ॥೧೭॥

ಮುಖಂಡರಿಗೆ ಪರಸ್ಪರ ಯುದ್ಧವು ಬಿರುಸಿನಿಂದ ಆರಂಭವಾದ ಕೂಡಲೇ ಇತರ ಸೈನಿಕರೂ ಅತ್ಯುತ್ಸಾಹಗೊಂಡು ತಮ್ಮ ತಮ್ಮ ಶಕ್ತಿ—ಸಾಹಸಗಳಿಗೆ ತಕ್ಕವರಾದವರೊಡನೆ ಕದನವನ್ನಾರಂಭಿಸಿದರು. ಒಬ್ಬರ ಮೇಲೊಬ್ಬರು ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತ ಶತ್ರುಗಳನ್ನು ಹಿಂಸಿಸಿದರು. ॥೧೮॥

" ಏಟನ್ನು ತಡೆದುಕೋ, ನೋಡೋಣ " ಎಂತಲೂ " ಹೊಡಿ, ಭಯಪಡಬೇಡ. ಒಂದು ವೇಳೆ ನೀನು ರಣಶಿರದಲ್ಲಿ ಬಿದ್ದು ಸಾಯುವೆಯಾದರೆ, ವೀರಸ್ವರ್ಗವು ಲಭಿಸುವುದು " ಎಂತಲೂ ಉತ್ತೇಜಕ ಗರ್ಜನೆಗಳು ಅಲ್ಲಲ್ಲಿ ಆಗಾಗ್ಗೆ ಕೇಳಿ ಬರುತ್ತಲಿದ್ದವು. ಸೈನಿಕರು ತಮ್ಮ ತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳು ತೀರಿದ ಕೂಡಲೇ ಕುಂಠಿತರಾಗದೇ, ಮುಷ್ಟಿಗಳಿಂದಲೇ ಹೊಡೆದಾಡಿದರು. ॥೧೯॥

ಉಭಯ ಪಕ್ಷಗಳ ಸೈನಿಕರೂ ಸೇರಿ ಒಮ್ಮೆಲೆ ಯುದ್ಧವನ್ನು ಮಾಡಿ ಪರಸ್ಪರರನ್ನು ನಾಶಗೊಳಿಸಿದರು. ಆ ಪೈಕಿ ಒಬ್ಬ ವೀರನು ತನ್ನ ಎದುರಾಳಿಯ

ಕಶ್ಚಿದುಡ್ಡೀಯ ನೃಪತಚ್ಛ್ರೋರ್ಣಯಾಮಾಸ ವೈ ಪರಮ್ ।
ಕಶ್ಚಿಚ್ಚಿಚ್ಛೇದ ಚ ಶಿರಃ ಕಶ್ಚಿದ್ಬಾಹುಂ ರಿಪೋರಣೇ ॥೨೧॥

ಕಶ್ಚಿತ್ಪಾದೌ ಜಾನುನೀ ಚ ಗುಲ್ಫೌ ಚಿಚ್ಛೇದ ಚಾಪರಃ ।
ಶರವೃಷ್ಟಿಂ ಪರೇ ಕೇಚಿತ್ಪರಸ್ಪರಮವಾಸೃಜನ್ ॥೨೨॥

ಸ್ರವದ್ರಕ್ತಶ್ಶಸ್ತ್ರಹತೋ ಮರಣಾವಧ್ಯಯುಧ್ಯತ ।
ಕಬಂಧಾ ಯುಯುಧುಸ್ತತ್ರ ಜಘ್ನುಃ ಸ್ವಾಂಶ್ಚ ಪರಾನಪಿ ॥೨೩॥

ಅಪರೇ ಸಹಸಾ ಪೇತುರ್ವಿದೀರ್ಣವಕ್ಷಸೋ ನರಾಃ ।
ಪರಸ್ಪರಾಘಾತಹತೌ ಮೃತೌ ಕೇಚಿದ್ರಣಾಜಿರೇ ॥೨೪॥

---

ಕಾಲುಗಳೆರಡನ್ನೂ ಹಿಡಿದೆತ್ತಿ ನೆಲಕ್ಕೆ ಬಿರುಸಾಗಿ ಅಪ್ಪಳಿಸಿದನು. ॥೨೦॥

ಮತ್ತೊಬ್ಬನು ಬಹಳ ಎತ್ತರದ ವರೆಗೆ ನೆಗೆದು ಹಾರಾಡುತ್ತ ತನ್ನ ಶತ್ರುವಿನ ಮೇಲೆ ಗುರಿನೋಡಿ ಬಿದ್ದನು. ಆ ಆಘಾತಕ್ಕೆ ಸಿಕ್ಕಿದ ದುರ್ದೈವಿ ವೀರನು ಪುಡಿಪುಡಿಯಾಗಿ ಹೋದನು. ಮಗುದೊಬ್ಬನು ಧಾವಿಸಿ ಬಂದು ತನ್ನ ಕೈಯ್ಯಲ್ಲಿದ್ದ ಖಡ್ಗದಿಂದ ಪ್ರತಿಯೋಧಿಯ ಶಿರವನ್ನು ಛೇದಿಸಿದನು. ಬರಬರುತ್ತ ರಣಾಂಗಣದಲ್ಲಿ ಯುದ್ಧದ ನಿಯಮವೇ ತಪ್ಪಿಹೋಯಿತು. ಸಿಕ್ಕವರು ಕೈಗೆ ಸಿಕ್ಕಿದವರ ಅವಯವಗಳನ್ನು ಕತ್ತರಿಸಿದರು. ಬಾಹುಗಳನ್ನು ಕೆಲವರು ಕಡಿದೊಗೆದರು. ॥೨೧॥

ಒಬ್ಬನು ಶತ್ರುಗಳ ಪಾದ, ಜಾನು ಕತ್ತರಿಸಿ ಚಲ್ಲಿದರೆ, ಮತ್ತೊಬ್ಬನು ಅವನ ಗುಲ್ಫಗಳನ್ನು ಕಡಿದು ಬಿಸುಟನು. ಮತ್ತೆ ಕೆಲವು ಯೋಧರ ಗುಂಪು ಪರಸ್ಪರರ ಮೇಲೆ ಬಾಣಗಳನ್ನು ಮಳೆಗರೆದಂತೆ ಸುರಿಸಿದರು. ॥೨೨॥

ಘಾಯಗೊಂಡ ಸೈನಿಕರು ತಮ್ಮ ದೇಹಗಳಲ್ಲುಂಟಾದ ಘಾಯುಗಳಿಂದ ಧಾರಾಕಾರವಾಗಿ ರಕ್ತ ಸುರಿಯುತ್ತಿರಲಿ, ದೇಹದ ಒಳಭಾಗಗಳೆಲ್ಲ ಈಚೆಗೆ ಕಾಣುತ್ತಿರಲಿ, ಇವಾವನ್ನೂ ಲಕ್ಷಿಸದೆ ದೇಹದಲ್ಲಿ ಉಸಿರಿರುವ ವರೆಗೂ ಹೋರಾಡಿ ತಮ್ಮ ಧನಿಯ ಅನ್ನದ ಋಣವನ್ನು ಮುಟ್ಟಿಸಿದರು. ಶಿರಶ್ಛಿನ್ನರಾದ ವೀರರ ಕಬಂಧಗಳು ಮನಸ್ವೀ ಕುಣಿದಾಡುತ್ತ ಕೈಗೆ ಸಿಕ್ಕಿದವರನ್ನು ತುಂಡರಿಸಿದವು. ಕಬಂಧಗಳ ಯುದ್ಧದಿಂದ ಪರಯೂಥದವರಂತೆ ಸ್ವ–ಸೈನಿಕರೂ ಅನೇಕವಾಗಿ ಸತ್ತು ಉರುಳಿದರು. ॥೨೩॥

ರಣರಂಗದ ರೌದ್ರರೂಪ ಎಷ್ಟರಮಟ್ಟಿಗೆ ಇದ್ದಿತೆಂದರೆ, ಶತ್ರುಗಳು ತಮ್ಮನ್ನು ಹೊಡೆಯಲಿಕ್ಕೆ ಬಾರದಿದ್ದರೂ ಸಹ ಅನೇಕ ವೀರರು ಆ ದೃಶ್ಯವನ್ನು ನೋಡಿ ಇದ್ದಕ್ಕಿ

ಏಕಾಪ್ಸರಃ ಪ್ರಾಪ್ತಿಕೃತೇ ಸ್ವರ್ಗಯುದ್ಧಮಕುರ್ವತಾಮ್ ।
ಅಸೃಙ್ನದ್ಯಭವತ್ತತ್ರ ಕೇಶಶೈವಾಲಸಂಯುತಾ ॥೨೫

ಖಡ್ಗಮತ್ಸ್ಯವತೀ ಖೇಟಮಹಾಕೂರ್ಮಾ ದುರತ್ಯಯಾ ।
ಪ್ರೇತಕಾಷ್ಠವಹಾ ಘೋರಾ ತೃಣಚಾಮರಸಂಯುತಾ ॥೨೬॥

ಕಂಚುಕಗ್ರಾಹಶೋಭಾಢ್ಯಾ ಮಹಾಕಟಕಭೇಕಿಕಾ ।
ಶೂರಮೋದಕರಾ ಭೀರುಮಹಾಭಯವಿವರ್ಧಿನೀ ॥೨೭॥

ಮೇದೋಜಲಾ ದುಃಖತರಾ ಮಾಂಸ-ಕರ್ದಮಶಾಲಿನೀ ।
ತತೋsಸ್ತಮಿತ ಆದಿತ್ಯೇ ನ ಪ್ರಾಜ್ಞಾಯತ ಕಿಂಚನ ॥೨೮॥

ದ್ದಂತೆಯೇ ನೆಲಕ್ಕುರುಳಿ ಸತ್ತರು. ಪರಸ್ಪರರನ್ನು ಸೋಲಿಸಬೇಕೆಂದು ಕಲಿತನದಿಂದ ದ್ವಂದ್ವಯುದ್ಧದಲ್ಲಿ ನಿರತರಾದವರಿಬ್ಬರೂ ಸತ್ತು ಬಿದ್ದರು. ॥೨೪॥

ಪ್ರತಿಯೊಬ್ಬ ಯೋಧನೂ ವಿಜಯವನ್ನು ಪಡೆಯಲಾಗದಿದ್ದರೆ, ಧಾರಾತೀರ್ಥದಲ್ಲಿ ದೇಹವನ್ನು ವಿಸರ್ಜಿಸಿ, ವೀರಸ್ವರ್ಗವನ್ನು ಪಡೆದು ಅಲ್ಲಿರುವ ಅಪ್ಸರೆಯೊಡನೆ ಸುಖಿಸಬೇಕೆಂದು ನಿಶ್ಚಯಿಸಿಯೇ ಕದನವಾಡುತ್ತಲಿದ್ದನು. ಯುದ್ಧದ ಬಿರುಸು ಎಷ್ಟರ ಮಟ್ಟಿಗೆ ಏರಿದ್ದಿತೆಂದರೆ, ರಕ್ತವು ರಣಕ್ಷೇತ್ರದಲ್ಲಿ ಮಹಾಪೂರ ನದಿಯಂತೆ ಹರಿಯಿತು. ಸತ್ತು ಬಿದ್ದವರ ತಲೆಗೂದಲು ಪಾಚಿಯಂತೆ ತೋರಿತು. ॥೨೫॥

ಮೃತರಾದ ಯೋಧರು ತಮ್ಮ ತಮ್ಮ ಕೈಗಳಲ್ಲಿ ಭದ್ರವಾಗಿ ಹಿಡಿದುಕೊಂಡ ಖಡ್ಗಗಳು ಮೀನುಗಳಂತೆ ಕಂಡವು. ಸೈನಿಕರ ಕೈಗಳಲ್ಲಿದ್ದ ಢಾಲು (ಗುರಾಣಿ) ಗಳು ಆಮೆಗಳಂತೆ ತೋರಿದವು. ಯಾರಿಂದಲೂ ದಾಟಲು ಸಾಧ್ಯವಾಗದಂತಿದ್ದಿತು, ಆ ನದಿ ಲೆಖ್ಖವಿಲ್ಲದಷ್ಟು ಪ್ರೇತಗಳು ಮರದ ತುಂಡುಗಳಂತೆ ತೇಲಿಬಂದವು. ಯೋಧಮುಖಂಡರು ಧರಿಸಿದ್ದ ಚಾಮರಗಳು ಶತ್ತೆಯಂತೆ ಕಂಡುಬಂದವು. ॥೨೬॥

ವೀರಪುರುಷರು ಧರಿಸಿದ್ದ ಕವಚಗಳು ತೇಲಿ ಬರುತ್ತಿದ್ದರೆ, ದೊಡ್ಡ ದೊಡ್ಡ ಮೊಸಳೆಗಳಂತೆ ತೋರುತ್ತಿದ್ದವು. ರಣವಾದ್ಯಗಳ ಧ್ವನಿ ಕಪ್ಪೆಗಳು ಒಟಗುಟ್ಟಿದಂತೆ ಇದ್ದಿತು. ಈ ನದಿಯು ಶೂರರಿಗೆ ಉತ್ಸಾಹವನ್ನು ವೃದ್ಧಿಮಾಡುತ್ತಲಿದ್ದಿತು. ಅಂತೆಯೇ ಅಳ್ಳೆದೆಯವರನ್ನು ಮತ್ತಿಷ್ಟೂ ನಡುಗಿಸುತ್ತಲಿದ್ದಿತು. ॥೨೭॥

ಮೃತ ಸೈನಿಕರ ಮೇದಸ್ಸು ತೆರೆಯ ರೂಪವನ್ನು ತಾಳಿ ಹರಿಯಿತು. ಸೈನ್ಯದವರ ಮಾಂಸವು ಕೊಚ್ಚೆಯಾಯಿತು. ರಣಭೂಮಿಯು ಈ ಬಗೆಯ ಭೀಕರ ರೂಪವನ್ನು ತಾಳುವಷ್ಟರಲ್ಲಿ ಸೂರ್ಯದೇವನು ಅಸ್ತಮಿಸಿದನು ಕಗ್ಗತ್ತಲೆಯು

" ನ ಹಂತವ್ಯಾ ವಯಂ ದೈತ್ಯವಾಹಿನೀಚಾರಿಣೋऽಸುರಾಃ " ।
" ನ ಹಂತವ್ಯಾ ವಯಂ ದೇವವಾಹಿನೀಚಾರಿಣಃ ಸುರಾಃ " ॥೨೯॥
ಏವಂ ಕೋಲಾಹಲೈಸ್ತತ್ರ ಪ್ರಾಯುಧ್ಯಂತ ಪರಸ್ಪರಮ್ ।
ಆಶಿಷೋऽಥ ದದುಸ್ತತ್ರ ಶ್ವಾಪದಾ ಭೂತ-ರಾಕ್ಷಸಾಃ ॥೩೦॥
ಸೃಗಾಲಾಃ ಪತಗಾಃ ಶ್ಯೇನಾಸ್ತೃಪ್ತಾಃ ಪಾರ್ವತಿನಂದನಮ್ ।
ದಿನತ್ರಯಮಭೂದೇವಂ ದಿವಾ-ರಾತ್ರೌ ಮಹಾರಣಃ ॥೩೧॥
ವಾದ್ಯಶಬ್ದೈರ್ಜಯಂ ರಾತ್ರೌ ಘೋಷಯಂತಃ ಪರಸ್ಪರಮ್ ।
ಏವಂ ಗಂಧಾಸುರೋऽಯುಧ್ಯತ್ಸೇನಾನ್ಯಾ ಬಹುವಿಸ್ತರಮ್ ॥೩೨॥

---

ಕವಿದ ಬಳಿಕ ಯಾರಿಗೂ ಏನೊಂದೂ ಕಾಣಿಸದಂತಾಯಿತು. ॥೨೮॥

" ನಾವು ದೈತ್ಯಸೇನೆಗೆ ಸೇರಿದವರು, ಆದುದರಿಂದಲೆ ಇಲ್ಲೆಲ್ಲ ತಿರುಗಾಡುತ್ತಲಿದ್ದೇವೆ. ನಮ್ಮನ್ನು ಶತ್ರುಗಳೆಂದು ಭಾವಿಸಿ ಕೊಲ್ಲಬೇಡಿ " ಎಂಬುದಾಗಿಯೂ, ಅತ್ತಕಡೆ " ನಾವು ದೇವನ ಸೇನೆಯವರು. ನಮ್ಮನ್ನು ಕೊಲ್ಲಬೇಡಿ " ಎಂಬುದಾಗಿಯೂ ಕೂಗಿ ಹೇಳುತ್ತಲಿದ್ದವರ ದೀನಸ್ವರಗಳು ಎಂಥವನ ಎದೆಯನ್ನಾದರೂ ಕಂಪಿಸುವಂತೆ ಮಾಡುತ್ತಲಿದ್ದವು. ಎಷ್ಟೇ ಘಟ್ಟಿಯಾಗಿ ಕೂಗಿಕೊಂಡರೂ ಗದ್ದಲದಲ್ಲಿ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ॥೨೯॥

ಇಷ್ಟೆಲ್ಲ ಕೋಲಾಹಲ ನಡೆಯುತ್ತಿದ್ದರೂ, ಯುದ್ಧವು ಮಟ್ಟಿಗೆ ನಡೆಯುತ್ತಲೇ ಇದ್ದಿತು. ಎದುರಿಗೆ ಸಿಕ್ಕವನು ಸ್ವೀಯನಾಗಿರಲಿ, ಅಥವಾ ಪರನಾಗಿರಲಿ. ನಿರ್ದಾಕ್ಷಿಣ್ಯವಾಗಿ ಅವನನ್ನು ತುಂಡರಿಸಿ ಚೆಲ್ಲುತ್ತಿದ್ದರು. " ಇಂತಹ ನಿಷ್ಕರುಣಿ ಯೋಧರು ಹಾಗೂ ಈ ಯುದ್ಧಕ್ಕೆ ಕಾರಣನಾದ ಗಣಪತಿ ಇವರು ಬಹುಕಾಲ ಬದುಕಿರಲಿ " ಎಂದು ಮಾಂಸಾಹಾರಿ ಪ್ರಾಣಿಗಳೂ, ಭೂತ–ಪ್ರೇತಗಳೂ ಆಶೀರ್ವದಿಸುತ್ತಲಿದ್ದವು. ॥೩೦॥

ನರಿಗಳು, ರಣಹದ್ದು, ಗರುಡಪಕ್ಷಿ, ಗಿಡಗ ಮೊದಲಾದುವು ಯಥೇಷ್ಟವಾಗಿ ಮಾಂಸವನ್ನು ತಿಂದು ತಿಂದು ತೃಪ್ತವಾದವು. ಭಯಂಕರವಾದ ಆ ಯುದ್ಧವು ಮೂರು ದಿನಗಳ ವರೆಗೂ ಅಹೋರಾತ್ರ ನಡೆಯಿತು. ॥೩೧॥

ಯುದ್ಧರಂಗದಲ್ಲಿ ಅನೇಕ ರಣಮುಖಗಳಿದ್ದವು. ಆಯಾ ರಣಮುಖಗಳಲ್ಲಿ ಕೆಲವೊಂದು ವೇಳೆ ಒಂದೊಂದು ಪಡೆಗೆ ಜಯ ದೊರೆಯುತ್ತಲಿತ್ತು. ಆಗ ಆ ಪಡೆಯವರು ರಣವಾದ್ಯಗಳನ್ನು ಬಾಜಿಸಿ, ತಮಗುಂಟಾದ ವಿಜಯದ ವಿಷಯವನ್ನು

ಮದ್ಯಪಾನೇನ ಮತ್ತೋಽಸೌ ತ್ಯಕ್ತ್ವಾ ಶಸ್ತ್ರಾಣಿ ವೇಗವಾನ್ ।
ಅಹನನ್ಮುಷ್ಟಿಘಾತೇನ ಸಹಸಾ ತಂ ಷಡಾನನಮ್ ॥೩೩॥

ನ್ಯಪತತ್ಸ ತದಾ ಭೂಮೌ ವಜ್ರಾಹತ ಇವಾಚಲಃ ।
ಅಧಾವತ್ಸೋಽಪಿ ಲಬ್ಧ್ವಾಶು ಸಪಕ್ಷ ಇವ ಪರ್ವತಃ ॥೩೪॥

ಸಂಜ್ಞಾಂ ದ್ವಾದಶಭಿರ್ಹಸ್ತೈಃ ಅವಿದ್ಧ್ಯತ್ತಂ ಮಹಾಸುರಮ್ ।
ಶರಜಾಲಾನ್ಯನೇಕಾನಿ ವಿಸೃಜನ್ ಷಡ್ಧನುರ್ವರೈಃ ॥೩೫॥

ನಿವಾರ್ಯ ಶರಜಾಲಾನಿ ಛಾದಯಾಮಾಸ ತಂ ಶರೈಃ ।
ಗಂಧಾಸುರೋ ಮಹಾವೇಗಾತ್ ಷಡಾನನಮನಾಮಯಮ್ ॥೩೬॥

---

ಉದ್ಘೋಷಿಸುತ್ತ ರಾತ್ರಿಯನ್ನು ಮತ್ತಷ್ಟು ಭೀಕರಗೊಳಿಸುತ್ತಲಿದ್ದರು. ಒಂದೆಡೆ ಗಂಧಾಸುರನು ಸುರಸೇನಾನಿಯೊಡನೆ ಬಹು ದೀರ್ಘಕಾಲ ಬಿರುಸಿನಿಂದ ಯುದ್ಧವನ್ನು ಮಾಡಿದನು. ॥೩೨॥

ಯುದ್ಧಕ್ಕೆ ಬರುವ ಮುನ್ನ ಅಸುರನು ವೀರಪಾನದಿಂದ ಉನ್ಮತ್ತನಾಗಿದ್ದನು. ರಕ್ಕಸನು ತನಗೆ ಪರಿಚಿತವಾದ ಆಯುಧಗಳನ್ನೆಲ್ಲ ಚಟುವಟಿಕೆಯಿಂದ ಒಮ್ಮೆಲೇ ಪ್ರಯೋಗಿಸಿದನು. ಅನಂತರ ಅವನ್ನೆಲ್ಲ ಬಿಸುಟು ವಜ್ರದಂತಹ ತನ್ನ ಮುಷ್ಟಿಯಿಂದ ಒಮ್ಮೆ ಷಡಾನನನನ್ನು ಗುದ್ದಿದನು. ॥೩೩॥

ವಜ್ರಾಯುಧದ ಹೊಡೆತದಿಂದ ಪರ್ವತವು ಉರುಳಿದಂತೆ, ಕಾರ್ತಿಕೇಯನಂತಹ ಬಲಿಷ್ಠನು ಸಹ ಗಂಧಾಸುರನ ಗುದ್ದಿಗೆ ನುಗ್ಗಾಗಿ ನೆಲಕ್ಕುರುಳಿದನು. ಆದರೂ ಸ್ವಲ್ಪದರಲ್ಲೇ ಚೇತರಿಸಿಕೊಂಡು ರೆಕ್ಕೆಯುಳ್ಳ ಪರ್ವತದಂತೆ ಹಾರುತ್ತ ಜಿಗಿಯುತ್ತ ರಾಕ್ಷಸನ ಸಮೀಪಕ್ಕೆ ಬಂದನು. ॥೩೪॥

ರಾಕ್ಷಸನ ಹೊಡೆತದಿಂದ ಖತಿಗೊಂಡ ಕುಮಾರನು ತನ್ನ ಹನ್ನೆರಡು ಕೈಗಳನ್ನೂ ಅಸ್ತ್ರಪ್ರಯೋಗದಲ್ಲಿ ನಿರತಗೊಳಿಸಿದನು. ಎಂದರೆ ಆರು ಹಸ್ತಗಳಿಂದ ಆರು ಧನುಸ್ಸುಗಳನ್ನು ಹಿಡಿದು, ಇತರ ಆರು ಹಸ್ತಗಳಿಂದ ನಾನಾ ಬಗೆಯ ಬಾಣಗಳನ್ನು ಪ್ರಯೋಗಿಸತೊಡಗಿದನು ಮತ್ತು ಪುಂಖಾನುಪುಂಖವಾಗಿ ಮೇಲ್ಮೇಲೆ ಬಾಣಗಳನ್ನು ಬಿಡುತ್ತ, ಬಾಣಗಳ ಬಲೆಯನ್ನೇ ಬೀಸಿಬಿಟ್ಟನು. ॥೩೫॥

ಗಂಧಾಸುರನೇನೂ ಕಡಿಮೆ ದರ್ಜೆಯ ಯೋಧನಾದವನಲ್ಲ. ಕುಮಾರನು ಬಿಟ್ಟ ಬಾಣಗಳನ್ನೆಲ್ಲ ಪ್ರತ್ಯಸ್ತ್ರಗಳಿಂದ ತಡೆಗಟ್ಟಿ, ಅವನ ಮೇಲೆ ಎಣಿಸಲಾರದಷ್ಟು ನಿಶಿತ ಬಾಣಗಳನ್ನು ಪ್ರಯೋಗಿಸಿ, ದೇವಸೇನಾನಿಯನ್ನು ಮುಚ್ಚಿಹಾಕಿದನು. ಗಂಧಾಸುರನ ಬಾಣಗಳ ವೇಗ ಅನಿರ್ವರ್ಣನೀಯವಾಗಿದ್ದಿತು. ॥೩೬॥

ತನ್ನಿವಾರ್ಯ ದಧಾರೈನಂ ಚರಣೇ ಸ ಷಡಾನನಃ ।
ಅಕಸ್ಮಾದ್ಭ್ರಾಮಯಿತ್ವೈನಂ ಪಾತಯಾಮಾಸ ಭೂತಲೇ ॥೩೭॥
ತಸ್ಯಾಂಗಂ ಶತಧಾ ಜಾತಂ ಗತಾಸೋರ್ದೃಢಘಾತತಃ ।
ತಸ್ಮಿನ್ ಹತೇ ತಸ್ಯ ಸೇನಾ ಯಯೌ ವ್ಯಗ್ರಾ ದಿಶೋ ದಶ ॥೩೮॥
ಪೃಷ್ಠಲಗ್ನೋ ನಿಂದತಿ ಸ್ಮ ಸೇನಾಂ ತಾಂ ಸ ಷಡಾನನಃ ।
ಸೇನಶ್ಚ ಕ್ರೋಧನಶ್ಚೈವ ಶತಘ್ನೋ ಯೋದ್ಧುಮಾಯಯುಃ ॥೩೯॥
ಯೇಷಾಂ ಶಬ್ದೋ ಮಹಾನಾಸೀದ್ಘನಾನಾಮಿವ ಗರ್ಜತಾಮ್ ।
ಊಚುಃ ಷಡಾನನಂ

ತ ಊಚುಃ :—

ದುಷ್ಟ ! ಸೇನಾ ನೋ ನಿಹತಾ ಬಹು ॥೪೦॥

---

ಇದರಿಂದ ಧೃತಿಗೆಡದೆ ಷಣ್ಮುಖನು ಮುಂದೆ ಬಂದು ಗಂಧಾಸುರನ ಎರಡು ಪಾದಗಳನ್ನೂ ಭದ್ರವಾಗಿ ಹಿಡಿದುಕೊಂಡು ಎತ್ತಿಹಿಡಿದು ಗರಗರ ತಿರುಗಿಸಿ ನೆಲಕ್ಕೊಮ್ಮೆ ಅಪ್ಪಳಿಸಿದನು. ॥೩೭॥

ಈ ಹೊಡೆತಕ್ಕೆ ಗಂಧಾಸುರನ ದೇಹವು ನೂರಾರು ಹೋಳುಗಳಾಯಿತು. ಬಲವಾಗಿ ಏಟು ಬಿದ್ದುದರ ಪರಿಣಾಮವಾಗಿ ಅವನು ಅಸುವನ್ನೀಗಿದನು. ಅಸುರನು ಮೃತನಾದೊಡನೆಯೇ ಅವನ ಅನುಯಾಯಿಗಳಾದ ವೀರಯೋಧರು ಮುಂದೇನನ್ನು ಮಾಡಬೇಕೆಂದು ತಿಳಿಯಲಾರದವರಾಗಿ ಹೇಳದೇ ಕೇಳದೇ ಹತ್ತು ದಿಕ್ಕುಗಳಿಗೂ ಓಡಿಹೋದರು. ॥೩೮॥

ಆದರೆ ಷಡಾನನನು ಅವರನ್ನು ಅಷ್ಟಕ್ಕೇ ಬಿಡದೆ, ಬೆನ್ನಟ್ಟಿ ಹೋಗಿ ಮೂದಲಿಸುತ್ತ, ರಾಕ್ಷಸ ಸೇನೆಯ ಅಭಿಮಾನವನ್ನು ಕೆಣಕಿದನು. ಇದರಿಂದ ರೊಚ್ಚಿಗೆದ್ದು ರಾಕ್ಷಸಸೈನ್ಯದಿಂದ ಸೇನ, ಕ್ರೋಧನ, ಶತ್ರುಘ್ನ ಎಂಬ ಮೂರು ಮಂದಿ ವೀರರು ಶರಜನ್ಮನೊಡನೆ ಕಾದಾಡಲು ಅನುವಾದರು. ॥೩೯॥

ಅವರು ಗರ್ಜಿಸುತ್ತಲಿದ್ದ ಕರ್ಕಶವಾದ ಧ್ವನಿಯು ವರ್ಷಾಕಾಲದ ಮೇಘಗಳ ತಿಕ್ಕಾಟದಂತೆ ಹೃತ್ಕಂಪಿಯಾಗಿದ್ದಿತು. ಯುದ್ಧವನ್ನಾರಂಭಿಸುವ ಮುನ್ನ ಸಂಪ್ರದಾಯಾನುಗುಣವಾಗಿ ಎದುರಾಳಿಗೆ ತಮ್ಮ ವೀರ್ಯ-ಬಲಗಳನ್ನು ಬಣ್ಣಿಸಿ ಹೇಳಿಕೊಂಡರು.

ಸೈನಿಕರು :—

ಎಲವೋ, ದುಷ್ಟ ! ವಿಪುಲವಾದ ನಮ್ಮ ಸೇನೆಯನ್ನೆಲ್ಲ ನೀನು ಚಿತ್ರ-ವಿಚಿತ್ರವಾಗಿ ಹೊಡೆದು ಕೊಂದಿರುವೆಯಲ್ಲವೇ ? ॥೪೦॥

**ಇದಾನೀಂ ಯಾಹಿ ಭವನಂ ಹತೋ ರವಿಸುತಸ್ಯ ಹ ।**

**ಕ ಉವಾಚ :—**

**ತತ ಆಚ್ಛಾದಯಾಮಾಸುರ್ಯುಗಪತ್ತೇ ಷಡಾನನಮ್ ॥೪೧॥**

**ಗ್ರಾಮಸಿಂಹಾ ಯಥಾ ಸಿಂಹಂ ಬಹವೋ ಬಲವತ್ತರಾಃ ।**
**ಷಡ್ಧನುರ್ಮೋಚಿತೈರ್ಬಾಣೈರ್ನ್ಯಹನತ್ತಾನ್ ಷಡಾನನಃ ॥೪೨॥**

**ತತಸ್ತೇ ಮೂರ್ಛಿತಾಃ ಪೇತುರ್ಮುಹೂರ್ತಾದುತ್ಥಿತಾಃ ಪುನಃ ।**
**ಪಾಶಂ ಕ್ಷಿಪ್ತ್ವಾ ಸ್ಕಂದಗಲೇ ನಿನ್ಯುಸ್ತಂ ಪಶುವತ್ತ್ರಯಃ ॥೪೩॥**

**ಜ್ಞಾತ್ವಾ ನೀತಂ ಷಣ್ಮುಖಂ ತಮಧಾವಂಸ್ತೇ ತ್ರಯೋ ಜವಾತ್ ।**
**ಹಿರಣ್ಯಗರ್ಭೋ ಬಲವಾನ್ ಶ್ಯಾಮಲೋ ರಕ್ತಲೋಚನಃ ॥೪೪॥**

---

ಇರಲಿ, ಈಗ ಬಾ, ಒಂದೇ ಕ್ಷಣದಲ್ಲಿ ನಿನ್ನನ್ನು ಕೊಂದುಬಿಡುವೆವು. ಎಂದರೆ ನೀನು ಒಡನೆಯೇ ಸೂರ್ಯನ ಮಗನ ಮನೆಗೆ ಅತಿಥಿಯಾಗಿ ಹೋಗಬಹುದು

ಬ್ರಹ್ಮ :—

ಎಂದು ಮೂದಲಿಸಿ, ಎಲ್ಲ ಬಗೆಯ ಶಸ್ತ್ರಾಸ್ತ್ರಗಳನ್ನೂ ಸಜ್ಜುಮಾಡಿಕೊಂಡು ಷಡಾನನನ ಮೇಲೆ ಎಲ್ಲರೂ ಒಮ್ಮೆಲೇ ಆಯಾ ಆಯುಧಗಳನ್ನು ಪ್ರಯೋಗಿಸಿದರು. ಇದರಿಂದ ಷಣ್ಮುಖನು ಬಾಣಗಳ ಪಂಜರದಲ್ಲಿ ಸಿಕ್ಕುಹೋದನು. ॥೪೧॥

ಗ್ರಾಮಸಿಂಹ (ನಾಯಿ) ಗಳು ಬಲವನ್ನು ಪ್ರಯೋಗಿಸಿ, ಮೃಗರಾಜ; ಸಿಂಹವನ್ನು ಆಕ್ರಮಿಸಿದಂತೆ ಈ ರಾಕ್ಷಸರು ತೋರಿದರು. ಆದರೆ ದೇವಸೇನಾನಿಯು ತನ್ನ ಆರು ಕೈಗಳಿಂದಲೂ ಒಂದೊಂದು ಧನುಸ್ಸನ್ನು ಹಿಡಿದು, ಇತರ ಆರು ಕೈಗಳಿಂದ ಲೆಖ್ಖಕ್ಕೆ ಸಿಕ್ಕದಷ್ಟು ಬಾಣಗಳನ್ನು ಪ್ರಯೋಗಿಸಿ, ರಾಕ್ಷಸರನ್ನು ಹಿಮ್ಮೆಟ್ಟುವಂತೆ ಮಾಡಿದನು. ॥೪೨॥

ಬಾಣಗಳ ಹೊಡೆತದಿಂದ ರಾಕ್ಷಸರು ಎಚ್ಚರತಪ್ಪಿ ನೆಲಕ್ಕೆ ಬಿದ್ದರು. ಅವರೂ ಮಹಾಬಲಿಷ್ಠರಾಗಿದ್ದುದರಿಂದ ಒಂದು ಕ್ಷಣದೊಳಗಾಗಿಯೇ ಮತ್ತೆ ಸಂಜ್ಞೆಯನ್ನು ಹೊಂದಿ ಪಾಶವನ್ನು ಸ್ಕಂದನ ಕಂಧರಕ್ಕೆ ಬಿಗಿದು ದನ–ಕರುಗಳನ್ನು ಎಳೆದೊಯ್ಯುವಂತೆ ಬಲಾತ್ಕಾರದಿಂದ ಎಳೆದೊಯ್ಯಲಾರಂಭಿಸಿದರು. ॥೪೩॥

ಷಣ್ಮುಖನನ್ನು ರಾಕ್ಷಸರು ಹಿಡಿದೊಯ್ದುರೆಂಬ ಸುದ್ದಿ ಮುಟ್ಟಿದೊಡನೆಯೇ ಮಹಾಬಲಿಷ್ಠರಾದ ಹಿರಣ್ಯಗರ್ಭ, ಶ್ಯಾಮಲ ಮತ್ತು ರಕ್ತಲೋಚನರೆಂಬ ಮೂರು ಮಂದಿ ದೇವ ವೀರರು ಆ ರಾಕ್ಷಸರನ್ನು ಬೆನ್ನಟ್ಟಿ ಹೋದರು. ॥೪೪॥

**ತ್ರಿಭಿಸ್ತೇ ಮುಷ್ಟಿಘಾತೇನ ಹತಾಃ ಪೇತುರ್ಧರಾತಲೇ ।**
**ತತೋ ಮದನಕಾಂತೋಽಪಿ ವೀರಭದ್ರಂ ಮಹಾಬಲಮ್ ॥೪೫॥**

**ನ್ಯಹನಚ್ಛಸ್ತ್ರಘಾತೇನ ಸ ಮೂರ್ಛಾಂ ಮಹತೀಂ ಯಯೌ ।**
**ತ್ಯಕ್ತ್ವಾ ಮೂರ್ಛಾಂ ವೀರಭದ್ರೋ ದಂಡಘಾತಾನ್ಯಪಾತಯತ್ ॥೪೬॥**
**ಮೃತಂ ಮದನಕಾಂತಂ ತಂ ವೀರರಾಜೋ ಮಹಾಬಲಃ ।**
**ಜ್ಞಾತ್ವಾ ಪ್ರಾಯಾನ್ನಿಹಂತುಂ ತಾಂಸ್ತ್ರೀನ್ ಸುರಾನ್ ಬಲವತ್ತರಾನ್॥ ॥೪೭॥**
**ತತಸ್ತಂ ನ್ಯಹನದ್ರೋಷಾಚ್ಛೃಂಗಾಭ್ಯಾಂ ನಂದಿಕೇಶ್ವರಃ ।**
**ಅಸ್ರವದ್ರುಧಿರಂ ವಕ್ತ್ರಾಚ್ಚ ತಥಾ ಭೂತಲೇಽಪತತ್ ॥೪೮॥**
**ತಂ ಹತಂ ತು ವಿಲೋಕ್ಯಾಶು ಚತ್ವಾರೋಽಸುರಸತ್ತಮಾಃ ।**

ಅವರನ್ನು ಸಮೀಪಿಸಿದುದೇ ತಡ, ಒಬ್ಬೊಬ್ಬ ವೀರನೂ ಪ್ರತಿದ್ವಂದಿ ರಾಕ್ಷಸನನ್ನು ಎದುರಿಸಿ ವಜ್ರಮುಷ್ಟಿಯಿಂದ ಗುದ್ದಿದನು. ಈ ಹೊಡೆತವನ್ನು ತಡೆದುಕೊಳ್ಳಲಾರದೆ ಆ ಮೂರು ಮಂದಿ ರಾಕ್ಷಸರೂ ಅಸುವಳಿದು ನೆಲದಲ್ಲಿ ಮಲಗಿದರು. ಆಗ ದೈತ್ಯಸೇನಾಪ್ರಮುಖರಲ್ಲೊಬ್ಬನಾದ ಮದನಕಾಂತನು ಮಹಾಬಲಿಷ್ಠನಾದ ವೀರಭದ್ರನನ್ನು ತಡವಿ ಹೋರಾಡುತ್ತಲಿದ್ದನು. ॥೪೫॥

ಅನೇಕ ನಿಶಿತಾಸ್ತ್ರಗಳನ್ನು ಅವನ ಮೇಲೆ ಪ್ರಯೋಗಿಸಿ, ಅವನನ್ನು ಪ್ರಬಲವಾಗಿ ಮೂರ್ಛೆಗೊಳಿಸಿದನು. ಭೈರವನು ಪುನಃ ಚೈತನ್ಯಗೊಂಡು ತನ್ನ ಕೈಯ್ಯಲ್ಲಿದ್ದ ದಂಡಾಯುಧವನ್ನು ಬೀಸಿ ಮದನಕಾಂತನನ್ನು ಕೆಳಕ್ಕೆ ಕೆಡಹಿದನು. ॥೪೬॥

ಮದನಕಾಂತನು ಮರಣಹೊಂದಿದ ಕೂಡಲೇ ಮಹಾಬಲಶಾಲಿಯಾದ ಮೃತನ ಸಹೋದ್ಯೋಗಿ; ವೀರರಾಜನು ಮಹಾಬಲಿಷ್ಠರಾದ ಹಿರಣ್ಯಗರ್ಭ, ಶ್ಯಾಮಲ ಮತ್ತು ರಕ್ತಲೋಚನ ಎಂಬ ಸುರವೀರರನ್ನು ಕೊಂದುಬಿಡೋಣವೆಂದೇ ನಿಶ್ಚಯಿಸಿ ರಭಸದಿಂದ ಓಡಿಬಂದನು. ॥೪೭॥

: ಇದನ್ನು ಗಮನಿಸಿದ ನಂದಿಕೇಶ್ವರನು ಬಹಳ ರೋಷಗೊಂಡು ಸ್ವಲ್ಪವೂ ವಿಲಂಬ ಮಾಡದೆ, ತನ್ನ ತೀಕ್ಷ್ಣಕೊಂಬುಗಳೆರಡರಿಂದಲೂ ವೀರರಾಜನನ್ನು ತಿವಿದನು. ಇದರಿಂದ ಆ ರಕ್ಕಸನ ದೇಹವು ನೂರಾರು ಚೂರುಗಳಾಗಿ ರಕ್ತವನ್ನು ಕಾರುತ್ತ ಧೊಪ್ಪನೆ ನೆಲಕ್ಕೆ ಬಿದ್ದಿತು. ॥೪೮॥

ವೀರರಾಜನು ತಮಗಿಂತಲೂ ಮೊದಲೇ ವೀರಸ್ವರ್ಗವನ್ನು ಹೊಂದಿದುದು ಇತರ ವೀರರಿಗೆ ಸಹಿಸಿರಲಿಕ್ಕಿಲ್ಲ. ಅಂತೆಯೇ ಈ ದೃಶ್ಯವನ್ನು ಕಂಡಕೂಡಲೇ ನಾಲ್ಕು

ಆಯಯುರ್ನಂದಿನಂ ಹಂತುಂ ಶಾರ್ದೂಲೋಽಥ ಧ್ವಜಾಸುರಃ ||೪೯||
ಮಹಾಕಾಯೋ ಧೃತಶ್ಚೈವ ಸರ್ವದೇವಜಿತೋ ರಣೇ |
ನಾನಾಶಸ್ತ್ರೈರ್ನಿಜಘ್ನುಸ್ತೇ ನಂದಿನಂ ಬಲವತ್ತರಮ್ ||೫೦||
ಪತಿತೇ ನಂದಿನಿ ತತಶ್ಚತ್ವಾರೋ ಯುದ್ಧದುರ್ಮದಾಃ |
ಪುಷ್ಪದಂತೋ ಭೂತರಾಜೋ ವಿಕಟಶ್ಚಪಲೋಽಪಿ ಚ ||೫೧||
ತೇ ತು ಶೈಲಾನ್ ಸಮಾದಾಯ ತೋಲಯಿತ್ವಾ ನಿಚಿಕ್ಷಿಪುಃ |
ಸರ್ವೇಷಾಂ ಮಸ್ತಕಾ ಭಿನ್ನಾಶ್ಚೂರ್ಣೀಭೂತಾಶ್ಚ ಕೇಚನ ||೫೨||
ಧರಾಘಾತೇನ ತೇ ಸರ್ವೇ ಧರಾಯಾಂ ಪತಿತಾ ರಣೇ |
ಕೇಚಿಚ್ಚ ಸಿಂಧುಮಗಮನ್ ಶಸ್ತ್ರಘಾತಪ್ರಪೀಡಿತಾಃ ||೫೩||
ಪರಾಜಯಂ ಸ್ವ-ಸೈನ್ಯಾನಾಂ ಪ್ರಾಹುರ್ದೇವಜಯಂ ತಥಾ |

ಮಂದಿ ಅಸುರ ವೀರರು ನಂದಿಯನ್ನು ಕೊಂದುಹಾಕಲು ಆಕ್ರಮಣಮಾಡಿದರು. ಅವರಾರೆಂದು ಭಾವಿಸಿದೆ? ಶಾರ್ದೂಲ, ಧ್ವಜಾಸುರ; ||೪೯||

ಮಹಾಕಾಯ ಮತ್ತು ಧೃತರೆಂಬುವರು. ಇವರ ಬಲ ಸಾಮಾನ್ಯವಾದುದೇನೂ ಅಲ್ಲ. ಹಿಂದಿನ ಯುದ್ಧಗಳಲ್ಲಿ ಎಲ್ಲ ದೇವತೆಗಳನ್ನೂ ಒಮ್ಮೆಲೇ ಸೋಲಿಸಿದವರು, ಅವರು ಪ್ರಕೃತ, ಮಹಾಬಲಿಷ್ಠನಾದ ನಂದಿಯ ಮೇಲೆ ಎಲ್ಲ ಶಸ್ತ್ರಾಸ್ತ್ರಗಳನ್ನೂ ಪ್ರಯೋಗಿಸಿದರು. ||೫೦||

ಇದರಿಂದ ನಂದಿಯು ನೆಲಕ್ಕೆ ಬಿದ್ದನು. ಇದನ್ನು ನೋಡಿದ ಕೂಡಲೇ ಯುದ್ಧದುರ್ಮದರಾದ ಪುಷ್ಪದಂತ, ಭೂತರಾಜ, ವಿಕಟ ಮತ್ತು ಚಪಲರೆಂಬ ನಾಲ್ವರು ದೇವವೀರರು ನಂದಿಯ ನೆರವಿಗೆ ಬಂದು ||೫೧||

ದೊಡ್ಡದೊಡ್ಡ ಪರ್ವತಗಳನ್ನು ಕಿತ್ತು ತುಯ್ದು, ನಾಲ್ಕು ಮಂದಿ ರಾಕ್ಷಸರ ಮೇಲೂ ಬೀಳುವಂತೆ ಎಸೆದರು. ಪರ್ವತಗಳು ಮೇಲೆ ಬಿದ್ದರೆ ಎಂದಿಗಾದರೂ ಬದುಕಿಯಾರೇ? ಈ ನಾಲ್ವರಷ್ಟೇ ಅಲ್ಲ ಎಷ್ಟೋ ಮಂದಿ ಇತರ ರಾಕ್ಷಸರೂ ತಲೆಯೊಡೆದು ಬಿದ್ದರು ಬಾಕಿಯವರ ದೇಹಗಳು ಗುರುತಿಸಲು ಸಹ ಬರದಷ್ಟು ಚೂರುಚೂರಾಗಿ ಬಿದ್ದವು. ||೨

ಯೋಧರು ಬಿದ್ದಾಗ ಶಸ್ತ್ರಾಸ್ತ್ರಗಳ ಹೊಡೆತದೊಂದಿಗೆ ಭೂಮಿಯ ಕಠಿಣ ಪ್ರದೇಶಗಳಿಂದಲೂ ಆಘಾತ ಉಂಟಾಗಿ ನಸುಗಿಹೋದರು. ಕೆಲವರಂತೂ ಶಸ್ತ್ರಘಾತದಿಂದ ಬಹುಮಟ್ಟಿಗೆ ನೊಂದು, ಸಿಂಧುದೈತ್ಯನ ಸಮೀಪಕ್ಕೆ ಓಡಿ ಹೋದರು. ||೫೩||

ಏದುತ್ತ ಬಂದ ರಾಕ್ಷಸ ಸೈನಿಕರು ತಮ್ಮ ವಾಹಿನಿಗೆ ಉಂಟಾದ ಪರಾಜಯದ

**ಜಯಂ ಪ್ರಾಪ್ತಾ ದೇವಸೇನಾ ಬಹುವಾದ್ಯಾನ್ಯವಾದಯತ್ ||೫೪||**
**" ಮಯೂರೇಶ, ಮಯೂರೇಶ ! ಜಯ ತ್ವಂ ಜಯ ಸರ್ವದಾ "|**
**ಇತ್ಯಬ್ರುವೀದ್ಧರ್ಷಯುತಾ ಸ್ವಾನಂದೇನ ನನರ್ತ ಚ ||೫೫||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ದೇವಾಸುರ ಯುದ್ಧವರ್ಣನಂ" ನಾಮ ಚತುರ್ದಶಾಧಿಕ ಶತತಮೋಽಧ್ಯಾಯಃ**

---

ಹಾಗೂ ತದ್ವಿರುದ್ಧವಾಗಿ ದೇವಸೇನೆಗೆ ಕ್ಷಣ ಕ್ಷಣಕ್ಕೂ ಲಭಿಸುತ್ತಿರುವ ವಿಜಯದ ಸಂಗತಿಯನ್ನು ಬಣ್ಣಿಸಿ ಹೇಳಿದರು. ಇವರ ವರದಿಗೆ ಸಾಕ್ಷ್ಯವನ್ನೀಯುವಂತೆ ದೇವಸೇನೆಯ ವಿಜಯಸೂಚಕವಾದ ವಾದ್ಯಧ್ವನಿಯೂ ಭೋರ್ಗರೆಯಲಾರಂಭಿಸಿತು. ||೫೪||

ವಿಜಯಸೂಚಕ ವಾದ್ಯಗಳೊಡನೆ ಸೈನಿಕರು ಉಚ್ಚಸ್ವರದಿಂದ " ಮಯೂರೇಶ, ಮಯೂರೇಶ ! ನಿನಗೆ ವಿಜಯವಾಗಲಿ, ನೀನು ಸರ್ವದಾ ಜಯಶಾಲಿಯಾಗು " ಎಂದು ಉದ್ಘೋಷಿಸುತ್ತ ಮಿತಿಮೀರಿದ ಆನಂದವುಳ್ಳವರಾಗಿ ಮನಸ್ವೀ ಕುಣಿದಾಡಿದರು. ||೫೫||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ದೇವಾಸುರ ಯುದ್ಧವರ್ಣನೆ " ಎಂಬಲ್ಲಿಗೆ ನೂರ ಹದಿನಾಲ್ಕನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಪಂಚದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಶ್ರುತ್ವಾ ಸೇನಾಜಯಂ ದೈತ್ಯೋ ಯಯೌ ಚಿಂತಾಂ ಮಹತ್ತರಾಮ್ ।**
**ಅತ್ಯಂತಮ್ಲಾನವದನೋ ನಿಮಗ್ನೋ ದುಃಖಸಾಗರೇ ॥೧॥**
**ಮನಸಾ ಪರಿತಪ್ತೇನ ಚಿಂತಯಾಮಾಸ ದೈತ್ಯರಾಟ್ ।**

**ಸಿಂಧುರುವಾಚ :—**

**ವಿಪರೀತಮಿದಂ ಕಸ್ಮಾಜ್ಜಾತಂ ? ನ ಜ್ಞಾಯತೇ ಮಯಾ ॥೨॥**
**ಪಿಪೀಲಿಕಾ ಗ್ರಸೇತ್ಕಿಂ ನು ? ಬ್ರಹ್ಮಾಂಡಂ ಲೋಕಸಂಕುಲಮ್ ।**
**ಯಸ್ಯಾಗ್ರೇ ಮಶಕಾ ದೇವಾ ಆಸನ್ನಿಂದ್ರಾದಯೋ ಮಮ ॥೩॥**

---

ಶ್ರೀ ಮಂಗಲಮೂರ್ತಯೇ ನಮಃ

## ೧೧೫ ನೆಯ ಅಧ್ಯಾಯ

ಬ್ರಹ್ಮಾ :—

ವತ್ಸ, ವ್ಯಾಸ ! ಮುಂದಿನ ಸನ್ನಿವೇಶವನ್ನು ಕೇಳು. ಸಿಂಧುದೈತ್ಯನು ತನ್ನ ಸೈನಿಕರ ಮುಖದಿಂದ ಶತ್ರುಗಳಿಗುಂಟಾದ ವಿಜಯದ ಸಂಗತಿಯನ್ನು ಕೇಳಿ, ಬಗೆ ಹರಿಯಲಾರದಂತಹ ಚಿಂತೆಗೊಳಗಾದನು. ಅವನ ಉತ್ಸಾಹಪೂರ್ಣ ಮುಖ ಶುಷ್ಕವಾಯಿತು. ದುಃಖಸಾಗರದಲ್ಲಿ ಮುಳುಗಿದನು. ॥೧॥

ಮನಸ್ಸು ಬಹಳ ಕಳವಳಗೊಳ್ಳಲು ಕಾರಣವೇನಿರಬಹುದೆಂದು ದೈತ್ಯರಾಜನು ಹೀಗೆ ಯೋಚಿಸಿದನು.

ದೈತ್ಯರಾಜ :—

ಇದೇಕೆ ಈ ವಿಪರೀತ ಘಟನೆ ನಡೆಯಿತೋ, ನನಗಂತೂ ತಿಳಿಯದಂತಾಗಿದೆ. ॥೨॥

ಅನೇಕ ಭುವನಗಳಿಂದ ತುಂಬಿ ತುಂಬಿತುಳುಕುತ್ತಿರುವ ಬ್ರಹ್ಮಾಂಡವನ್ನು ಅತ್ಯಲ್ಪಪ್ರಾಣಿ ; ಮನುಷ್ಯನ ಶ್ವಾಸಮಾತ್ರದಿಂದಲೇ ದೂರ ಹಾರಿಹೋಗತಕ್ಕದ್ದು

**ಶಿವಾರ್ಭಕೇಣ ತಸ್ಮಾದ್ಯ ಕಥಂ ಸೇನಾ ವಿನಿರ್ಜಿತಾ ? ।**

**ಕ ಉವಾಚ :—**

**ಇತ್ಯುಕ್ತ್ವಾ ಹಯಮಾರುಹ್ಯ ಧನುರ್ಬಾಣಾಸಿಚರ್ಮಭೃತ್ ॥೪॥**

**“ ಅಹತ್ವಾ ತಂ ಮಯೂರೇಶಂ ದರ್ಶಯಿಷ್ಯೇ ಮುಖಂ ನ ಚ ” ।**
**ಇತ್ಯುಕ್ತ್ವಾಭಿಯಯೌ ಸಿಂಧೂ ರಣಭೂಮೌ ಪತಂಗವತ್ ॥೫॥**

**ಸಜ್ಜಂ ಚಕಾರ ಚ ಧನುರ್ನಾದಯನ್ ಗಗನಂ ದಿಶಃ ।**
**ವ್ಯಸೃಜದ್ಬಾಣಜಾಲಾನಿ ತೀಕ್ಷ್ಣಾನ್ಯಗ್ನಿಮುಖಾನಿ ಸಃ ॥೬॥**

**ಚಕಂಪೇ ಪೃಥಿವೀ ಸರ್ವಾ ಮೂರ್ಚ್ಛಿತಾ ಜಂತವೋಽಖಿಲಾಃ ।**
**ಪ್ರಾಕ್ಷಿಪದ್ದೇವಸೇನಾಯಾಮಸಂಖ್ಯಾತಾಶ್ಚ ಪತ್ರಿಣಃ ॥೭॥**

ಇರುವೆ ತನ್ನ ಸಜಾತೀಯರೊಂದಿಗೆ ಮುತ್ತಿಗೆ ಹಾಕಿ ತಿಂದಂತಾಯಿತಲ್ಲ ? ಯಾವನ ದೃಷ್ಟಿಯಲ್ಲಿ ದೇವೇಂದ್ರಾದಿಗಳು ನೊರಜಿನಂತಿದ್ದರೋ, ॥೩॥

ಅಂಥವರ ಪೈಕಿ ಶಿವನ ಮಗ ; ಎಳೆಗೂಸು ಅಸಂಖ್ಯಾತ ಬಲಿಷ್ಠ ಸೇನೆಯನ್ನು ಸೋಲಿಸಿದನೆಂದರೆ ನಂಬಬಹುದಾದೀತೇ ಈ ಮಾತನ್ನು ? ಆದರೆ, ಹಾಗೇ ನಡೆದು ಹೋಗಿದೆ. ಇದೇಕೆ, ಹೀಗಾಗಿರಬಹುದು ?

ಬ್ರಹ್ಮಾ :—

ಹೀಗೆ ನುಡಿದು, ಒಡನೆಯೇ ಬೆಟ್ಟದಂತಹ ಕುದುರೆಯನ್ನೇರಿ, ಧನುರ್ಬಾಣಗಳನ್ನು ತನ್ನ ಕೈಯಿಗೆ ತೆಗೆದುಕೊಂಡನು. ॥೪॥

“ ಮಯೂರೇಶನೆಂಬ ಆ ಪೋರನನ್ನು ಕೊಲ್ಲುವವರೆಗೂ ನಾನು ಯಾರಿಗೂ ಮುಖವನ್ನು ಸಹ ತೋರಿಸುವುದಿಲ್ಲ ” ಎಂದು ಪಣತೊಟ್ಟು ಸಿಂಧುದೈತ್ಯನು ಮುನ್ನುಗ್ಗಿ ರಣಭೂಮಿಯಲ್ಲಿ ದೀಪದ ಹುಳುವಿನಂತೆ ಹಾರಾಡಿದನು. ॥೫॥

ರಣರಂಗಕ್ಕೆ ಬಂದೊಡನೆಯೇ ತನ್ನ ಧನುಸ್ಸನ್ನು ಸಜ್ಜು ಮಾಡಿ ಅದರ ಟಂಕಾರದಿಂದ ಅಂತರಿಕ್ಷ, ದಿಕ್ಕುಗಳು ಸಹ ಪ್ರತಿಧ್ವನಿಗೈಯ್ಯುವಂತೆ ಮಾಡಿದನು. ಅನಂತರ ಬತ್ತಳಿಕೆಯಲ್ಲಿದ್ದ ಅತಿ ತೀಕ್ಷ್ಣ ಹಾಗೂ ಉರಿವ ಬೆಂಕಿಯಂತಿದ್ದ ಬಾಣಗಳನ್ನು ಸೆಳೆದು ಮೇಲ್ಮೇಲೆ ಪ್ರಯೋಗಿಸುತ್ತ ಶತ್ರುಗಳ ಮೇಲೆ ಬಾಣಗಳ ಪಂಜರವನ್ನು ನಿರ್ಮಿಸಿದನು. ॥೬॥

ದೈತ್ಯನ ಆರ್ಭಟಕ್ಕೆ ಇಡೀ ಭೂಮಿಯು ಗಡಗಡ ನಡುಗಿತು. ಸಕಲ ಪ್ರಾಣಿ

ಛಿನ್ನಾಭಿನ್ನಾಃ ಸುರಾಃ ಪೇತುಸ್ತಚ್ಛಸ್ತ್ರಾಘಾತಪೀಡಿತಾಃ ।
ಪಾಲಯಂತಃ ಸುರಾಃ ಪೇತುಸ್ತೇಽಪಿ ಪೃಷ್ಠೇ ಶರೈರ್ಹತಾಃ ॥೮॥

ತತಃ ಸರ್ವಾ ಮಯೂರೇಶವಾಹಿನೀ ವ್ಯಗ್ರತಾಮಿಯಾತ್ ।
ದ್ವಿಧಾಭೂತಾ ಜಾನು-ಪಾದಾಃ ಕೇಷಾಂಚಿನ್ಮಸ್ತಕಾ ಅಪಿ ॥೯॥

ಶರವೃಷ್ಟ್ಯಾ ಸಿಂಧುಹಸ್ತಮುಕ್ತಯಾ ರಣಮೂರ್ಧನಿ ।
ಅಭವತ್ತುಮುಲಂ ಯುದ್ಧಮನಿವಾರ್ಯಂ ಭಯಾವಹಮ್ ॥೧೦॥

ಸಿಂಧೋಶ್ಚೈವ ಗಣೇಶಸ್ಯ ಸೇನಯೋರುಭಯೋರಪಿ ।
ಕೋಲಾಹಲೇ ಮಹಾಘೋರೇ ಧ್ವಾಂತೇ ಗಾಢೇ ರಜಃಕೃತೇ ॥೧೧॥

ಗಳೂ ಮೂರ್ಛೆಗೊಂಡವು. ರಾಕ್ಷಸನು ಎಣಿಸಲಾರದಷ್ಟು ಬಾಣಗಳನ್ನು ದೇವ ಸೇನೆಯ ಮೇಲೆ ವೇಗವಾಗಿ ಎಸೆದನು. ॥೭॥

ದೇವತೆಗಳು ಇದರ ಹೊಡೆತಕ್ಕೆ ಚಲ್ಲಾಪಿಲ್ಲಿಯಾಗಿ ನೆಲಕ್ಕುರುಳಿದರು. ಅವನ ಶಸ್ತ್ರಾಘಾತಕ್ಕೆ ಸಿಲುಕಿ ಅವರ ದೇಹಗಳು ಚೂರು–ಚೂರಾದವು. ರಣಭೂಮಿಯಲ್ಲಿ ನಿಲ್ಲಲಾರದೇ ಓಡಲಾರಂಭಿಸಿದ ಸುರರು ಹಿಂಬದಿಯಿಂದ ಬಿದ್ದ ಬಾಣಗಳಿಗೆ ಬಲಿಯಾಗಿ ಸತ್ತು ಬಿದ್ದರು. ॥೮॥

ಆಗ ಮಯೂರೇಶನ ಇಡೀ ಸೈನ್ಯವು ವ್ಯಗ್ರಗೊಂಡು ಹಾಹಾಕಾರವನ್ನು ಮಾಡಿತು. ಸುರ ವೀರರ ಪೈಕಿ ಕೆಲವರ ಜಾನು-ಪಾದಗಳು ಎರಡೆರಡು ತುಂಡುಗಳಾದವು. ಮತ್ತೆ ಕೆಲವರ ತಲೆಗಳು ಒಡೆದ ತೆಂಗಿನಕಾಯಿಯಂತೆ ಎರಡೆರಡು ಹೋಳುಗಳಾದವು. ॥೯॥

ಸಿಂಧುವಿನ ಹಸ್ತ ಮುಕ್ತಬಾಣ ವರ್ಷವು ರಣರಂಗದಲ್ಲಿ ಹೊಸಬಗೆಯ ತ್ವೇಷ-ಪೌರುಷಗಳನ್ನು ಹಬ್ಬಿಸಿತು. ಉಭಯ ಪಕ್ಷಗಳ ಸೈನಿಕರಿಗೂ ಯುದ್ಧಮಾಡದೆ ವಿಧಿಯೇ ಇಲ್ಲ ಎಂಬ ಪ್ರಸಂಗ ಒದಗಿದ್ದರಿಂದ ಪರಸ್ಪರರಲ್ಲಿ ತುಮುಲ ಯುದ್ಧವೇ ಆರಂಭವಾಯಿತು. ಎಂತಹ ಧೈರ್ಯಶಾಲಿಗೂ ಈ ಯುದ್ಧ ಭಯವನ್ನುಂಟುಮಾಡುತ್ತಲಿದ್ದಿತು. ॥೧೦॥

ಒಂದುಕಡೆ ಸಿಂಧುದೈತ್ಯನ ಸೈನ್ಯ, ಮತ್ತೊಂದೆಡೆ ಸುಮುಖನ ಸೈನ್ಯ. ಎರಡು ಸೇನೆಗಳೂ ಯುದ್ಧದಲ್ಲಿ ಹಿಂಜರಿಯತಕ್ಕವಲ್ಲ. ಪರಸ್ಪರ ಸಿಂಹನಾದ, ಶಸ್ತ್ರಾಸ್ತ್ರಗಳ ಪ್ರಯೋಗದಿಂದುಂಟಾದ ಶಬ್ದ, ಏಟುತಿಂದವರ ಆರ್ತಧ್ವನಿ ಇತ್ಯಾದಿಗಳಿಂದ ರಣವು ರಂಗಿಗೇರಿತು. ದೊಡ್ಡ ಕೋಲಾಹಲವೇ ಎದ್ದಿತು. ಸೇನೆಯ ಕಾಲ್ತುಳಿತದಿಂದ ಧೂಳು

**ಪುರೋಗಾನ್ ಜಘ್ನಿರೇ ಸರ್ವೇ ಪರಾನ್ ಸ್ವಾನಪಿ ತೇ ತದಾ ।**
**ಶಸ್ತ್ರಾಘಾತೈರ್ಹತಾ ಸೇನಾ ದೇವಸೇನಾಚರೈಃ ಪರಾ ॥೧೨॥**
**ತತಸ್ಸಿಂಧುರ್ಹಯಾತ್ತಸ್ಮಾದವರುಹ್ಯ ಪದೇಽಗ್ರಹೀತ್ ।**
**ಪಾತಯಾಮಾಸ ಸಹಸಾ ವೀರಭದ್ರಂ ಚ ವೇಗತಃ ॥೧೩॥**
**ಅಹನನ್ಮಸ್ತಕೇ ಸೋಽಥ ನಂದಿನಂ ಬಲವತ್ತರಮ್ ।**
**ಭೂತರಾಜಂ ಚ ಖಡ್ಗೇನ ಮಾರಯನ್ ಸಹಸಾ ಕಟೌ ॥೧೪॥**
**ಪುಷ್ಪದಂತಸ್ಯೋದರಂ ಚ ಬಿಭೇದ ಬಲವತ್ತರಮ್ ।**
**ಶಿಖಾಮಾಕ್ರಮ್ಯ ಪ್ರಾಕರ್ಷದ್ಧಿರಣ್ಯಗರ್ಭಮೋಜಸಾ ॥೧೫॥**

ಮೇಲೆದ್ದು ಅಂಧಕಾರವು ಗಾಢವಾಗಿ ಕವಿಯಿತು. ಯುದ್ಧದ ಘೋರಸ್ವರೂಪವನ್ನು ಏನೆಂದು ವರ್ಣಿಸಲಿ ? ॥೧೧॥

ಯಾರೇ ಎದುರಿಗೆ ಬರಲಿ, ಅವರು ಸ್ವೀಯರೋ, ಪರರೋ ಎಂಬ ವಿಚಾರವನ್ನು ಸಹ ಮಾಡುವಷ್ಟು ವ್ಯವಧಾನ-ಸಹನೆಗಳು ವೀರರಿಗೆ ಉಳಿಯಲಿಲ್ಲ. ಸಿಕ್ಕವರನ್ನು ಕತ್ತರಿಸಲಾರಂಭಿಸಿದರು. ಸುರಸೈನಿಕರು ನಿಶಿತಶಸ್ತ್ರಗಳಿಂದ ಬಲವಾಗಿ ಹೊಡೆಯುತ್ತ ಪರಸೇನೆಯನ್ನು ಸಾಕಷ್ಟು ಭಂಗಪಡಿಸಿದರು. ॥೧೨॥

ತನ್ನ ಸೈನಿಕರ ಈ ಪರಿಯ ನಾಶವನ್ನು ನೋಡಿ ಸಹಿಸಲಾರದೆ, ಸಿಂಧು ದೈತ್ಯನು ತಾನು ಏರಿ ಕುಳಿತಿದ್ದ ಕುದುರೆಯಿಂದ ಕೆಳಕ್ಕಿಳಿದು ಯುದ್ಧಮಗ್ನನಾಗಿದ್ದ ಸುರಸೇನಾನಿ, ವೀರಭದ್ರನ ಎರಡು ಕಾಲುಗಳನ್ನೂ ಒಮ್ಮೆಲೆ ರಭಸದಿಂದ ಹಿಡಿದೆಳೆದು ನೆಲಕ್ಕುರುಳಿಸಿದನು. ॥೧೩॥

ಅತ್ತ ತಿರುಗಿ, ಅಲ್ಲೇ ನಿಂತಿದ್ದ ನಂದಿಯ ನೆತ್ತಿಯ ಮೇಲೆ ಬಲವಾದ ಒಂದು ಗುದ್ದನ್ನು ಕೊಟ್ಟನು. ನಂದಿಯ ಪಕ್ಕದಲ್ಲೇ ಇದ್ದ ಭೂತರಾಜನ ಕಟಿಪ್ರದೇಶಕ್ಕೆ ತನ್ನ ಖಡ್ಗದಿಂದ ಸಾಯುವಂತೆ ಹೊಡೆದನು. ॥೧೪

ಪುಷ್ಪದಂತನ ಬಳಿಗೆ ಧಾವಿಸಿ ಬಂದು, ಗುಡಾಣದಂತಿದ್ದ ಅವನ ಹೊಟ್ಟೆಗೆ ಬಲವಾಗಿ ಒಮ್ಮೆ ಗುದ್ದಿ ಅದನ್ನು ಒಡೆದು ಹಾಕಿದನು. ಅವನ ಸಮೀಪದಲ್ಲೇ ಹಿರಣ್ಯಗರ್ಭನು ನಿಂದಿದ್ದನು. ಅವನ ತಲೆಗೂದಲನ್ನು ಹಿಡಿದು ತನ್ನ ಬಲವನ್ನೆಲ್ಲ ಬಿಟ್ಟು ದರದರ ಎಳೆದಾಡಿ ವಿಚಿತ್ರ ಹಿಂಸೆಯುಂಟಾಗುವಂತೆ ಮಾಡಿದನು. ॥೧೫॥

ಶ್ಯಾಮಲಸ್ಯ ಲಲಾಟಂ ಸ ಬಿಭೇದ ಶರಘಾತತಃ ।
ಚಪಲಸ್ಯ ಹನೂ ರೋಷಾಜ್ಜಘಾನ ವಿಕಟಂ ರಣೇ ॥೧೬॥

ಲಂಬಕರ್ಣಸ್ಯ ಕಂಠಂ ಸ ಬಿಭೇದ ಬಾಣಸಂಚಯೈಃ ।
ಧೃತ್ವಾಶು ಚರಣೌ ರಕ್ತಲೋಚನಂ ಚ ನ್ಯಪಾತಯತ್ ॥೧೭॥

ಹಸ್ತಾನ್ನಿಸ್ತೀರ್ಯ ಸಹಸಾ ಸುಮುಖಃ ಸ್ವಾಪಲಜ್ಜನಾತ್ ।
ಸೋಮಂ ಲತ್ತಾಪ್ರಹಾರೇಣ ರಣಭೂಮಾವಪಾತಯತ್ ॥೧೮॥

ಜಠರಂ ದಾರಯಾಮಾಸ ಭೃಂಗಿಣೋಽಸಿಪ್ರಹಾರತಃ ।
ದಾವಾನಲಸ್ಯ ಚ ಶಿರೋ ಭೇದಯಾಮಾಸ ಸಾಯಕೈಃ ॥೧೯॥

ಪಂಚಾನನಸ್ಯ ಪೃಷ್ಠೇ ಸೋಽವಧೀಚ್ಚ ಚಪಲೋ ಯುಧಿ ।
ಏವಂ ಸರ್ವೇ ಮಹಾವೀರಾ ನಿಹತಾ ರಣಮೂರ್ಧನಿ ॥೨೦॥

---

ಸ್ವಲ್ಪ ದೂರದಲ್ಲಿ ನಿಂತಿದ್ದ ಶ್ಯಾಮಲನ ಹಣೆಗೆ ಗುರಿ ಇಟ್ಟು ಕೆಲವು ನಿಶಿತ ಬಾಣಗಳನ್ನು ಪ್ರಯೋಗಿಸಿ, ಅದನ್ನು ಒಡೆದನು. ಅಷ್ಟರಲ್ಲಿ ರಾಕ್ಷಸರಾಜನಿಗೆ ಚಪಲನು ಗೋಚರನಾಗಲು ಅವನ ದವಡೆಗೆ ಒಂದೇಟನ್ನು ಬಲವಾಗಿ ಕೊಟ್ಟು, ವಿಕಟನೊಡನೆ ಹೋರಾಡಿ ಅವನನ್ನು ರಣರಂಗದಲ್ಲಿ ಕೆಡಹಿದನು. ॥೧೬॥

ಅನೇಕ ಬಗೆಯ ಬಾಣಗಳನ್ನು ಬಿಟ್ಟು ಲಂಬಕರ್ಣನ ಕಂಠಪ್ರದೇಶವನ್ನು ಭೇದಿಸಿದನು. ಮತ್ತೊಂದೆಡೆ ರಕ್ತಲೋಚನನು ಶತ್ರುಗಳನ್ನು ಸದೆಬಡಿಯುತ್ತ ನಿಂತಿದ್ದನು. ಸಿಂಧುರಾಜನು ಅವನ ಬಳಿಗೆ ಓಡಿಹೋಗಿ ಅವನ ಎರಡು ಕಾಲುಗಳನ್ನೂ ಹಿಡಿದೆಳೆದು ನೆಲಕ್ಕೆ ಕೆಡಹಿದನು. ॥೧೭॥

ರಾಕ್ಷಸನ ಭುಜಪಂಜರದಲ್ಲಿ ಸಿಕ್ಕುಬಿದ್ದಿದ್ದ ಸುಮುಖನು ಉಪಾಯದಿಂದ ತನ್ನ ಬಲವನ್ನೆಲ್ಲ ಉಪಯೋಗಿಸಿ ಜಾರಿಕೊಂಡು, ಒಡನೆಯೇ ಓಡಿಹೋದನು. ರಕ್ಕಸನು ಅವನನ್ನು ಅಷ್ಟಕ್ಕೇ ಬಿಟ್ಟು, ಸೋಮನಿದ್ದೆಡೆಗೆ ಬಂದು ಲತ್ತಾಪ್ರಹಾರದಿಂದ ಅವನನ್ನು ರಣಭೂಶಾಯಿಯನ್ನಾಗಿ ಮಾಡಿದನು. ॥೧೮॥

ಇತ್ತ ಧಾವಿಸಿ ಬಂದು, ತನ್ನ ಖಡ್ಗದಿಂದ ಒಮ್ಮೆ ಬಲವಾಗಿ ಪ್ರಯೋಗಿಸಿ ಭೃಂಗಿಯ ಜಠರವನ್ನು ಸೀಳಿಹಾಕಿದನು. ಅನಂತರ ದಾವಾನಲನ ಕಡೆಗೆ ತಿರುಗಿ ಗುರಿ ಇಟ್ಟು ಅನೇಕ ಬಾಣಗಳನ್ನು ಪ್ರಯೋಗಿಸಿ ಅವನ ತಲೆಯನ್ನು ಒಡೆದು ಹಾಕಿದನು ॥೧೯॥

ಪಂಚಾನನನು ಓಡಿಹೋಗುತ್ತಿರುವುದನ್ನು ನೋಡಿ, ಚಪಲನು ಅವನನ್ನು ಬೆನ್ನಟ್ಟಿಹೋಗಿ ಕೊಂದನು. ಈ ರೀತಿಯಾಗಿ ರಣರಂಗದಲ್ಲಿದ್ದ ಸುರಸೇನೆಯ ವೀರಾಗ್ರಣಿಗಳೆಲ್ಲ ಒಂದಿಲ್ಲ ಒಂದು ರೀತಿಯಲ್ಲಿ ಭಂಗವನ್ನು ಹೊಂದಿ ಮೃತರಾದರು. ॥೨೦॥

ದ್ರುತಂ ಪಲಾಯಿತಾಶ್ಚಾನ್ಯೇ ತತಃ ಸಿಂಧುಃ ಪುರೋ ಯಯೌ ।
ಜಗರ್ಜ ಘನವದ್ಘೋರಂ ನಾದಯನ್ ಭುವನತ್ರಯಮ್ ॥೨೧॥

ಸ ವಿವ್ಯಾಧ ಮಯೂರೇಶಂ ಶರಜಾಲೈರನೇಕಧಾ ।
ತಸ್ಯ ದೇಹಂ ಸಮಾಲೋಕ್ಯ ವಿಕರಾಲಂ ಭಯಾನಕಮ್ ॥೨೨॥

ವಿರೂಪಾಕ್ಷಾದಯಃ ಸರ್ವೇ ಪಲಾಯನಮಕುರ್ವತ ।
ಮುನಿಯುಕ್ತೋ ಗಣೇಶಶ್ಚ ಯುಯುಧೇ ಸಂಯುಗೇ ತದಾ ॥೨೩॥

ಸ ಚಕಂಪೇ ಕರಿಶಿಶುಃ ಸಿಂಹಸ್ಯೇವಾಸ್ಯ ದರ್ಶನಾತ್ ।
ತತೋಽಬ್ರವೀದ್ರೋಷವಶಾತ್ಸಿಂಧುಸ್ತಂ ತು ಗುಣೇಶ್ವರಮ್ ॥೨೪॥

---

ರಣರಂಗದಲ್ಲಿ ನಡೆಯುತ್ತಿದ್ದ ಈ ಮಾರಣಕ್ರಿಯೆಗೆ ಹೆದರಿ, ಇತರ ವೀರರೆಲ್ಲ ಯಾರ ಮುಖ ದಾಕ್ಷಿಣ್ಯಕ್ಕೂ ಒಳಗಾಗದೇ, ದಾರಿ ಸಿಕ್ಕಿದತ್ತ ಓಡಿ ನಡೆದರು. ರಣಕ್ಷೇತ್ರದಲ್ಲಿ ಪ್ರತಿಯೋಧರೇ ಇಲ್ಲದಿರುವುದನ್ನು ಕಂಡು ಸಿಂಧುದೈತ್ಯನು ಹೆಚ್ಚು ಉತ್ತೇಜಿತನಾದನು, ಮತ್ತು ಯಾವ ಆತಂಕವೂ ಇಲ್ಲದೆ ಮುನ್ನುಗ್ಗಿ ನಡೆದನು. ವಿಜಯೋನ್ಮತ್ತನಾದ ದೈತ್ಯನು ಮಹಾಮೇಘದಂತೆ ಗಂಭೀರವಾಗಿಯೂ, ಭಯಂಕರವಾಗಿಯೂ ಗರ್ಜಿಸಿದನು. ಇದರಿಂದ ಮೂರು ಲೋಕಗಳೂ ಪ್ರತಿಧ್ವನಿಗೈದವು. ॥೨೧॥

ಈ ವೇಳೆಗೆ ಸಿಂಧುದೈತ್ಯನು ಮಯೂರೇಶ್ವರನನ್ನು ಸಾಕ್ಷಾತ್ಸಂಧಿಸಿದನು. ಅವನನ್ನು ಕಂಡಕೂಡಲೆ ಬಹಳ ಉತ್ಸಾಹವನ್ನು ಹೊಂದಿ ಅನೇಕ ವಿಧ ಬಾಣಗಳನ್ನು ಪ್ರಯೋಗಿಸಿ, ದೇವನನ್ನು ಹಿಂಸಿಸಿದನು. ರಾಕ್ಷಸನ ಭಯಂಕರಾಕಾರದ ಅತ್ಯದ್ಭುತ ದೇಹವನ್ನು ನೋಡಿದೊಡನೆಯೇ ದೇವನ ಬಳಿ ಇದ್ದ ಮೂಲಬಲದವರಾದ ॥೨೨॥

ವಿರೂಪಾಕ್ಷಾದಿ ಪ್ರಮಥವೀರರು ಅಲ್ಲಿ ನಿಂದಿರಲಾರದೆ, ಓಡಿಯೇ ಹೋದರು. ಕೇವಲ ಮುನಿವರ್ಗದಿಂದೊಡಗೂಡಿದ್ದ ದೇವನು ರಾಕ್ಷಸನೊಂದಿಗೆ ನೇರವಾಗಿ ಯುದ್ಧಮಾಡತೊಡಗಿದನು. ॥೨೩॥

ರಾಕ್ಷಸನು ಎಷ್ಟೇ ಶೂರನಾಗಿದ್ದರೂ; ದೇವತೆಗಳನ್ನೆಲ್ಲ ಅಧೀನದಲ್ಲಿರಿಸಿಕೊಂಡಿದ್ದರೂ, ದೇವನನ್ನು ನೋಡಿದೊಡನೆಯೇ, ತೆರೆದ ಬಾಯಿಯ ಸಿಂಹವನ್ನು ನೋಡಿದ ಆನೆಯ ಮರಿಯಂತಾಯಿತು, ಅಸುರನ ಪರಿಸ್ಥಿತಿ. ಅವನಿಗೆ ತಿಳಿಯದಂತೆಯೇ ಅವನ ಎದೆ ನಡುಗಿತು. ಅಭಿಮಾನಿಯಾದ ಅವನು ತನಗುಂಟಾದ ಆಂತರಿಕ ಭಯವನ್ನು

**ಸಿಂಧುರುವಾಚ :—**

**ದೂರಾತ್ತ್ರೇಽಶ್ರಾವಿ ಬಹುಶಃ ಪುರುಷಾರ್ಥೈಃ ಶಿವಾರ್ಭಕ ! ।**
**ಪ್ರತ್ಯಕ್ಷಂ ದೃಶ್ಯಸೇ ರೇ ! ತ್ವಂ ಜಂಬೂಕ ಇವ ದುರ್ಬಲಃ ॥೨೫॥**

**ಕಥಂ ಮೇ ಸಹಸೇ ಮೂಢ ! ತಲಾಘಾತಂ ಶಿಲಾಭಿದಮ್ ॥**
**ತ್ವಯಾ ಮಾತುಃ ಸ್ತನಂ ಪೀತ್ವಾ ನರ್ತವ್ಯಂ ಹಿ ಗೃಹಾಂಗಣೇ ॥೨೬॥**

**ಶಕ್ರಾದಯೋ ಜಿತಾ ಯೇನ ತಸ್ಯ ತೇ ಗಣನಾತ್ರ ಕಾ ? ।**
**ನಿವಾರಯತಿ ಮಾಂ ಮೂಢ ! ಕೃಪಾ ತ್ವಾಂ ಹಂತುಮುತ್ಸುಕಮ್ ॥೨೭॥**

ಅಂತರಂಗದಲ್ಲೇ ಬಚ್ಚಿಟ್ಟುಕೊಂಡು ಬಾಹ್ಯದಲ್ಲಿ ಮಾತ್ರ ಧೈರ್ಯ-ರೋಷಗಳನ್ನು ತೋರುತ್ತ ಗಣೇಶನನ್ನು ಕುರಿತು ಹೀಗೆಂದು ನುಡಿದನು. ॥೨೪॥

ಸಿಂಧು :—

ಎಲವೋ, ಶಿವಾರ್ಭಕ! ನೀನು ಬಹಳ ಪೌರುಷಶಾಲಿ ಎಂಬ ಸುದ್ದಿಯನ್ನು ಬಹು ಜನರು ನಾನಾಬಗೆಯಾಗಿ ವರ್ಣಿಸಿ ಹೇಳಿದ್ದಾರೆ. ನಮಗಾದರೂ ನಿನ್ನ ಪರಿಚಯ ದೂರದಿಂದಲೇ ಆಗಿದ್ದಿತು. ಇಂದು ಎದುರಿಗೇ ಬಂದಿರುವೆ. ನೋಡಿದರೆ ದುರ್ಬಲ ಪ್ರಾಣಿ; ನರಿಯಂತೆ ಕಂಡುಬರುವೆಯಲ್ಲ ? ॥೨೫॥

ಇಂತಹ ಅಲ್ಪನಾದ ನೀನು, ಬಲಿಷ್ಠನಾದ ನನ್ನ ಹೊಡೆತಗಳನ್ನು ಹೇಗೆ ಸಹಿಸಿ ಕೊಳ್ಳಬಲ್ಲೆ? ಮೂಢ ! ಕೇಳು, ನನ್ನ ಏಟುಗಳೆಂದರೆ ಸಾಮಾನ್ಯವಾದುವಲ್ಲ. ಕಠಿಣವಾದ ಕಲ್ಲನ್ನು ಕೂಡಪುಡಿ ಪುಡಿ ಮಾಡುವಂಥವು. ಪಾಪ, ನೀನು ಎಳೆಯ ಕೂಸು. ಮಾತೆಯ ಮಡಲಿನಲ್ಲಿ ಮಲಗಿ ಸ್ತನ್ಯವನ್ನು ಕುಡಿಯುತ್ತ ಸುಖವಾಗಿ ನಿದ್ರೆ ಮಾಡಬೇಕಾದವನು. ನಿನಗೆ ಹೆಚ್ಚಿನ ಸಾಮರ್ಥ್ಯವೆಂದರೆ ತಾಯಿ-ತಂದೆಗಳ ಎದುರು, ಅದೂ ಮನೆಯ ಅಂಗಳದಲ್ಲೇ ಕುಣಿದಾಡುವುದು. ॥೨೬॥

ನಾನಾರು? ನನ್ನ ಪ್ರಭಾವವೆಂತಹದು? ಎಂಬುದನ್ನು ಬಲ್ಲೆಯ? ನನ್ನೊಡನೆ ಯುದ್ಧಮಾಡಲು ಬಂದು ಇಂದ್ರಾದಿ ದೇವತೆಗಳೆಲ್ಲ ಸೋತು ಹೋಗಿ, ನನ್ನ ಬಳಿ ಬಂದಿಗಳಾಗಿದ್ದಾರೆ. ಇಂತಹ ವೀರಾಧಿವೀರನಾದ ಈ ಸಿಂಧುರಾಜನಿಗೆ ತೃಣ ಪ್ರಾಯನಾದ ನಿನ್ನಂಥವನ ಗಣನೆ ಇದ್ದೀತೇ? ನಾನೇನೋ ಜಾತ್ಯಾ ರಾಕ್ಷಸನಾದರೂ, ನಿನ್ನನ್ನು ಈ ಕ್ಷಣದಲ್ಲೇ ಕೊಂದುಬಿಡುವ ಸಾಮರ್ಥ್ಯವನ್ನು ಸಂಪೂರ್ಣವಾಗಿ ಪಡೆದಿದ್ದರೂ ಮೂಢ ! ನಿನ್ನ ವಿಷಯದಲ್ಲಿ ಅದೇಕೋ ಕೃಪೆಯುಂಟಾಗಿ, ಅಂತಹ ಕಾರ್ಯದಿಂದ ನನ್ನನ್ನು ತಡೆಯುತ್ತಿದೆ. ॥೨೭॥

ಕಥಂ ತೇ ಕೋಮಲಾಂಗೇಷು ವಿದ್ಧ್ಯೇ ತೀಕ್ಷ್ಣತರಾನ್ ಶರಾನ್ ।

ದೇವ ಉವಾಚ :—

ಕಿಮರ್ಥಂ ವಲ್ಗಸೇ ಮೂಢಭಾವೇನಾಧಮಪಾಮರ ! ॥೨೮॥

ನಾವತಾರಂ ಗ್ರಹೀಷ್ಯೇಽಹಂ ಯದಿ ಜಾನೇಽಲ್ಪಕಂ ವಪುಃ ।
ತವೇದಾನೀಂ ಹನಿಷ್ಯಾಮಿ ಕ್ಷಣೇನ ದೇಹಮಲ್ಪಕಮ್ ॥೨೯॥

ಸೂರ್ಯದತ್ತಾದ್ವರಾದ್ದುಷ್ಟ ! ದುಷ್ಕರ್ಮನಿರತೋ ಭವಾನ್ ।
ಇದಾನೀಂ ಸ ಗತಃ ಕಾಲೋ ಮೃತ್ಯುಕಾಲ ಉಪಸ್ಥಿತೇ ॥೩೦॥

ವಲ್ಗನಾಕುಶಲಸ್ತ್ವಂ ಕಿಂ ? ಯುದ್ಧಮುದ್ಯ ಕರಿಷ್ಯಸಿ ? ।
ತ್ವಾಂ ಹಂತುಂ ಮೋಚಿತುಂ ದೇವಾನ್ ಧೃತಂ ರೂಪಮಿದಂ ಮಯಾ ॥೩೧॥

---

ಸುಮಕೋಮಲಗಳಾದ ನಿನ್ನ ಅಂಗಗಳಲ್ಲಿ ತೀಕ್ಷ್ಣತರಗಳಾದ ನಿಶಿತ ಶರಗಳನ್ನು ನಾನು ಹೇಗೆ ಬಿಡಲಿ ?

ದೇವ :—

ಅಧಮ ಪಾಮರ ! ಒರಟುತನದಿಂದ ಏಕೆ ಸುಮ್ಮನೆ ಬೊಗಳುತ್ತಿರುವೆ? ॥೨೮॥

ನಿನ್ನ ದೇಹ ಇಷ್ಟು ಅಲ್ಪವಾದುದು ಎಂಬುದು ನನಗೆ ಈ ಮೊದಲೇ ತಿಳಿದಿದ್ದರೆ, ನಾನು ಈಗ ಅವತರಿಸಬೇಕಾಗಿಯೇ ಇರಲಿಲ್ಲ. ಏನೋ ! ಆದುದಾಗಿ ಹೋಯಿತು. ನೋಡುತ್ತಿರು. ಒಂದೇ ಕ್ಷಣದಲ್ಲಿ ನಿನ್ನ ಈ ಅಲ್ಪ ದೇಹವನ್ನು ನಾಶಗೊಳಿಸಿಬಿಡುತ್ತೇನೆ. ॥೨೯॥

ದುಷ್ಟ ! ಸೂರ್ಯನಿತ್ತ ವರವನ್ನು ಸದ್ವಿನಿಯೋಗಮಾಡಿಕೊಳ್ಳುವುದಕ್ಕೆ ಬದಲಾಗಿ ದುಷ್ಕರ್ಮನಿರತನಾಗಿರುವೆಯ ? ನಿನಗೆ ಮೃತ್ಯು ಸನ್ನಿಹಿತವಾಗಿರುವುದರಿಂದ ನಿನ್ನ ವೈಭವದ ಕಾಲವೆಲ್ಲ ಮುಗಿದುಹೋಗಿದೆ. ॥೩೦

ನೀನು ಬೊಗಳುವುದರಲ್ಲೇ ನಿನ್ನ ಪ್ರಾವೀಣ್ಯವನ್ನು ತೋರಿಸುವೆಯೋ, ಅಥವಾ ಯುದ್ಧವನ್ನೇನಾದರೂ ಮಾಡುವೆಯೋ? ನಿನ್ನನ್ನು ನಿಗ್ರಹಿಸುವುದಕ್ಕಾಗಿಯು ಮತ್ತು ನಿನ್ನ ಬಂಧನದಲ್ಲಿ ಸಿಲುಕಿರುವ ದೇವತೆಗಳನ್ನು ಬಂಧವಿಮುಕ್ತರನ್ನಾಗಿ ಮಾಡುವುದಕ್ಕು ನಾನು ಈ ರೂಪವನ್ನು ತೆಗೆದುಕೊಂಡಿದ್ದೇನೆ. ॥೩೧॥

ಅಂತಕಾಲೇ ಸನ್ನಿಹಿತೇ ಪುರುಷಾರ್ಥೋ ವೃಥಾ ಭವೇತ್ ।
ಮಯಾ ಹತೇ ಮಹಾಸ್ಥಾನಂ ಮಮ ಪ್ರಾಪ್ಸ್ಯಸಿ ದುರ್ಲಭಮ್ ॥೩೨॥

ಸಿಂಧುರುವಾಚ :—

ಯಾವನ್ನ ಛೇದ್ಮಿ ತೇ ಮೂಢ ! ಕೋಮಲಂ ದೇಹಮುತ್ತಮಮ್ ।
ತಾವದ್ವಲ್ಗಸಿ ಯೋ ಯಸ್ಯ ಭಕ್ತಃ ಸ್ಯಾತ್ಸ ಮೃತೋ ವ್ರಜೇತ್ ॥೩೩॥

ತಸ್ಯ ಲೋಕಂ ವೃಥಾ ಹಿ ತ್ವಂ ನ ಪ್ರಶಂಸಾಂ ವದಾತ್ಮನಃ ।

ಕ ಉವಾಚ :—

ಏವಮುಕ್ತ್ವಾ ಮಹಾದೈತ್ಯಃ ಸಾಯಕಂ ಪರಭೇದಿನಮ್ ॥೩೪॥

ನ ಕದಾಚಿತ್ಪ್ರಕಟಿತಮತಿತೀಕ್ಷ್ಣಂ ಜಯಾವಹಮ್ ।
ಸ್ಮೃತ್ವಾ ಸೂರ್ಯಂ ಧನುರ್ಗೃಹ್ಯ ಸಜ್ಜಂ ಕೃತ್ವಾ ನ್ಯಯೋಜಯತ್

ಮನುಷ್ಯನಿಗೆ ಅಂತಕಾಲ ಸನ್ನಿಹಿತವಾಯಿತೆಂದರೆ, ಎಂತಹ ಪೌರುಷವಿದ್ದರೂ ಅದು ಉಪಯೋಗಕ್ಕೆ ಬರು (ಕಾರ್ಯಕಾರಿಯಾಗು) ವುದಿಲ್ಲ. ಎಲ್ಲ ಪ್ರಯತ್ನಗಳೂ ವಿಫಲವಾಗಿ ಹೋಗುವುವು. ನನ್ನಿಂದ ನೀನು ಹತನಾದರೆ, ನಿನಗೆ ಎಂದಿಗೂ ಕೆಡು ಕಾಗುವುದಿಲ್ಲ. ಅತಿ ದುರ್ಲಭವಾದ ನನ್ನ ಸಾನ್ನಿಧ್ಯವೇ ನಿನಗೆ ದೊರೆಯುತ್ತದೆ. ॥೩೨॥

ಸಿಂಧು :—

ಮೂಢ, ಬಾಲಕ ! ಎಲ್ಲಿಯವರೆಗೆ ನಿನ್ನ ಈ ಕೋಮಲಕಾಯವನ್ನು ಕತ್ತರಿಸಿ ಚೆಲ್ಲದಿರುವೆನೋ; ಅಲ್ಲಿಯವರೆಗೂ ಮನಸ್ಸಿಗೆ ಬಂದಂತೆ ಬೊಗಳಿಕೋ, ಯಾರು ಯಾವ ದೈವವನ್ನು ಭಕ್ತಿಯಿಂದ ಆರಾಧಿಸುವರೋ, ಅವರು ಸತ್ತನಂತರ ಆಯಾ ದೇವತೆಯ ಲೋಕವನ್ನು ಹೊಂದಿಯೇ ಹೊಂದುತ್ತಾರೆ, ಇದಾವ ಹೊಸ ವಿಷಯ ವೆಂದು ನನ್ನೆದುರು ಹೇಳಿ, ನಿನ್ನ ಮಹಿಮೆಯನ್ನು ಕೊಚ್ಚಿಕೊಳ್ಳುತ್ತಿರುವೆ ? ನಿನ್ನ ಮಾತೆಲ್ಲವೂ ವ್ಯರ್ಥವೇ ಸರಿ.

ಬ್ರಹ್ಮಾ : —

ಹೀಗೆ ಪ್ರತ್ಯುತ್ತರಿಸಿ, ಶತ್ರುಗಳನ್ನು ಸಹಸಾ ಭೇದಿಸಬಲ್ಲ ತೀಕ್ಷ್ಣ ಸಾಯಕವನ್ನು ಕೈಯಿಗೆ ತೆಗೆದುಕೊಂಡನು. ॥೩೩ ೩೮॥

ರಾಕ್ಷಸನು ಆಗ ತೆಗೆದುಕೊಂಡ ಬಾಣವನ್ನು ಹಿಂದೆಂದೂ ತೆಗೆದಿರಲಿಲ್ಲ. ಮತ್ತು ಅದು ತನ್ನ ಬಳಿ ಇರುವುದನ್ನು ಯಾರಿಗೂ ತಿಳಿಯಪಡಿಸಿಯೂ ಇರಲಿಲ್ಲ.

**ಟಣತ್ಕಾರೇಣ ಧನುಷೋ ನಾದಿತಂ ಭುವನತ್ರಯಮ್ ।**
**ಮುಮೋಚ ಬಾಣಂ ತಂ ದೇವೇ ಮಯೂರೇಶೇ ಬಲಾತ್ಖಲಃ ॥೩೬॥**

**ಸ ಜಜ್ವಾಲ ದಿಶಃ ಸರ್ವಾ ಗಗನಂ ವಿದಿಶೋಽಪಿ ಚ ।**
**ತಂ ದೃಷ್ಟ್ವಾ ಸ ಮಯೂರೇಶಸ್ತತ್ಯಾಜ ಪರಶುಂ ನಿಜಮ್ ॥೩೭॥**

**ವಜ್ರಾತ್ಸಾರತರಂ ಸರ್ವವೈರಿದರ್ಪಹರಂ ಪರಮ್ ।**
**ಅದಹತ್ಸೋಽಪಿ ತ್ರೀನ್ ಲೋಕಾನ್ ಪ್ರಲಯಾನಿಲಸನ್ನಿಭಃ ॥೩೮॥**

**ಪರಶುಃ ಖಂಡಯಾಮಾಸ ನಭಸ್ಯೇವ ಚ ತಂ ಶರಮ್ ।**
**ಧರಾಯಾಂ ಪಾತ್ಯ ಶತಧಾ ದೈತ್ಯಹಸ್ತಮಥಾಚ್ಛಿನತ್ ॥೩೯॥**

ಅದು ಅತ್ಯಂತ ತೀಕ್ಷ್ಣವಾದ ಬಾಣ. ಜಯವನ್ನು ತರತಕ್ಕುದೇ ಹೊರತು ಎಂದೆಂದಿಗೂ ಅದು ವಿಫಲವಾಗತಕ್ಕದ್ದಲ್ಲ? ಇದನ್ನು ಪ್ರಯೋಗಿಸುವಾಗ ರಾಕ್ಷಸನು ತನ್ನ ಆರಾಧ್ಯ ದೈವವಾದ ಸೂರ್ಯನನ್ನು ಭಕ್ತಿಯಿಂದ ಸ್ಮರಿಸಿದನು. ಧನುಸ್ಸನ್ನು ಸಜ್ಜುಗೊಳಿಸಿ, ಅದರಲ್ಲಿ ಆ ಬಾಣವನ್ನು ಹೂಡಿದನು. ॥೩೫॥

ಧನುಸ್ಸಿನ ಟಂಕಾರವು ಭುವನತ್ರಯದಲ್ಲೂ ಪ್ರತಿನಾದವನ್ನುಂಟುಮಾಡಿತು. ಬಲಿಷ್ಠನಾದ ಸಿಂಧು ಧನುವಿನ ಹುರಿಯನ್ನು ಕಿವಿಯವರೆಗೂ ಜಗ್ಗಿ, ದೇವರದೇವ; ಮಯೂರೇಶನ ಮೇಲೆ ಪ್ರಯೋಗಿಸಿದನು. ಅದನ್ನು ಪ್ರಯೋಗಿಸುವಾಗ ಸಿಂಧು ತನ್ನ ಬಲವನ್ನೆಲ್ಲ ಉಪಯೋಗಿಸಬೇಕಾಗಿ ಬಂದಿತು. ॥೩೬॥

ಆ ಬಾಣವನ್ನು ಸೂರ್ಯನು ಅನುಗ್ರಹಿಸಿಕೊಟ್ಟಿದ್ದನು. ಎಂದಮೇಲೆ ಅದರ ತೇಜಸ್ಸು ಔಷ್ಣ್ಯ ಇವು ಎಷ್ಟರಮಟ್ಟಿಗಿದ್ದವೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿರುವುದಿಲ್ಲ. ಬಾಣವು ಜ್ವಲಿಸುತ್ತಲೇ ಹೊರಟಿತು. ಅದರ ಝಳಕ್ಕೆ ದಿಗ್ವಿದಿಕ್ಕುಗಳೂ ಉರಿಯಲಾರಂಭಿಸಿದವು. ರಾಕ್ಷಸನ ಬಿಲ್ಲಿನಿಂದ ಹೊರಟು ತನ್ನೆಡೆಗೆ ಬರುತ್ತಿರುವ ಆ ಬಾಣವನ್ನು ನೋಡಿ ಮಯೂರೇಶನು ಅದಕ್ಕೆ ಪ್ರತಿಯಾಗಿ ತನ್ನ ಪರಶುವನ್ನು ಪ್ರಯೋಗಿಸಿದನು. ॥೩೭॥

ದೇವನ ಪರಶು ಅತ್ಯಮೋಘವಾದುದು. ವಜ್ರಾಯುಧಕ್ಕಿಂತಲೂ ಸಾರವತ್ತರವಾದುದು. ವೈರಿಗಳ ಸೊಕ್ಕನ್ನು ಮುರಿಯತಕ್ಕದ್ದು. ಅತ್ಯುತ್ಕೃಷ್ಟವಾದುದು. ದೇವನ ಪರಶು ಪ್ರಲಯಕಾಲದ ಅಗ್ನಿಯಂತೆ ಉರಿಯುತ್ತಾ ಹೋಗಿ, ಮೂರೂ ಲೋಕಗಳನ್ನು ದಹಿಸಿಬಿಟ್ಟಿತು. ॥೩೮॥

ಪರಶು-ಬಾಣಗಳು ಅಂತರಿಕ್ಷದಲ್ಲಿ ಒಂದನ್ನೊಂದು ಸಂಧಿಸಿದಾಗ ಪರಶು

**ಧನುರ್ಭಾರಸಹಂ ಘೋರಂ ನಭಸ್ಯೇವ ಗತಂ ಕರಾತ್ ।**
**ತತಃ ಕ್ರೋಧೇನ ದೈತ್ಯಃ ಸ ಚಕ್ರಂ ತತ್ಯಾಜ ಶತ್ರವೇ ॥೪೦॥**

**ಶತಹ್ರದೇವ ತಚ್ಛಬ್ದಂ ಚಕಾರ ಗರ್ಜಯನ್ ದಿಶಃ ।**
**ದೃಷ್ಟ್ವಾ ತತ್ರ ಮಯೂರೇಶಃ ಶೂಲಮುಗ್ರಂ ಮುಮೋಚ ಹ ॥೪೧॥**

**ದದಾಹ ಭುವನಂ ತಚ್ಚ ಪಪಾತ ದೈತ್ಯಮಸ್ತಕೇ ।**
**ಮುಕುಟಂ ಕುಂಡಲೇ ಕರ್ಣೌ ಖಂಡಯಿತ್ವಾ ಯಯೌ ಪುನಃ ॥೪೨॥**

**ಮಯೂರೇಶಕರಂ ಶೀಘ್ರಂ ಯಥಾ ನ ತ್ಯಾಜಿತಂ ತಥಾ ।**
**ತತಃ ಕ್ರೋಧಾದುವಾಚೈನಂ ಛಿನ್ನಕರ್ಣೋ ಮಹಾಸುರಃ**

ದೈತ್ಯನ ಬಾಣವನ್ನು ತುಂಡರಿಸಿ ನೂರಾರು ಚೂರುಗಳನ್ನಾಗಿಮಾಡಿ ನೆಲಕ್ಕೆ ಕೆಡಹಿತು. ಮತ್ತು ರಾಕ್ಷಸನ ಕೈಯ್ಯನ್ನೂ ಕತ್ತರಿಸಿ ಚಲ್ಲಿತು. ॥೩೯॥

ಘೋರವಾದ ಪರಶುವಿನ ಆಘಾತದಿಂದ ರಾಕ್ಷಸನ ಧನುರ್ಬಾಣಗಳು ಗಗನಕ್ಕೆ ಹಾರಿಹೋದವು. ಆಗ ದೈತ್ಯನಿಗೆ ಕೋಪ ಉಂಟಾಗಿ ತನ್ನ ಬಳಿ ಇದ್ದ ಚಕ್ರಾಯುಧವನ್ನು ಶತ್ರುವಾದ ಗಣಪತಿಯ ಮೇಲೆ ಪ್ರಯೋಗಿಸಿದನು. ॥೪೦॥

ಆಯುಧವನ್ನು ರಕ್ಕಸನು ಪ್ರಯೋಗಿಸಿದಾಗ ಉಂಟಾದ ಶಬ್ದ ಬರಸಿಡಿಲಿಗೆ ಸಮಾನವಾಗಿದ್ದುದರಿಂದ ದಿಕ್ತಟಗಳೆಲ್ಲ ವಿಕಾರವಾಗಿ ಕೂಗುವಂತೆ ಮಾಡಿತು. ಸಿಂಧು ತನ್ನ ಅಮೋಘಾಸ್ತ್ರ, ಕೈಗಳು ಹೋದಾಗ್ಯೂ ಎದೆಗುಂದದೇ ತನ್ನ ಮೇಲೆ ಚಕ್ರ ಪ್ರಯೋಗವನ್ನು ಮಾಡಿದ ಕೂಡಲೇ ದೇವನು ಅತ್ಯುಗ್ರವಾದ ಶೂಲ (a Spear) ವನ್ನು ಪ್ರತಿಯಾಗಿ ಪ್ರಯೋಗಿಸಿದನು. ॥೪೧॥

ಅದು ಭುವನವನ್ನೆಲ್ಲ ಸುಟ್ಟುಹಾಕಿ, ಕೊನೆಗೆ ಸಿಂಧುದೈತ್ಯನ ತಲೆಯ ಮೇಲೆ ಬಿದ್ದಿತು. ಮತ್ತು ಅಸುರನು ಧರಿಸಿದ್ದ ಕಿರೀಟ, ಕುಂಡಲಗಳು, ಅವನ ಕಿವಿ ಇವನ್ನೆಲ್ಲ ಖಂಡಿಸಿ ಹಿಂದಿರುಗಿತು. ॥೪೨॥

ಹೀಗೆ ಹಿಂದಿರುಗಿದ ಶೂಲ ನೆಟ್ಟಗೆ ಬಂದು ಮಯೂರೇಶನ ಕರದಲ್ಲಿ ಕುಳಿತಿತು. ಅದು ಮೂಡಿದ ಆ ಹಾವಳಿಯ ಕುರುಹು ಸಹ ಇತರರಿಗೆ ಗೋಚರವಾಗದಂತೆ ರಾಕ್ಷಸನ ಮೇಲೆ ಪ್ರಯೋಗಿಸುವುದಕ್ಕೆ ಮೊದಲು ಹೇಗಿದ್ದಿತೋ, ಹಿಂದಿರುಗಿದಾಗಲೂ ಹಾಗೆಯೇ ಇದ್ದಿತು. ॥೪೩॥

ಸಿಂಧುರುವಾಚ :—

ಪೌರುಷಂ ದರ್ಶಿತಂ ತೇಽದ್ಯ ದರ್ಶಯಿಷ್ಯೇ ತವಾಪಿ ಚ ।
ಇದಾನೀಂ ಶರಘಾತೇನ ಛಿನದ್ಮಿ ತವ ನಾಸಿಕಾಮ್ ॥೪೪॥

ಕ ಉವಾಚ :—

ಇತ್ಯುಕ್ತ್ವಾ ಖಡ್ಗಹಸ್ತೋಽಸೌ ತಂ ಜಗಾಮ ಗುಣೇಶ್ವರಮ್ ।
ಮಯೂರೇಶಸ್ತದಾ ಚಕ್ರೇ ನಾನಾರೂಪಾಣಿ ಸರ್ವತಃ ॥೪೫॥

ಆಯುಧಾನಿ ಚ ಚತ್ವಾರಿ ಬಿಭ್ರತ್ ಕರಚತುಷ್ಟಯೇ ।
ತತಸ್ಸ ವಿಸ್ಮಯಾವಿಷ್ಟೋ ದಶದಿಕ್ಷು ವ್ಯಲೋಕಯತ್ ॥೪೬॥

ದದರ್ಶ ತತ್ರ ತಂ ದೇವಂ ಚತುರಾಯುಧಭೂಷಿತಮ್ ।
ತತಸ್ಸ ಲಜ್ಜಿತೋ ಗೇಹಂ ನಿಜಂ ಗಂತುಂ ಮನೋದಧೇ ॥೪೭॥

ಆಗ ಹರಕು ಕಿವಿಯ ರಾಕ್ಷಸನು ಮತ್ತಷ್ಟು ಸಿಟ್ಟಿಗೆದ್ದು ಮಯೂರೇಶನನ್ನು ಕುರಿತು ಹೀಗೆಂದು ನುಡಿದನು. ॥೪೩॥

ಸಿಂಧು :—

ಏಯ್, ಕ್ಷುದ್ರ ಬಾಲಕ! ನೀನೇನೋ ಕಲಿತ ಪೌರುಷವನ್ನೆಲ್ಲ ತೋರಿಸಿದೆ. ಇಷ್ಟರಿಂದಲೇ ತೃಪ್ತನಾಗಬೇಡ. ನನ್ನ ಪೌರುಷವೆಷ್ಟಿದೆ ಎಂಬುದನ್ನು ನಾನೂ ತೋರಿಸುತ್ತೇನೆ, ನೋಡು. ಇದೋ, ಬಾಣವನ್ನು ಪ್ರಯೋಗಿಸಿ ನಿನ್ನ ಮೂಗನ್ನು ಕತ್ತರಿಸಿ ಚೆಲ್ಲುವೆನು. ॥೪೪॥

ಬ್ರಹ್ಮಾ:—

ಹೀಗೆ ಜರಿದು, ಖಡ್ಗವನ್ನು ವರೆಯಿಂದ ಹಿರಿದು ಗುಣೇಶ್ವರನ ಸಮೀಪಕ್ಕೆ ಹೋದನು. ಇದನ್ನರಿತು ದೇವನು ದೈತ್ಯನು ಸಮೀಪಕ್ಕೆ ಬರುವಷ್ಟರೊಳಗಾಗಿ ತನ್ನ ಮಾಯಾಜಾಲವನ್ನು ಬೀರಿ, ನಾನಾರೂಪಗಳನ್ನು ಧರಿಸಿ ನಿಂತನು. ರಾಕ್ಷಸನು ಎಲ್ಲೆಲ್ಲಿ ನೋಡಿದರೂ ದೇವನ ರೂಪಗಳೇ ಕಾಣತೊಡಗಿದವು. ॥೪೫॥

ಹೀಗೆ ಕಂಡುಬಂದ ಪ್ರತಿಯೊಂದು ದೇವನ ರೂಪವೂ ಕೈಗಳಲ್ಲಿ ನಾಲ್ಕು ಬಗೆಯ ಆಯುಧಗಳನ್ನು ಧರಿಸಿದ್ದಿತು. ಅಕಲ್ಪಿತವಾದ ಈ ದೃಶ್ಯವನ್ನು ನೋಡಿ ಸಿಂಧುದೈತ್ಯನು ಅತ್ಯಾಶ್ಚರ್ಯವನ್ನು ಹೊಂದಿ, ಹತ್ತು ದಿಕ್ಕುಗಳನ್ನೂ ಬಿರುಗಣ್ಣಿನಿಂದ ನೋಡಿದನು. ॥೪೬॥

ಎಲ್ಲೇ ನೋಡಲಿ, ಅಲ್ಲೆಲ್ಲ ನಾಲ್ಕು ಬಗೆಯ ಆಯುಧಗಳನ್ನು ಹಿಡಿದುಕೊಂಡು

ತಥಾಪಿ ಪುರತೋಽಪಶ್ಯನ್ಮಯೂರೇಶಂ ತಥಾವಿಧಮ್ ।
ಆಚ್ಛಾದ್ಯ ನೇತ್ರೇ ಸ ಯಯೌ ಹೃದ್ಯೇನಂ ಸಮಲೋಕಯತ್ ॥೪೮॥

ಉನ್ಮೀಲ್ಯ ನೇತ್ರೇ ಸೋಽಪಶ್ಯತ್ಪರ ಏನಂ ಶಿಖಂಡಿನಿ ।
ತತೋ ದೈತ್ಯೋ ಬುಬೋಧೈನಂ ಸ್ವಾಂತೇ ರವಿಪ್ರಸಾದತಃ ॥೪೯॥

ರಣಸ್ಥಲಾತ್ಪುರೀಂ ಯಾತ ಆಚ್ಛಾದ್ಯ ವದನಾಂಬುಜಮ್ ।
ಹತಶೇಷೈಶ್ಚ ವೀರೈಶ್ಚ ತಾದೃಶೈಃ ಪರಿವಾರಿತಃ ॥೫೦॥

ಪರ್ಯಂಕೇ ನ್ಯಪತಚ್ಚಿಂತಾಪರ್ಯಾಕುಲಿತಮಾನಸಃ ।
ವೀರಾಸ್ತೇ ಸ್ವ-ಗೃಹಂ ಯಾತಾಶ್ಚಿಂತಾವ್ಯಾಕುಲಚೇತಸಃ ॥೫೧॥

ನಿಂತಿದ್ದ ದೇವನ ರೂಪವು ಕಂಡುಬಂದಿತು. ಇದನ್ನರಿತ ಮೇಲೆ ಅವನಿಗೆ ಬಹಳ ನಾಚಿಕೆಯುಂಟಾಯಿತು. “ ಇನ್ನು ಇಲ್ಲಿದ್ದರೆ ನಗೆಗೀಡಾಗುವೆನು ” ಎಂದು ಭಾವಿಸಿ ತನ್ನ ಮನೆಗೆ ಹಿಂದಿರುಗೋಣ ಎಂದು ಮನಸ್ಸಿನಲ್ಲಿ ನಿಶ್ಚಯಿಸಿದನು. ॥೪೭॥

ಮನೆಗೆ ಹೊರಟರೂ ದೇವನ ರೂಪ ಕಾಣುವುದು ಮಾತ್ರ ಮರೆಯಾಗ ಲೊಲ್ಲದು. ಕಣ್ಣುಗಳನ್ನು ಭದ್ರವಾಗಿ ಮುಚ್ಚಿಕೊಂಡು ನಡೆಯಲಾರಂಭಿಸಿದನು. ಆದರೇನು ? ಹೊರಗೆ ಕಂಡುಬರುತ್ತಲಿದ್ದ ರೂಪವೇ ಅವನ ಹೃದಯದಲ್ಲೂ ಕಾಣ ತೊಡಗಿತು. ॥೪೮॥

ಕಣ್ಣುಗಳನ್ನು ತೆರೆದು ನೋಡಿದನು. ಯಥಾಪ್ರಕಾರ ಶಿಖಂಡಿಯ ಮೇಲೇರಿ ಕುಳಿತಿದ್ದ ಗಣಪತಿಯು ಕಂಡುಬಂದನು. ರವಿಯ ಅನುಗ್ರಹದಿಂದ ಆಗ ದೈತ್ಯನ ಮನಸ್ಸಿಗೆ “ ಇವನಾರು ” ಎಂಬ ವಿಷಯ ಸ್ಪಷ್ಟವಾಗಿ ಹೊಳೆಯಿತು. ॥೪೯॥

ಇದರಿಂದ ಸಂತೋಷವಾಗುವುದಕ್ಕೆ ಬದಲಾಗಿ, ಅಭಿಮಾನಿಯಾದ ಆ ರಾಕ್ಷಸ ನಿಗೆ ಬಹಳ ಅವಮಾನವಾಯಿತು. ರಣರಂಗವನ್ನು ಬಿಟ್ಟು. ನೆಟ್ಟಗೆ ತನ್ನ ಊರಿಗೆ ಹೊರಟುಹೋದನು. ಯಾರೊಬ್ಬರಿಗೂ ಮುಖವನ್ನು ತೋರಿಸಲಾರದೆ, ಕೈಗಳಿಂದ ತನ್ನ ಮೋರೆಯನ್ನು ಮುಚ್ಚಿಕೊಂಡು ಬಿಟ್ಟನು. ಸಿಂಧುವಿನಂತೆ ಒಂದೊಂದು ರೀತಿಯಲ್ಲಿ ಅವಯವಗಳನ್ನು ಕಳೆದುಕೊಂಡು ಅವಮಾನಿತರಾದ ಕಳೆದುಳಿದ ವೀರರು ಅಸುರನನ್ನು ಸುತ್ತುಗಟ್ಟಿದ್ದರು. ॥೫೦॥

ರಾಕ್ಷಸನು ಮನೆಗೆ ಬಂದಕೂಡಲೇ ಮಂಚದ ಮೇಲೆ ಬಿದ್ದುಬಿಟ್ಟನು. ಬಗೆ ಹರಿಯಲಾರದ ಚಿಂತೆಯು ಅವನನ್ನು ಆವರಿಸಿತು. ಮನಸ್ಸೇ ಅಲ್ಲೋಲಕಲ್ಲೋಲ

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ಸಿಂಧುವೈರೂಪ್ಯಕರಣಂ "**
**ನಾಮ ಪಂಚದಶಾಧಿಕ ಶತತಮೋಽಧ್ಯಾಯಸ್ಸಮಾಪ್ತಃ**

---

ವಾಯಿತು ಅವನ ಅನುಯಾಯಿಗಳೂ ಅದೇ ರೀತಿ ಚಿಂತಾಕ್ರಾಂತರಾಗಿದ್ದುದರಿಂದ ಯಾವ ಮಾತನ್ನೂ ಆಡದೆ, ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು- ॥೫೧॥

ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ " ಸಿಂಧುವೈರೂಪ್ಯಕರಣ "
ಎಂಬಲ್ಲಿಗೆ ನೂರ ಹದಿನೈದನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಷೋಡಶಾಧಿಕ ಶತತಮೋಽಧ್ಯಾಯಃ

ಕ ಉವಾಚ :—

ಜಯಂ ಪ್ರಾಪ್ತೇ ಮಯೂರೇಶೇ ಯಯುಸ್ತತ್ರ ಮುನೀಶ್ವರಾಃ ।
ಶಿವೋಽಪಿ ಗಿರಿಜಾಯುಕ್ತೋ ಯಯೌ ತಂ ಚ ನಿರೀಕ್ಷಿತುಮ್ ॥೧॥

ಔತ್ಸುಕ್ಯಾತ್ಪಾರ್ವತೀ ಚೈನಂ ಸಮಾಲಿಂಗ್ಯಾಬ್ರವೀತ್ತದಾ ।

ಪಾರ್ವತ್ಯುವಾಚ :—

ಅತಿಶ್ರಾಂತೋಽಸಿ ದೈತ್ಯಸ್ಯ ಕಠಿಣಸ್ಯ ರಣೇ ಸುತ ! ॥೨॥

ಕೋಮಲಾನಿ ತವಾಂಗಾನಿ ಕಥಂ ಶಸ್ತ್ರಾಣಿ ಸೇಹಿರೇ ।
ಕೃತಾಂತಸದೃಶೋ ದೈತ್ಯೋ ಮಾಯಾವೀ ಬಲವತ್ತರಃ ॥೩॥

---

ಶ್ರೀ ಮಂಗಲಮೂರ್ತಯೇ ನಮಃ

## ೧೧೬ ನೆಯ ಅಧ್ಯಾಯ

ಬ್ರಹ್ಮಾ :—

ವತ್ಸ, ವ್ಯಾಸ! ಮುಂದಿನ ಕಥೆಯನ್ನು ಕೇಳು. ಮಯೂರೇಶನು ಯುದ್ಧದಲ್ಲಿ ವಿಜಯಗಳಿಸಿದುದನ್ನು ಕೇಳಿ, ಮುನಿಗಳೆಲ್ಲ ದೇವನ ಬಳಿಗೆ ಬಂದರು. ಈ ಸಂಗತಿಯಿಂದ ಪರಶಿವನಿಗೂ ಉತ್ಸಾಹ ಉಂಟಾದುದರಿಂದ ಗಿರಿಜೆಯೊಡನೆ ಮಗನ ಪರಾಕ್ರಮ-ಸಾಹಸಗಳನ್ನು ನಿರೀಕ್ಷಿಸಲು ಬಂದನು. ॥೧॥

ಗಜಾನನನನ್ನು ನೋಡಿದೊಡನೆಯೇ ನಗನಂದಿನಿಯ ಹೃದಯದಲ್ಲಿ ಮಾತೃಪ್ರೇಮವು ಉಕ್ಕಿ ಬಂದಿತು. ಅವನನ್ನು ಬಿಗಿಯಾಗಿ ಅಪ್ಪಿಕೊಂಡು, ಈ ರೀತಿ ಬಣ್ಣಿಸಿದಳು.

ದೇವೀ :—

ವತ್ಸ ! ಅತ್ಯಂತ ಪರಾಕ್ರಮಿಯೂ, ಕಠಿಣ ಕರ್ಮಿಯೂ ಆದ ದುಷ್ಟ ದೈತ್ಯನೊಂದಿಗೆ ಹೋರಾಡಿ ಬಹಳ ಶ್ರಮಗೊಂಡಿರುವೆ. ॥೨॥

ನಿನ್ನ ಅಂಗಾಂಗಗಳು ಸುಕುಕೋಮಲವಾದುವು. ಅಸುರನು ಪ್ರಯೋಗಿಸಿದ ಬಾಣಗಳ ಹೊಡೆತವನ್ನು ಅವು ಹೇಗೆ ಸಹಿಸಿಕೊಂಡವೋ ಕಾಣೆ. ದೈತ್ಯನೇನು

**ಸ ಕಥಂ ಕೋಮಲಾಂಗೇನ ತ್ವಯಾ ಯುಧಿ ವಿನಿರ್ಜಿತಃ ।**
**ಕ ಉವಾಚ :—**
**ಪ್ರಾರುದತ್ಕರುಣಂ ದೇವೀ ಧೃತ್ವಾಂಕೇ ನಿಜ-ಬಾಲಕಮ್ ॥೪॥**
**ತತೋ ಮುನಿಗಣೈಃ ಶಂಭುಃ ವಾರಯಾಮಾಸ ತಾಂ ಶಿವಾಮ್ ।**
**ಶಿವ ಉವಾಚ :—**
**ನ ಜಾನೀಷೇ ಮಯೂರೇಶಂ ಸರ್ವಕಾರಣಕಾರಣಮ್ ॥೫॥**
**ಅನಾದಿನಿಧನಂ ದೇವಂ ವೇದಾಂತಾಗೋಚರಂ ವಿಭುಮ್ ।**
**ತ್ರಯಸ್ತ್ರಿಂಶತ್ಕೋಟಿದೇವೈರ್ನುತಂ ದೇವಾರಿದಾರಣಮ್ ॥೬।**

ಸಾಮಾನ್ಯನಾದವನೇ ? ಯಮುನಿಗೆ ಸದೃಶನಾದವನು. ಮಹಾಮಾಯಾವಿ. ಯಾರಿಂದಲೂ ಜಯಿಸಲಾಗದಂಥವನು. ॥೩॥

ಅಂಥವನು ಯುದ್ಧದಲ್ಲಿ ನಿನ್ನ ಈ ಕೋಮಲಾಂಗಗಳಿಂದ ನೀನು ಪ್ರಯೋಗಿಸಿದ ಬಾಣಗಳ ಪೆಟ್ಟನ್ನು ಸಹಿಸಲಾರದೆ ಹೇಗೆ ಸೋತು ಹೋಗಿದ್ದಾನು ?

ಬ್ರಹ್ಮಾ :—

ಇಷ್ಟು ಹೇಳುವ ವೇಳೆಗೆ ಯುದ್ಧದ ಭಯಂಕರ ದೃಶ್ಯವು ಮತ್ತೊಮ್ಮೆ ದೇವಿಯ ಮನಸ್ಸಿನಲ್ಲಿ ಮೂಡಿದುದರಿಂದ ಅವಳಿಗೆ ಅಳು ಬಂದಿತು. ಮಗನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಹೃದಯವು ಕರಗಿಹೋಗುವಂತೆ ಘಟ್ಟಿಯಾಗಿ ಅತ್ತುಬಿಟ್ಟಳು. ॥೪॥

ದೇವಿಯ ಅಳುವನ್ನು ಕೇಳಿ ಮುನಿಗಳೂ, ಪರಶಿವನೂ ಬಹು ಬಗೆಯಿಂದ ಧೈರ್ಯದ ಮಾತುಗಳನ್ನು ಹೇಳುತ್ತ, ಪರಶಿವೆಯನ್ನು ಸಮಾಧಾನಪಡಿಸತೊಡಗಿದರು.

ಶಿವ :—

ಹುಚ್ಚಿ ! ಈ ಮಯೂರೇಶನನ್ನು ಸಾಮಾನ್ಯ ಬಾಲಕನೆಂದು ಭಾವಿಸಿದೆಯ ? ಯಾವುದೋ ನಿಮಿತ್ತದಿಂದ ನಿನಗೆ ಪುತ್ರನಾಗಿ ಜನಿಸಿದ ಮಾತ್ರಕ್ಕೆ ಇವನನ್ನು ಪ್ರಾಕೃತ ಶಿಶು ಎಂದು ಗಣಿಸುವೆಯಲ್ಲ? ಇವನು ಸಕಲ ಕಾರಣ ವಸ್ತುಗಳಿಗೂ ಮೂಲಕಾರಣನಾದವನು. ॥೫॥

ಇವನಿಗೆ ಆದ್ಯಂತಗಳಿರುವುದಿಲ್ಲ. ಸಾಕ್ಷಾಚ್ಚಿನ್ಮಯಮೂರ್ತಿ. ಇವನು ಉಪನಿಷತ್ತುಗಳಿಗೆ ಸಹ ಗೋಚರನಾಗತಕ್ಕವನಲ್ಲವಾದುದರಿಂದ " ಈತನ ಸ್ವರೂಪವು ಹೇಳಿ|ತಿಳಿಸಲು ಸಾಧ್ಯವಿಲ್ಲ" ವೆಂದು ಸಾರುತ್ತಿವೆ. ಅಣು-ರೇಣು-ತೃಣ-ಕಾಷ್ಠಗಳಲ್ಲೂ ಹಾಸು-ಹೊಕ್ಕಾಗಿರುವನು. ಮೂವತ್ತು ಮೂರು ಕೋಟಿ ದೇವತೆಗಳೂ ಇವನನ್ನು ಸ್ತುತಿಸುವರು. ದೇವವೈರಿಗಳಾದ ಅಸುರರನ್ನೆಲ್ಲ ನಿಗ್ರಹಿಸತಕ್ಕವನು. ॥೬॥

ಸೃಷ್ಟಿ-ಸ್ಥಿತಿಜ್ಞಾನಹೇತುಂ ಲಯಹೇತುಮನಾಮಯಮ್ ।
ಭೂ-ಭಾರೋತ್ತಾರಣಾರ್ಥಾಯ ನಾನಾರೂಪಧರಂ ಪರಮ್ ॥೭॥
ಬ್ರಹ್ಮಾಂಡವ್ಯಾಪ್ತರೋಮಾಂಕಮೇಕಾನೇಕಸ್ವರೂಪಿಣಮ್ ।
ತಪೋಬಲಸಮಾಯುಕ್ತಂ ಯೋಗಶಾಸ್ತ್ರಸಮನ್ವಿತಮ್ ॥೮॥
ಮಾಯಾವಿಭೇದಿನಂ ದೇವಂ ಮಾಯಿನಾಮಪಿ ಮಾಯಿನಮ್ ।
ಬಾಲಭಾವೇಽಪಿ ದೈತ್ಯಾನಾಂ ಹಂತಾರಂ ಕಿಂ ನ ವೇತ್ಸಿ ತಮ್ ? ॥೯॥

ಕ ಉವಾಚ :—

ಏವಂ ಸ್ತುತಿಂ ಸಮಾಕರ್ಣ್ಯ ಹೃಷ್ಟಾ ಸಾ ಪಾರ್ವತೀ ತದಾ ।
ತತೋ ಹೃಷ್ಟೋ ಮಯೂರೇಶೋ ಮುನೀನ್ ಪ್ರಾಹ ಶಿವಂ ಶಿವಾಮ್ ॥೧೦॥

---

ಸೃಷ್ಟಿ, ಸ್ಥಿತಿ :ಹಾಗೂ ಇವೆರಡರ ತಿಳಿವು, ಇವಕ್ಕು ಸಹ ಇವನು ಹೇತುವಾಗಿದ್ದಾನೆ. ಇವನೇ ಲಯವನ್ನು ಮಾಡತಕ್ಕವನು. ಇಷ್ಟನ್ನೆಲ್ಲ ಮಾಡುತ್ತಿದ್ದರೂ ಇವಾವಕ್ಕೂ ತಾನು ಸಿಕ್ಕದೆ, ನಿರ್ಲಿಪ್ತನಾಗಿದ್ದಾನೆ. ದುಷ್ಟ ದಾನವರು ಹೆಚ್ಚಿ, ಭೂಮಿಗೆ ಸಹಿಸಲಾಗದಷ್ಟು ಭಾರ ಉಂಟಾಗಿದೆ. ಇದನ್ನು ಇಳಿಸುವುದಕ್ಕಾಗಿ ಆಗಾಗ್ಗೆ ಬಗೆ ಬಗೆಯ ರೂಪಗಳನ್ನು ಧರಿಸುವನು. ಇವನಿಗಿಂತಲೂ ಉತ್ತಮನಾದವನು ಬೇರಾರೂ ಇರುವುದಿಲ್ಲ. ॥೭॥

ಇವನ ದೇಹದ ರೋಮಗಳಲ್ಲೆಲ್ಲ ಬ್ರಹ್ಮಾಂಡಗಳು ಅಂಟಿಕೊಂಡಿವೆ. "ಏಕಮೇವಾದ್ವಿತೀಯಂ" ಎಂದು ಶ್ರುತಿಶಿರವು ಇವನನ್ನು ಬಣ್ಣಿಸುತ್ತಲಿದ್ದರೂ, ಭಕ್ತರ ಉಪಾಸನೆಗೋಸ್ಕರ ಅನೇಕ ರೂಪನಾಗಿ ತೋರುವನು. ಅಗಾಧವಾದ ತಪೋಬಲದಿಂದ ಕೂಡಿದವನು. ಯೋಗಶಾಸ್ತ್ರದ ಸಿದ್ಧಿಗಳೆಲ್ಲವೂ ಇವನಿಗೆ ಅಡಿಯಾಳಾಗಿವೆ. ॥೮॥

ಎಂತಹ ಪ್ರಬಲ ಮಾಯೆಯನ್ನಾದರೂ ಭೇದಿಸಿಬಿಡಬಲ್ಲವನು. ಮಾಯಾವಿಗಳನ್ನೂ ಮುಗ್ಧಗೊಳಿಸುವಂತಹ ಮೂಲಮಾಯಾವಿ : ಇವನು ಇನ್ನೂ ಕೂಸಾಗಿರುವಾಗಲೇ, ಎಂತೆಂತಹ ದೈತ್ಯರನ್ನೆಲ್ಲ ನಿಗ್ರಹಿಸಿದ್ದಾನೆ ? ಇದರಿಂದಲೂ ನಿನಗೆ ಇವನು ಮಹಾಮಹಿಮನೆಂಬುದು ಗೊತ್ತಾಗಲಿಲ್ಲವೆ, ಗಿರಿಜೆ ! ॥೯॥

ಬ್ರಹ್ಮಾ :-

ದೇವನು ತನ್ನ ಮುದ್ದು ಮಗನನ್ನು ಈ ಪರಿಯಿಂದ ಸ್ತುತಿಸಿದುದನ್ನು ಕೇಳಿ, ಪಾರ್ವತೀದೇವಿಗೆ ಬಹಳ ಹರ್ಷವಾಯಿತು. ಗಣಪತಿಯೂ ಹೃಷ್ಟನಾಗಿ ಮುನಿಗಳು, ಪರಶಿವ, ಪಾರ್ವತೀದೇವಿ ಇವರನ್ನು ಕುರಿತು ಹೀಗೆಂದು ನುಡಿದನು. ॥೧೦॥

ಮಯೂರೇಶ ಉವಾಚ :—
ನ ಭಯಂ ವಜ್ರಹಸ್ತಾನ್ಮೇ ಅನ್ಯಸ್ಮಾತ್ತತ್ಕಥಂ ಭವೇತ್ ? ||
ಸರ್ವೇಷಾಂ ನಮನಾನ್ಮಾತರ್ಮುನೀನಾಮಾಶಿಷೋಽಪಿ ಚ ||೧೧||
ಶಿವಸ್ಯ ವರದಾನೇನ ಸಿಂಧುರ್ದೈತ್ಯೋ ಜಿತೋ ಮಯಾ |
ಸ್ಕಂದಾದಯೋ ಜಿತಾ ಯೇನ ಯುದ್ಧ್ಯಂತೇ ನ ಹಿ ತೇನ ತೇ ||೧೨||
ಅಸಂಖ್ಯಾತಾ ಹತಾ ದೇವಾ ದೈತ್ಯಸೇನಾಚರೈರ್ನರೈಃ |
ಅಸೃಙ್ನದ್ಯಃ ಸಂಪ್ರವೃತ್ತಾ ಧೀರಹರ್ಷಕರಾ ಬಹು ||೧೩||
ರಣೇ ನಿಪತಿತಾನ್ ದೇವಾನ್ ವಿಚಿನ್ವಾನೋ ಮುನೀಶ್ವರಾಃ |
ಕ ಉವಾಚ :—
ಏವಂ ಮಯೂರೇಶವಚೋ ನಿಶಮ್ಯ ಪ್ರಾಹ ಧರ್ಮವಿತ್ ||೧೪||

---

ಮಯೂರೇಶ :—

ಸಾಕ್ಷಾದ್ವಜ್ರಹಸ್ತನಾದ ದೇವೇಂದ್ರನನ್ನು ಕಂಡರೂ ನನಗೆ ಭಯವಿಲ್ಲವೆಂದ ಬಳಿಕ ಇತರರಿಂದ ಭಯವೆಂಬುದು ನನಗೆ ಹೇಗೆ ಉಂಟಾದೀತು ? ತಾಯೆ ! ನಾನು ಎಲ್ಲರಿಗೂ ವಂದಿಸುತ್ತೇನೆ. ಮುನಿಗಳೆಲ್ಲ ನನ್ನನ್ನು ಆಶೀರ್ವದಿಸುವರು. ನಿನ್ನ ವಾತ್ಸಲ್ಯ ನನ್ನ ಮೇಲೆ ಪರಿಪೂರ್ಣವಾಗಿದೆ. ||೧೧||

ಪೂಜ್ಯ ತಂದೆ; ಶಿವನು ನನಗೆ ಅಮೋಘ ವರಗಳನ್ನಿತ್ತಿದ್ದಾನೆ. ಏವಮಾದಿ ಸಹಾಯಸಂಪತ್ತಿಯಿಂದಲೇ ನಾನು ಸಿಂಧುದೈತ್ಯನನ್ನು ಜಯಿಸಿದ್ದೇನೆ. ಯುದ್ಧ ನಡೆದಾಗ ಮಹಾಪರಾಕ್ರಮಿಗಳಾದ ಷಣ್ಮುಖಾದಿಗಳು ಸಹ ಆ ಅಸುರನಿಂದ ಜಿತರಾಗಿ ಹೋದರು. ||೧೨||

ಅಸುರಸೇನೆಯನ್ನು ಹೊಕ್ಕು ವೀರರನ್ನೆಲ್ಲ ತುಂಡರಿಸುತ್ತಲಿದ್ದ ದೇವತೆಗಳೆಷ್ಟೋ ಜನರನ್ನು ಆ ರಕ್ಕಸಯೋಧರು ಕೊಂದುಹಾಕಿದರು. ಮೃತರಾದವರ ದೇಹಗಳಿಂದ ಧಾರಾಕಾರವಾಗಿ ಹರಿದು ಬಂದ ರಕ್ತವು ಅನೇಕ ನದಿಗಳ ರೂಪವನ್ನು ತಾಳಿತು. ವೀರರಿಗಂತೂ ಇದನ್ನು ಕಂಡು ಬಹಳ ಹರ್ಷವೆನಿಸಿತು. ||೧೩||

ರಣಶಿರದಲ್ಲಿ ಅಸಂಖ್ಯಾತರಾದ ದೇವತೆಗಳು ಮೃತರಾಗಿ ಬಿದ್ದಿದ್ದಾರೆ. ಅವರ ಗತಿ ಏನು ? ಎಂಬುದೇ ನನ್ನ ಮನಸ್ಸಿನಲ್ಲಿ ಸರ್ವದಾ ಕಟಿಯುತ್ತಲಿದೆ. ಮುಂದೆ ಏನನ್ನು ಮಾಡಬೇಕೆಂಬುದೇ ನನಗೆ ಗೊತ್ತಾಗಲೊಲ್ಲದು.

ಬ್ರಹ್ಮಾ ;—

ಮಯೂರೇಶ್ವರನಾಡಿದ ಕಳಕಳಿಯ ಮಾತುಗಳನ್ನು ಕೇಳಿ, ಧರ್ಮವನ್ನರಿತ ||೧೪||

ವಸಿಷ್ಠೋ ಮುನಿವರ್ಯಸ್ತಂ
ವಸಿಷ್ಠ ಉವಾಚ :—
ಯಾಮಃ ಸರ್ವೇ ವಯಂ ತು ವೈ
ಕ ಉವಾಚ :—
ತತೋ ಯಯೌ ರಣೇ ದ್ರಷ್ಟುಂ ಮುನಿಭಿಸ್ತೈರ್ಮಯೂರರಾಟ್ ॥೧೫॥
ಮಜ್ಜಾರಕ್ತವಸಾಗಂಧೋಽಘ್ರಾತುಂ ಯತ್ರ ನ ಶಕ್ಯತೇ ।
ಅತಿಭೀಷಣಕಾಯಾಂಸ್ತಾನ್ ಛಿನ್ನಭಿನ್ನಾನನೇಕಶಃ ॥೧೬॥
ದೃಷ್ಟ್ವಾ ಭೀಭತ್ಸರೂಪಾಂಸ್ತಾನ್ ಪ್ರಫುಲ್ಲಾನ್ ಕಿಂಶುಕಾನಿವ ।
ವಿಕೃತಿಂ ಪರಿಯಾತಾನಿ ಮನಾಂಸಿ ದಾನವದ್ವಿಷಾಮ್ ॥೧೭॥

ವಸಿಷ್ಠಮುನಿಯು ದೇವನನ್ನು ಕುರಿತು

ವಸಿಷ್ಠ :—

ದೇವ! ನಡೆ, ಹೋಗೋಣ. ನಾವೂ ನಿನ್ನ ಸಂಗಡಲೇ ಬರುತ್ತೇವೆ.

ಬ್ರಹ್ಮಾ:—

ಎಂದನು. ಅನಂತರ ಮಯೂರೇಶ್ವರನು ಎಲ್ಲರನ್ನೂ ತನ್ನ ಸಂಗಡ ಕರೆದುಕೊಂಡು ರಣರಂಗದಲ್ಲಿ ಉರುಳಿಬಿದ್ದವರ ಪರಿಸ್ಥಿತಿ ಏನಾಗಿದೆಯೋ, ಎಂಬುದನ್ನು ತಿಳಿಯಲು ಹೊರಟನು. ॥೧೫॥

ಯುದ್ಧರಂಗವೆಂದರೆ ಅದು ಸಾಮಾನ್ಯವಾದ ಭೂಮಿಯಂತಿರಲಾರದಷ್ಟೆ? ಅಪರಿಚಿತರೂ, ಅನನುಭವಿಗಳೂ ಅಲ್ಲಿಗೆ ಹೋಗುವುದಾದರೆ, ಅಲ್ಲೆಲ್ಲ ಹರಡಿದ ಮಜ್ಜಾ (ಕೊಬ್ಬು) ರಕ್ತ, ವಸಾ (ಕೀವು) ಮುಂತಾದ ಕಶ್ಮಲ ವಸ್ತುಗಳ ದುರ್ಗಂಧವನ್ನು ಸಹಿಸಿಕೊಳ್ಳುವುದು ಅವರಿಗೆ ಅಸ್ಯಸಾಧ್ಯವೆನಿಸುವುದು. ಮತ್ತು ಅಲ್ಲಿ ಮಡಿದುಬಿದ್ದ ಅಸುರರ ಭೀಷಣ ಕಾಯಗಳು ಛಿನ್ನಭಿನ್ನವಾದುವಾದ್ದರಿಂದ ಮತ್ತಷ್ಟು ವಿಕಾರಗೊಂಡು ನೋಡುವವರ ಗುಂಡಿಗೆಯನ್ನು ನಡುಗಿಸಿಬಿಡುವುದು. ಎಲ್ಲಿ ನೋಡಿದರೂ ಇಂತಹ ಅಥವಾ ಇದಕ್ಕೂ ಹೆಚ್ಚು ವಿಕಾರಗೊಂಡ ಮುರಿದ ದೇಹಗಳೇ ಕಂಡುಬಂದವು. ॥೧೬॥

ಈ ದೃಶ್ಯವನ್ನು ನೋಡಿದರೆ, ಅರಳಿದ ಕೆಂಪು ಹೂತುಂಬಿದ ಗಿಡಗಳ ಸಮುದಾಯದಂತೆ ತೋರುತ್ತಲಿದ್ದಿತು. ಮಯೂರೇಶ್ವರನ ಸಂಗಡ ಬಂದಿದ್ದ ಮುನಿಗಳು ಇತರ ದೇವತೆಗಳ ಮನಸ್ಸು ಸಂಪೂರ್ಣವಾಗಿ ಕಲಕಿಹೋಯಿತು. ರಾಕ್ಷಸರ ಮೃತದೇಹಗಳ ಭೀಭತ್ಸರೂಪವನ್ನು ನೋಡಿದರೆ, ಯಾರ ಮನಸ್ಸು ತಾನೆ ನೆಮ್ಮದಿಯಿಂದಿದ್ದೀತು? ॥೧೭

ಪಶ್ಯತಾಂ ವೀರರಾಶೀಂಸ್ತಾನ್ ವೀರೋಪರಿ ಪ್ರತಿಷ್ಠಿತಾನ್ ।
ಕಾಂಶ್ಚಿಚ್ಚ ಜೀವತಃ ಕಾಂಶ್ಚಿನ್ಮೂರ್ಛಿತಾನ್ ಶಸ್ತ್ರಘಾತತಃ ॥೧೮॥

ಕಾಂಶ್ಚಿಚ್ಚ ಪ್ರವಿಶೀರ್ಣಾಂಗಾನ್ ದೇವಾನ್ ದೇವಾ ವ್ಯಕರ್ಷಯನ್ । ;
ಸಹಸಾ ನ ವಿದುರ್ದೇವಾ ದೇವಾನ್ವಾ ದಾನವಾನಪಿ ॥೧೯॥

ಅಬ್ರುವಂಸ್ತತ್ರ ಕೇಚಿಚ್ಚ " ತ್ವದರ್ಥಂ ಮೃತ್ಯುಮಾಗತಾಃ ।
ಅಂತೇ ತೇ ದರ್ಶನಂ ಪ್ರಾಪ್ತಮಿ"ತ್ಯುಕ್ತ್ವಾ ವ್ಯಸೃಜನ್ನಸೂನ್ ॥೨೦॥

ಏವಂ ಶ್ರುತ್ವಾ ತು ತದ್ವಾಕ್ಯಂ ಸಾಶ್ರುಕಂಠೋ ಮಯೂರರಾಟ್ ।
ಭ್ರಮನ್ ಭ್ರಮನ್ ದದರ್ಶಾಗ್ರೇ ಮೂರ್ಛಿತಂ ತು ಷಡಾನನಮ್ ॥೨೧॥

ಮಡಿದುಬಿದ್ದ ವೀರರ ಶವಗಳು ಒಂದರ ಮೇಲೊಂದರಂತೆ ರಾಶಿರಾಶಿಯಾಗಿ ಬಿದ್ದಿದ್ದವು. ಬಿದ್ದ ವೀರರ ಪೈಕಿ, ಕೆಲವರು ಅರೆಜೀವಿಗಳಾದವರು. ಆದರೂ ಅವರ ಅಂಗಾಂಗಗಳು ತುಂಡರಿಸಿ ಹೋಗಿದ್ದರಿಂದ ಎದ್ದು ಈಚೆಗೆ ಬರಲಾಗದೆ, ಸತ್ತವರ, ಸಾಯಲಿರುವವರ ದಾರುಣ ಪರಿಸ್ಥಿತಿಯನ್ನು ನೋಡುತ್ತ ವಿಧಿ ಇಲ್ಲದೆ ಅಲ್ಲೇ ಬಿದ್ದು ನರಳುತ್ತಲಿದ್ದರು. ಮತ್ತೆ ಕೆಲವರು ಶಸ್ತ್ರಾಸ್ತ್ರಗಳ ಆಘಾತದಿಂದ ಮೂರ್ಛೆಗೊಂಡವರು. ॥೧೮॥

ಕೈಕಾಲುಗಳನ್ನು ಮುರಿದುಕೊಂಡು ನರಳುತ್ತಲಿದ್ದವರ ಪೈಕಿ ಕೆಲವರನ್ನು ದೇವನೊಡನೆ ಬಂದಿದ್ದ ದೇವತೆಗಳು ಒಬ್ಬೊಬ್ಬರನ್ನಾಗಿ ಈಚೆಗೆ ಎಳೆದರು. ದೇವತೆಗಳೋ, ದಾನವರೋ, ಎಂಬುದು ಬಿದ್ದವರಿಗೆ ಒಮ್ಮೆಲೇ ಗೊತ್ತಾಗಲಿಲ್ಲ. ॥೧೯॥

ಕೊನೆಗೆ " ಎಳೆಯುತ್ತಿರುವವರು ತಮ್ಮವರು, ಮಯೂರೇಶ್ವರನು ಇಲ್ಲಿಯೇ ಇದ್ದಾನೆ " ಎಂಬುದು ಅರಿವಾದ ಬಳಿಕ, ಕೆಲವರು ಹೀಗೆ ನುಡಿದರು. " ನಾವು ನಿನಗಾಗಿ ಮೃತ್ಯುವಿನ ಬಾಯಿಗೆ ತುತ್ತಾಗಿದ್ದೇವೆ. ಆದುದಾಗಿಯೇ ಹೋಯಿತು. ಅಂತ್ಯಕಾಲದಲ್ಲಾದರೂ 'ನಿನ್ನ ದಿವ್ಯದರ್ಶನ ನಮಗೆ ದೊರೆಯಿತಲ್ಲ, ಅಷ್ಟೇ ಲಾಭ" ಎಂದುಸುರಿ ಹಾಗೆ ಹಾಗೆಯೇ ಪ್ರಾಣಗಳನ್ನು ಬಿಟ್ಟರು. ॥೨೦॥

ಮೃತರು ಆಡಿದ ಕೊನೆಯ ದೀನ ಮಾತುಗಳನ್ನು ಕೇಳಿ ಮಯೂರೇಶ್ವರನ ಸಾಶ್ರುಕಂಠನಾದನು. ಹೀಗೆಯೇ ರಣರಂಗವನ್ನು ಸುತ್ತಿ ಸುತ್ತಿ ನೋಡಿದನು. ಎಲ್ಲೋ ಒಂದೆಡೆ ಷಡಾನನನು ಮೂರ್ಛಿತನಾಗಿ ಬದ್ದಿರುವುದು ಗಜಾನನನಿಗೆ ಗೋಚರವಾಯಿತು ॥೨೧॥

ಪತದಶ್ರುರ್ಮಯೂರೇಶಃ ಸ್ನೇಹಾತ್ತಂ ಚಾಬ್ರವೀದಿತಿ ।
ಮಯೂರೇಶ ಉವಾಚ :—
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಕಿಂ ಶೇಷೇ ಪ್ರಾಕೃತೋ ಯಥಾ ॥೨೨॥
ಶ್ರಾಂತೋಽಸಿ ದೈತ್ಯಹನನಾದ್ಯಚ್ಛಾಲಿಂಗನಮುದ್ಯ ಮೇ ।
ಕ ಉವಾಚ :—
ಪ್ರಮಾರ್ಜಿತಸ್ತು ಹಸ್ತೇನ ತತಃ ಸ ಪ್ರೋದತಿಷ್ಠತ ॥೨೩॥
ಅಪಶ್ಯನ್ನಿಕಟೇ ದೇವಪಾದಪದ್ಮಂ ಭಯಾಪಹಮ್
ಉವಾಚ ಚ ಮಯೂರೇಶಂ
ಮಯೂರೇಶ ಉವಾಚ :—
ದರ್ಶನಾತ್ತೇ ಗತಂ ಮಮ ॥೨೪॥

ಬುದ್ಧಿಯನ್ನೇ ಕದಡಿಬಿಡುವ ಆ ದೃಶ್ಯವನ್ನು ನೋಡಿ, ಮಯೂರರಾಜನ ಕಣ್ಣುಗಳಿಂದ ಧಾರಾಕಾರವಾಗಿ ದುಃಖಾಶ್ರು ಸುರಿಯಿತು. ಭ್ರಾತೃಸ್ನೇಹವು ಉಕ್ಕಿ ಬರಲು, ನಡುಗುವ ಧ್ವನಿಯಿಂದ ಹೀಗೆಂದು ಮಾತನಾಡಿದನು.
ಮಯೂರೇಶ :—

ಷಡಾನನ ! ಏಳು, ಏಳು, ನಿನಗೆ ಒಳ್ಳೆಯದಾಗಲಿ, ನೀನು ಸಹ ಪ್ರಾಕೃತ ಪುರುಷರಂತೆ ಮಲಗಿಬಿಟ್ಟಿರುವೆಯಲ್ಲ ? ॥೨೨॥

ದೈತ್ಯರೊಡನೆ ಅವಿಚ್ಛಿನ್ನವಾಗಿ ಹೊಡೆದಾಡಿದುದರಿಂದ ನೀನು ಬಹಳ ಆಯಾಸಗೊಂಡಿರುವೆ. ಏಳು, ಎದ್ದು ನನ್ನನ್ನು ಒಮ್ಮೆ ಆಲಿಂಗಿಸು.
ಬ್ರಹ್ಮಾ :—

ಹೀಗೆಂದು ನುಡಿದು, ಷಡಾನನನ ದೇಹವನ್ನೆಲ್ಲ ತನ್ನ ಅಮೃತಹಸ್ತದಿಂದ ಒಮ್ಮೆ ಸವರಿದನು. ದೇವನ ಅಮೃತಮಯದೇಹವು ಸೋಕಿದ ಮೇಲೂ ಮೂರ್ಛೆಯ ಮೋಹವಿರುವುದೆಂದರೇನು ? ಒಡನೆಯೇ ಷಡಾನನನು ಎದ್ದು ಕುಳಿತನು. ॥೨೩॥

ಕಣ್ದೆರೆದು ಸುತ್ತಲೂ ಒಮ್ಮೆ ನೋಡಿದನು. ಸಕಲ ವಿಧ ಭಯವನ್ನೂ ನಾಶ ಮಾಡಬಲ್ಲ ದೇವನ ಪಾದಪದ್ಮ ಕಂಡಿತು. ಅವನಿಗೆ ಇದರಿಂದ ಒಂದು ಬಗೆಯ ಶಕ್ತಿ ದೇಹದಲ್ಲೆಲ್ಲ ಸಂಚರಿಸಿದಂತಾಗಲು, ದೇವದೇವನನ್ನು ಕುರಿತು ಹೀಗೆಂದು ಮಾತನಾಡಿದನು.
ಷಡಾನನ : –

ಭಗವನ್, ಮಯೂರೇಶ್ವರ ! ನಿನ್ನ ದರ್ಶನವಾದುದರಿಂದ ನನ್ನ ನೋವೆಲ್ಲವೂ ಮಾಯವಾಯಿತು. ॥೨೪॥

**ಸರ್ವದುಃಖಂ ಶ್ರಮಶ್ಚೈವ ವಿಶ್ರಾಂತಶ್ಚಾಸ್ಮಿ ಸಾಂಪ್ರತಮ್ ।**

**ಕ ಉವಾಚ :—**

**ಆಲಿಲಿಂಗ ಮಯೂರೇಶಂ ದೋರ್ಭಿರ್ದ್ವಾದಶಭಿಸ್ತದಾ ॥೨೫॥**

**ಉಭೌ ಯಾತೌ ರಣಂ ದ್ರಷ್ಟುಂ ಗೃಹೀತ್ವಾ ಚ ಪರಸ್ಪರಮ್ ।**
**ಅಪಶ್ಯತಾಂ ಪುರಃ ಸುಪ್ತಂ ವೀರಭದ್ರಮಿಷುಕ್ಷತಮ್ ॥೨೬॥**

**ನಂದಿನಂ ಚ ಶರಾಘಾತೈಃ ಪೀಡಿತಂ ಬಲವತ್ತರಮ್ ।**
**ಭೂತರಾಜಂ ಚ ಪುರತೋ ವಿಭಿನ್ನಮಸ್ತಕಂ ತದಾ ॥೨೭॥**

**ಕ್ರಂದಂತಂ ವಿಕಟಂ ಚೈವ ಪುಷ್ಪದಂತಂ ಭೃಶಾರ್ದಿತಮ್ ।**

---

ಸಕಲ ವಿಧ ಮಾನಸಿಕ ದುಃಖವೂ ಮರೆಯಾಗಿದೆ, ಸ್ವಲ್ಪವೂ ಶ್ರಮವೆನಿಸುತ್ತಿಲ್ಲ. ಸಂಪೂರ್ಣ ವಿಶ್ರಾಂತಿಯನ್ನು ಪಡೆದವರಂತೆ ಚಟುವಟಿಕೆಯುಳ್ಳವನಾಗಿದ್ದೇನೆ.

ಬ್ರಹ್ಮಾ:—

ಎಂದು ಹೇಳಿ, ಎದ್ದು ದೇವನ ಸಮೀಪಕ್ಕೆ ಬಂದು, ತನ್ನ ಹನ್ನೆರಡು ಕೈಗಳಿಂದಲೂ ಅಣ್ಣನಾದ ಮಯೂರೇಶ್ವರನನ್ನು ಬಿಗಿದಪ್ಪಿಕೊಂಡನು. ॥೨೫॥

ಅನಂತರ ಅವರಿಬ್ಬರೂ ರಣರಂಗವನ್ನು ಸುತ್ತಾಡಿ ತಮ್ಮವರಾರು ವಿಪದ್ಗ್ರಸ್ತರೋ, ಎಂಬುದನ್ನು ತಿಳಿಯಲು ಹೊರಟರು. ಹೊರಡುವಾಗ ಸ್ನೇಹಾತಿರೇಕದಿಂದ ಪರಸ್ಪರರು ಕೈಗಳನ್ನು ಹಿಡಿದುಕೊಂಡೇ ನಡೆದರು. ವೀರಭದ್ರನು ಬಾಣಾಹತನಾಗಿ ಉರುಳಿ ಎದುರಿಗೇ ಬಿದ್ದಿರುವುದು ಅವರಿಗೆ ಕಂಡಿತು. ॥೨೬॥

ವೀರಭದ್ರನ ಪಕ್ಕದಲ್ಲೇ ನಂದಿಯೂ ಬಿದ್ದಿದ್ದನು. ಅವನಿಗೂ ಶತ್ರುಗಳ ಬಾಣಗಳು ತಗುಲಿ, ಅತಿಯಾಗಿ ಗಾಸಿಗೊಳಿಸಿದ್ದವು. ಅವನೇನೂ ಸಾಮಾನ್ಯನಾದವನಾಗಿರಲಿಲ್ಲವಾದರೂ, ರಾಕ್ಷಸನ ಬಲದ ಮುಂದೆ ನಂದಿಯ ಆಟ ನಡೆದಿರಲಿಲ್ಲ. ನಂದಿಗಿಂತಲೂ ಸ್ವಲ್ಪ ದೂರದಲ್ಲಿ ಭೂತರಾಜನು ತಲೆಯನ್ನು ಒಡೆದುಕೊಂಡು ಬಿದ್ದಿದ್ದನು. ಅವನನ್ನು ಮಯೂರೇಶ್ವರ-ಷಡಾನನರು ನೋಡಿ ಮರುಗಿದರು. ॥೨೭॥

ಒಂದು ಕಡೆ ವಿಕಟನು ಏಟಿನಿಂದಾದ, ನೋವನ್ನು ತಾಳಲಾರದೆ, ಕರುಣಸ್ವರದಿಂದ ಅಳುತ್ತ ಬಿದ್ದಿದ್ದನು. ಪುಷ್ಪದಂತನಿಗೆ ಮಿತಿಮೀರಿ ಗಾಯಗಳಾಗಿದ್ದುದರಿಂದ

ಲಲಾಟೇ ಧೃಷ್ಟವಿದ್ಧಂ ಚ ಹಿರಣ್ಯಗರ್ಭಮೇವ ಚ ||೨೮||
ಮೃತಪ್ರಾಯಂ ಚ ಚಪಲಂ ಮೃತಂ ಶ್ಯಾಮಲಮೇವ ಚ |
ಲಂಬಕರ್ಣೋ ನ ಚಾಜ್ಞಾಸೀದ್ಭ್ರಾಂತ್ಯಾ ಕಂಚನ ಸಂಗರೇ ||೨೯||
ಉದಾನವಾಯುನಾಕ್ರಾಂತಃ ಸುಮುಖಸ್ತತ್ರ ಚಾಭವತ್ |
ಪರಮಂ ಖೇದಮಾಪನ್ನಃ ಸೋಮಶ್ಚ ರಕ್ತಲೋಚನಃ ||೩೦||
ಶೇತೇ ಸ್ಮ ಮೂರ್ಛಯಾ ಭೃಂಗೀ ಪಂಚಾಸ್ಯಶ್ಚ ಮುಮೂರ್ಷಯಾ |
ಶಂಖಃ ಪ್ರೇತತ್ವಮಾಪನ್ನೋ ಭಯಕೃತ್ಸರ್ವಯೋಧಿನಾಮ್ ||೩೧||
ಏವಂ ದೃಷ್ಟ್ವಾ ಸರ್ವವೀರಾನ್ ಹತಪ್ರಾಯಾನ್ ಹತಾನಪಿ |

---

ಅವನು ಜಜ್ಜಿ ಹೋದಂತಾಗಿದ್ದನು. ಹಿರಣ್ಯಗರ್ಭನೆಂಬುವನ ಹಣೆಗೆ ಒಂದು ನಿಶಿತವಾದ ಬಾಣ ಚುಚ್ಚಿಕೊಂಡಿದ್ದಿತು. ಅವರನ್ನೂ ಕಂಡರು. ||೨೮||

ಮತ್ತೊಂದು ಕಡೆ ಚಪಲನು "ಇನ್ನೇನು, ಮೃತನಾಗುವನೋ," ಎಂಬಂತಿದ್ದನು. ಅವನ ಪಕ್ಕದಲ್ಲಿ ಬಿದ್ದಿದ್ದ ಶ್ಯಾಮಲನು ಮೃತನೇ ಆಗಿದ್ದನು. ಲಂಬಕರ್ಣನ ಪರಿಸ್ಥಿತಿಯು ಬಹಳ ಶೋಚನೀಯವಾಗಿದ್ದಿತು. ಅವನ ಮೆದುಳಿಗೆ ಏಟು ಬಿದ್ದುದರಿಂದ ಸಮರರಂಗದಲ್ಲಿ ಯಾರು ಯಾರಿದ್ದಾರೆ, ಮತ್ತು ಏನೇನನ್ನು ಮಾಡುತ್ತಲಿದ್ದಾರೆ ಎಂಬುದಾವ ಸಮಾಚಾರವೂ ಅವನಿಗೆ ತಿಳಿಯುತ್ತಿರಲಿಲ್ಲ. ಹುಚ್ಚನಂತಾಗಿ ಹೋಗಿದ್ದನು ||೨೯||

ಸುಮುಖನೆಂಬ ವೀರನ ಗತಿ ಕೊನೆಯ ಮೆಟ್ಟಲಿಗೇ ಬಂದಿದ್ದಿತು. ಮೇಲುಸಿರು ಅವನನ್ನು ಬಿಗಿದು ಪರಲೋಕಕ್ಕೆ ಎಳೆಯೊಯ್ಯಲು ಹವಣಿಸುತ್ತಲಿದ್ದಿತು. ಈ ದಾರುಣ ದೃಶ್ಯಗಳನ್ನೆಲ್ಲ ನೋಡುತ್ತಲಿದ್ದ ಸೋಮ-ರಕ್ತಲೋಚನರು ಖಿನ್ನರಾಗಿ ಪಾರಾಗಲು ಯಾವ ಪ್ರಯತ್ನವನ್ನೂ ಮಾಡಲರಿಯದೆ, ಮೂಕರಂತೆ ಸುಮ್ಮನೆ ಕುಳಿತುಬಿಟ್ಟಿದ್ದರು. ||೩೦||

ಪ್ರಮಥಪ್ರಮುಖನಾದ ಭೃಂಗಿಯು ಮಹಾಮೂರ್ಛೆಗೊಳಗಾಗಿ ಮಲಗಿಬಿಟ್ಟಿದ್ದನು ಪಂಚಾಸ್ಯನಾಗಲೇ ತನ್ನ ಒಂದು ಪಾದವನ್ನು ಪರಲೋಕದಲ್ಲಿಟ್ಟವನಂತಿದ್ದನು. ಶಂಖನಾದರೋ ಮೃತನಾಗಿ ಪ್ರೇತಭಾವವನ್ನು ತಳೆದು, ರಣಾಂಗಣದಲ್ಲೆಲ್ಲ ಸುತ್ತಾಡುತ್ತಲೂ, ಇತರ ಯೋಧರನ್ನು ತನ್ನ ಪ್ರೇತರೂಪ, ವಿಕಾರಧ್ವನಿಗಳಿಂದ ಭಯಪಡಿಸುತ್ತ ಅವರು ಶಂಖ ಹೊಡೆಯುವಂತೆ ಮಾಡುತ್ತಲಿದ್ದನು. ||೩೧||

ತನ್ನ ಕಡೆಯ ವೀರರೆಲ್ಲರೂ ಯುದ್ಧಕ್ಕೆ ಬಲಿಯಾಗಿ, ಆ ಪೈಕಿ ಕೆಲವರು

**ಚಿಂತಯಾ ಪರಯಾವಿಷ್ಟೋ ಪಪ್ರಚ್ಛ ತಂ ಷಡಾನನಮ್ ||೩೨||**

**ಮಯೂರೇಶ ಉವಾಚ :—**

**ಅಸುರಾಶ್ಚ ಸ್ವಕೀಯಾಶ್ಚ ಮಹಾವೀರಾ ಹತಾ ಮೃಧೇ |**
**ನಿಜಧಾಮಗತಾಃ ಸರ್ವೇ ಜೀವತಾಮತ್ರ ಕಾ ಗತಿಃ ? ||೩೩||**

**ಷಡಾನನ ಉವಾಚ :—**

**ಅನಂತಕೋಟಿಬ್ರಹ್ಮಾಂಡನಾಯಕಸ್ತ್ವಂ ಗುಣೇಶ್ವರ ! |**
**ಚತುರ್ದಶಾನಾಂ ವಿದ್ಯಾನಾಂ ಸರ್ವಾಸಾಂ ಚ ಸ್ವಯಂ ನಿಧಿಃ ||೩೪||**

**ಕಲಾನಾಂ ತತ್ರ ಕಿಂ ಪ್ರಶ್ನಂ ಕರೋಷಿ ? ತ್ವಂ ಮಮಾಂತಿಕೇ |**
**ನಾಹಂ ಮಂತ್ರಂ ವಿಜಾನಾಮಿ ವೇತ್ಥ ತ್ವಂ ಹಿ ನ ವೈ ಸುರಾಃ ||೩೫||**

ಸಾಯುವವರಾಗಿಯೂ, ಮತ್ತೆ ಕೆಲವರು ಮೃತರಾಗಿಯೂ ಇರುವುದನ್ನು ನೋಡಿ, ಪರಮಕರುಣಾಳು, ಸರ್ವಲೋಕಶರಣ್ಯ ಗಣಪತಿಯು ಮರಮರ ಮರುಗಿದನು. ಬಗೆ ಹರಿಯಲಾರದ ಚಿಂತೆಯು ಅವನನ್ನು ಆವರಿಸಿತು. ಆಗ ಅನುಜ; ಷಡಾನನನನ್ನು ಕುರಿತು ಈ ರೀತಿ ಪ್ರಶ್ನಿಸಿದನು. ||೩೨||

ಮಯೂರೇಶ :—

ಮಹಾವೀರ್ಯಶಾಲಿಗಳಾದ ನಮ್ಮವರೂ, ಅಸುರನ ಕಡೆಯುವರೂ ಈ ಯುದ್ಧದಲ್ಲಿ ಗಾಯಗೊಂಡು ಮಡಿದು ಬಿದ್ದುಹೋದರು. ಅವರಿಗೇನೋ ವೀರಸ್ವರ್ಗ, ಅದರಲ್ಲೂ ನನ್ನ ಕೈಯಿಂದಲೇ ಹತರಾದವರಿಗೆ ಸ್ವತಃ ನನ್ನ ಲೋಕ ಇವು ದೊರೆತಿವೆ, ಅವರ ಬಗ್ಗೆ ನನಗೆ ಯೋಚನೆಯೇ ಇಲ್ಲ. ಆದರೆ ಷಡಾನನ ! ಅರೆಜೀವಿಗಳಾಗಿ ಇಲ್ಲಿ ಬಿದ್ದು ನರಳುತ್ತಿರುವ ಈ ವೀರರ ಗತಿ ಏನಪ್ಪ ? ||೩೩||

ಷಡಾನನ :—

ಅಗ್ರಜ; ಗುಣೇಶ್ವರ ! ಇದೇನು, ಇಂದು ಹೀಗೆ ಮಾತನಾಡುವೆ ? ನಿನಗೆ ಪರಿಹಾರೋಪಾಯ ಹೊಳೆಯಲಿಲ್ಲವೇ ? ನೀನೇ ಅನಂತಕೋಟಿ ಬ್ರಹ್ಮಾಂಡಗಳಿಗೆಲ್ಲ ನಾಯಕನಾಗಿರುವೆ ಹದಿನಾಲ್ಕು ಬಗೆಯ ಹೆಚ್ಚೇನು ? ಸಕಲ ವಿದ್ಯೆಗಳಿಗೂ ನೀನು ನಿಧಿಯಾಗಿರುವೆ. ||೩೪||

ಅರವತ್ತು ನಾಲ್ಕು ಕಲೆಗಳನ್ನೂ ಬಲ್ಲ ನೀನು, ನನ್ನನ್ನೇಕೆ ಪ್ರಶ್ನಿಸುತ್ತಿರುವೆ ? ನಾನು ಮಂತ್ರಗಳನ್ನು ತಿಳಿದವನಲ್ಲ. ಈ ಸಂಗತಿ ನಿನಗೂ ಅರಿವಾಗಿಯೇ ಇದೆ. ನನಗೆ ಮಾತ್ರವೇನು ? ಇತರ ದೇವತೆಗಳಿಗೂ ಇದು ಗೊತ್ತಿರುವುದಿಲ್ಲ. ||೩೫||

ವಿವರ್ಧಯಸಿ ಕೀರ್ತಿಂ ತ್ವಂ ನಾನಾದೈತ್ಯನಿಭಂಜನಾತ್ ।
ಯಥಾಮತಿ ಬ್ರವೀಮಿ ತ್ವಾಮಾಜ್ಞಯಾ ಚ ಸ್ಮೃತೇರ್ಬಲಾತ್ ॥೩೬॥
ಪೂರ್ವಂ ತು ತ್ರಿಪುರವಧೇ ಶಿವೇನ ಯುದ್ಧಮುದ್ಭುತಮ್
ಕೃತಂ ತತ್ರ ಮೃತಾರ್ನ ದೇವಾರ್ನ ದ್ರೋಣಾದ್ರೇರ್ವಲ್ಲಿಜಂ ರಸಮ್ ॥೩೭॥
ದೇವಕ್ಷತೇಷು ಸಂಯೋಜ್ಯ ಜೀವಯಾಮಾಸ ತತ್ಕ್ಷಣಾತ್ ।

ಕ ಉವಾಚ :—

ಶ್ರುತ್ವೇತ್ಥಂ ವಚನಂ ದೇವೋ ಜಗಾದ ತಂ ಷಡಾನನಮ್ ॥೩೮॥

ದೇವ ಉವಾಚ :—

ಇದಾನೀಂ ದೈತ್ಯಕೋಟ್ಯಸ್ತು ಯುದ್ಧಾರ್ಥಂ ಬಲವತ್ತರಾಃ ।
ಆಯಾಸ್ಯಂತಿ ತದಾ ಕೋಽತ್ರ ಯುದ್ಧ್ಯೇತ್ತಾಭಿಃ ಷಡಾನನ ! ॥೩೯॥

---

ನಾನಾಬಗೆಯ ಶಕ್ತಿ-ಸಾಹಸಗಳುಳ್ಳ ಬಹುಮಂದಿ ದೈತ್ಯರನ್ನು ನೀನು ನಿರ್ಮೂಲಗೊಳಿಸಿ, ನಿನ್ನ ಧವಳಕೀರ್ತಿಯನ್ನು ಕ್ಷಣ-ಕ್ಷಣಕ್ಕೂ ವೃದ್ಧಿಪಡಿಸುತ್ತಲೇ ಇರುವೆ. ನೀನು ಪ್ರಶ್ನಿಸಿದರೂ ನಾನು ತಿಳಿದುದನ್ನು ಹೇಳದಿದ್ದರೆ, ಅಪಚಾರವಾದೀತು. ನಿನ್ನ ಆಜ್ಞೆ, ನೆನಪಿನ ಬಲಗಳಿಂದ ನನ್ನ ಅಲ್ಪಮತಿಗೆ ತಿಳಿದ ವಿಷಯವನ್ನು ಅರಿಕೆಮಾಡುತ್ತೇನೆ. ॥೩೬॥

ಬಹು ಹಿಂದೆ. ಎಂದರೆ ತ್ರಿಪುರಾಸುರನ ವಧೆಯಾದ ಸಂದರ್ಭದಲ್ಲಿ ಘೋರವಾದ ಯುದ್ಧ ನಡೆಯಿತಷ್ಟೆ? ಆಗಲೂ ಸಹ ಇಂದಿನಂತಹ ಪರಿಸ್ಥಿತಿಯೇ ಒದಗಿಬಂದಿತ್ತು. ಆ ಅಸುರನು ದೇವ ವೀರರನ್ನೆಲ್ಲ ಕೊಂದು ಹಾಕಿದ್ದನು. ಆಗ ಪೂಜ್ಯ ತಂದೆ; ಪರಶಿವನು ಚಂದ್ರದ್ರೋಣ ಪರ್ವತದಿಂದ ಸಂಜೀವಿನೀ ಬಳ್ಳಿಯ ರಸವನ್ನು ತರಿಸಿ, ಉಪಯೋಗಿಸಬೇಕೆಂದು ನಿಶ್ಚಯಿಸಿದನು. ॥೩೭॥

ಅಂತೆಯೇ ಆ ರಸವನ್ನು ದೇವತೆಗಳಿಗೆ ಎಲ್ಲೆಲ್ಲಿ ಗಾಯಗಳಾಗಿದ್ದವೋ.ಅಲ್ಲೆಲ್ಲ ಲೇಪಿಸಿ ಸತ್ತುಹೋಗಿದ್ದ ಎಲ್ಲ ದೇವತೆಗಳನ್ನೂ ಕ್ಷಣಮಾತ್ರದಲ್ಲಿಯೇ ಬದುಕಿಸಿಬಿಟ್ಟನು.

ಬ್ರಹ್ಮಾ :—

ಷಡಾನನನಾಡಿದ ಈ ಮಾತುಗಳನ್ನು ಕೇಳಿ, ಮಯೂರೇಶ್ವರನು ತಮ್ಮನನ್ನು ಕುರಿತು ಹೀಗೆಂದು ಹೇಳಿದನು. ॥೩೮॥

ದೇವ :—

ಷಡಾನನ ! ಇದೋ, ಇಷ್ಟರಲ್ಲೇ ಕೋಟ್ಯವಧಿ ದೈತ್ಯರು ಯುದ್ಧಕ್ಕಾಗಿ ರಣ

**ಕಶ್ಚಾನೇತುಂ ವ್ರಜೇದದ್ರಿಂ ವಲ್ಲೀರಸಮನುತ್ತಮಮ್ ।**
**ಕ ಉವಾಚ :—**
**ಏವಂ ಬ್ರುವನ್ ಮಯೂರೇಶೋ ಮಾಯಾಮಾವಿಶ್ಚಕಾರ ಹ**　||೪೦||
**ಉಜ್ಜೀವಯಾಮಾಸ ತದಾ ನಿಜಾಂಗವಾಯುಸಂಗತಃ ।**
**ತತಸ್ತೇ ಹರ್ಷಸಂಪನ್ನಾಃ ಪ್ರಣೇಮುಸ್ತಂ ಗುಣೇಶ್ವರಮ್**　||೪೧||
**ಆಲಿಲಿಂಗುಃ ಪುನರ್ಯುದ್ಧಂ ಕರ್ತುಂ ತಂ ಚ ವಿಜಿಜ್ಞಪುಃ ।**
**ತ ಊಚುಃ :—**
**ತ್ವದ್ದೃಷ್ಟಿವಿನಿಪಾತೇನ ತೇಜೋ ನೋ ದ್ವಿ-ಗುಣೀಕೃತಮ್**　||೪೨||

---

ರಂಗಕ್ಕೆ ಬಂದು ನಿಲ್ಲುತ್ತಾರೆ, ಇವರೆಲ್ಲರೂ ಅಷ್ಟರೊಳಗಾಗಿಯೇ ಪುನರುಜ್ಜೀವನ ಗೊಳ್ಳದಿದ್ದರೆ, ಆ ದೈತ್ಯರೊಡನೆ ಹೋರಾಡತಕ್ಕವರಾರು ? ||೩೯||

ನೀನು ಸೂಚಿಸಿದಂತೆ ಚಂದ್ರದ್ರೋಣಗಿರಿಯವರೆಗೆ ಶೀಘ್ರಗತಿಯಿಂದ ಹೋಗಿ, ಅತ್ಯುತ್ತಮವಾದ ಆ ವಲ್ಲಿಯ ರಸವನ್ನು ತರಲಿಕ್ಕೆ ಪ್ರಕೃತ ಇಲ್ಲಿ ಸಮರ್ಥರಾದವ ರಾರಿದ್ದಾರೆ ?

ಬ್ರಹ್ಮಾ :—

ಹೀಗೆ ಹೇಳಿ ಮಯೂರೇಶನು ಕೂಡಲೇ ತನ್ನಧೀನವಾದ ಅತ್ಯದ್ಭುತ ಮಾಯೆ ಯನ್ನು ಬೀರಿದನು. ||೪೦||

ದೇವನ ಅಂಗಾಂಗಗಳಿಂದ ಬೀಸಿದ ತನುವಾದ ಗಾಳಿ ಮೃತರಾದ ದೇವತೆ ಗಳನ್ನೆಲ್ಲ ಪುನರುಜ್ಜೀವನಗೊಳಿಸಿಬಿಟ್ಟಿತು. ನಿದ್ರೆಯಿಂದೆಚ್ಚತ್ತವರಂತೆ ಮೃತರಾದ ದೇವತೆಗಳು ತಟಕ್ಕನೆ ಎದ್ದು ಕುಳಿತುಕೊಂಡುಬಿಟ್ಟರು. ತಮಗೆ ಯುದ್ಧದಲ್ಲಿ ಈ ಮೊದಲು ಒದಗಿದ್ದ ಸ್ಥಿತಿ ಒಮ್ಮಿಂದೊಮ್ಮೆ ಮಾರ್ಪಟ್ಟು, ತಾವೆಲ್ಲರೂ ಪುನರು ಜ್ಜೀವನಗೊಳ್ಳುವಂತಾದುದಕ್ಕೆ ಬಹಳ ಸಂತೋಷಿಸಿದರು. ಮತ್ತು ಗಣಪತಿಗೆ ಭಕ್ತಿ ಯಿಂದ ನಮಸ್ಕರಿಸಿದರು. ||೪೧||

ಪ್ರೀತಿ-ವಿಶ್ವಾಸ-ಗೌರವಗಳನ್ನು ವ್ಯಕ್ತಪಡಿಸುತ್ತ ಎಲ್ಲರೂ ದೇವನನ್ನು ಆಲಿಂ ಗಿಸಿಕೊಂಡು, ದೈತ್ಯನ ಮೇಲೆ ಪುನಃ ಯುದ್ಧವನ್ನು ಮಾಡಲಿಕ್ಕೆ ಅನುಜ್ಞೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು.

ದೇವವೀರರು :—

ದೇವ ! ನಿನ್ನನ್ನು ಸಂದರ್ಶಿಸಿದ ಕೂಡಲೇ ನಮ್ಮ ತೇಜಸ್ಸು ಉತ್ಸಾಹ, ಇವು ದ್ವಿಗುಣಿತವಾದವು. ||೪೨||

ಗುಣೇಶ್ವರ ಉವಾಚ :—

ಬ್ರಹ್ಮಾದಯೋ ದೇವಗಣಾಃ ಸ್ತುವಂತಿ ವಃ ಪರಾಕ್ರಮಮ್ ।
ತಾರಕಾಸುರಮುಖ್ಯಾಶ್ಚ ನಿಹತಾ ದೈತ್ಯ-ದಾನವಾಃ ॥೪೩॥

ಕ ಉವಾಚ :—

ತತಸ್ತೈಃ ಸಹಿತೋ ದೇವೈರ್ಮಯೂರೇಶಃ ಶಿವಂ ಯಯೌ ।
ನಮಸ್ಕೃತ್ಯ ಶಿವಂ ಗೌರೀಂ ಯುದ್ಧಾಯ ಗಂತುಮುದ್ಯತಃ ॥೪೪॥

ಆಲಿಲಿಂಗ ಮುದಾ ಗೌರೀ ಶಿವಸ್ತಂ ಚ ಗುಣೇಶ್ವರಮ್ ।
ತತಃ ಷಡಾನನಾದ್ಯಾಸ್ತೇ ಶಿವಮಾಲಿಂಗಿರೇ ಮುದಾ ॥೪೫॥

'ವಯಂ ರಣೇ ನಿಪತಿತಾಃ ಪುನಃ ಸಂಜೀವಿತಾ ಹರ ! ।
ಮಯೂರೇಶಾಂಗಸಂಭೂತವಾಯುನಾದ್ಭುತಕಾರಿಣಾ ॥೪೬॥

ಗುಣೇಶ್ವರ :—

ವೀರರೇ ! ಬ್ರಹ್ಮಾದಿ ದೇವೋತ್ತಮರು ಸಹ ನಿಮ್ಮೆಲ್ಲರ ವೀರ್ಯ-ಸಾಹಸಗಳನ್ನು ಮುಕ್ತಕಂಠದಿಂದ ವರ್ಣಿಸುತ್ತಲಿದ್ದಾರೆ. ತಾರಕಾಸುರ ಮೊದಲಾದ ಪ್ರಮುಖ ದೈತ್ಯ-ದಾನವರೊಡನೆ ಹಿಂದೆ ಯುದ್ಧ ನಡೆದಾಗ ನೀವೆಲ್ಲರೂ ಬಹಳ ಶಕ್ತಿ-ಸಾಹಸಗಳನ್ನು ಪ್ರದರ್ಶಿಸಿ ನೆರವಾಗಿದ್ದೀರಿ. ॥೪೦॥

ಬ್ರಹ್ಮಾ :—

ಹೀಗೆಂದು ವರ್ಣಿಸುತ್ತ, ಪುನರುಜ್ಜೀವನಗೊಂಡ ದೇವತೆಗಳೊಡನೆ ಪರಶಿವನ ಸಮೀಪಕ್ಕೆ ಬಂದನು. ಅಲ್ಲಿಗೆ ಬಂದಕೂಡಲೇ ಶಿಷ್ಟಾಚಾರ-ಸಂಪ್ರದಾಯಗಳಿಗನುಸರಿಸಿ ತಂದೆ-ತಾಯಿಯರಾದ ಶಿವ-ಪಾರ್ವತಿಯರನ್ನು ಪ್ರಣಮಿಸಿ, ಮತ್ತೆ ಯುದ್ಧಕ್ಕೆ ಹೊರಡಲು ಅನುಮತಿಯನ್ನು ಬೇಡಿದನು. ॥೪೪॥

ಪಾರ್ವತೀದೇವಿ ಪರಶಿವ ಇಬ್ಬರೂ ಸಂತೋಷದಿಂದ ಗುಣೇಶ್ವರನನ್ನು ಆಲಿಂಗಿಸಿಕೊಂಡರು. ಅನಂತರ ಷಡಾನನ ಮುಂತಾದವರು ಮುಂದೆ ಬಂದು ಒಬ್ಬೊಬ್ಬರಾಗಿ ಸಂತೋಷದಿಂದ ಪರಶಿವನನ್ನು ಆಲಿಂಗಿಸಿದರು. ॥೪೫॥

ಮತ್ತು ಪರಶಿವನನ್ನು ಸಂಬೋಧಿಸಿ "ದೈತ್ಯರ ಏಟುಗಳಿಗೆ ಸಿಲುಕಿ ನಾವೆಲ್ಲರೂ ರಣರಂಗದಲ್ಲಿ ಬಿದ್ದುಹೋಗಿದ್ದೆವು. ದೇವ; ಹರ ! ಭಗವಾನ್ ಮಯೂರೇಶ್ವರನು ತನ್ನ ದೇಹದಿಂದ ಸಂಜೀವಕ ವಾಯುವನ್ನು ಬೀರಿ ನಮ್ಮನ್ನೆಲ್ಲ ಪುನರುಜ್ಜೀವನಗೊಳಿಸಿದನು. ಎಂತಹ ಅದ್ಭುತ ಕೆಲಸವನ್ನಾದರೂ ಆ ವಾಯು ದೇವನ ಮಹಿಮೆಯಿಂದ ಮಾಡಬಲ್ಲದು. ॥೪೬॥

ಪುನರ್ಯುದ್ಧಾಯ ಯಾಸ್ಯಾಮೋಽನೇನ ಸಾರ್ಧಂ ಶಿವಾಧುನಾ ।
ಪ್ರಸಾದಾತ್ತದ ಜೇಷ್ಯಾಮಃ ಸರ್ವಾನೇವಾಸುರಾನ್ ಯುಧಿ ॥೪೭॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ರಣಶೋಧನಂ, ಮೃತ ಪುನರುಜ್ಜೀವನಂ" ಚೇತಿ ಷೋಡಶೋತ್ತರ ಶತತಮೋಽಧ್ಯಾಯಃ ಸಮಾಪ್ತಃ

---

ಇದೋ, ನಾವು ಸಿದ್ಧರಿದ್ದೇವೆ. ಪರಮೇಶ್ವರ! ಮಯೂರೇಶ್ವರನ ಸಂಗಡ ಹೊರಟು ಶತ್ರುಗಳೊಡನೆ ಮತ್ತೆ ಯುದ್ಧವನ್ನು ಮಾಡುವೆವು. ನಿನ್ನ ಪ್ರಸಾದದ ಮಹಿಮೆಯಿಂದ ಯುದ್ಧಮಾಡಿ, ಎಲ್ಲ ಅಸುರರನ್ನೂ ಜಯಿಸಿ ಬರುವೆವೆಂಬ ವಿಶ್ವಾಸ ನಮಗಿದೆ. ॥೪೭॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ರಣಶೋಧನ ಮತ್ತು ಮೃತರ ಪುನರುಜ್ಜೀವನ" ಎಂಬಲ್ಲಿಗೆ ನೂರ ಹದಿನಾರನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಸಪ್ತದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಸಿಂಧುಸ್ತಲ್ಪಗತಶ್ಚಿಂತಾಮವಾಪ ಮಹತೀಂ ತದಾ ।**
**ಅಗ್ನಿಸಂತಪ್ತಹೃದಯೋ ವಿಚಾರಂ ನಾನ್ವಪದ್ಯತ ॥೧॥**

**ನಿರ್ಹರ್ಷೋ ಮ್ಲಾನವದನೋ ನಿಸ್ತೇಜಾ ನಿಷ್ಕಲೋಽಪಿ ಸಃ ।**
**ತತ ಉಗ್ರಾತ್ಮಜಾ ದುರ್ಗಾ ಲಾವಣ್ಯಲಹರೀ ಶುಭಾ ॥೨॥**

**ಚಿಂತಾಶೀವಿಷದಗ್ಧಂ ತಂ ಶ್ರುತ್ವಾಗಾನ್ಮಂಚಕ-ಸ್ಥಿತಮ್ ।**
**ಅಸಂಖ್ಯಭೂಷಣೈರ್ಯಸ್ಯಾಃ ಕಬರೀ ಭಾತಿ ಮಸ್ತಕೇ ॥೩॥**

ಶ್ರೀ ಮಂಗಲಮೂರ್ತಯೇ ನಮಃ

## ೧೧೭ ನೆಯ ಅಧ್ಯಾಯ

ಬ್ರಹ್ಮಾ :—

ಮಂಚದ ಮೇಲೆ ಬಿದ್ದುಕೊಂಡಿದ್ದ ಸಿಂಧುದೈತ್ಯನು ಬಲವಾದ ಚಿಂತೆಯನ್ನು ಹೊಂದಿದನು. ಉರಿಯಲ್ಲಿ ಬಿದ್ದವನು ಹೇಗೆ ತಪಿಸುವನೋ, ಅದರಂತೆ ಅಸುರನ ಹೃದಯವು ತಪಿಸಲಾರಂಭಿಸಿತು. ಎಷ್ಟೆಷ್ಟು ರೀತಿಯಿಂದ ವಿಚಾರಮಾಡಿದರೂ ಯಾವುದೊಂದು ನಿರ್ಣಯವೂ ಅವನ ಮನಸ್ಸಿಗೆ ಹೊಳೆಯಲಿಲ್ಲ. ॥೧॥

ಮನಸ್ಸಿಗೆ ಸ್ವಲ್ಪವೂ ಹರ್ಷವಿರಲಿಲ್ಲವಾದ್ದರಿಂದ ಅವನ ಮುಖವು ಬಾಡಿ ಹೋಗಿದ್ದಿತು. ನಿಸ್ತೇಜನಾಗಿ ಹೋಗಿದ್ದುದರಿಂದ ಅವನ ಮುಖದ ಮೇಲೆ ಜೀವ ಕಳೆಯೇ ತೋರುತ್ತಿರಲಿಲ್ಲ. ಆಗ ಉಗ್ರನ ಮಗಳೂ, ಅಸುರನ ಪತ್ನಿಯೂ ಆದ ದುರ್ಗೆಯು ಗಂಡನಿಗುಂಟಾದ ಮಹದ್ವ್ಯಾಕುಲ ಪರಿಸ್ಥಿತಿಯ ಸಂಗತಿಯನ್ನು ಕೇಳಿ ಅಲ್ಲಿಗೆ ಬಂದಳು. ಲಾವಣ್ಯಮಯಿಯೂ, ಶುಭಲಕ್ಷಣಳೂ ಆದವಳವಳು. ॥೨॥

ಚಿಂತೆ ಎಂಬ ವಿಷಸರ್ಪವು ಅಸುರನನ್ನು ಸುಡುತ್ತಲಿದ್ದುದರಿಂದ ಮಂಚವನ್ನು ಬಿಟ್ಟೇಳಲಿಷ್ಟವಿಲ್ಲದೆ ಬಿದ್ದಿದ್ದ ತನ್ನ ಪತಿಯನ್ನು ಸಂತವಿಸಲು ದುರ್ಗೆಯು ಮಂಚದ ಸಮೀಪಕ್ಕೆ ಬಂದು ನಿಂತಳು. ಅವಳು ತನ್ನ ತಲೆ ಗಂಟಿಗೆ ಎಣಿಸಲಾರದಷ್ಟು ಆಭರಣಗಳನ್ನು ಧರಿಸಿದ್ದಳು. ಆ ಗಂಟು ಬಹಳ ಮೋಹಕವಾಗಿದ್ದಿತು. ॥೩॥

**ಕಸ್ತೂರೀತಿಲಕಂ ಯಸ್ಯಾ ಲಲಾಟೇ ಭಾತಿ ಸುಂದರಮ್ ।**
**ಕಂಠೇ ಹಾರಂ ಕಟೌ ಕಾಂಚೀಂ ಭಿಭ್ರತೀಂ ರತ್ನಸಂಯುತಾಮ್ ॥೪॥**

**ಸರ್ವಾಲಂಕಾರಸಂಯುಕ್ತಾಂ ಸರ್ವಾಲಂಕಾರಸುಂದರಾಮ್ ।**
**ಆಗತಾಂ ತು ನಿರೀಕ್ಷ್ಯೈವ ಮಂಚಕಾಭ್ಯಾಶಮುತ್ಸುಕಾಮ್ ॥೫॥**

**ಬಹಿಸ್ತತ್ಸೇವಕಾ ಯಾತಾಸ್ತತಃ ಸಾ ಪತಿಮಬ್ರವೀತ್ ।**

**ದುರ್ಗೋವಾಚ :—**

**ಕಿಂ ಚಿಂತಾಂ ಕುರುಷೇ ಸ್ವಾಮಿನ್ ! ಯದ್ಭಾವ್ಯಂ ತದ್ಭವಿಷ್ಯತಿ ॥೬॥**

**ಈಶ್ವರಸ್ಯ ವಶೇ ಲೋಕೋ ನ ಸ್ವತಂತ್ರಃ ಕದಾಚನ ।**
**ಸರ್ವೇಷಾಂ ಮಾನಸಂ ತ್ವಂ ಕಿಮುದ್ವೇಜಯಸಿ ಮೇಽಪಿ ಚ ॥೭॥**

ಅವಳು ತನ್ನ ಹಣೆಗೆ ಇರಿಸಿದ್ದ ಕಸ್ತೂರೀ ತಿಲಕವು ಅವಳ ಮುಖದ ಸ್ವಭಾವ ಸೌಂದರ್ಯವನ್ನು ಮತ್ತಷ್ಟೂ ಹೆಚ್ಚಿಸಿದ್ದಿತು. ಕೊರಳಿನಲ್ಲಿ ಬಹಳ ಬೆಲೆಬಾಳುವ ಹೊಳೆವ ರತ್ನದ ಹಾರವನ್ನೂ, ನಡುವಿನಲ್ಲಿ ನಾನಾರತ್ನ ಖಚಿತ ಒಡ್ಯಾಣವನ್ನೂ ಧರಿಸಿದ್ದಳು ॥೪॥

ಸರ್ವಾಲಂಕಾರದಿಂದ ಕೂಡಿದವಳಾದ ದುರ್ಗೆಯು ತಾನು ಧರಿಸಿದ್ದ ಒಡವೆಗಳಿಗೇ ಒಂದು ಬಗೆಯ ಹೊಳಪನ್ನು ಕೊಡುತ್ತಲಿದ್ದಳು. ಇಂತಹ ಸರ್ವಾಂಗಸುಂದರಿ ; ದುರ್ಗೆಯು ಉತ್ಸುಕತೆಯಿಂದ ಸಿಂಧುದೈತ್ಯನು ಮಲಗಿದ್ದ ಮಂಚದ ಬಳಿಗೆ ಬರುತ್ತಿರುವುದನ್ನು ಸೇವಕರು ನಿರೀಕ್ಷಿಸಿದರು. ॥೫॥

ಅಸುರನನ್ನು ಸೇವಿಸುತ್ತ ಬಳಿಯಲ್ಲಿ ನಿಂದಿದ್ದ ಸೇವಕ ಜನರು ಮಹಾರಾಣಿ ಬಂದುದನ್ನು ನೋಡಿ ಹೊರಗಡೆಗೆ ಬಂದುಬಿಟ್ಟರು. ದಂಪತಿಗಳಿಬ್ಬರೂ ಏಕಾಂತದಲ್ಲಿರುವಾಗ ದುರ್ಗೆಯು ಗಂಡನನ್ನು ಕುರಿತು ಹೀಗೆಂದಳು

ದುರ್ಗಾ :—

ನಾಥ! ಇದೇನು ? ಈ ಪರಿ ಚಿಂತೆಯನ್ನು ಮಾಡುತ್ತಿರುವೆ ? ಏನೆಲ್ಲ ಆಗಬೇಕೆಂದು ದೈವಸಂಕಲ್ಪವಿರುವುದೋ, ಅದೆಲ್ಲ ಆಗಿಯೇ ತೀರುವುದು. ॥೬॥

ಇಡೀ ಪ್ರಪಂಚವು ಪರಮೇಶ್ವರನ ಅಧೀನದಲ್ಲಿದೆ. ಯಾರೊಬ್ಬರೂ ಎಂದೆಂದಿಗೂ ಸ್ವತಂತ್ರರಾಗಿಲ್ಲ. ಹೀಗಿರುವಾಗ ಇದನ್ನು ಸಂಪೂರ್ಣವಾಗಿ ಅರಿತ ನೀನು ಎಲ್ಲರ, ವಿಶೇಷವಾಗಿ ನನ್ನ ಮನಸ್ಸನ್ನು ಏತಕ್ಕಾಗಿ ಉದ್ವೇಗಗೊಳಿಸುವೆ ? ॥೭॥

ಕೋ ಹೇತುಸ್ತೇ ವದ ವಿಭೋ ! ತತೋ ಯುಕ್ತಿಂ ವದಾಮಿ ತೇ ।

ಕ ಉವಾಚ :—

ಪ್ರಿಯಾವಾಕ್ಯಂ ಸಮಾಕರ್ಣ್ಯ ಗಂಡಕೀನಾಯಕಸ್ತದಾ ||೮||
ಸಾವಧಾನಮನಾಭೂತ್ವಾ ವೃತ್ತಾಂತಂ ತಾಮುಥಾಬ್ರವೀತ್ ।

ಸಿಂಧುರುವಾಚ :—

ಕಿಂ ವದಾಮಿ ಪ್ರಿಯೇ ಶ್ಲಾಘ್ಯೇ ಮನಃಖೇದಕರಂ ಪರಮ್ ||೯||
ಯುದ್ಧ್ಯತೋ ಮೇ ರಣೇ ಕರ್ಣೌ ಮಯೂರೇಶೇನ ಸಾದಿತಾ !
ಸಪ್ತಕೋಟಿಮಿತಾ ಸೇನಾ ನಿಹತಾ ಪೌರುಷೇಣ ಹ ||೧೦||
ಸ್ಕಂದಾದಯೋ ಮಹಾವೀರಾಃ ಪಾತಿತಾಃ ಶರವೃಷ್ಟಿಭಿಃ ।

---

ವಿಭೋ! ನಿನ್ನ ಚಿಂತೆಗೆ ಕಾರಣವಾದರೂ ಯಾವುದು ? ಅದನ್ನು ಸ್ಪಷ್ಟವಾಗಿ ಹೇಳು. ಅದನ್ನು ಕೇಳಿದನಂತರ ಅದಕ್ಕೆ ತಕ್ಕ ಯುಕ್ತಿಯನ್ನು ನಾನು ಹೇಳುತ್ತೇನೆ.

ಬ್ರಹ್ಮ:—

ಗಂಡಕೀನಗರದ ನಾಯಕನಾದ ಸಿಂಧುದೈತ್ಯನು ತನ್ನ ಪ್ರಿಯೆಯು ಆಡಿದ ಮಾತುಗಳನ್ನು ಕೇಳಿ ||೮||

ಬಹಳಮಟ್ಟಿಗೆ ಸಮಾಧಾನವನ್ನು ಹೊಂದಿದನು. ಮತ್ತು ನಡೆದ ಸಂಗತಿಯನ್ನು ಹೆಂಡತಿಯ ಎದುರಿಗೆ ಹೇಳಿಕೊಂಡನು.

ಸಿಂಧು :—

ಪ್ರಿಯೆ ! ನೀನು ಬಹಳ ಶ್ಲಾಘ್ಯಳಾದವಳು. ನನ್ನ ಮನಸ್ಸಿಗುಂಟಾದ ಕ್ಲೇಶವನ್ನು ಏನೆಂದು ಹೇಳಿಕೊಳ್ಳಲಿ? ಕೇಳಿದವರ ಮತ್ತು ಹೇಳಿದವರ ಮನಸ್ಸಿಗೆ ಬಹಳ ಖೇದ ಉಂಟಾಗುವುದು. ||೯||

ನಾನು ಮಯೂರೇಶ್ವರನ ಸಂಗಡ ಯುದ್ಧಮಾಡಲು ರಣರಂಗಕ್ಕೆ ಹೋದೆನಷ್ಟೆ? ಅವನು ನನ್ನ ಎರಡೂ ಕಿವಿಗಳನ್ನು ಕೊಯ್ದು ನನ್ನನ್ನು ಅವಮಾನಗೊಳಿಸಿಬಿಟ್ಟನು. ಯುದ್ಧದಲ್ಲಿ ನಾನು ತೋರಿಸಿದ ಸಾಹಸವೇನೂ ಸಾಮಾನ್ಯವಾದುದಲ್ಲ. ಏಳು ಕೋಟಿ ದೇವಸೇನೆಯನ್ನೂ ನನ್ನ ಪೌರುಷದಿಂದ ಸದೆಬಡಿದುಬಿಟ್ಟಿದ್ದೇನೆ. ||೧೦||

ದೇವಸೇನಾನಿಯಾದ ಷಡಾನನನೇ ಮೊದಲಾದ ಮಹಾವೀರರೆಲ್ಲರೂ ನಾನು ಬಿಟ್ಟ ಬಾಣಗಳ ಸುರಿಮಳೆಗೆ ಬಲಿಯಾಗಿ ನೆಲಕ್ಕೆ ಬಿದ್ದುಹೋದರು. ಇಂತಹ

**ಅಕಸ್ಮಾನ್ಮೇ ಹತೌ ಕರ್ಣೌ ತ್ರಿಶೂಲಂ ಪ್ರೇಷ್ಯ ಶತ್ರುಣಾ ॥೧೧॥**

**ಆಚ್ಛಾದ್ಯ ಮುಖಮಾಯಾತೋ ವಾಸಸಾ ನಿಜಮಂದಿರಮ್ ।**
**ಯೇನೋಪಾಯೇನ ಮೇ ಶತ್ರುವಧಃ ಸ್ಯಾತ್ತಂ ವದಸ್ವ ಮೇ ॥೧೨॥**

**ದುರ್ಗೋವಾಚ :—**

**ವೀರಧರ್ಮಃ ಕೃತಃ ಸಮ್ಯಗ್ಜಿಹತಾಃ ಸರ್ವಸೈನಿಕಾಃ ।**
**ನ ಯಶಃ ಪ್ರಾಪ್ಯತೇ ಸ್ವಾಮಿನ್ ! ಗೋ-ಬ್ರಾಹ್ಮಣ-ಸುರದ್ವಿಷಾಮ್ ॥೧೩॥**

ಸಾಹಸಿಗನಾದ ನನ್ನ ಕಿವಿಗಳನ್ನು ಶತ್ರು ತನ್ನ ತ್ರಿಶೂಲವನ್ನು ಪ್ರಯೋಗಿಸಿ ಕೊಯ್ದು ಬಿಸುಟುಬಿಟ್ಟನು. ನಾನೆಲ್ಲೋ ಅಜಾಗರೂಕತೆಯಿಂದಿರುವಾಗ ಈ ಘಟನೆ ಅಕಸ್ಮಾತ್ ನಡೆದುಹೋಯಿತು. ॥೧೧॥

ಬಹಳ ಅವಮಾನವಾಯಿತು. ಉತ್ತರೀಯದಿಂದ ಮುಖಕ್ಕೆ ಮುಸುಕನ್ನು ಹಾಕಿಕೊಂಡು ನೆಟ್ಟಗೆ ಮನೆಗೆ ಬಂದುಬಿಟ್ಟೆನು. ಇರಲಿ, ಆದುದಾಗಿ ಹೋಯಿತು. ಯಾವ ಉಪಾಯವನ್ನು ಹೂಡಿದರೆ, ನನ್ನ ಶತ್ರುವಿನ ವಧೆಯುಂಟಾದೀತೋ, ಆ ಯುಕ್ತಿಯನ್ನು ಈಗಲೇ ನನಗೆ ಹೇಳು. ॥೧೨॥

ದುರ್ಗಾ :—

ಆರ್ಯಪುತ್ರ ! ನೀನು ವೀರರಿಗೆ ಉಚಿತವಾದ ರೀತಿಯಲ್ಲಿ ಸಾಹಸದ ಕೆಲಸ ವನ್ನೇನೋ ಮಾಡಿರುವೆ ಆದುದರಿಂದಲೇ ಸಕಲ ದೇವತಾ ಸೇನೆಯವರನ್ನೂ ಕೊಂದು ಹಾಕಿರುವೆ. ಆದರೆ, ಒಂದು ವಿಷಯವನ್ನು ಸ್ವಾಮಿ! ಹೇಳುವೆನು, ಕೋಪಗೊಳ್ಳಬೇಡ, ಸಾವಧಾನದಿಂದ ಕೇಳು. ಸಾಮಾನ್ಯವಾಗಿ ಗೋ, ಬ್ರಾಹ್ಮಣರು ಮತ್ತು ದೇವತೆಗಳು ಇವರಿಂದಲೇ ಮಧ್ಯಮಲೋಕದಲ್ಲಿದ್ದವರು ಸುಖವಾಗಿ ಬಾಳಬೇಕಾಗಿದೆ. "ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ। ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ" ಎಂದರೆ ಮಂತ್ರಜ್ಞರಾದ ಬ್ರಾಹ್ಮಣರು ಚಳಿ-ಮಳೆಗಳನ್ನು ಸಹಿಸಿ, ಆಹಾರದ ನಿಯಮಕ್ಕೊಳಪಟ್ಟು ಅಗ್ನ್ಯುಪಾಸನೆಯನ್ನು ಮಾಡುತ್ತ, ಸಕಾಲದಲ್ಲಿ ಪವಿತ್ರ ವಾದ ಆಹುತಿಗಳನ್ನು ಶಾಸ್ತ್ರೋಕ್ತ ವಿಧಾನದಿಂದ ಅಗ್ನಿಯಲ್ಲಿ ಆಯಾ ದೇವತೆಗಳಿ ಗಾಗಿ ಹೋಮಮಾಡಿದರೆ, ಅವು ಅಪೂರ್ವದ್ವಾರಾ ತೇಜೋಮಂಡಲವಾದ ಸೂರ್ಯನಿಗೆ ತಲುಪುವುವು. ಯಾವ ಯಾವ ದೇವತೆಗಳಿಗಾಗಿ ಇವನು ಆಹುತಿಗಳನ್ನು ಸಮರ್ಪಿಸಿರು ವನೋ, ಅವು ಆದಿತ್ಯನ ಮೂಲಕ ಅವರವರಿಗೆ ತಲುಪಿ, ಅವರು ತನ್ಮೂಲಕ ತೃಪ್ತರಾಗಿ ಅವಕ್ಕೆ ಪ್ರತಿಫಲವಾಗಿ ಕೊಡತಕ್ಕ ಸು-ವೃಷ್ಟಿಯು ಆದಿತ್ಯನ ಮೂಲಕವೇ ನಮಗೆ ಬರುತ್ತದೆ. ವೃಷ್ಟಿಯಿಂದ ಸಸ್ಯ, ಸಸ್ಯದಿಂದ ಅನ್ನ, ಆ ಅನ್ನದಿಂದಲೇ ಪಶು, ಪಕ್ಷಿ

**ತದ್ವೇಷಾಚ್ಚೈವ ಕಲ್ಯಾಣಂ ಕಸ್ಯಾಪಿ ಹಿ ನ ಜಾಯತೇ ।**
**ಸೇವನಾದ್ವಂದನಾದ್ದಾನಾತ್ಸ್ಮರಣಾತ್ಪೂಜನಾದಪಿ ॥೧೪॥**
**ದೇವೈರಿಂದ್ರಾದಿಭಿಃ ಸ್ಥಾನಾನ್ಯಾಪ್ತಾನಿ ಚ ಸ್ಥಿರಾಣಿ ಚ ।**
**ಯಃ ಸಮಃ ಸರ್ವಭೂತೇಷು ಶುಭಾಶುಭಫಲಪ್ರದಃ ॥೧೫॥**

ಮೊದಲಾದ ಪ್ರಾಣಿಗಳು ಜೀವಿಸುತ್ತಲಿರುವುವು. ಗೋವು ತಾನು ಸೊಪ್ಪು, ಸೆದೆ ಮುಂತಾದ ಕಸವನ್ನು ತಿಂದು, ನಮಗೆ ಆಯುರ್ವರ್ಧಕವಾದ ಅಮೃತೋಪಮ ಕ್ಷೀರವನ್ನೂ, ಬುದ್ಧಿ ಮತ್ತು ವಾಗ್ವಿವರ್ಧಕವಾದ ಕ್ಷೀರದ ಸಾರ; ಘೃತವನ್ನೂ ಕೊಟ್ಟು ಕಾಪಾಡುತ್ತದೆ. ಮತ್ತು ಅಗ್ನಿಹೋತ್ರ ಕರ್ಮಕ್ಕೆ ಬೇಕಾಗುವ ಹಾಲು-ತುಪ್ಪ ಇವನ್ನು ಅದು ಒದಗಿಸುತ್ತದೆ. ಆದುದರಿಂದ ಗೋ ಮತ್ತು ಬ್ರಾಹ್ಮಣರಿಬ್ಬರೂ ಜಗತ್ತಿನ ಜೀವನಕ್ಕಾಗಿ ಅಹರ್ನಿಶಿ ದುಡಿಯತಕ್ಕವರು. ಇಂಥವರ ಹಾಗೂ ದೇಹೇಂದ್ರಿಯ, ಮನಸ್ಸುಗಳಿಗೆ ಅಧಿಕಾರಿಗಳಾದ ದೇವತೆಗಳ ವಿಷಯದಲ್ಲಿ ಯಾರು ದ್ವೇಷವನ್ನು ಸಾಧಿಸುವರೋ, ಅವರು ಎಷ್ಟೇ ಸಾಹಸಿಗರಾಗಿರಲಿ, ಅವರಿಗೆ ಖಂಡಿತವಾಗಿಯೂ ಯಶಸ್ಸು ದೊರೆಯುವುದಿಲ್ಲ. ॥೧೩॥

ಪ್ರಕೃತ ಗೋ-ಬ್ರಾಹ್ಮಣ-ಸುರರನ್ನು ದ್ವೇಷಿಸತಕ್ಕ ಮೂಲವ್ಯಕ್ತಿ ನೀನೊಬ್ಬನೇ ಆದರೂ, ನಿನ್ನ ಆಶ್ರಯವನ್ನು ಪಡೆದು ಜೀವಿಸುತ್ತಿರುವವರು, ತಮಗೆ ಇಷ್ಟವಿಲ್ಲದಿದ್ದರೂ ಬಲಿಷ್ಠನಾದ ನಿನ್ನ ಅನುಗ್ರಹವನ್ನು ಸಂಪಾದಿಸಿ, ತನ್ಮೂಲಕ ಹೊಟ್ಟೆ ಹೊರೆಯುವುದಕ್ಕೋಸ್ಕರ ವಿಧಿ ಇಲ್ಲದೇ ಅವರೂ ಗೋ-ಬ್ರಾಹ್ಮಣರನ್ನು ದ್ವೇಷಿಸುವಂತಾಗಿದೆ ಏತೇನ ಅವರಿಗೂ ಸುಖ-ಶಾಂತಿಗಳು, ಸತ್ಕೀರ್ತಿ ಇವಾವೂ ಬರಲಾರವು. ನೀನು ಬಲವಿದ್ದು ದ್ವೇಷಿಸಿ ಸತ್ಕೀರ್ತಿಯನ್ನು ಕಳೆದುಕೊಂಡವನು, ಪಾಪ, ಇತರರು ತಮಗೆ ಬಲವಿಲ್ಲದಿದ್ದರೂ ನಿನಗಾಗಿ ಅವರನ್ನು ವಿದ್ವೇಷಿಸಿ ಸತ್ಕೀರ್ತಿಗೆ ಹೊರತಾದವರು. ಒಟ್ಟಿನ ಮೇಲೆ ಯಾರೊಬ್ಬರಿಗೂ ಸುಖ-ಶಾಂತಿ ಇಲ್ಲದೆ ಹೋಗಿದೆ. ಇದೇ ರೀತಿ ಮುಂದುವರಿಯುವುದಾದರೆ, ಈಗಿದ್ದ ಸೌಖ್ಯ-ಸೌಕರ್ಯಗಳೂ ಕಳೆದುಹೋಗುವುವಾದುದರಿಂದ ಯಾರಿಗೂ ಶ್ರೇಯಸ್ಸುಂಟಾಗುವುದಿಲ್ಲ. ಗೋ-ಬ್ರಾಹ್ಮಣ-ಸುರರನ್ನು ನಿರಹಂಭಾವದಿಂದ ಸೇವಿಸಬೇಕು. ಅವರನ್ನು ಕಂಡಾಗ ಭಕ್ತಿಯಿಂದ ವಂದಿಸಬೇಕು. ಸರ್ವದಾ ಅವರನ್ನು ದಾನಾದಿಗಳಿಂದ ಸತ್ಕರಿಸಬೇಕು. ಯಾವಾಗಲೂ ಅವರ ಉಪಕಾರವನ್ನು ಸ್ಮರಿಸುತ್ತಲಿರಬೇಕು. ಮತ್ತು ಪೂಜಿಸುತ್ತಲೂ ಇರಬೇಕು. ॥೧೪॥

ಹೀಗಿರುವುದರಿಂದಲೇ ಇಂದ್ರಾದಿ ದೇವತೆಗಳು ಮಹೋನ್ನತ ಸ್ಥಾನಗಳನ್ನು ಪಡೆದಿದ್ದಾರೆ, ಮತ್ತು ಅವು ಸಹ ಸ್ಥಿರವಾಗಿವೆ. ಅವನ್ನು ಪ್ರಕೃತ ನೀನು ಬಲಪ್ರಯೋಗದಿಂದ ಕಿತ್ತುಕೊಂಡು, ಅವರಿಗೆ ಪುನಃ ಎಂದೆಂದಿಗೂ ದೊರೆತಿರಬಾರದು, ಹಾಗೆ ಭದ್ರಪಡಿಸಿರುವೆ. ಆದರೆ, ನಿನಗೂ ಮೇಲ್ಪಟ್ಟವನೊಬ್ಬನಿದ್ದಾನೆಂಬ ನೆನಪು ನಿನಗಿರಬೇಕು.

ತತ್ಸೇವಯಾಭೀಷ್ಟಸಿದ್ಧಿಃ ಕಾಮಧೇನೋರಿವಾಭವತ್ ।
ಅಂಕುರೋ ಜಾಯತೇ ತಾದೃಗ್ಯಾದೃಗ್ಬೀಜಂ ಹಿ ಉಪ್ಯತೇ ॥೧೬॥

ಅಶುಭಾತ್ಕರ್ಮಣೋ ದುಃಖಂ ಸುಖಂ ಸ್ಯಾಚ್ಛುಭಕರ್ಮಣಃ ।
ಅತಃ ಸಂತಃ ಪ್ರಕುರ್ವಂತಿ ಶುಭಂ ಕರ್ಮ ಸಸಾದರಾತ್ ॥೧೭॥

ಹಿತಂ ಚ ಸರ್ವಜಂತೂನಾಂ ಕಾಯೇನ ಮನಸಾ ಗಿರಾ ।
ಭವತಾ ಪುರುಷಾರ್ಥೇನ ಪೀಡಿತಾಸ್ತೇ ಸುರರ್ಷಯಃ ॥೧೮॥

ಪುರುಷಾರ್ಥಃ ಸ ವಿಜ್ಞೇಯೋ ಯಶ್ಚತುರ್ಣಾಂ ಹಿ ಸಾಧಕಃ ।

---

ಪ್ರಾಣಿಯು ಮಾಡಿರಬಹುದಾದ ಶುಭಾಶುಭ ಕರ್ಮಗಳಿಗೆ ತಕ್ಕಂತಹ ಫಲಗಳನ್ನು ವೈಷಮ್ಯ ನೈರ್ಘೃಣ್ಯಗಳಿಲ್ಲದೆ ಹಂಚತಕ್ಕ ಸರ್ವಸಮುನ್ನಕ್ತಿ ಎಂದರೆ, ಸಕಲ ಪ್ರಾಣಿಗಳ ಹೃದಯಗುಹಾಶಯನೂ, ಸರ್ವಸಾಕ್ಷಿಯೂ, ಆದವನು ಭಗವಂತ ಒಬ್ಬನೇ. ॥೧೫॥

ಅವನನ್ನು ಅನನ್ಯಭಾವದಿಂದ ಸೇವಿಸಿದೆಯಾದರೆ, ಸಕಲೇಷ್ಟಗಳೂ ಸಿದ್ಧಿಸುವುವು. ಕಾಮಧೇನುವನ್ನಾಶ್ರಯಿಸಿದರೆ ಇಷ್ಟಾರ್ಥ ಸಿದ್ಧಿಸುವುದೆಂಬ ಸಂಗತಿ ನಿನ್ನ ಅನುಭವಕ್ಕೂ ಬಂದಿದೆಯೋ ಇಲ್ಲವೋ ? ಅಂತಹ ಕಾಮಧೇನುವನ್ನು ಸೃಜಿಸಿದವನು ಆ ಭಗವಂತ. ತಾತ್ಕಾಲಿಕವಾಗಿ ನಿನ್ನಲ್ಲಿರಬಹುದಾದ ಬಲ-ಪರಾಕ್ರಮ, ವೈಭವ ಇವು ಸ್ಥಿರವಾದುವು ಎಂದು ಭ್ರಮಿಸಬೇಡ. ಎಷ್ಟಿದ್ದರೇನು ? " ಸರ್ವಂ ವ್ಯರ್ಥಂ ವಿಷಮ ಸಮಯೇ ದೇವ ಏಕಃ ಸಹಾಯಃ " ಚನ್ನಾಗಿ ನೆನಪಿರಲಿ. ಲೋಕಾನುಭವವನ್ನು ಯೋಚಿಸಿ ನೋಡು. ಯಾವ ತರಹದ ಬೀಜವನ್ನು ಬಿತ್ತುವರೋ ಅದೇ ತರಹದ ಅಂಕುರ ಚಿಗುರುತ್ತದೆ. ॥೧೬॥

ಇದರಂತೆಯೇ ಅಲ್ಲವೇ ? ಪಾಪ-ಪುಣ್ಯ ಕಾರ್ಯಗಳ ಫಲಗಳು ? ನೀನೇ ಯೋಚಿಸು. ಅಶುಭ ಕರ್ಮದಿಂದ ಅಶುಭ ಫಲ, ಶುಭ ಕರ್ಮದಿಂದ ಒಳ್ಳೆಯ ಫಲ. ಆದುದರಿಂದ ಸಜ್ಜನರು ಆದರದಿಂದ ಸರ್ವದಾ ಒಳ್ಳೆಯ ಕೆಲಸಗಳನ್ನೇ ಮಾಡುವರು. ॥೧೭॥

ರಾಜನಾದುದರಿಂದ ನೀನು ಕಾಯಾ, ವಾಚಾ ಮತ್ತು ಮನಸಾ ಎಲ್ಲರಿಗೂ ಹಿತವನ್ನೇ ಬಯಸುತ್ತಿರಬೇಕು. ಆದರೆ ನೀನೋ, ಪೌರುಷವೇ ಪರಮ ಪುರುಷಾರ್ಥವೆಂದು ನಂಬಿ, ಪಾಪ ! ತಪಸ್ವಿ ಜನರನ್ನೆಲ್ಲ ಹಿಂಸಿಸಿರುವೆ. ಮತ್ತು ಈಗಲೂ ಹಿಂಸಿಸುತ್ತಲೇ ಇರುವೆ. ॥೧೮॥

ಯಾವುದರಿಂದ ಧರ್ಮಾರ್ಥಕಾಮಮೋಕ್ಷ ಈ ನಾಲ್ಕೂ ದೊರೆಯುವುವೋ, ಅದನ್ನೇ ಪರಮಪುರುಷಾರ್ಥವೆಂದು ಸಾಧಕನು ತಿಳಿಯತಕ್ಕದ್ದು. ಯಾರ ಮನಸ್ಸು

**ಯನ್ಮನೋ ನಾರ್ಥಲುಬ್ಧಂ ಸ್ಯಾತ್ಪರದಾರೇಷು ನ ಕ್ವಚಿತ್ ||೧೯||**

**ಸ ಏವ ಪುರುಷಾರ್ಥಃ ಸ್ಯಾದ್ಯಶ್ಚಾನಿಂದ್ಯಂ ನ ನಿಂದತಿ |**
**ಶರಣಾಗತರಕ್ಷಾಯಾಂ ದೃಢೋ ಧರ್ಮಪರಾಯಣಃ ||೨೦||**

**ಸಮಃ ಸರ್ವೇಷು ಭೂತೇಷು ಪುರುಷಾರ್ಥಃ ಸ ಗಮ್ಯತೇ |**
**ಸ್ವಾಮಿನ್ಮೇ ಪರಮಂ ವಾಕ್ಯಂ ಶ್ರುಣು ತೇ ಹಿತಕಾರಕಮ್ ||೨೧||**

**ಅದುಷ್ಟವಾಕ್ಸತ್ಯಶೀಲಃ ಸ್ವ-ಗುಣಾನಾಮಕೀರ್ತಕಃ |**
**ಪರೋಪಕರಣೇ ಸಕ್ತಃ ಪರಸ್ಯೈಶೂನ್ಯವರ್ಜಿತಃ ||೨೨||**

---

ದ್ರವ್ಯದ ವಿಷಯದಲ್ಲಿ ಲೋಭವನ್ನು ಹೊಂದಿರುವುದಿಲ್ಲವೋ, ಯಾರ ಮನಸ್ಸು ಪರರ ಹೆಂಡಿರಲ್ಲಿ ಎಂದೆಂದಿಗೂ ವ್ಯಾಮೋಹಗೊಳ್ಳಲಾರದೋ ||೧೯||

ಅದೇ ನಿಜವಾದ ಪುರುಷಾರ್ಥ. ಅನಿಂದ್ಯರಾದವರನ್ನು ಬಾಯಿ ಚಪಲಕ್ಕಾಗಿಯಾದರೂ ಎಂದೆಂದಿಗೂ ನಿಂದಿಸಬಾರದು. ಶರಣು ಬಂದವರನ್ನು ಕಾಪಾಡುವೆನೆಂಬುದು ಅವನ ದೃಢ ಸಂಕಲ್ಪವಾಗಿರಬೇಕು. ಧರ್ಮಾಚರಣೆಯೇ ಅವನ ಮುಖ್ಯ ಗುರಿಯಾಗಿರಬೇಕು. ||೨೦||

ಬಡವ-ಬಲ್ಲಿದವ, ನಮ್ಮವ-ಪರ, ಮಾನವ-ಪ್ರಾಣಿ, ಜಡ-ಚೇತನ, ಎಂಬ ಭೇದ, ವಿಭ್ರಮಗಳಿಗೆ ಮನಸ್ಸಿನಲ್ಲಿ ಸರ್ವಾತ್ಮನಾ ಎಡೆಗೊಡದೆ, ತನ್ನಂತೆಯೇ ಇತರರನ್ನೂ ಯಾರು ನೋಡುತ್ತಾರೆಯೋ, ಅವರೇ ನಿಜವಾಗಿ ಪುರುಷಾರ್ಥಕ್ಕೆ ಭಾಗಿಗಳಾಗುತ್ತಾರೆ. ಆರ್ಯಪುತ್ರ ! ನೀನು ನನ್ನ ಈ ದೇಹಕ್ಕೆ ಒಡೆಯ. ನಿನ್ನ ಹಿತವನ್ನು ಬಯಸುವುದು ನನ್ನ ಕರ್ತವ್ಯ. ಆದುದರಿಂದಲೇ ಇಷ್ಟೆಲ್ಲವನ್ನೂ ಹೇಳಬೇಕಾಯಿತು. ಇನ್ನೂ ಕೆಲವು ಮುಖ್ಯ ಮಾತುಗಳನ್ನು ಹೇಳುವೆನು, ಈ ಮಾತುಗಳು ನಿನ್ನನ್ನು ಕೆಡಿಸತಕ್ಕುವಲ್ಲ. ಗಮನವಿಟ್ಟು ಕೇಳು. ||೨೧||

ಕೆಟ್ಟಮಾತು ನಮ್ಮ ಬಾಯಿಯಿಂದ ಬಾರದಂತೆಯೂ, ನಾವು ಆಡುವ ಮಾತಿಗೆ ಇತರರು ಅಪಾರ್ಥವನ್ನು ಕಲ್ಪಿಸದಿರುವಂತೆಯೂ ಮಾಡಲು ನಮ್ಮ ನಾಲಿಗೆಯನ್ನು ಮೊದಲು ಸ್ವಾಧೀನಪಡಿಸಿಕೊಳ್ಳುವುದು, ತನ್ನ ಹಿರಿಮೆಯನ್ನು ಇತರರೆದುರು ಖ್ಯಾಪನ ಮಾಡುವುದಕ್ಕಾಗಿ ತನ್ನಲ್ಲಿ ಇರಬಹುದಾದ ಅಥವಾ ಇಲ್ಲದಿರಬಹುದಾದ ಗುಣಗಳನ್ನು ಹೇಳಿಕೊಳ್ಳಬಾರದು. ಕೈಲಾದನುಟ್ಟಿಗೆ ಪರರಿಗೆ ಉಪಕಾರವಾಗುವಂತಹ ಕಾರ್ಯಗಳನ್ನು ಮಾಡುವುದರಲ್ಲೇ ಆಸಕ್ತನಾಗಿರುವುದು. ಇತರರ ಕ್ಷುದ್ರಗಳನ್ನು (Weakness) ಎಣಿಸದಿರುವುದು ಮತ್ತು ಅವನ್ನು ಎತ್ತಿ ಆಡದಿರುವುದು. ||೨೨||

ತತ್ಕುರುಷ್ವ ಮಹಾಭಾಗ ! ಮಮ ಪ್ರೀತಿಂ ಯದೀಚ್ಛಸಿ ।
ಮೋಚಯಸ್ವ ಸುರಾನ್ ಸರ್ವಾನ್ ಪ್ರಬದ್ಧಾನ್ ಶಕ್ರಸಂಯುತಾನ್ ॥೨೩॥
ಪ್ರಯಾಸ್ಯತಿ ಮಯೂರೇಶೋಽಖಿಲಲೋಕಪ್ರಪಾಲಕಃ ।
ವತ್ಸ್ಯಾವಃ ಸು-ಸುಖಂ ಸ್ವಾಮಿನ್ ! ನಾನ್ಯಥಾ ತು ಸುಖಂ ಭವೇತ್ ॥೨೪॥

ಕ ಉವಾಚ :—

ಏವಂ ವಾಕ್ಯಾಮೃತಂ ತಸ್ಯಾಸ್ತದಭೂದ್ವಿಷಸನ್ನಿಭಮ್
ಮುಮೂರ್ಷೋರೌಷಧಂ ಯದ್ವದ್ಗ್ರಹರೋಗಾಪ್ಲುತಸ್ಯ ಹ ॥೨೫॥

ಇವೇ ಸದ್ಗುಣಗಳೆನಿಸುವುವು. ಇವನ್ನು ಆಚರಿಸುವ ದೃಢವ್ರತಿಗಳನ್ನು ಸಂತರೆನ್ನುವರು. ನನಗೆ ಪ್ರಿಯವನ್ನುಂಟುಮಾಡಬೇಕೆಂದು ನೀನು ನಿಜವಾಗಿಯೂ ಅಪೇಕ್ಷಿಸುತ್ತಲಿದ್ದರೆ, ಮೇಲ್ಕಂಡ ಗುಣಗಳನ್ನು ವೃದ್ಧಿಪಡಿಸಿಕೊಂಡು, ಅದರಂತೆ ಆಚರಿಸು. ಎಲ್ಲಕ್ಕೂ ಮೊದಲು, ದೇವೇಂದ್ರನಿಂದೊಡಗೂಡಿ ನಿನ್ನ ಸೆರೆಮನೆಯಲ್ಲಿ ಕೊಳೆಯುತ್ತಿರುವ ಎಲ್ಲ ದೇವತೆಗಳನ್ನೂ ಬಂಧನದಿಂದ ಮುಕ್ತಗೊಳಿಸಿಬಿಡು. ॥೨೩॥

ಇಷ್ಟನ್ನು ಮಾತ್ರ ಪ್ರಕೃತ ನೀನು ಮಾಡಿದರೂ ಸಾಕು. ಸರ್ವಲೋಕಪಾಲಕನಾದ ಮಯೂರೇಶ್ವರನಿಗೆ ನಮ್ಮ ಮೇಲೂ ದ್ವೇಷವಿಲ್ಲ. ಅವನು ತನ್ನ ಪಾಡಿಗೆ ಹೊರಟು ಹೋಗುವನು. ಸ್ವಾಮಿನ್ ! ನಾವು ಸುಖವಾಗಿ ವಾಸಿಸೋಣ. ನಮ್ಮ ಸುಖ-ಭೋಗಗಳಿಗೆ ಯಾವ ವಿಧವಾದ ಕೊರತೆಯೂ ಇರುವುದಿಲ್ಲ. ಇದೊಂದೇ ಸರಿಯಾದ ದಾರಿ. ನನ್ನ ಮಾತಿನಂತೆ ನೀನು ನಡೆಯದಿದ್ದರೆ, ಖಂಡಿತವಾಗಿಯೂ ಈ ಯುದ್ಧದ ಪರಿಣಾಮ ಸುಖಕರವಾಗುವುದಿಲ್ಲ. ॥೨೪॥

ಬ್ರಹ್ಮಾ: -

ವತ್ಸ, ವ್ಯಾಸ ! ಕೇಳು, ಅನ್ನದ್ವೇಷ, ಬ್ರಹ್ಮದ್ವೇಷ, ದೈವದ ಅಸ್ತಿತ್ವದಲ್ಲಿ ಅವಿಶ್ವಾಸಗಳು ಯಾರ ಹೃದಯದಲ್ಲಿ ಮೂಡುವುವೋ ಅಂಥವನ ಆಯುಷ್ಯ, ಸಂಪತ್ತು, ಕೀರ್ತಿಗಳು ಬಹು ಬೇಗನೆ ನಾಶ ಹೊಂದುವುವೆಂದು ತಿಳಿದವರು ಹೇಳುತ್ತಾರೆ. ಅದರಂತೆ ಅಮೃತ ಸದೃಶವಾದ ದುರ್ಗೆಯ ಹಿತನುಡಿ ಸಿಂಧುದೈತ್ಯನಿಗೆ ವಿಷಪ್ರಾಯವೆನಿಸಿತು. ಮರಣಾವಸ್ಥೆಯಲ್ಲಿರುವವನಿಗೆ ಔಷಧ ಹೇಗೆ ಹಿಡಿಯುವುದಿಲ್ಲವೋ, ಗ್ರಹಗ್ರಸ್ತನಿಗೆ ಮಂತ್ರಶ್ರವಣವು ಕಾದಕಬ್ಬಿಣದಂತೆ ಕಿವಿಗಳನ್ನು ಹೇಗೆ ಸುಡುವುದೋ, ಅದರಂತಾಯಿತು, ಸಿಂಧುವಿನ ಪರಿಸ್ಥಿತಿ. ॥೨೫॥

**ಕ್ರೋಧಸಂರಕ್ತನಯನೋ ದುರ್ಗಾಂ ತಾಂ ಸಿಂಧುರಬ್ರವೀತ್ ।**
**ನ ದಧ್ರೇ ಹೃದಿ ತಸ್ಯಾಸ್ಸ ಉಪದೇಶಂ ಹಿತಾವಹಮ್ ॥೨೬॥**
**ಸಿಂಧುರುವಾಚ :—**
**ಸಮ್ಯಗುಕ್ತಂ ತ್ವಯಾ ಭದ್ರೇ ! ಲೋಕನಿಂದಾಕರಂ ವಚಃ ।**
**ಚಾತುರ್ಯಂ ತವ ವಿಜ್ಞಾತಂ, ಕಾರ್ಯಾಕಾರ್ಯವಿದಾ ಮಯಾ ॥೨೭॥**
**ನ ಶತ್ರುಂ ಭಜತೇ ಕೋಽಪಿ ರಿಪುರ್ಮಾನಪರಾಯಣಃ ।**
**ನಾರಭೇತ್ಕೃತ್ಯಮನ್ಯಾಯ್ಯಮಾರಬ್ಧಂ ಚೇನ್ನ ತತ್ತ್ಯಜೇತ್ ॥೨೮॥**
**ತತೋ ದುಃಖಂ ಸುಖಂ ವಾ ಸ್ಯಾದಯಶೋ ಯಶ ಏವ ಚ ।**
**ಲಾಭೋ ವಾಪ್ಯಥವಾಲಾಭೋ ಜೀವನಂ ಮೃತ್ಯುರೇವ ವಾ ॥೨೯॥**

ಕೋಪವು ಮಿತಿಮೀರಿ ಬಂದುಬಿಟ್ಟಿತು. ಕಣ್ಣುಗಳು ಕೆಂಡದಂತೆ ಕೆಂಪಗಾದವು. ಆಗ ದುರ್ಗೆಯನ್ನು ಕುರಿತು ಸಿಂಧು ಹೀಗೆಂದನು. ಕೇವಲ ಕಳಕಳಿಯಿಂದ ಅವಳು ಹೇಳಿದ ಹಿತೋಪದೇಶವನ್ನು ಅವನು ಮನಸ್ಸಿಗೇ ತೆಗೆದುಕೊಳ್ಳಲಿಲ್ಲ. ॥೨೬॥

ಸಿಂಧು :—

ಭದ್ರೆ ! ಎಷ್ಟು ಚನ್ನಾಗಿ ಮಾತನಾಡಿದೆ ? ನಿನ್ನ ಮಾತನ್ನು ಯಾರು ತಾನೆ ಒಪ್ಪಿಯಾರು ? ಅದರಂತೆ ನಡೆದರೆ, ಲೋಕವು ನನ್ನನ್ನು ನಿಂದಿಸದೇ ಬಿಟ್ಟೀತೇ ? ನಿನ್ನ ಮಾತಿನ ಚಾತುರ್ಯ ನನಗೆ ಗೊತ್ತಿದೆ. ಇಷ್ಟೇ ಏನು ನಿನ್ನ ತಿಳಿವು? ನಿನಗಿಂತಲೂ ನಾನು ಈ ವಿಷಯ ಹೆಚ್ಚು ತಿಳಿದಿದ್ದೇನೆ. ಯಾವ ಕಾರ್ಯವನ್ನು ಮಾಡಬೇಕು, ಯಾವುದನ್ನು ಮಾಡಬಾರದು, ಎಂಬುದರ ಪರಿಜ್ಞಾನ ನನಗೆ ಸಂಪೂರ್ಣ ಇದೆ. ಈ ವಿಷಯದಲ್ಲಿ ನನಗೆ ಯಾರ ಉಪದೇಶವೂ ಅವಶ್ಯಕವಿಲ್ಲ. ॥೨೭॥

ಅಭಿಮಾನಕ್ಕಾಗಿ ಬಾಳತಕ್ಕ ವೀರರು ಶತ್ರುವಿನ ಬಳಿಗೆ ಹೋಗಿ ಎಂದಿಗಾದರೂ ಆಶ್ರಯವನ್ನು ಬೇಡಿಯಾರೇ ? ನೀನು ಹೇಳುವುದೂ ನ್ಯಾಯವೇ. ಆದರೆ, " ಅನಾರಂಭೋ ಮನುಷ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಮ್ । ಆರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಮ್" ಎಂಬುದು ನೀತಿಶಾಸ್ತ್ರ. ಅನ್ಯಾಯದ ಕೆಲಸವನ್ನು ನಾನು ಮೊದಲು ಆರಂಭಿಸಲೇ ಬಾರದಿತ್ತು. ಆರಂಭಮಾಡಿಯಾಗಿ ಹೋಗಿದೆ. ಈಗ ಕೊನೆಯ ಘಳಿಗೆಯಲ್ಲಿ ಅದನ್ನು ಅಷ್ಟಕ್ಕೇ ನಿಲ್ಲಿಸಬಾರದು. ಏನಾಗುವುದೋ, ಅದು ಆಗಿಯೇ ಹೋಗಲಿ. ಒಮ್ಮೆ ನೋಡಿಯೇ ಬಿಡೋಣ. ॥೨೮॥

ಆರಂಭಿಸಿದ ಕೆಲಸದಿಂದ ದುಃಖವಾಗಲಿ, ಅಥವಾ ಸುಖವೇ ಒದಗಲಿ, ಕೀರ್ತಿ ಬರಲಿ, ಅಥವಾ ಅಪಕೀರ್ತಿ ಬರಲಿ, ಲಾಭವಾಗಲಿ, ಅಥವಾ ನಷ್ಟವಾಗಲಿ, ಬದುಕೋಣ, ಇಲ್ಲವೇ ಸತ್ತೇ ಹೋಗೋಣ ॥೨೯॥

ಪೂರ್ವಂ ಭದ್ರೇ ! ಮಯೂ ಸಂಧಿಃ ಸಾಮ್ನಾ ತೇನ ನ ವೈ ಕೃತಃ ।
ಇದಾನೀಂ ಭವಿತಾ ಯುದ್ಧ್ಯತ್ತದ್ಭವತ್ಯೇವ ಸರ್ವಥಾ ॥೩೦॥
ಪೂರ್ವಮೇವ ಹಿ ಯಜ್ಜಂತೋರ್ಲಿಖಿತಂ ಸಾಧ್ವಸಾಧು ವಾ ।
ಕಶ್ಚಿನ್ನ ಪುರುಷಾರ್ಥೇನ ಕರ್ತುಂ ಶಕ್ತೋsನ್ಯಥಾ ಸತಿ ॥೩೧॥
ರಣೇ ಮೃತಸ್ಯ ಸ್ವರ್ಗೋsಥ ಖ್ಯಾತಿಃ ಸ್ಯಾದ್ವಿಷ್ಟಪತ್ರಯೇ ॥
ಯಾತಸ್ಯ ಶರಣಂ ಶತ್ರೋರಯಶೋ ನರಕೋsಪಿ ಚ ॥೩೨॥

---

ಪ್ರಿಯೆ ! ನಿನ್ನ ಮನಸ್ಸನ್ನು ನೋಯಿಸಬೇಕೆಂದು ನನಗೆ ಈಷದಪಿ ಸಂಕಲ್ಪವಿಲ್ಲ. ಆದರೆ ಮಾಡಲೇನು ? ಈಗ ಸಂಪೂರ್ಣ ಕೈ ಮೀರಿಹೋಗಿದೆ. ಮಯೂರೇಶ್ವರನು ಮೊದಲೇ ಸಂಧಿಯನ್ನು ಮಾಡಿಕೊಂಡು ಬರಲಿಕ್ಕಾಗಿ ನಂದಿಯನ್ನು ಕಳಿಸಿಕೊಟ್ಟಿದ್ದನು. ಆಗ ನಾನು ಒಪ್ಪಿದ್ದರೆ, ಕೇವಲ ಸಾಮೋಪಾಯದಿಂದಲೇ ಅದು ಸಾಧಿಸುತ್ತಲಿದ್ದಿತು. ಈಗ ಮೊದಲಿನ ಮೂರು ಉಪಾಯಗಳನ್ನೂ ದಾಟಿ, ನಾಲ್ಕನೆಯದಾದ ದಂಡೋಪಾಯವನ್ನು ನಾವಿಬ್ಬರೂ ಕೈಗೊಂಡಿದ್ದೇವೆ. ಮತ್ತೆ ಸಾಮೋಪಾಯದಿಂದಲೇ ಸಂಧಿಯನ್ನು ಸಾಧಿಸೋಣವೆಂದರೆ ಸಾಧ್ಯವಾಗಬಹುದೇ ? ನೀನೇ ಆಲೋಚಿಸು. ಆದುದರಿಂದ ಯಾವುದಾವುದು ಹೇಗೆ ಹೇಗೆಲ್ಲ ನಡೆಯಬೇಕಾಗಿದೆಯೋ, ಅದರಂತೆ ಸರ್ವಥಾ ಆಗಲೇಬೇಕು. ಅದಕ್ಕೇಕಿಷ್ಟು ಯೋಚನೆ. ॥೩೦॥

ಜಂತು ಜೀವನ ದಶೆಗೆ ಬರುವ ಮುನ್ನವೇ ಅದರ ಪ್ರಾರಬ್ಧ ಕರ್ಮಾನುಗುಣವಾಗಿ ಒಳ್ಳೆಯದೋ, ಕೆಟ್ಟದೋ, ಅಂತೂ ಎಲ್ಲ ಆಗು-ಹೋಗುಗಳೂ ಒಮ್ಮೆ ನಿರ್ಣಯಗೊಂಡು ಅದರ ಹಣೆಯಲ್ಲಿ ಬರೆದುಬಿಟ್ಟಿರುತ್ತದೆ. " ಹರಿಣಾಪಿ ಹರೇಣಾಪಿ ಬ್ರಹ್ಮಣಾ ತ್ರಿದಶೈರಪಿ । ಲಲಾಟೇ ಲಿಖಿತಾ ರೇಖಾ ನ ಶಕ್ಯಾ ಪರಿಮಾರ್ಜಿತುಮ್" ಎಂದು ಹೇಳುತ್ತಾರೆ. ಹೀಗಿರುವಾಗ ಅತ್ಯಲ್ಪನಾದ ಮನುಷ್ಯ ತನ್ನ ಪೌರುಷದಿಂದ ಅದನ್ನು ಮಾರ್ಪಡಿಸಲಿಕ್ಕಾಗಲಿ, ಅಳಿಸಿಯೇ ಬಿಡುವುದಕ್ಕಾಗಲಿ ಶಕ್ತನಾದಾನೆಯೇ ? ಎಂದಿಗೂ ಇಲ್ಲ. ॥೩೧॥

ಯುದ್ಧಮಾಡುತ್ತಿರುವಾಗಲೇ ರಣರಂಗದಲ್ಲಿ ಕದಾಚಿತ್ ಮೃತಿಯುಂಟಾಗುವುದಾದರೆ, ವೀರಸ್ವರ್ಗ ಲಭಿಸುವುದು. ಮೂರು ಲೋಕಗಳಲ್ಲೂ ನಮ್ಮ ಕೀರ್ತಿ ಹರಡುವುದು. ವೀರರ ಧರ್ಮವಾದ ಈ ಮಾರ್ಗವನ್ನು ಬಿಟ್ಟು, ಅಂಜುಕುಳಿಯಾಗಿ ಶತ್ರುವನ್ನು ಶರಣುಹೋದರೆ, ಇದುವರೆಗೂ ಯಾರಿಗೂ ತಲೆಬಾಗಿಸದೆ ಅಧಿಕಾರವನ್ನು ನಡೆಸಿದ ನನ್ನನ್ನು ಲೋಕವು " ಹೇಡಿ " ಎನ್ನಲಾರದೇ ? ಆಗ ವೀರಧರ್ಮವನ್ನು ತ್ಯಜಿಸಬೇಕಾಗುವುದರಿಂದ ನರಕವಾಸವು ತಪ್ಪೀತೇ ? ॥೩೨॥

ಪೂರ್ವಜೈಃ ಸಹಿತಸ್ಯಾಶು ಜಾಯತೇ ನಾತ್ರ ಸಂಶಯಃ ।
ಜಾನಾಮಿ ತಂ ಮಯೂರೇಶಂ ದೇವದೇವಂ ಜಗದ್ಗುರುಮ್ ॥೩೩॥

ಸಂಭೂತಂ ಮಮ ನಾಶಾಯ ರಾವಣಂ ರಾಘವೋ ಯಥಾ ।
ಪಾತಯಿಷ್ಯೇ ಶಿರೋಽಸ್ಯಾಹಮಿತಿ ಮೇ ನಿಶ್ಚಿತಾ ಮತಿಃ ॥೩೪॥

ತ್ಯಜಂತಿ ಜೀವಿತಂ ಶೂರಾ ನಾಭಿಮಾನಂ ಕದಾಚನ ।
ನ ಮೇಽಸ್ತಿ ಗಣನಾ ಸುಭ್ರು ! ಕೃತಾಂತಸ್ಯಾಪಿ ಕರ್ಹಿಚಿತ್ ॥೩೫॥

ತತ್ರ ಕಾ ಗಣನಾನ್ಯೇಷಾಂ ಲಜ್ಜಾ ಮೇ ಕರ್ಣತಃ ಕೃತಾ ।
ಕ ಉವಾಚ :—
ಏವಮುಕ್ತ್ವಾ ಭೂಷಣಾನಿ ವಸ್ತ್ರಾಣಿ ಚ ದಧಾರ ಸಃ ॥೩೬॥

---

ನಾನೊಬ್ಬನೇ ನರಕದಲ್ಲಿ ಬಿದ್ದು ನರಳುವುದಲ್ಲದೆ, ನನ್ನ ಪೂರ್ವಜರನ್ನು ಸಹ ನರಕಕ್ಕೆ ನೂಕಬೇಕಾದ ಪ್ರಸಂಗ ಬಂದೀತು. ಇದರಲ್ಲಿ ಸಂದೇಹವೇ ಇಲ್ಲ. ಮಯೂರೇಶನಾರೆಂಬುದನ್ನು ನಾನು ಅರಿಯೆನೆಂದು ತಿಳಿದಿರುವೆಯ ? ಈಗ ಹೇಳು ವೆನು, ಕೇಳು. ಅವನು ಜಗದ್ಗುರು. ದೇವರ ದೇವ. ॥೩೩॥

ನನ್ನನ್ನು ನಾಶಪಡಿಸಲಿಕ್ಕಾಗಿಯೇ ಅವನು ಅವತರಿಸಿದ್ದಾನೆ. ಹಿಂದೊಮ್ಮೆ ರಾವಣನನ್ನು ನಾಶಗೊಳಿಸಲಿಕ್ಕಾಗಿ ಇವನೇ "ಶ್ರೀರಾಮ" ನ ರೂಪದಿಂದ ಅವತರಿಸಿದ್ದನು. ಅವನಾರೇ ಇರಲಿ, ನಾನು ಸ್ವಲ್ಪವೂ ಹೆದರಿರುವುದಿಲ್ಲ. ಅವನೊಡನೆ ಹೋರಾಡಿ. ರಣಶಿರದಲ್ಲಿ ಅವನ ಶಿರವನ್ನು ಕೆಡುಹುವೆನೆಂಬ ನಂಬುಗೆ ನನಗಿದೆ. ॥೩೪॥

ಹುಚ್ಚಿ ! ಹೇಳುವೆನು, ಕೇಳು. ಶೂರರು ಪ್ರಾಣವನ್ನು ಬೇಕಾದರೂ ಬಿಟ್ಟು ಬಿಟ್ಟಾರು. ಅಭಿಮಾನವನ್ನು ಮಟ್ಟಿಗೆ ಎಂದೆಂದಿಗೂ ಬಿಡಲಾರರು. ಎಲೌ ಸುಭ್ರು ! ಯಮನನ್ನು ಕಂಡರೂ ಸಹ ನಾನು ಹೆದರತಕ್ಕವನಲ್ಲವೆಂಬ ವಿಷಯ ನಿನಗೇ ಗೊತ್ತಿದೆ. ॥೩೫॥

ಎಂದ ಮೇಲೆ ಈ ಹುಡುಗನಿಗಾಗಲಿ, ಅಥವಾ ಮತ್ತಿತರರಿಗಾಗಲಿ, ನಾನು ಹೆದರುವೆನೇ? ನನ್ನ ಕಿವಿಗಳನ್ನು ಕುಯ್ದು ನಾನು ತಲೆ ಎತ್ತಿ ತಿರುಗದಂತೆ ಮಾಡಿದನಲ್ಲ ಎಂಬುದೊಂದು ವಿಷಯ ಮಾತ್ರ ನನ್ನನ್ನು ಸದಾ ಬಾಧಿಸುತ್ತಲಿದೆ.

ಹೀಗೆ ನುಡಿದು, ಯೋಧರಿಗೊಪ್ಪುವ ಉಡುಪನ್ನು ಧರಿಸಿ ಯುದ್ಧಕ್ಕೆ ಹೊರಡಲು ಸಜ್ಜಾಗಿ ನಿಂತನು. ॥೩೬॥

ಕೇಯೂರಂ ಮುಕುಟಂ ರತ್ನಯುಕ್ತಂ ಹಾರಂ ಚ ಕುಂಡಲೇ ।
ತೂಣಾ ಖಡ್ಗಂ ಚ ಖೇಟಂ ಚ ಚಾಪಂ ಸಜ್ಜಂ ಚ ಶಸ್ತ್ರಿಕಾಮ್ ॥೩೭॥

ಆಚ್ಛಾದ್ಯ ಕರ್ಣೌ ರೌಕ್ಮೇಯವಸ್ತ್ರೇಣೋಷ್ಣೀಷಗೇನ ಚ ।
ಆಯಯಾವುಪವಿಷ್ಟಃ ಸ ಭದ್ರಾಸನಮನುತ್ತಮಮ್ ॥೩೮॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ದುರ್ಗಾವಾಕ್ಯನಿರಾಕರಣಂ "
ನಾಮ ಸಪ್ತದಶೋತ್ತರಶತತಮೋಽಧ್ಯಾಯಃ ಸಮಾಪ್ತಃ

ಕುತ್ತಿಗೆಗೆ ರತ್ನಾಭರಣವನ್ನು ಹಾಕಿಕೊಂಡನು. ಮಣಿಮಯ ಕಿರೀಟವನ್ನು ತಲೆಗೆ ಹಾಕಿಕೊಂಡನು. ಕುಂಡಲಗಳನ್ನು ಧರಿಸಿದಂತೆ ತೋರ್ಪಡಿಸುತ್ತಿದ್ದನು. ಎರಡು ಬತ್ತಳಿಕೆಗಳಲ್ಲೂ ಬಾಣಗಳನ್ನು ತುಂಬಿಸಿ ಅವನ್ನು ತೆಗೆದುಕೊಂಡನು. ಖಡ್ಗ, ಖೇಟ, ಸಿದ್ಧವಾದ ಧನುಸ್ಸು, ಶಸ್ತ್ರಿಕಾ ಮೊದಲಾದ ಆಯುಧಗಳನ್ನು ಸಜ್ಜುಗೊಳಿಸಿ ಸಂಗಡ ತೆಗೆದುಕೊಂಡನು. ॥೩೭॥

ಹರಿದುಹೋದ ಕಿವಿಗಳು ಇತರರಿಗೆ ಕಾಣದಂತಿರಲು ಜರಿಯ ರೇಷ್ಮೆಯ ರುಮಾಲನ್ನು ಸುತ್ತಿದನು. ನೆಟ್ಟಗೆ ಸಭೆಗೆ ಬಂದು ಅತ್ಯುತ್ತಮವಾದ ಭದ್ರಾಸನದ ಮೇಲೆ ಕುಳಿತುಕೊಂಡನು. ॥೩೮॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ದುರ್ಗಾವಾಕ್ಯನಿರಾಕರಣ "
ಎಂಬಲ್ಲಿಗೆ ನೂರ ಹದಿನೇಳನೆಯ ಅಧ್ಯಾಯಾನುವಾದವು ಸಂಪೂರ್ಣ.

॥ ಶ್ರೀ ಗಣೇಶಾಯ ನಮಃ ॥

# ಅಥಾಷ್ಟಾದಶಾಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ಯುದ್ಧಾವೇಶದುರಾಧರ್ಷ ಉಪವಿಷ್ಟೋ ಮಹಾಸನೇ ।**
**ಸ ತದಾ ವೀರಮುಖ್ಯಾಂಸ್ತಾನುಪವಿಷ್ಟಾನಥಾಬ್ರವೀತ್ ॥೧॥**

**ಸಿಂಧುರುವಾಚ :—**

**ಗತೌ ಮಮ ಪ್ರಧಾನಾ ತೌ ತ್ರೈಲೋಕ್ಯಾಕರ್ಷಣಕ್ಷಮೌ ।**
**ನ ತಾದೃಶೋಽಸ್ತಿ ವೀರೋಽತ್ರ ಯೋ ಮೇ ಹನ್ಯಾದ್ರಿಪುಂ ಬಲಾತ್ ॥೨॥**
**ನೈತಾದೃಶೌ ಬುದ್ಧಿಮಂತೌ ಪರಾಕ್ರಮಜಯೈಷಿಣೌ ।**

---

ಶ್ರೀ ಮಂಗಲಮೂರ್ತಯೇ ನಮಃ

## ೧೧೮ ನೆಯ ಅಧ್ಯಾಯ

ಬ್ರಹ್ಮಾ :-

ಯುದ್ಧದ ಆವೇಶ ಸಿಂಧುದೈತ್ಯನ ಪ್ರತಿಯೊಂದು ರಕ್ತ ಧಮನಿಯಲ್ಲೂ ಪಾದ ರಸದಂತೆ ಅತಿ ವೇಗವಾಗಿ ಹರಿಯುತ್ತಲಿದ್ದಿತು. ಇಂತಹ ಸಿಂಧು ಸಭೆಗೆ ಬಂದು ಮಹಾಸನದಲ್ಲಿ ಕುಳಿತನು. ವೀರರೆಲ್ಲರೂ ರಾಜನು ಬರುವ ಮುನ್ನವೇ ಸಭೆಗೆ ಬಂದಿದ್ದರು. ಆಗ ಸಿಂಧು ಅವರನ್ನು ಕುರಿತು ಹೀಗೆಂದು ನುಡಿದನು. ॥೧॥

ಸಿಂಧು :—

ವೀರರೇ! ನನ್ನ ಪ್ರಧಾನರಿಬ್ಬರೂ ಯುದ್ಧದಲ್ಲಿ ಮೃತರಾಗಿ ಹೋದರು. ಅವರ ಸಾಮರ್ಥ್ಯ ಕಡಿಮೆಯದಲ್ಲ. ಮೂರು ಲೋಕಗಳನ್ನು ಸಹ ಕ್ಷಣಮಾತ್ರದಲ್ಲಿ ವಶಪಡಿಸಿಕೊಂಡು ಎಳೆದುತರತಕ್ಕವರು. ಅಂತಹ ವೀರನು ಒಬ್ಬನಾದರೂ ಈಗ ನನ್ನ ಸೈನಿಕರಲ್ಲಿ ಉಳಿದಿಲ್ಲ. ಯಾರಾದರೂ ಅಂಥವನಿದ್ದಿದ್ದರೆ ನನ್ನ ಶತ್ರುವನ್ನು ಬಲಾತ್ಕಾರದಿಂದ ನಾಶಮಾಡಿಬಿಡುತ್ತಲಿದ್ದನು. ॥೨॥

ಅಂತಹ ಬುದ್ಧಿಶಾಲಿಗಳೇ ಇಲ್ಲವಲ್ಲ. ಅವರಲ್ಲಿ ಕುಯುಕ್ತಿಗಳೇ ಇರಲಿಲ್ಲ. ಶತ್ರುವನ್ನು ಪ್ರತ್ಯಕ್ಷವಾಗಿ ಸಂಧಿಸಿ ಕೊಂಡು ಬರುವಂತಹ ಪರಾಕ್ರಮಶಾಲಿಗಳು.

ಕ ಉವಾಚ :—
ವೀರಾ ಊಚುಸ್ತತಃ ಸಿಂಧುಂ
ವೀರಾ ಊಚುಃ :—
ಮಾ ಚಿಂತಾಂ ಕುರು ಸರ್ವಥಾ ||೩||
ಯಾವದ್ವಯಂ ಪ್ರಾಣವಂತೋ ಲಘುಕೃತ್ಯ ಉಪಸ್ಥಿತೇ ।
ಕಿಮರ್ಥಂ ಚಿಂತಾಕುಲತಾಂ ತಾವದ್ವ್ರಜಸಿ ದೈತ್ಯರಾಟ್ ||೪||
ಸ್ವಾಪಂ ಕುರು ಮಹಾಭಾಗ ! ಪರ್ಯಂಕೇ ಪುಷ್ಪಸಂಸ್ತರೇ ।
ಕೃತಾಂತಸ್ತಾಡಿತೋ ಯಾಭ್ಯಾಂ ತಯೋಃ ಕಸ್ಮಾದ್ಭಯಂ ಭವೇತ್ ? ||೫||
ಕ ಉವಾಚ :—
ಏವಮುಕ್ತ್ವಾ ಕಲಃ ಸಿಂಧುಂ ವಿಕಲಶ್ಚ ಮಹಾಬಲೌ ।
ಶ್ಯಾಲಕೌ ತಸ್ಯ ದೈತ್ಯಸ್ಯ ನಿರ್ಯಾತೌ ಯುದ್ಧದುರ್ಮದೌ ||೬||

ಬ್ರಹ್ಮಾ :—

ಸಿಂಧುವಾಡಿದ ಮಾತುಗಳಿಗೆ ವೀರರು ಹೀಗೆಂದು ಪ್ರತ್ಯುತ್ತರಿಸಿದರು.

ವೀರರು :—

ನೀನು ಸರ್ವಥಾ ಚಿಂತೆಯನ್ನು ಮಾಡಬೇಡ, ||೩||

ಇದು ಅಂತಹ ಪ್ರಮಾದವಾದ ಕೆಲಸವೇನೂ ಅಲ್ಲ. ಅತ್ಯಲ್ಪ ಕಾರ್ಯ. ನಾವು ಬದುಕಿರುವವರೆಗೂ ನಿನಗೇಕೆ ಚಿಂತೆ ? ನೀನು ಇಡೀ ದೈತ್ಯಕುಲಕ್ಕೇ ರಾಜನಾಗಿರುವೆ. ಹೀಗಿರುವಾಗ ವ್ಯರ್ಥವಾಗಿ ಏಕೆ ಚಿಂತೆಯನ್ನು ಹಚ್ಚಿಕೊಂಡು ಪೇಚಾಡುವೆ ? ||೪||

ಪುಷ್ಪಗಳಿಂದ ಅಲಂಕೃತವಾದ ಹಾಸಿಗೆಯಲ್ಲಿ ಮಲಗಿ ನೀನು ಸುಖವಾಗಿ ನಿದ್ರೆಯನ್ನು ಮಾಡು. ಮಂಚವನ್ನು ಬಿಟ್ಟು ನೀನು ಕೆಳಕ್ಕಿಳಿಯಬೇಕಾದ ಪ್ರಮೇಯವೇ ಇರುವುದಿಲ್ಲ. ನಾವಿಬ್ಬರೂ ಇದ್ದೇವೆ. ಸಾಕ್ಷಾತ್ ಯಮನನ್ನು ಸಹ ಒಮ್ಮೆ ಗುದ್ದಿ ಬಂದವರು ನಾವು. ಹೆಚ್ಚೇನು ಹೇಳೋಣ. ನಾವು ನಿನ್ನ ಬೆಂಬಲಿಗರಾಗಿರುವಾಗ ಏತಕ್ಕಾಗಿ ಭಯಪಡುವೆ ? ||೫||

ಬ್ರಹ್ಮಾ :—

ಹೀಗೆ ನುಡಿದವರಾರೆಂದು ತಿಳಿದೆ, ವ್ಯಾಸ ! ಅವರೇ ಕಲ-ವಿಕಲರು. ಸಿಂಧುದೈತ್ಯನ ಶ್ಯಾಲಕ (ಭಾವ-ಮೈದುನ) ರು. ಅವರು ಏನೆಂದೆಲ್ಲ ಪೌರುಷವನ್ನು ಕೊಚ್ಚಿಕೊಂಡರೋ, ಆ ವಿಷಯಗಳೆಲ್ಲ ಸತ್ಯವಾದುವೇ ಸರಿ. ಅಲ್ಲದೆ ಯುದ್ಧವೆಂದರೆ

ನಾನಾಯುದ್ಧೇಷು ಕುಶಲೌ ನಾನಾಯುಧಧರಾವುಭೌ ।
ನಾನಾಭೂಷಣವಸ್ತ್ರಾಢ್ಯೌ ನಾನಾಸೇನಾಸಮನ್ವಿತೌ ॥೭॥
ನಾನಾಗರ್ಜನತೋ ವ್ಯೋಮ ಚಕ್ರತುರ್ನಾದಸಂಯುತಮ್ ।
ದೇವಕೋಟಿನಿಹಂತಾರಾವಸಂಖ್ಯವಾಹಿನೀಯುತೌ ॥೮॥
ಯಯುಸ್ತತ್ಪುರತೋ ವೀರಾಃ ಸಿಂದೂರಾರುಣಮಸ್ತಕಾಃ ।
ಅಗ್ನಿಶಸ್ತ್ರಧರಾ ಮುಕ್ತಕೇಶಪಾಶಾಃ ಸ-ಚಂದನಾಃ ॥೯॥
ಲಸಚ್ಛಸ್ತ್ರಧರಾಃ ಸರ್ವೇ ಯಮಮತ್ತುಮಿವೋದ್ಯತಾಃ ।
ತತಃ ಕೇರಿಘಟಾ ಯಾತಾ ನಾನಾಧಾತುವಿಚಿತ್ರಿತಾಃ ॥೧೦॥

ಅವರಿಗೆ ಎಲ್ಲಿಲ್ಲದ ಹುರುಪು ಉಂಟಾಗುತ್ತಲಿದ್ದಿತು. ಇಂತಹ ಮಹಾಬಲಿಷ್ಠರಿಬ್ಬರೂ ಯುದ್ಧಕ್ಕಾಗಿ ರಣಭೂಮಿಗೆ ತೆರಳಿದರು. ॥೬॥

ಬಗೆಬಗೆಯ ಯುದ್ಧಗಳನ್ನು ಬೇಕಾದರೂ ಸ್ವಲ್ಪವೂ ಯೋಚನೆ ಇಲ್ಲದೆ ಮಾಡುವಷ್ಟು ಕುಶಲರು. ಅದಕ್ಕಾಗಿಯೇ ಅವರಿಬ್ಬರೂ ನಾನಾ ಬಗೆಯ ಆಯುಧ ಗಳನ್ನು ಧರಿಸಿಯೇ ಹೊರಟಿದ್ದರು. ದೈತ್ಯರಾಜನ ಸಂಬಂಧಿಗಳೆಂದ ಮೇಲೆ, ಅವರ ವೈಭವಕ್ಕೆ ಕೊರತೆ ಇದ್ದೀತೇ ? ಬಗೆ ಬಗೆಯ ಅಲಂಕಾರಗಳನ್ನೂ, ದಿವ್ಯ ಕವಚಾದಿ ವಸ್ತ್ರಗಳನ್ನೂ ಧರಿಸಿದ್ದರು. ಮತ್ತು ತಮ್ಮ ಸಂಗಡ ತಮ್ಮಂತೆಯೇ ಎಲ್ಲ ರೀತಿ ಯಿಂದಲೂ ಯುದ್ಧಮಾಡಬಲ್ಲ ಸೇನೆಯನ್ನು ಆಯ್ದು ಕರೆದೊಯ್ದಿದ್ದರು. ॥೭॥

ಆ ಇಬ್ಬರೂ ಭಿನ್ನ ಭಿನ್ನ ಧ್ವನಿಗಳಿಂದ ಮಾತುಗಳಿಂದ ಗರ್ಜಿಸಿ, ನಭೋ ಮಂಡಲದಲ್ಲಿ ಪ್ರತಿನಾದವನ್ನುಂಟುಮಾಡಿದರು. ಕೋಟ್ಯವಧಿ ದೇವತೆಗಳು ಬೇಕಾ ದರೂ ಅವರೊಡನೆ ಹೋರಾಟಕ್ಕೆ ಬರಲಿ, ಅವರನ್ನು ಲಕ್ಷ್ಯವಿಲ್ಲದೆ ಕೊಂದು ಬಿಸುಟುವಂಥವರು. ಎಣಿಕೆಗೇ ಸಿಕ್ಕದಷ್ಟು ಸೈನ್ಯವನ್ನು ತಮ್ಮ ಸಂಗಡ ಕರೆದು ತಂದವರು. ॥೮॥

ಅವರೆಲ್ಲ ತಮ್ಮ ಕ್ರೌರ್ಯವನ್ನು ತೋರ್ಪಡಿಸಲಿಕ್ಕಾಗಿ ಮೊದಲೇ ಕೆಂಪಾಗಿದ್ದ ತಮ್ಮ ತಲೆಗೂದಲನ್ನು ಸಿಂದೂರಲೇಪದಿಂದ ಮತ್ತಷ್ಟು ಕೆಂಪುಗೊಳಿಸಿಕೊಂಡಿದ್ದರು. ಅಗ್ನಿಯ ಜ್ವಾಲೆಯನ್ನುಗುಳುವ ಶಸ್ತ್ರ (Gun) ಗಳನ್ನು ಧರಿಸಿದ್ದರು ತಲೆಗೂದಲು ಕೆದರಿಹೋಗಿದ್ದಿತು. ಅತ್ಯಂತ ವಿಷಯಲಂಪಟರಾದುದರಿಂದ ಯುದ್ಧದ ಸಂದರ್ಭ ದಲ್ಲೂ ಸಹ ದೇಹಕ್ಕೆಲ್ಲ ಚಂದನವನ್ನು ಲೇಪಿಸಿಕೊಂಡಿದ್ದರು. ಇಂತಹ ವೀರರಿಬ್ಬರೂ ಸನ್ನದ್ಧರಾಗಿ ಮುಂದೆ ನುಗ್ಗಿ ಹೋದರು ॥೯॥

ಅವರ ಶಸ್ತ್ರಾಸ್ತ್ರಗಳು ಥಳ ಥಳ ಹೊಳೆಯುತ್ತಿದ್ದವು. ಅವರ ಉತ್ಸಾಹ, ಪ್ರಯತ್ನ ಗಳು ನೋಡುವವರಿಗೆ " ಇವರು ಯಮನನ್ನೇ ತಿಂದುಬಿಡುವರೋ" ಎಂಬಂತೆ ತೋರು

ಅಧಿಷ್ಠಾತಾ ಮಹಾಮಾತ್ಯೈಃ ನಾನಾಭೂಷಾವಿರಾಜಿತಾಃ ।
ತೀಕ್ಷ್ಣದಂತಾಃ ಸಿಂದುರಿತಾ ಘಂಟಾನಾದನಿನಾದಿತಾಃ ॥೧೧॥
ತತೋಽಶ್ವಸಾದಿನೋ ಯಾತಾಸ್ತನುತ್ರಾಣವಿರಾಜಿತಾಃ ।
ಧನುರ್ಬಾಣಧರಾಃ ಸರ್ವೇ ಲಸಚ್ಛಸ್ತ್ರವಿಭೂಷಿತಾಃ ॥೧೨॥
ಅನೇಕಯುದ್ಧಸಂಭಾರರಥಾಯಾತಾಸ್ತತಃ ಪರಮ್ ।
ಅನೇಕವೀರಸಂಯುಕ್ತಾ ನಾನಾಸೂತವಿರಾಜಿತಾಃ ॥೧೩॥
ಏವಂ ತೌ ಶ್ಯಾಲಕೌ ಯಾತೌ ರಣಸ್ಥಾನಂ ರುಷಾನ್ವಿತಾ ।
ದದೃಶಾತೇ ಮಯೂರೇಶಮಾಶೀವಿಷಭುಜಿ ಸ್ಥಿತಮ್ ॥೧೪॥

ತ್ತಲಿದ್ದವು. ಇವರ ಹಿಂದುಗಡೆ ದೊಡ್ಡ ದೊಡ್ಡ ಪರ್ವತಗಳಂತಿದ್ದ ಆನೆಗಳ ಪಡೆ ಹೊರಟಿತು. ಆ ಆನೆಗಳನ್ನು ಮಾಹುತರು ಆನೇಕ ಬಗೆಯ ಬಣ್ಣಗಳಿಂದ ಚಿತ್ರ ವಿಚಿತ್ರವಾಗಿ ಅಲಂಕರಿಸಿದ್ದರು. ॥೧೦॥

ಆನೆಗಳ ಮೇಲೆ ಮಹಾಬಲಿಷ್ಠರಾದ ಕಳೆದುಳಿದ ದೈತ್ಯನ ಮಂತ್ರಿಗಳು ಕುಳಿತಿದ್ದರು. ಮುಖವಾಡ, ಕಾಲು-ಸರಪಣಿ ಇತ್ಯಾದಿ ಸೌವರ್ಣಾಲಂಕರಣಗಳಿಂದ ಆನೆಗಳು ಭೂಷಿತವಾಗಿದ್ದವು. ಆನೆಗಳ ಕೋರೆಯ ಹಲ್ಲುಗಳು ಬಹಳ ಮೊನಚಾಗಿದ್ದವು. ನೆತ್ತಿಯು ಸಿಂದೂರಲೇಪದಿಂದ ಬಹಳ ಕೆಂಪಾಗಿದ್ದಿತು. ತಲೆ, ಸೊಂಡಿಲು ಇವನ್ನು ಪದೇ ಪದೇ ಅತ್ತಿತ್ತ ಚಾಲನಮಾಡುತ್ತ ತಮ್ಮ ಕೊರಳಲ್ಲಿ ಕಟ್ಟಿದ್ದ ಘಂಟೆಗಳು ಬಲವಾಗಿ ಧ್ವನಿಗೈಯ್ಯುವಂತೆ ಮಾಡುತ್ತಿದ್ದವು. ಘಂಟೆಗಳ ನಾದವು ರಣರಂಗವನ್ನೆಲ್ಲ ಗುಂಯ್ ಗುಟ್ಟಿಸುತ್ತಿತ್ತು. ॥೧೧॥

ಆನೆಯ ಪಡೆಯ ಹಿಂದೆ ಕುದುರೆಗಳ ಸೈನ್ಯ ಹೊರಟಿದ್ದಿತು. ಅಶ್ವಗಳ ಮೇಲೆ ಕುಳಿತ ವೀರರೆಲ್ಲ ಒಂದೇ ಬಗೆಯಾದ ಉಕ್ಕಿನ ಕವಚಗಳನ್ನು ಧರಿಸಿ ಶೋಭಿಸುತ್ತಲಿದ್ದರು. ಪ್ರತಿಯೊಬ್ಬ ಯೋಧನ ಕೈಗಳಲ್ಲೂ ಧನುರ್ಬಾಣಗಳಿದ್ದವು. ಅವರು ಹಿಡಿದಿದ್ದ ಶಸ್ತ್ರಗಳು ಮಿಂಚಿನಂತೆ ಹೊಳೆಯುತ್ತಿದ್ದವು. ॥೧೨॥

ಆ ಪಡೆಯ ಹಿಂದೆ ರಥಗಳ ಸಾಲು ಬಂದಿತು. ಪ್ರತಿಯೊಂದು ರಥವೂ ನಾನಾಬಗೆಯ ಯುದ್ಧೋಪಯೋಗಿ ; ಶಸ್ತ್ರಾಸ್ತ್ರಗಳಿಂದ ತುಂಬಿದ್ದಿತು. ರಥಗಳಲ್ಲಿ ಕುಳಿತಿದ್ದ ವೀರರು ಮಹಾಬಲಿಷ್ಠರಾಗಿದ್ದರು. ಅವು ಅನೇಕ ವಿಧ ಸೂತರಿಂದ ವಿರಾಜಿತವಾಗಿದ್ದವು. ॥೧೩॥

ರಾಜಶ್ಯಾಲಕರು ಇಷ್ಟು ಅಟ್ಟಹಾಸದಿಂದ ರಣಸ್ಥಾನಕ್ಕೆ ಬಂದರು. ಯುದ್ಧರಂಗವನ್ನು ಪ್ರವೇಶಿಸುವಾಗ ಅವರಿಗೆ ಶತ್ರುಗಳ ಮೇಲೆ ಬಹಳ ಕೋಪವೇರಿದ್ದಿತು, ಅಲ್ಲೇ ; ಎದುರಿಗೆ ಮಯೂರದ ಮೇಲೆ ಕುಳಿತಿದ್ದ ಮಯೂರೇಶನನ್ನು ಅವರಿಬ್ಬರೂ ಕಂಡರು. ॥೧೪॥

**ಷಡಾನನಾದಿಭಿರ್ವೀರೈರನ್ಯೈಶ್ಚ ಪರಿವಾರಿತಮ್ ।**
**ದೃಷ್ಟ್ವಾ ತೈಸ್ತು ತಯೋಸ್ಸೇನಾ ಘೋರಾ ಸಾ ಚತುರಂಗಿಣೀ ॥೧೫॥**
**ಅಸಂಖ್ಯಾತಂ ಬಲಂ ತಸ್ಯ ಸಮಾಯಾತಂ ವಿಚಿತ್ರಿತಮ್ ।**
**ಪ್ರೇಷಿತೋ ದೇವಪ್ರವರೈರ್ದೂತೋ ನೀತಿವಿಶಾರದಃ ॥೧೬॥**
**ಜ್ಞಾತ್ವಾ ವೃತ್ತಾಂತಮಾಯಾತಃ ಸ ಜಗಾದ ಸುರಾನ್ ಪ್ರತಿ ।**
**ದೂತ ಉವಾಚ :—**
**ಕಲಶ್ಚ ವಿಕಲಶ್ಚೈವ ನಾನಾಸೇನಾಸಮಾಯುತೌ ॥೧೭॥**
**ಜೇತುಂ ಸುರಾನ್ ಸಮಾಯಾತೌ ನಾನಾಯುದ್ಧವಿಶಾರದೌ ।**
**ತಾಭ್ಯಾಂ ಯುದ್ಧಾಯ ಸಂಪ್ರಾಪ್ತೌ ಪುಷ್ಪದಂತವೃಷಾವುಭೌ ॥೧೮॥**
**ಧನುಷೀ ಸಜ್ಜತಾಂ ನೀತ್ವಾ ಷಷ್ಟ್ಯಾ ಬಾಣೈರವಿಧ್ಯತಾಮ್ ।**

ದೇವಸೇನಾನಾಯಕನಾದ ಷಡಾನನ ಮೊದಲಾದ ಮಹಾವೀರರು ದೇವನನ್ನು ಸುತ್ತುವರೆದು ನಿಂದಿದ್ದರು. ದೇವ, ಷಡಾನನ ಮೊದಲಾದವರ ದೃಷ್ಟಿಗೆ ಕಲ ವಿಕಲರ ಪ್ರಚಂಡವಾದ ಚತುರಂಗ ಸೇನೆ ಗೋಚರವಾಯಿತು. ॥೧೫॥

ದೈತ್ಯರಿಬ್ಬರೂ ಅಸಂಖ್ಯಾತ ಸೇನೆಯೊಂದಿಗೆ ತಮ್ಮ ಮೇಲೆ ಯುದ್ಧಕ್ಕೆ ಬಂದುದನ್ನು ಲಕ್ಷಿಸಿ, ದೇವಸೇನೆಯವರು ಶತ್ರುಸೇನೆಯ ಬಲಾಬಲಗಳನ್ನು ತಿಳಿದುಬರುವುದಕ್ಕಾಗಿ ಯುದ್ಧನೀತಿಯನ್ನು ಬಲ್ಲ ಚತುರನಾದ ಒಬ್ಬ ದೂತನನ್ನು ಅಲ್ಲಿಗೆ ಕಳಿಸಿಕೊಟ್ಟರು. ॥೧೬॥

ಅವನು ಬಹಳ ಜಾಗರೂಕತೆಯಿಂದ ಆ ಸೇನೆಯ ಮಧ್ಯೆ ನುಗ್ಗಿ, ತಿಳಿಯಬೇಕಾಗಿದ್ದ ಎಲ್ಲ ಮುಖ್ಯ ಅಂಶಗಳನ್ನೂ ಸ್ಪಷ್ಟವಾಗಿ ತಿಳಿದುಕೊಂಡು ಹಿಂದಿರುಗಿ ಬಂದು, ದೇವತೆಗಳನ್ನು ಕುರಿತು ಹೀಗೆಂದು ನುಡಿದನು.

ದೂತ :—

ನಾನಾ ಸೇನಾ ಸಮೇತರಾಗಿ ಈಗ ಇಲ್ಲಿಗೆ ಬಂದವರು ಕಲ, ವಿಕಲರು. ॥೧೭॥

ಅವರು ನಾನಾಬಗೆಯ ಯುದ್ಧವಿದ್ಯೆಯಲ್ಲಿ ನಿಷ್ಣಾತರಾಗಿದ್ದಾರೆ. ದೇವತೆಗಳನ್ನೆಲ್ಲ ಜಯಿಸುವುದೇ ಅವರ ಮುಖ್ಯ ಧ್ಯೇಯ. ಇವರಿಬ್ಬರೂ ಬಂದುದನ್ನು ನೋಡಿ, ನಮ್ಮ ಪೈಕಿ ವೀರರಾದ ಪುಷ್ಪದಂತ, ನಂದಿ ಇವರು ಆ ಇಬ್ಬರು ಅಸುರರನ್ನು ಎದುರಿಸಲು ಬಂದಿದ್ದಾರೆ. ॥೧೮॥

ತಮ್ಮ ಧನುಸ್ಸನ್ನು ಸಜ್ಜುಗೊಳಿಸಿ, ಒಬ್ಬೊಬ್ಬರು ಅರವತ್ತರಂತೆ ಬಾಣಗಳನ್ನು

ದೈತ್ಯಾ ಬಾಣಾನ್ನಿವಾರ್ಯೈವ ತಾವುಭೌ ಬಾಣವೃಷ್ಟಿಭಿಃ ||೧೯||

ಛಾದಿತೌ ಶರಘಾತೇನ ಘ್ನಂತಃ ಸ್ಮ ದೇವಸೈನಿಕಾನ್ |
ಕಲಸ್ಯ ಖಡ್ಗಂ ಖಡ್ಗೇನ ಚಿಚ್ಛೇದ ಸಹಸಾ ವೃಷಃ ||೨೦||

ಸೈನ್ಯಮಾದಾಯ ತಸ್ಯಾಶು ಖಡ್ಗಂ ಛಿತ್ವಾ ನ್ಯಪಾತಯತ್ |
ವಿಕಲಸ್ಯ ಪುಷ್ಪದಂತೋ ಧನುಶ್ಚಿಚ್ಛೇದ ಸಾಯಕೈಃ ||೨೧||

ತತಸ್ತೌ ಮಲ್ಲಯುದ್ಧೇನ ಪರಸ್ಪರಮಯುಧ್ಯತಾಮ್ |
ತೇ ಸೇನೇ ಯುಧ್ಯತಾಂ ತತ್ರ ನಾನಾಶಸ್ತ್ರಾಸ್ತ್ರಪತ್ರಿಭಿಃ ||೨೨||

ಹೂಡಿ ಪ್ರಯೋಗಿಸಿದರು. ದೈತ್ಯರು ಆ ಬಾಣಗಳನ್ನು ಪ್ರತಿ ಬಾಣಗಳಿಂದ ತಡೆದು ತಾವು ಸಹ ಬಾಣಗಳ ಮಳೆಯನ್ನು ಕರೆದರು. ||೧೯||

ದೊಡ್ಡ ವೃಷ್ಟಿಯಂತೆ ಬಿದ್ದ ಬಾಣಗಳು ದೇವಸೈನ್ಯವನ್ನು ಮುಚ್ಚಿ ಹಾಕಿದುದು ಮಾತ್ರವಲ್ಲದೆ, ಅನೇಕ ಮಂದಿ ದೇವಸೈನಿಕರನ್ನೂ ಕೊಂದುಹಾಕಿದವು. ಆಗ ರೊಚ್ಚಿಗೆದ್ದ ನಂದಿಯು ಮುಂದೆ ಬಂದು, ತನ್ನ ಕೈಯ್ಯಲ್ಲಿದ್ದ ಖಡ್ಗದಿಂದ ಕಲನ ಕೈಖಡ್ಗವನ್ನು ಒಮ್ಮೆಲೆ ತುಂಡರಿಸಿ ಚಲ್ಲಿದನು. ||೨೦||

ಮತ್ತು ದೈತ್ಯನ ಸೈನ್ಯದ ಮೇಲೆ ವೇಗದಿಂದ ನುಗ್ಗಿ, ಅವರ ಶಸ್ತ್ರಾಸ್ತ್ರಗಳನ್ನೆಲ್ಲ ಕತ್ತರಿಸಿ ನೆಲಕ್ಕೆ ಕೆಡಹುತ್ತ, ಅನೇಕಮಂದಿ ದೈತ್ಯವೀರರನ್ನು ಭೂ-ಶಾಯಿಗಳನ್ನಾಗಿ ಮಾಡಿದನು. ಇತ್ತ ಪುಷ್ಪದಂತನು ಪುಂಖಾನುಪುಂಖವಾಗಿ ಬಾಣಗಳನ್ನು ಬಿಡುತ್ತ, ವಿಕಲನ ಕೈಯ್ಯಲ್ಲಿದ್ದ ಧನುಸ್ಸನ್ನು ಮುರಿದು ಚಲ್ಲಿದನು. ||೨೧||

ಆಯುಧಗಳು ನಷ್ಟವಾದುದಕ್ಕಾಗಿ ಆ ರಕ್ಕಸರು ಸ್ವಲ್ಪವೂ ಚಿಂತಿಸದೆ, ಶತ್ರುಗಳನ್ನು ಎದುರಿಸಿ, ಪರಸ್ಪರ ಮಲ್ಲಯುದ್ಧವನ್ನಾರಂಭಿಸಿದರು. ಇತ್ತ ಸೇನಾಪ್ರಮುಖರಾದ ಕಲ-ವಿಕಲರು ನಂದೀ, ಪುಷ್ಪದಂತರೊಡನೆ ಹೋರಾಡುತ್ತಿರಲು, ಅತ್ತ ಸೈನಿಕರು ತಮ್ಮಲ್ಲಿದ್ದ ಬಗೆಬಗೆಯ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತ ದೇವಸೇನೆಯೊಂದಿಗೆ ಕದನವಾಡುತ್ತಲಿದ್ದರು. ||೨೨||

ಮಾಯಾಭಿರ್ವಿವಿಧಾಭಿಶ್ಚ ಪರಸ್ಪರಜಯೇಚ್ಛಯಾ ।
ತತಃ ಪಪಾಲ ದೈತ್ಯಾನಾಂ ಸೇನಾ ಶಸ್ತ್ರಾರ್ದಿತಾ ಭೃಶಮ್ ॥೨೩॥

ಕೇಽಪಿ ದೇವಾಃ ಪೃಷ್ಠಲಗ್ನಾ ಮಾರಯಂತ್ಯಸುರಾಂಶ್ಚ ತಾನ್ ।
ಪಾದಾಘಾತೇನ ನಿಹತಾ ದೈತ್ಯಸೇನಾಚರಾ ನರಾಃ ॥೨೪॥

ಮೃತಾಸ್ಸ್ರಕ್ಸ್ರವಹಾ ತತ್ರ ವಾಹಿನೀ ಭೀರುಭೀತಿದಾ ।
ಸಂಪ್ರವೃತ್ತಾ ಮಹಾಘೋರಾ ಭೂತಪಕ್ಷಿಪ್ರಮೋದಿನೀ ॥೨೫॥

ತತೋ ವೇಗಾತ್ಸಮುಡ್ಡೀಯ ಕಲಶ್ಚ ವಿಕಲಶ್ಚ ಹ ।
ಶಸ್ತ್ರವೃಷ್ಟಿಂ ಮಹೋಗ್ರಾಂ ತೌ ಚಕ್ರತುರ್ಯುದ್ಧದುರ್ಮದೌ ॥೨೬॥

ಸರಳ ಹಾಗೂ ಕೃತ್ರಿಮೋಪಾಯಗಳನ್ನೆಲ್ಲ ಅರಿತು ನಿಷ್ಣಾತರಾದ ಉಭಯ ಪಕ್ಷಗಳ ಸೈನಿಕರೂ ಮಾಯೆಗಳನ್ನು ನಿರ್ಮಿಸುತ್ತಲೂ ಅವನ್ನು ಅಳಿಸಿ ಹೊಸ ಬಗೆಯ ಮಾಯೆಯನ್ನು ಪ್ರಸರಿಸುತ್ತಲೂ, ಬಹು ಚಮತ್ಕಾರದಿಂದಲೂ, ಒಬ್ಬರನ್ನೊಬ್ಬರು ಜಯಿಸಬೇಕೆಂಬ ಪ್ರಬಲೋತ್ಸಾಹದಿಂದಲೂ ಹೆಣಗಾಡಿದರು. ದೇವಸೇನೆಯ ಯುದ್ಧದ ಬಿರುಸನ್ನು ತಡೆಯಲಾರದೆ, ದೈತ್ಯರ ಸೇನೆಯು ಶಸ್ತ್ರಾಘಾತದಿಂದ ಬಲವಾಗಿ ಗಾಯಗೊಂಡು ಓಡಿಹೋಯಿತು. ॥೨೩॥

ಹೀಗೆ ಓಡುತ್ತಿದ್ದ ರಣಹೇಡಿ; ದೈತ್ಯವೀರರನ್ನು ಕೆಲವು ದೇವತೆಗಳು ಬೆನ್ನಟ್ಟಿ ಹೋಗಿ ಕೊಲ್ಲಲಾರಂಭಿಸಿದರು. ಆಗಣ ಗದ್ದಲದಲ್ಲಿ ದೇವಸೈನಿಕರ ಒದೆತಗಳಿಗೆ ಸಿಕ್ಕಿ ಅನೇಕ ಮಂದಿ ದೈತ್ಯವೀರರು ಮೃತರಾದರು. ॥೨೪॥

ಮೃತರಾದ ಸೈನಿಕರ ದೇಹಗಳಿಂದ ಪ್ರವಾಹರೂಪವಾಗಿ ಹೊರಟ ರಕ್ತವು ರಣರಂಗದಲ್ಲಿ ಒಂದು ನದಿಯಾಗಿ ಹರಿಯಿತು. ಅದನ್ನು ಭೀರುಗಳೇನಾದರೂ ನೋಡಿದ್ದರೆ, ಅವರನ್ನು ಭಯಪಡಿಸುವಂತಿದ್ದಿತು. ಹೀಗೆ ಬಹು ಘೋರವಾಗಿ ಹರಿಯಲಾರಂಭಿಸಿದ ರಕ್ತನದಿಯು ರಕ್ತಪಾಯಿಗಳಾದ ಭೂತಗಳು, ಪಕ್ಷಿಗಳು ಇವಕ್ಕೆ ಅತ್ಯಾನಂದವನ್ನುಂಟುಮಾಡುತ್ತಲಿದ್ದಿತು. ॥೨೫॥

ಅನಂತರ ಯುದ್ಧದುರ್ಮದರಾದ ಕಲ-ವಿಕಲರು ಬೇಗನೆ ಗಗನಕ್ಕೆ ನೆಗೆದು ಪಕ್ಷಿಗಳಂತೆ ಅಲ್ಲೆ ಹಾರಾಡುತ್ತ ಅತಿ ತೀಕ್ಷ್ಣ ಬಾಣಗಳನ್ನು ದೊಡ್ಡ ಮಳೆಯಂತೆ ಶತ್ರುಗಳ ಮೇಲೆ ಸುರಿಸಿದರು. ॥೨೬॥

ತಯಾ ಹತಾ ದೇವಸೇನಾ ಸ್ರವದ್ರಕ್ತಾ ಪಪಾಲ ಹ ।
ತತೋ ವೃಷೋಽಹನತ್ಸೇನಾಂ ಶೃಂಗಾಭ್ಯಾಂ ಚ ತಯೋರ್ದೃಶಮ್ ॥೨೭॥

ಲತ್ತಾಭಿಶ್ಚ ಜಘಾನಾಶು ಫೂತ್ಕಾರೇಣ ನ್ಯಪಾತಯತ್ ।
ಪುಚ್ಛಾಘಾತೇನ ಕಾಂಶ್ಚಿಚ್ಚ ಚೂರ್ಣಯಾಮಾಸ ದೈತ್ಯಪಾ ॥೨೮॥

ಏವಂ ತೇನ ಹತಾ ಸೇನಾ ನಾನಾದೈತ್ಯಸಮಾಕುಲಾ ।
ಹಾಹಾಕಾರೋ ಮಹಾನಾಸೀದ್ದೈತ್ಯಾನಾಂ ತತ್ರ ನಶ್ಯತಾಮ್ ॥೨೯॥

ತತೋಽತಿಬಲಿನೌ ವೀರೌ ಕಲಶ್ಚ ವಿಕಲಶ್ಚ ಹ ।
ಜಗರ್ಜತುರುಭೌ ರೋಷಾದ್ಗರ್ಜಯಂತೌ ದಿಶೋ ದಶ ॥೩೦॥

ನಿನಿಂದತುಸ್ತೌ ವೃಷಭಂ

---

ಅನಿರೀಕ್ಷಿತವಾಗಿ ಮೇಲ್ಗಡೆಯಿಂದ ಬಿದ್ದ ಬಾಣವೃಷ್ಟಿಯು, ದೇವಸೇನೆಯಲ್ಲಿ ಬಹುಭಾಗವನ್ನು ಹತಗೊಳಿಸಿತು. ಸೈನಿಕರು ತಮ್ಮ ದೇಹಗಳಿಂದ ಧಾರಾಕಾರವಾಗಿ ರಕ್ತವನ್ನು ಪ್ರವಹಿಸುತ್ತ ಓಡಿಹೋದರು. ಇದನ್ನು ನೋಡಿ ರೋಷಗೊಂಡ ನಂದಿಯು ದೈತ್ಯ ಸೇನೆಯ ಮೇಲೆ ನುಗ್ಗಿ, ತನ್ನ ಮೊನೂಚಾದ ಕೊಂಬುಗಳಿಂದ ಸೈನಿಕರನ್ನು ತಿವಿದು ತಿವಿದು ಕೊಂದನು. ಮತ್ತು ಅನೇಕರನ್ನು ಗಾಯಗೊಳಿಸಿದನು. ॥೨೭॥

ಕಾಲುಗಳಿಂದ ಒದೆಯುವುದು, ಅನಂತರ ಘಟ್ಟಿಯಾಗಿ ಉಸಿರನ್ನು ಬಿಟ್ಟು ಅವರನ್ನೆಲ್ಲ ನೆಲಕ್ಕೆ ಕೆಡಹುವುದು, ಹೀಗೆಲ್ಲ ಹಾವಳಿಯನ್ನು ಮಾಡಿದನು. ಕೆಲವು ದೈತ್ಯವೀರರನ್ನು ತನ್ನ ಬಾಲದಿಂದ ಹೊಡೆದು ಪುಡಿಪುಡಿ ಮಾಡಿದನು. ॥೨೮॥

ಈ ರೀತಿಯಾಗಿ ನಂದಿಯು ಬಿರುಸಿನಿಂದ ಯುದ್ಧವನ್ನು ಮಾಡುತ್ತ ನಾನಾ ಬಗೆಯ ದೈತ್ಯವೀರರಿಂದೊಡಗೂಡಿದ ಶತ್ರುಸೇನೆಯನ್ನು ವಧಿಸಿ, ಉಳಿದವರ ಹೃದಯದಲ್ಲಿ ಕ್ಷೋಭೆಯನ್ನುಂಟುಮಾಡಿದನು. ಆಗ ಪ್ರಾಣಾಪತ್ತಿಗೊಳಗಾದ ದೈತ್ಯ ಸೈನಿಕರು, ತಾವು ಸಾಯುವಾಗ ವಿಕಾರಸ್ವರದಿಂದ ಕೂಗುತ್ತ, ದೊಡ್ಡ ಕೋಲಾಹಲವನ್ನುಂಟುಮಾಡಿದರು. ॥ ೨೯ ॥

ಆಗ ಅತಿ ಬಲಿಷ್ಠರಾದ ಕಲ-ವಿಕಲರು ಬಹಳ ಕೋಪಗೊಂಡು, ಘಟ್ಟಿಯಾಗಿ ಗರ್ಜಿಸತೊಡಗಿದರು ಮತ್ತು ತಮ್ಮಿಬ್ಬರ ಗರ್ಜನೆಯಿಂದ ಹತ್ತು ದಿಕ್ಕುಗಳೂ ಪ್ರತಿಯಾಗಿ ಗರ್ಜಿಸುವಂತೆ ಮಾಡಿದರು. ॥ ೩೦ ॥

ಹೀಗೆ ಗರ್ಜಿಸುವಾಗ ಬಾಯಿಗೆ ಬಂದಂತೆ ಮಾತುಗಳನ್ನಾಡುತ್ತ ನಂದಿಯನ್ನು ಕಟುವಾಗಿ ನಿಂದಿಸತೊಡಗಿದರು.

ತಾವೂಚತುಃ :—

ಕಿಂ ತ್ವಂ ಯುಧ್ಯಸಿ ನೌ ಪುರಃ ? ।
ತೃಣಾದನೇಷು ಶಕ್ತಸ್ತ್ವಂ ತೃಣರೂಪೋಽಸಿ ಸಾಂಪ್ರತಮ್ ॥೩೦॥

ಕ ಉವಾಚ :—

ದಧ್ರಾತ ಏವಮುಕ್ತ್ವಾ ತೌ ತಸ್ಯ ಶೃಂಗೇ ಮಹಾಬಲೌ ।
ನಿಕೃಷ್ಯ ನಿನ್ಯತುರುಭೌ ಸ್ವ-ಸೇನಾಂ ಚತುರಂಗಿಣೀಮ್ ॥೩೧॥

ತಂ ಮೋಚಿತುಂ ಪುಷ್ಪದಂತೋಽಭಿಯಯೌ ಸಹಸಾ ಜವಾತ್ ।
ತತಸ್ತಂ ವಿಕಲೋ ಲತ್ತಾಪ್ರಹಾರೈಃ ಪಾತಯದ್ಭುವಿ ॥೩೩॥

ನನರ್ದ ವಾದ್ಯಘೋಷೇಣ ಹರ್ಷನಿರ್ಭರಮಾನಸಃ ।
ಸ ಮೂರ್ಚ್ಛಿತೋ ಮುಹೂರ್ತಾತ್ತು ಸಂಜ್ಞಾಂ ಪ್ರಾಪದನಾತುರಃ ॥೩೪॥

---

ಕಲ-ವಿಕಲರು :—

ಏಯ್, ಬಸವ! ನೀನು ನಮ್ಮಂತಹ ವೀರರೆದುರು ಯುದ್ಧವನ್ನು ಮಾಡುವೆಯೇನೋ? ನಿನ್ನ ಸಾಮರ್ಥ್ಯವನ್ನು ಹುಲ್ಲುಮೇಯುವುದರಲ್ಲಿ ತೋರಿಸು. ಪ್ರಕೃತ ನಿನ್ನ ಸ್ವರೂಪವೂ ಹುಲ್ಲುಕಡ್ಡಿಯಂತೆ ಕ್ಷುಲ್ಲಕವಾಗಿಯೇ ಇದೆ. ॥ ೩೦ ॥

ಬ್ರಹ್ಮಾ:—

ಹೀಗೆ ನುಡಿದು ಮಹಾಬಲಿಷ್ಠರಾದ ಕಲ ವಿಕಲರಿಬ್ಬರೂ ಒಮ್ಮೆಲೇ ಮುನ್ನುಗ್ಗಿ ನಂದಿಯ ಕೊಂಬುಗಳೆರಡನ್ನೂ ಭದ್ರವಾಗಿ ಹಿಡಿದುಕೊಂಡುಬಿಟ್ಟರು. ಹಾಗೂ ಅವನನ್ನು ಅತ್ತಿತ್ತ ಎಳೆದಾಡಿ ತಮ್ಮ ಚತುರಂಗ ಸೇನೆ ಇದ್ದೆಡೆಗೆ ಎಳೆದುಕೊಂಡು ನಡೆದರು. ॥ ೩೧ ॥

ನಂದಿಯು ರಾಕ್ಷಸರ ಹಿಡಿತಕ್ಕೆ ಸಿಕ್ಕುದನ್ನು ನೋಡಿದಕೂಡಲೆ, ಅವನನ್ನು ಬಿಡಿಸಿಕೊಂಡುಬರಲು ಪುಷ್ಪದಂತನು ತನ್ನ ಸಾಹಸವನ್ನೆಲ್ಲ ಉಪಯೋಗಿಸಿ ಓಡುತ್ತ ಅಲ್ಲಿಗೆ ಹೋದನು. ಓಡಿಬಂದ ಪುಷ್ಪದಂತನನ್ನು ವಿಕಲನು ಒದೆದು ನೆಲಕ್ಕುರುಳುವಂತೆ ಮಾಡಿದನು. ॥ ೩೩ ॥

ಪುಷ್ಪದಂತನನ್ನು ಕೆಡಹಿದುದರಿಂದ ತಾನು ದೊಡ್ಡ ವಿಜಯವನ್ನೇ ಗಳಿಸಿದೆನೆಂದು ಉನ್ಮಾದಗೊಂಡು ವಿಕಲನು ಬಹಳ ಹರ್ಷಗೊಂಡನು. ರಣವಾದ್ಯಗಳು ಭೋರ್ಗರೆಯಲೆಂದೂ ಆಜ್ಞೆಯನ್ನಿತ್ತು, ಅದರ ತಾಳಕ್ಕನುಸರಿಸಿ ತಾನೂ ಹುಚ್ಚನಂತೆ ಗರ್ಜಿಸಲಾರಂಭಿಸಿದನು. ಪುಷ್ಪದಂತನು ವಿಕಲನ ಏಟಿನಿಂದ ಎಚ್ಚರತಪ್ಪಿ ಬಿದ್ದಿದ್ದರೂ

**ತತೋ ಯೋದ್ಧುಂ ಸಮಾಯಾತೌ ವೀರಭದ್ರ-ಷಡಾನನೌ ।**
**ಕಲಃ ಪರ್ವತಘಾತೇನ ಶತಧಾ ನ್ಯಪತದ್ಭುವಿ ॥೧೫॥**
**ವೀರಭದ್ರಸ್ತು ವಿಕಲಂ ತಲಘಾತಾದಪಾತಯತ್ ।**
**ದೃಷ್ಟ್ವಾ ಸ್ಕಂದೇನ ನಿಹತಂ ಕಲಂ ದೈತ್ಯಂ ಮಹಾದ್ರಿಣಾ ॥೧೬॥**
**ತತೋ ಯಯುಃ ಸ್ವ-ಶಿಬಿರಂ ಗಣಾಸ್ತೇ ಜಯಶಾಲಿನಃ ।**
**ತತಃ ಶಸ್ತ್ರಹತಾಃ ಕೇಚಿಜ್ಜೀವಂತೋ ಗಂಡಕೀಂ ಯಯುಃ ॥೧೭॥**
**ಶಶಂಸುರ್ದೈತ್ಯರಾಜಾಯ " ನಾನಾಸೇನಾಯುತಃ ಕಲಃ ।**
**ವಿಕಲಶ್ಚ ಹತೋ ರೋಷಾದ್ವೀರಭದ್ರಾದಿಭಿರ್ಗಣೈಃ" ॥೧೮॥**
**ಗತಾಸ್ತೇ ಶಿಬಿರಂ ದೇವಗಣಾಸ್ತು ಜಯಶಾಲಿನಃ ॥೧೯॥**

---

ಹೆಚ್ಚು ಗಾಯವನ್ನು ಹೊಂದಿರಲಿಲ್ಲವಾದ್ದರಿಂದ ಸ್ವಲ್ಪ ಹೊತ್ತಿನಲ್ಲೇ ಪುನಃ ಸಂಜ್ಞೆಯನ್ನು ಹೊಂದಿದನು. ॥ ೧೪ ॥

ಅನಂತರ ವೀರಭದ್ರ–ಷಡಾನನರು ಕಲ-ವಿಕಲರೊಡನೆ ಕಾದಾಡಲು ಮುಂದೆ ಬಂದರು. ಕಲನ ಮೇಲೆ ಇವರು ಒಂದು ಪರ್ವತವನ್ನೆತ್ತಿ ಹಾಕಿದ್ದರಿಂದ ಅವನು ನೂರಾರು ಹೋಳುಗಳಾಗಿ ನೆಲಕ್ಕೆ ಬಿದ್ದನು ॥ ೧೫ ॥

ವೀರಭದ್ರನು ತನ್ನ ಅಂಗೈಯಿಂದ ವಿಕಲನನ್ನು ಅಪ್ಪಳಿಸಿಬಿಟ್ಟನು. ಇದನ್ನು ತಡೆದುಕೊಳ್ಳಲಾರದೆ ಅವನು ನೆಲಕ್ಕುರುಳಿ ಸತ್ತು ಹೋದನು. ಕಲನ ಮೇಲೆ ಷಣ್ಮುಖನು ಪರ್ವತವನ್ನು ಎತ್ತಿಹಾಕಿ ಅವನನ್ನು ಪರಲೋಕಕ್ಕೆ ಕಳಿಸಿದುದನ್ನು ನೋಡಿ, ಅಸುರ ಸೇನೆಯು ಕಂಗೆಟ್ಟು ಓಡಿತು. ॥ ೧೬ ॥

ಅದ್ಭುತವಾದ ಈ ವಿಜಯದಿಂದ ಪ್ರಮಥಗಣಗಳು ಬಹಳ ಸಂತುಷ್ಟರಾದರು. ಆ ಆನಂದದ ಭರದಲ್ಲೇ ತಮ್ಮ ಶಿಬಿರಕ್ಕೆ ಹಿಂದಿರುಗಿದರು. ಅತ್ತ ದೈತ್ಯಸೈನ್ಯದಲ್ಲಿ ಅನೇಕರು ಶಸ್ತ್ರಘಾತದಿಂದ ಹತರಾಗಿಹೋದರು. ಉಳಿದವರು ಹೇಗೋ, ಗಂಡಕೀ ನಗರವನ್ನು ಕುರಿತು ಹೊರಟುಹೋದರು. ॥ ೧೭ ॥

" ನಾನಾ ಸೇನಾಸಮೇತರಾಗಿ ಯುದ್ಧಕ್ಕೆ ಬಂದಿದ್ದ ಕಲ–ವಿಕಲರನ್ನು ವೀರಭದ್ರಾದಿ ಪ್ರಮಥ ಗಣದವರು ಸೇರಿ, ಕೋಪದಿಂದ ಕೊಂದುಹಾಕಿಬಿಟ್ಟರು " ಎಂಬ ವಿಷಾದಕರ ಸಂಗತಿಯನ್ನು ತಮ್ಮ ಅರಸು ; ಸಿಂಧು ದೈತ್ಯನಿಗೆ ವಿವರಿಸಿ ಹೇಳಿದರು. ॥ ೧೮ ॥

ಅತ್ತ ವಿಜಯಶಾಲಿಗಳಾದ ದೇವಸೇನೆಯವರು ತಮ್ಮ ಶಿಬಿರದಿಂದ ದೇವನ ಶಿಬಿರಕ್ಕೆ ಹೋದರು. ॥ ೧೯ ॥

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ “ ಕಲ-ವಿಕಲ ವಧೋ ”**
**ನಾಮಾಷ್ಟಾದಶೋತ್ತರ ಶತತಮೋಽಧ್ಯಾಯಃ**

---

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ “ ಕಲ-ವಿಕಲರ ವಧೆ ” ಎಂಬಲ್ಲಿಗೆ ನೂರ ಹದಿನೆಂಟನೆಯ ಅಧ್ಯಾಯಾನುವಾದವು ಸಮಾಪ್ತವಾಯಿತು.

॥ ಶ್ರೀ ಗಣೇಶಾಯ ನಮಃ ॥

# ಅಥೈಕೋನವಿಂಶತಿತಮೋऽಧ್ಯಾಯಃ

**ಕ ಉವಾಚ :—**

**ಕಲಂ ಚ ವಿಕಲಂ ಶ್ಯಾಲಂ ದೇವಸೇನಾವಿಘಾತಿನಮ್ ।**
**ನಿಹತಂ ವೀರಭದ್ರೇಣ ಪರ್ವತೇನ ಮಹಾಸುರಮ್ ॥೧॥**
**ಷಡಾನನೇನ ಚ ಕಲಂ ಹತಂ ತಲಪ್ರಹಾರತಃ ।**
**ಶ್ರುತ್ವಾ ಭದ್ರಾಸನಗತೋ ನಾನಾವೀರಸಮನ್ವಿತಃ ॥೨॥**
**ಪ್ರಾಪ ಸಿಂಧುರ್ಮಹಾಚಿಂತಾಂ ಸ್ಮರ್ರ ಶಿವಸುತಂ ತದಾ ।**
**" ಕಿಂ ಕರಿಷ್ಯತಿ ದೇವೋऽಸೌ ನಾಶಮಿತ್ಥಂ ಸುರದ್ವಿಷಾಮ್? " ॥೩॥**

ಶ್ರೀ ಮಂಗಲಮೂರ್ತಯೇ ನಮಃ

## ೧೯ ನೆಯ ಅಧ್ಯಾಯ

ಬ್ರಹ್ಮಾ:—

ರಾಕ್ಷಸರಾಜನ ಶ್ಯಾಲಕರಾದ ಕಲ–ವಿಕಲರು ಸಾಮಾನ್ಯರಾದವರಲ್ಲ. ದೇವ ಸೇನೆಯನ್ನೂ ಧ್ವಂಸಗೊಳಿಸಿದವರು. ಇಂತಹ ವೀರಪುರುಷರಲ್ಲಿ ಒಬ್ಬನಾದ ವಿಕಲನು ವೀರಭದ್ರನೆಸೆದ ಪರ್ವತದಡಿ ಸಿಕ್ಕು ನತ್ತುಹೋದುದನ್ನೂ, ವಿಕಲನಿಗಿಂತಲೂ ಪ್ರಭಾವಶಾಲಿಯಾದ ಮಹಾಸುರ ; ॥ ೧ ॥

ಕಲನು ಷಡಾನನನ ಅಂಗೈ ಏಟಿನಿಂದ ಸತ್ತುಹೋದ ಸಮಾಚಾರವನ್ನೂ ಭದ್ರಾಸನದಲ್ಲಿ ಕುಳಿತು ವೀರರೊಡನೆ ಯುದ್ಧ ಸಂದರ್ಭವನ್ನು ಕುರಿತು ಚರ್ಚಿಸುತ್ತಲಿದ್ದ ಸಿಂಧುರಾಜನು ಕೇಳಿದನು. ॥ ೨ ॥

ಒಡನೆಯೇ ಪರಶಿವಸುತನ ದಿವ್ಯಮೂರ್ತಿ ಅವನ ಕಣ್ಣುಗಳಿಗೆ ಕಟ್ಟಿದಂತಾಯಿತು. ಎಷ್ಟು ಪ್ರಯತ್ನಿಸಿದರೂ ಮನದಲ್ಲಿ ಮೂಡಿದ್ದ ಆ ಮೂರ್ತಿಯ ರೂಪ ಅವನ ಮನದಿಂದ ಮರೆಯಾಗಲಿಲ್ಲ. ಅಗಾಧವಾದ ಚಿಂತೆಯಲ್ಲಿ ಅಸುರನು ಮುಳುಗಿಬಿಟ್ಟನು. " ಇದೇನು ವಿಪತ್ತು ಬಂದಿತು ? ದೇವೋತ್ತಮನಾದ ಮಯೂರೇಶ್ವರನು ಸುರವಿದ್ವೇಷಿಗಳಾದ ನಮ್ಮವರನ್ನೆಲ್ಲ ನಿರ್ನಾಮಗೊಳಿಸಿಯೇ ಬಿಡುವನೋ ಏನೋ, ನಾನಂತೂ ಕಾಣೆನಲ್ಲ, ಮುಂದೇನು ಗತಿ ? " ॥ ೩ ॥

ಇತ್ಯೇವಂ ಚಿಂತಯಾವಿಷ್ಟೋ ಮೂರ್ಛಾಮಾಪ ಮಹತ್ತರಾಮ್ ।
ತಾವದಾಜಗ್ಮತುರುಭೌ ಪುತ್ರಾವಸ್ಯ ಮಹಾಬಲೌ ॥೪॥
" ಧರ್ಮಾಧರ್ಮೌ " ಭದ್ರಪೀಠೇ ಜನಕಂ ವಾಕ್ಯಮಾಹತುಃ ।

ತಾವೂಚತುಃ :—

ಕಥಂ ಬಿಭೇಷಿ, ಜನಕ ! ಶಿವಾಯಾ ಅರ್ಭಕಾಲ್ಲಘೋಃ ॥೫॥
ನಾವಾಜ್ಞಾಂ ದೇಹಿ ದೈತ್ಯೇಂದ್ರ ! ಹನಿಷ್ಯಾವಃ ಕ್ಷಣಾದಮುಮ್ ।
ಸಮುಖೇ ತೌ ಹತೌ ವೀರೌ ಮಾತುಲೌ ನೌ ದಿವಂಗತೌ ॥೬॥
ಉತ್ತೀರ್ಣೌ ತೌ ಸ್ವಾಮಿಕಾರ್ಯೇ ಕೀರ್ತಿಂ ಕೃತ್ವಾ ಮಹತ್ತರಾಮ್ ।
ಹತ್ವಾನೇಕವಿಧಾಂ ಸೇನಾಂ ನಾನಾವೀರ್ಯೈಃ ಪ್ರಪಾಲಿತಾಮ್ ॥೭॥

ಎಂಬ ಚಿಂತೆಗೊಳಗಾದನು. ಅದಕ್ಕೆ ಪರಿಹಾರೋಪಾಯವೇ ಆಗ ಅವನಿಗೆ ಹೊಳೆಯಲಿಲ್ಲ. ವಿಚಾರ ಮಾಡಿ ಮಾಡಿ, ತಲೆ ಕೆಟ್ಟು, ಪ್ರಬಲವಾದ ಮೂರ್ಛೆ ಬಂದು ಬಿಟ್ಟಿತು. ಅಷ್ಟರಲ್ಲೇ ಯುದ್ಧದ ಪ್ರಕೃತ ಪರಿಸ್ಥಿತಿಯನ್ನರಿತಿದ್ದ ಅಸುರನ ಮಕ್ಕಳಿಬ್ಬರೂ ರಾಜನ ಸಭಾಮಂಟಪಕ್ಕೆ ಬಂದರು. ಅವರೂ ಸಾಮಾನ್ಯರಾದವರಲ್ಲ. ತಂದೆಯಂತೆ ಮಹಾ ಬಲಿಷ್ಠರಾದವರು. ॥೪॥

ಅವರಿಗೆ ರಾಕ್ಷಸನು " ಧರ್ಮ, ಅಧರ್ಮ " ಎಂದು ಹೆಸರಿಟ್ಟಿದ್ದನು. ಇವರು ಭದ್ರಾಸನದಲ್ಲಿ ಕುಳಿತಿದ್ದ ತಮ್ಮ ಜನಕನ ಸಮೀಪಕ್ಕೆ ಬಂದು ನಮಸ್ಕರಿಸಿ, ಹೀಗೆಂದು ನುಡಿದರು.

ಧರ್ಮಾಧರ್ಮರು :—

ಜನಕ ! ಮಹಾ ವೀರ್ಯಶಾಲಿಯಾದ ನೀನು ಕ್ಷುಲ್ಲಕನಾದ ಆ ಶಿವೆಯ ಮಗನಿಗಾಗಿ ಹೆದರುವೆಯಲ್ಲ, ಇದರ ಅರ್ಥವಾದರೂ ಏನು ? ॥೫॥

ದೈತ್ಯೇಂದ್ರ! ನಮ್ಮಿಬ್ಬರಿಗೂ ಮೊದಲು ಆಜ್ಞೆಯನ್ನು ಕೊಡು. ನಾವು ಹೋಗಿ ಆ ಪೋರನನ್ನು ಒಂದೇ ಕ್ಷಣದೊಳಗಾಗಿ ಕೊಂದುಬರುವೆವು. ಅವನೋ, ಅವನ ಕಡೆಯವರೋ, ಅಂತೂ ವೀರರಾದ ನಮ್ಮ ಸೋದರ ಮಾವಂದಿರಿಬ್ಬರನ್ನೂ ರಣಶಿರದಲ್ಲಿ ಕೊಂದು ಚಲ್ಲಿದರಲ್ಲವೇ ? ॥೬॥

ಅವರು ಸತ್ತರಾದರೂ ನಿಜವಾದ ವೀರರಂತೆ ಸತ್ತಿದ್ದಾರೆ. ಬದುಕಿರುವವರೆಗೂ ಶತ್ರುಗಳೊಡನೆ ಖಾಡಾಖಾಡಿ ಹೋರಾಡಿದವರು. ಅನೇಕ ಯುದ್ಧಗಳಲ್ಲಿ ಅವರು ಜೀವದ ಹಂಗನ್ನೂ ಇಡದೇ, ಸ್ವಾಮಿಗಾಗಿ ದುಡಿದು, ಅವನಿಗೆ ಮಹತ್ತರವಾದ ಸತ್ಕೀರ್ತಿಯನ್ನು ಸಂಪಾದಿಸಿಕೊಟ್ಟರು. ಶತ್ರುಸೇನೆಯು ಎಷ್ಟೇ ಬಲವಾದವರ ರಕ್ಷಣೆಯಲ್ಲಿರಲಿ, ಇವರು ಸ್ವಲ್ಪವೂ ಬೆದರದೆ, ಅವನ್ನೆಲ್ಲ ನಿಗ್ರಹಿಸಿಬಿಟ್ಟಿದ್ದಾರೆ. ॥೭॥

ಆವಾಮಪಿ ಪ್ರಯುಧ್ಯಾವೋಽಯಾವೋ ಹತ್ವಾ ರಿಪುಂ ಬಲಾತ್ ।
ಅಥವಾ ಮೋಕ್ಷಮಾಯಾವೋ ನಿಹತೌ ತೇನ ಚೇದ್ರಣೇ ॥೮॥
ಯಾವದಾವಾಂ ಹಿ ಜೀವಾವಶ್ಚಿಂತಾಂ ತಾವಚ್ಚ ಮಾ ಕುರು ।
ಇಂದ್ರಾದಯಸ್ಸುರಗಣಾಃ ಕಾರಾಗಾರೇಽಧುನಾ ತವ ॥೯॥
ಯದಾ ತ್ವಂ ವಿಜಿತಾ ಪೂರ್ವಂ ಪಿತರಸ್ತತ್ರ ಕೇಽಭವರ್ ।
ಆನೀವೋ ಮಸ್ತಕಂ ತಸ್ಯ ರಿಪೋಸ್ತವ ನ ಸಂಶಯಃ ॥೧೦॥
ಅನ್ಯಥಾ ದರ್ಶಯಿಷ್ಯಾವೋ ಮುಖಂ ಲೋಕೇಷು ನ ಕ್ವಚಿತ್ ।

---

ನಾವೂ ಯುದ್ಧಕ್ಕಾಗಿ ಹೋಗುತ್ತೇವೆ. ರಿಪುವನ್ನು ಬಲಾತ್ಕಾರದಿಂದ ಕೊಂದು ಚಲ್ಲಿ, ವಿಜಯವನ್ನು ಗಳಿಸಿಕೊಂಡು ಹಿಂದಿರುಗಿ ಬರುತ್ತೇವೆ. ಯುದ್ಧವೆಂದ ಮೇಲೆ ಜಯಾಪಜಯಗಳೆರಡೂ ಸಂಭಾವಿತ ತಾನೇ ? ಆದುದರಿಂದ ಕದಾಚಿತ್ ದೇವನ ಏಟಿಗೆ ಸಿಲುಕಿ ನಾವೇನಾದರೂ ಮೃತರಾದೆವೋ, ಆಗಂತೂ ಯೋಚಿಸಬೇಕಾದುದೇ ಇಲ್ಲ. ಮಯೂರೇಶನ ಅನುಗ್ರಹದಿಂದ ನಮಗೆ ಮುಕ್ತಿಯೇ ದೊರೆಯುವುದು. ॥೮॥

ಅಸಹಾಯಶೂರರಾದ ನಾವಿಬ್ಬರೂ ಬದುಕಿರುವ ವರೆಗೂ ತಂದೆ! ನೀನು ಯಾವುದಕ್ಕೂ ಚಿಂತಿಸಬೇಡ. ನೀನು ಹೆದರಬೇಕಾದ ಪ್ರಮೇಯವೇ ಇರುವುದಿಲ್ಲ. ಏತಕ್ಕೆಂದರೆ, ಇಂದ್ರನೇ ಮೊದಲಾದ ದಿಕ್ಪಾಲಕರೆಲ್ಲ ನಿನ್ನ ರಾಜಧಾನಿಯಲ್ಲಿ ಬಂಧಿತರಾಗಿ ಈಗಲೂ ನರಳುತ್ತಲಿದ್ದಾರೆ. ॥೯॥

ನೀನು ದೇವತೆಗಳನ್ನೆಲ್ಲ ಸೋಲಿಸಿ, ತ್ರಿಲೋಕಾಧಿಪತ್ಯವನ್ನೂ ಸ್ವೇಚ್ಛೆಯಾಗಿ ನಡೆಸುತ್ತಲಿರುವೆ. ? ನಿನಗಿಂತಲೂ ಪ್ರಬಲಸಾಮರ್ಥ್ಯವುಳ್ಳ ವ್ಯಕ್ತಿ ಯಾವನಾದರೊಬ್ಬನಿದ್ದಿದ್ದರೆ, ಅಂದೇ ಇದರ ಆಡಳಿತದ ಸೂತ್ರಗಳನ್ನೆಲ್ಲ ನಿನ್ನಿಂದ ಕಸಿದುಕೊಂಡು ಬಿಡುತ್ತಲಿರಲಿಲ್ಲವೇ? ಎಂದಮೇಲೆ ನಿನಗಿಂತಲೂ ಅಧಿಕನಾದವನಾರೂ ಇಲ್ಲವೆಂದೇ ನಮ್ಮ ಅಭಿಪ್ರಾಯ. ಇದೋ, ನಮ್ಮ ಪ್ರತಿಜ್ಞೆಯನ್ನಾದರೂ ಕೇಳು. ನೀನು, 'ಶತ್ರು' ಎಂದು ಭಾವಿಸಿರುವ ಆ ಮಯೂರೇಶನ ಶಿರವನ್ನು ಛೇದಿಸಿ ತಂದು ನಿನಗೆ ಕಾಣಿಕೆಯಾಗಿ ಸಮರ್ಪಿಸುವೆವು. ಇದರಲ್ಲಿ ಸ್ವಲ್ಪವೂ ಸಂಶಯ ಪಡಬೇಕಾಗಿಲ್ಲ. ॥೧೦॥

ಒಂದು ವೇಳೆ, ಈ ಕಾರ್ಯ ನಮ್ಮಿಂದ ಸಾಧಿಸದೇ ಹೋಗುವುದಾದರೆ, ಈ ಪ್ರಪಂಚದಲ್ಲಿರುವ ವರೆಗೂ ಯಾರಿಗೂ, ಎಂದೆಂದಿಗೂ ನಾವು ನಮ್ಮ ಮುಖವನ್ನು ತೋರಿಸುವುದಿಲ್ಲ.

**ಕ ಉವಾಚ :—**

**ಏವಂ ತಯೋಸ್ಸಮಾಕರ್ಣ್ಯ ವಚನಂ ಹರ್ಷಮಾಪ್ತವಾನ್ ॥೧೧॥**
**ತಾವೂಚೇ**

**ಸಿಂಧುರುವಾಚ :—**

**ಪರಮಂ ಯುದ್ಧಂ ಪ್ರಾಪ್ನುತಂ ಯಶ ಉತ್ತಮಮ್ ।**
**ನಾಶಯಿತ್ವಾ ರಿಪುಂ ಘೋರಂ ಯಾತಂ ಶೀಘ್ರಂ ಮಮಾಂತಿಕಮ್ ॥೧೨॥**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಮಾಯಯುತುರ್ಯುದ್ಧಲಾಲಸೌ ।**
**ನಮಸ್ಕೃತ್ಯ ಪಿತುಃ ಪಾದೌ ಮಾತುರ್ಗೃಹ್ಯ ತದಾಶಿಷಃ ॥೧೩॥**
**ದಶಕೋಟಿಮಿತಾಂ ಸೇನಾಂ ಪ್ರತ್ಯೇಕಂ ಗೃಹ್ಯ ಸತ್ವರೌ ।**
**ರಥಾಶ್ವಹಸ್ತಿಪಾದಾತೈರ್ನಾನಾಶಸ್ತ್ರಧರೈರ್ಯುತಾಮ್ ॥೧೪॥**

---

ಬ್ರಹ್ಮಾ :—

ವಸ್ತುಸ್ಥಿತಿ ಸಿಂಧುವಿಗೆ ಸಂಪೂರ್ಣವಾಗಿ ಅರಿವಾಗಿದ್ದರೂ, ಮಕ್ಕಳಾಡಿದ ತತ್ಕಾಲೋಚಿತ ವೀರವಾಣಿಯಿಂದ ಬಹಳ ಮಟ್ಟಿಗೆ ಸಮಾಧಾನ-ಸಂತೋಷಗಳುಂಟಾದವು. ॥೧೧॥

ಆಗ ಅವರನ್ನು ಕುರಿತು ಅಸುರನು ಹೀಗೆಂದು ನುಡಿದನು.

ಸಿಂಧು :—

ನಿಮ್ಮ ವೀರ್ಯ-ಸಾಹಸಗಳಿಗೆ ತಕ್ಕಂತಹ ಯುದ್ಧವೇ ಪ್ರಕೃತ ದೊರೆತಿದೆ. ಹೋಗಿ ಬನ್ನಿ. ಸತ್ಕೀರ್ತಿಯನ್ನು ಪಡೆಯಿರಿ. ಈಗ ಬಂದಿರತಕ್ಕ ಶತ್ರು ಸಾಮಾನ್ಯನಲ್ಲ; ಬಹಳ ಪರಾಕ್ರಮಿಯಾಗಿದ್ದಾನೆ. ಅವನೊಡನೆ ಹೋರಾಡಬೇಕಾದರೆ ಬಹಳ ಜಾಗರೂಕತೆಯಿಂದಲೇ ಇರಬೇಕಾಗುತ್ತದೆ. ಇರಲಿ, ಹೋಗಿ ಅವನನ್ನು ನಿಗ್ರಹಿಸಿ ಕೂಡಲೇ ನನ್ನ ಸಮೀಪಕ್ಕೆ ಹಿಂದಿರುಗಿ ಬಂದುಬಿಡಿ. ॥೧೨॥

ಬ್ರಹ್ಮಾ :—

ತಂದೆಯಾಡಿದ ಅನುಮತಿದಾಯಕ ಮಾತುಗಳನ್ನು ಕೇಳಿದೊಡನೆಯೇ ಸರ್ವದಾ ಯುದ್ಧಲಾಲಸರಾದ ಧರ್ಮಾಧರ್ಮರಿಗೆ ಮತ್ತಷ್ಟು ಉತ್ಸಾಹವೆನಿಸಿರಬೇಕು. ಅಂತೆಯೇ ಎರಡನೆಯ ಮಾತನ್ನು ಸಹ ಆಡದೇ, ತಂದೆಯ ಚರಣಗಳಿಗೆ ವಂದಿಸಿದರು. ತಾಯಿಯ ಆಶೀರ್ವಾದವನ್ನು ಪಡೆದರು. ಹಾಗೆಯೇ ಯುದ್ಧಕ್ಕೆ ಹೊರಟೇ ಹೋದರು. ॥೧೩॥

ಹೊರಡುವಾಗ ಬೆಂಗಾವಲಿಗಾಗಿ ಒಬ್ಬೊಬ್ಬರೂ ಹತ್ತು ಹತ್ತು ಕೋಟಿ ಸಂಖ್ಯೆಯುಳ್ಳ ಸೇನಾಪಡೆಯನ್ನು ಸಂಗಡ ಕರೆದುಕೊಂಡರು. ಒಂದು ಕ್ಷಣ ಕಾಲವನ್ನು ಕಳೆಯುವುದಕ್ಕೂ ಅವರಿಗೆ ಇಷ್ಟವಿರಲಿಲ್ಲ. ಅಷ್ಟು ಅವಸರದಿಂದ ಹೊರಟರು.

ಪತ್ತಯೋಽಪಿ ಯಯುರ್ಹೃಷ್ಟಾಃ ಸಿಂದೂರಾರುಣಮಸ್ತಕಾಃ ।
ಗಜಾ ನಾನಾಗಿರಿನಿಭಾ ನಾನಾಧಾತುಧ್ವಜಾನ್ವಿತಾಃ ॥೧೫॥

ಅಶ್ವಾಸ್ಸಾದಿಭಿರಾರೂಢಾ ನಾನಾಶಸ್ತ್ರಾಸಿಪಾಣಿಭಿಃ ।
ಗರ್ಜದ್ಭಿರ್ಮೇಘಸದೃಶಂ ಗರ್ಜಯದ್ಭಿರ್ದಿಶೋ ದಶ ॥೧೬॥

ತತಸ್ಸೇನಾಮಧ್ಯಗತಾ ರೇಜತುರ್ಭ್ರಾತರಾವುಭೌ ।
ನಾನಾಲಂಕಾರಸಂಯುಕ್ತೌ ನಾನಾಯುಧಧರಾವುಭೌ ॥೧೭॥

ರತ್ನಕಾಂಚನಸಂಯುಕ್ತಕುಂಡಲಾಭ್ಯಾಂ ವಿರಾಜಿತೌ ।
ಕಿರೀಟಾಭ್ಯಾಂ ಸು-ತೇಜೋಭ್ಯಾಂ ಭ್ರಾಜಮಾನೌ ಮಹಾಬಲೌ ॥೧೮॥

---

ಅವರೊಂದಿಗೆ ಹೊರಟ ಹತ್ತು ಕೋಟಿ ದಳಗಳಲ್ಲಿ ಎಲ್ಲರೂ ಸು-ಶಿಕ್ಷಿತರಾದವರು. ಅಲ್ಲಿದ್ದ ರಥಾಶ್ವಹಸ್ತಿಪದಾತಿಗಳು ಅನೇಕ ಬಗೆಯ ಆಯುಧಗಳನ್ನು ಹಿಡಿದು ನಡೆದಿದ್ದರು. ॥೧೪॥

ಆ ಪೈಕಿ ಪದಾತಿ ಸೇನೆಯವರು ಬಹಳ ಹೃಷ್ಟರಾಗಿ ಮುಂದೆ ಮುಂದೆ ನಡೆದರು. ಅವರ ಕೆಂಪು ಬಣ್ಣದ ತಲೆಗೂದಲು ಸಿಂಧೂರಲೇಪದಿಂದ ಹೆಚ್ಚು ಕೆಂಪಾಗಿ ಹೊಳೆಯುತ್ತಲಿತ್ತು. ಆನೆಗಳ ಸಾಲು ಹೊರಟುದನ್ನು ನೋಡಿದರೆ, ಭೂಮಿಯ ಮೇಲಿರತಕ್ಕ ಪರ್ವತಗಳೆಲ್ಲ ನಾಲಾಗಿ ನಡೆಯಲಾರಂಭಿಸಿದವೋ, ಎಂಬ ಭ್ರಮೆಯುಂಟಾಗುತ್ತಲಿದ್ದಿತು. ಬಣ್ಣಬಣ್ಣದ ಧ್ವಜ-ಪತಾಕೆಗಳಿಂದ ಮಾಹುತರು ಅವನ್ನು ಅಲಂಕರಿಸಿದ್ದರು. ॥೧೫॥

ಅಶ್ವಪಡೆಯಲ್ಲಿದ್ದ ಪ್ರತಿಯೊಂದು ಕುದುರೆಯ ಮೇಲೂ ಕುಳಿತಿದ್ದ ಸೈನಿಕರು ತಮ್ಮಲ್ಲಿದ್ದ ಶಸ್ತ್ರಗಳನ್ನು ವರೆಗಳಿಂದ ಹಿರಿದು ಹಿಡಿದು ನಡೆದಿದ್ದರು. ವರ್ಷಾಕಾಲದ ಮೇಘಗಳಂತೆ ಗಂಭೀರವಾಗಿ ಗರ್ಜಿಸುತ್ತಲೂ, ತನ್ಮೂಲಕ ದಿಗ್ವಿದಿಕ್ಕುಗಳು ಗರ್ಜಿಸುವಂತೆ ಮಾಡುತ್ತಲೂ ಅಟ್ಟಹಾಸದಿಂದ ನಡೆದರು. ॥೧೬॥

ಅನಂತರ ಅಂಗರಕ್ಷಣೆಗಾಗಿ ಏರ್ಪಟ್ಟಿದ್ದ ಸೈನಿಕರ ನಡುವೆ ಅಣ್ಣ-ತಮ್ಮಂದಿರಾದ ಧರ್ಮಾಧರ್ಮರು ನಾನಾಲಂಕಾರಗಳಿಂದ ಮಂಡಿತರಾಗಿ ರಾರಾಜಿಸುತ್ತ ನಡೆದಿದ್ದರು. ॥೧೭॥

ಅವರು ಕಿವಿಗಳಲ್ಲಿ ಧರಿಸಿದ್ದ ಕುಂಡಲಗಳು ರತ್ನಕಾಂಚನ ನಿರ್ಮಿತವಾದುವು. ತಲೆಗಳ ಮೇಲೆ ಧರಿಸಿದ್ದ ಮಣಿಮಯ ಕಿರೀಟಗಳ ಹೊಳಪು ಅವರ ವೀರಶ್ರೀಯನ್ನು ಹೆಚ್ಚಾಗಿ ಬೆಳಗುತ್ತಲಿದ್ದಿತು. ॥೧೮॥

**ಮುಕ್ತಾಮಣಿಮಯೌ ಹಾರೌ ಬಿಭ್ರಂತೌ ಯುದ್ಧದುರ್ಮದೌ ।**
**ಸ್ರಾಪತುಃ ರಣಭೂಮಿಂ ತೌ ನಾನಾವಾದಿತ್ರನಿಃಸ್ವನೈಃ ॥೧೯॥**

**ದದೃಶುರ್ವೀರಭದ್ರಾದ್ಯಾಸ್ತೌ ಚ ತಾಂ ವಾಹಿನೀಮಪಿ ।**
**ನಿಕಟೇ ತೌ ಸಮಾಲೋಕ್ಯ ಮಯೂರೇಶಪ್ರಚೋದಿತಾಃ ॥೨೦॥**

**ಆಜ್ಞಯಾಭಿಯಯುರ್ವೀರಭದ್ರೋऽಸೌ ಚ ಷಡಾನನಃ ।**
**ಹಿರಣ್ಯಗರ್ಭಃ ಸಂಕ್ರುದ್ಧೋ ಭೂತರಾಜೋ ವಿಶಾಲದೃಕ್ ॥೨೧॥**

**ಅಸಂಖ್ಯಸೇನಯಾ ಸಾರ್ಧಂ ತತೋ ಯುದ್ಧಮವರ್ತತ ।**
**ಪರಸ್ಪರಮಯುಧ್ಯಂತ ತತಸ್ಸೇನಾಚರಾ ಭೃಶಮ್ ॥೨೨॥**

**ಘ್ನಂತಶ್ಶಿರಾಂಸಿ ಪಾದಾಂಶ್ಚ ಬಾಹೂರೂದರಕಂಧರಾಃ ।**
**ನಿಹತಾಶ್ಚ ನಿಹನ್ಯಂತೇ ತಮಸಾಚ್ಛಾದಿತೇ ರವೌ ॥೨೩॥**

ಯುದ್ಧದುರ್ಮದರಾದ ಧರ್ಮಾಧರ್ಮರು ಬಹಳ ಬೆಲೆಬಾಳುವ ಮುತ್ತಿನ ಹಾರವನ್ನು ಕಂಠಗಳಲ್ಲಿ ಧರಿಸಿದ್ದರು. ಇವರು ಬರುವಾಗ ರಣವಾದ್ಯಗಳು ಉಚ್ಚಸ್ವರ ದಿಂದ ಘೋರ್ಗರೆಯುತ್ತಿದ್ದವು. ಇಂತಹ ರಾಜಕುಮಾರರು ಇಷ್ಟೆಲ್ಲ ವಿಭವದೊಂದಿಗೆ ರಣಭೂಮಿಯನ್ನು ಪ್ರವೇಶಿಸಿದರು. ॥೧೯॥

ಸೇನಾಸಮೇತರಾಗಿ ರಣರಂಗಕ್ಕೆ ಬಂದ ವೀರ; ಧರ್ಮಾಧರ್ಮರನ್ನು ಮೊದಲು ನೋಡಿದವರೆಂದರೆ ವೀರಭದ್ರ ಮುಂತಾದ ದೇವಸೇನಾವೀರರು. ಅಸುರಪುತ್ರರು ಸಮೀಪಕ್ಕೆ ಧಾವಿಸಿ ಬರುವುದನ್ನು ನೋಡಿ, ಮಯೂರೇಶ್ವರನು ಅಸುರರ ಮೇಲೆ ಬೀಳುವಂತೆ ವೀರಭದ್ರಾದಿ ವೀರರನ್ನು ಪ್ರೇರಿಸಲು ॥೨೦॥

ದೇವನ ಆಜ್ಞಾವಶಂವದರಾದ ವೀರಭದ್ರ-ಷಡಾನನರು ಶತ್ರುಸೇನೆಯ ಮೇಲೆ ಯುದ್ಧಕ್ಕಾಗಿ ಧುಮುಕಿದರು. ಬಗೆಬಗೆಯಿಂದ ತಮಗೆಲ್ಲ ಹಿಂಸೆಯನ್ನಿತ್ತಿದ್ದ ಶತ್ರುಗಳ ಮೇಲೆ ಬಹಳ ಕೋಪಗೊಂಡ ಹಿರಣ್ಯಗರ್ಭ, ದೂರದರ್ಶಿಯಾದ ಭೂತರಾಜ ಇವರು ॥ ೨೧ ॥

ಅಸಂಖ್ಯಸೇನೆಯೊಡನೆ ಯುದ್ಧಕ್ಕಾಗಿ ಬಂದಿದ್ದ ರಾಕ್ಷಸನ ಮಕ್ಕಳಿಬ್ಬರ ಮೇಲೆ ಅವರಿಬ್ಬರೂ ಪ್ರತಿಯುದ್ಧವನ್ನಾಡಲು ಮುನ್ನುಗಿದರು. ಒಡನೆಯೇ ಹೋರಾಟವು ಬಹಳ ಬಿರುಸಿನಿಂದ ಆರಂಭವಾಯಿತು. ॥೨೨॥

ಸೈನಿಕರು ತಮ್ಮ ತಮ್ಮ ಶಸ್ತ್ರಾಸ್ತ್ರಗಳಿಂದ ಎದುರಾಳಿಗಳ ತಲೆ, ಪಾದ, ಭುಜ ಗಳು, ಹೊಟ್ಟೆ ಮತ್ತು ಕತ್ತು ಇವನ್ನೆಲ್ಲ ಕತ್ತರಿಸಿ ಚಲ್ಲಿದರು. ಯುದ್ಧವು ರಂಗಿಗೇ

ಕೇಚಿಚ್ಚಕ್ರಾಣಿ ಮುಮುಚುರ್ಭಿಂಡಿಪಾಲಾಂಸ್ತಥಾಪರೇ ।
ಬಾಣವೃಷ್ಟಿಂ ಪರೇ ಚಾಪಿ ನಾನಾಶಸ್ತ್ರಾಣ್ಯಕೇಚನ ॥೨೪॥
ಮಲ್ಲಯುದ್ಧಂ ಚ ತತ್ರಾಸೀತ್ಸೈನಿಕಾನಾಂ ಪರಸ್ಪರಮ್ ।
ಏವಂ ಸಾ ಸಂಹೃತಾ ಸೇನಾ ಮಯೂರೇಶಪ್ರಪೀಡಿತಾ ॥೨೫॥
ಪಪಾಲ ತತ್ರ ಶೇಷಾ ಯಾ ವಿಹ್ವಲಾ ತು ದಿಶೋ ದಶ ।
ತತಃ ಷಡಾನನಃ ಕ್ರುದ್ಧೋ ದ್ವಾದಶಾಯುಧಭೂಷಿತಃ ॥೨೬॥
ತೈರಾಯುಧೈರ್ಜಘಾನಾಶು ಸೇನಾಂ ತಾಂ ದೈತ್ಯಪಾಲಿತಾಮ್ ।
ಕೇಷಾಂಚಿದ್ಬಾಹವೋ ಭಿನ್ನಾಃ ಕೇಽಪಿ ಮಧ್ಯೇ ದ್ವಿಧಾಕೃತಾಃ ॥೨೭॥

ರುವ ವೇಳೆಗೆ ರವಿಯು ಅಸ್ತಮಿಸಿದುದರಿಂದ "ಇವರು ಸತ್ತವರು, ಇವರು ಬದುಕಿರುವವರು" ಎಂಬುದನ್ನು ಸಹ ವಿಮರ್ಶಿಸಲಾಗದೆ, ಹೆಣಗಳನ್ನೇ ಶತ್ರುಗಳೆಂದು ಭಾವಿಸಿ ಕತ್ತರಿಸಲಾರಂಭಿಸಿದರು. ॥೨೩॥

ಕೆಲವು ವೀರರು ಚಕ್ರಗಳನ್ನು ಪ್ರಯೋಗಿಸಿದರೆ, ಮತ್ತೆ ಕೆಲವರು ಭಿಂಡಿವಾಲಗಳನ್ನು ಪ್ರಯೋಗಿಸಿದರು. ಇತರರು ಬಾಣಗಳನ್ನು ಶತ್ರುಗಳ ಮೇಲೆ ಮಳೆ ಸುರಿದಂತೆ ಸುರಿಸಿದರು. ಉಳಿದವರು ಆ ವೇಳೆಗೆ ಯಾವ ಆಯುಧವು ಕೈಗೆ ಸಿಕ್ಕುವುದೋ, ಅದನ್ನೇ ಮನಸ್ವೀ ಪ್ರಯೋಗಿಸಿದರು. ॥೨೪॥

ಮತ್ತೆ ಕೆಲವು ಸೈನಿಕರು ಮುಂದೆ ಬಂದು ಶತ್ರುಗಳೊಡನೆ ಮಲ್ಲಯುದ್ಧವನ್ನಾಡಿದರು. ಪರಸ್ಪರರಿಗುಂಟಾದ ಈ ಯುದ್ಧ ಬಹಳ ಭಯಂಕರವಾಗಿದ್ದಿತು. ಮಯೂರೇಶನು ಬಗೆಬಗೆಯಿಂದ ಶತ್ರುಸೇನೆಯನ್ನು ಪೀಡಿಸುತ್ತ ಅದನ್ನೆಲ್ಲ ಸಂಹರಿಸಿಬಿಟ್ಟನು. ॥೨೫॥

ಉಳಿದ ಸೈನಿಕರು ಅಲ್ಲಿ ನಿಂದಿರಲಾರದೆ, ವಿಫಲ ಮನೋರಥರಾಗಿ ರಣರಂಗದಿಂದ ಕಾಲ್ತೆಗೆದು ಓಡಿಹೋದರು. ಅವರು ಓಡಿದುದನ್ನು ನೋಡಿ ಷಡಾನನನಿಗೆ ಬಹಳ ಉತ್ಸಾಹ ಉಂಟಾಯಿತು. ತನ್ನ ಹನ್ನೆರಡು ಬಗೆಯ ಆಯುಧಗಳನ್ನೂ ಹನ್ನೆರಡು ಕೈಗಳಿಂದ ಹಿಡಿದುಕೊಂಡನು. ॥೨೬॥

ಅವನ್ನು ಝಳಪಿಸುತ್ತ ವೇಗವಾಗಿ ಮುಂದೆ ನುಗ್ಗಿ, ದೈತ್ಯಕುಮಾರರಿಂದ ರಕ್ಷಿತವಾಗಿದ್ದ ಸೇನೆಯನ್ನೆಲ್ಲ ಹೊಡೆಯಲಾರಂಭಿಸಿದನು. ಕೆಲವು ಶತ್ರುಗಳ ಬಾಹುಗಳು ಭಿನ್ನವಾದವು. ಕೆಲವರ ದೇಹಗಳು ಎರಡೆರಡು ಹೋಳಾದವು. ॥೨೭॥

**ಕೇಷಾಂಚಿನ್ಮಸ್ತಕಾ ಭಿನ್ನಾಃ ಕೇಷಾಂಚಿಚ್ಚ್ಚರಣಾ ರಣೇ ।**
**ಏವಂ ಸಾ ನಾಶಿತಾ ಸೇನಾ ಹಸ್ತ್ಯಶ್ವರಥಸಂಕುಲಾ ॥೨೮॥**
**ಕೇಽಪಿ ಸ್ವರ್ಗಂ ಗತಾಃ ಕೇಚಿದ್ರೂಪಂ ಪ್ರಾಪುಃ ಷಡಾನನಮ್ ।**
**ನಿರೀಕ್ಷ್ಯ ಯೇ ಮಯೂರೇಶಂ ಜಹುಃ ಪ್ರಾಣಾನ್ ಪ್ರಹಾರಿತಾಃ ॥೨೯॥**
**ಜಗ್ಮುಸ್ತೇ ತತ್ಪ್ರಸಾದೇನ ನಿಜಧಾಮ ಮಹಾಬಲಾಃ ।**
**ತದ್ದೃಷ್ಟಿಪಾತಾತ್ತದಘಂ ನಷ್ಟಂ ಸರ್ವಂ ಜನುಃಕೃತಮ್ ॥೩೦॥**
**ದೃಷ್ಟ್ವಾ ವಿಶಾಖನಿಶಿಖೈಃ ಸಶಿಖೈರ್ನಿಹಿತಾಂ ಸ್ವಕಾಮ್ ।**
**ಸೇನಾಂ ತಸ್ಯ ಸುತೌ ವೀರಾವಧರ್ಮೋ ಧರ್ಮ ಏವ ಚ ॥೩೧॥**
**ಯುಯುಧಾತೇ ಬಹುವಿಧಂ ಶಸ್ತ್ರೈರಸ್ತ್ರೈಃ ಶರವ್ರಜೈಃ ।**

ಕೆಲವು ಸೈನಿಕರ ತಲೆಗಳು ಒಡೆದು ಚೂರಾದವು. ರಣರಂಗದಲ್ಲಿ ಉತ್ಸಾಹದಿಂದ ನೆಗೆದಾಡುತ್ತಲಿದ್ದ ಮತ್ತೆ ಕೆಲವು ಸೈನಿಕರ ಕಾಲುಗಳೇ ಮುರಿದುಹೋದವು. ಷಣ್ಮುಖನು ಮಾಡಿದ ಆ ಯುದ್ಧದ ವೇಗಕ್ಕೆ ಸಿಲುಕಿ ಆನೆ, ಕುದುರೆ ಮತ್ತು ರಥಗಳ ಪಡೆಯಿಂದ ಕೂಡಿದ ಅಸುರಸೇನೆಯಲ್ಲ ಧ್ವಂಸವಾಗಿ ಹೋಯಿತು. ॥೨೮॥

ಕೆಲವು ಯೋಧರು ವೀರ ಸ್ವರ್ಗಲೋಕವನ್ನು ಹೊಂದಿದರು. ಕೆಲವರ ಮುಖ, ಕೈಗಳು ಸೀಳಿ ಹೋದುದರಿಂದ, ನೋಡಿದವರಿಗೆ ಅವರೂ ಷಣ್ಮುಖನಂತೆ ಕಾಣತೊಡಗಿದರು. ಸೈನಿಕರಲ್ಲಿ ಕೆಲವರು ಮಯೂರೇಶನ ಏಟಿಗೆ ಸಿಕ್ಕು ಸತ್ತಿದ್ದರೆ, ಅನೇಕರು ಮಯೂರೇಶನನ್ನು ನೋಡಿದೊಡನೆಯೇ ಎದೆ ನಡುಗಿ ಹಾಗೆ ಹಾಗೆಯೇ ಉರುಳಿ ತಮ್ಮ ಪ್ರಾಣಗಳನ್ನು ಬಿಟ್ಟರು. ॥೨೯॥

ಮಹಾ ಬಲಿಷ್ಠರಾದ ಇವರೆಲ್ಲರೂ ಸತ್ತೊಡನೆಯೇ ಮಯೂರೇಶನ ಅನುಗ್ರಹ ವಿಶೇಷದಿಂದ ಶಾಶ್ವತವಾದ ದೇವನ ಆನಂದಧಾಮಕ್ಕೆ ತೆರಳಿದರು. ಅಸುರರು ಈ ಜನ್ಮಕ್ಕೆ ಬಂದಲಾಗಾಯ್ತು ಆಚರಿಸಿದ ಪಾತಕ ಕೃತ್ಯಗಳೆಲ್ಲವೂ ದೇವನ ದೃಷ್ಟಿಪಾತ ಪ್ರಸಾದದಿಂದ ಕೂಡಲೇ ನಶಿಸಿಹೋದವು. ॥೩೦॥

ವಿಶಾಖ ("ವಿಶಾಖಃ ಶಿಖಿವಾಹನಃ" ಷಣ್ಮುಖ) ನ ಮೊನೂಚಾದ ವಿಶಿಖ ("ಪೃಷತ್ಕ ಬಾಣ ವಿಶಿಖಾಃ" = ಬಾಣ) ಗಳಿಂದ ತನ್ನ ಸೇನೆಯು ಸಂಪೂರ್ಣವಾಗಿ ನಾಶಹೊಂದಿದುದನ್ನು ನೋಡಿ ರಾಕ್ಷಸನ ಮಕ್ಕಳಾದ ವೀರಶ್ರೇಷ್ಠರು; ಧರ್ಮಾಧರ್ಮರು. ॥೩೧॥

ಮುಂದೆ ಬಂದು ತಾವು ಅರಿತ ಶಸ್ತ್ರಾಸ್ತ್ರಗಳನ್ನೆಲ್ಲ ಬಗೆಬಗೆಯಿಂದ ಪ್ರಯೋಗಿಸಿ ಇಬ್ಬರೂ ಒಟ್ಟಿಗೆ ಷಡಾನನನೊಂದಿಗೆ ಹೋರಾಡಿದರು. ಬಾಣಗಳ ವೃಷ್ಟಿಯನ್ನೇ

ಚಕ್ರತುರ್ಮಲ್ಲಯುದ್ಧಂ ತೌ ಮಹಾಸೇನೇನ ತತ್ಕ್ಷಣಾತ್ ॥೩೨॥

ತಯೋರ್ಬಲಂ ನಿರೀಕ್ಷ್ಯೈವ ಕಾರ್ತಿಕೇಯೋ ಮಹಾಬಲಃ ।
ಶಿಖಯೋಸ್ತೌ ದಧಾರಾಶು ಷಡ್ಬಾಹುಃ ಷಟ್ಕರೈರ್ಬಲಾತ್ ॥೩೩॥

ಭ್ರಾಮಯಾಮಾಸ ಬಹುಧಾ ಪೋಥಯಾಮಾಸ ಭೂತಲೇ ।
ಶತಖಂಡಾನಿ ಜಾತಾನಿ ತಯೋಸ್ತು ಪತತೋರ್ಭುವಿ ॥೩೪॥

ಜಯಂ ಪ್ರಾಪ್ತೇ ಶಿವಸುತೇ ನೇದುರ್ವಾದ್ಯಾನಿ ಸರ್ವಶಃ ।
"ಜಯ ತ್ವಂ ಹಿ ಮಯೂರೇಶ !" ಜಗುಸ್ಸರ್ವೇಽಪಿ ಸೈನಿಕಾಃ ॥೩೫॥

ಚತ್ವಾರಸ್ತೇ ಯಯುರ್ದೇವಂ ಮಯೂರೇಶಂ ನಿಜಂ ಪ್ರಭುಮ್ ।
ಆಲಿಲಿಂಗುರ್ಮುದಾ ತೇ ತು ಪರಸ್ಪರಮಥಾಬ್ರುವನ್ ॥೩೬॥

ಸುರಿಸಿದರು. ಅವು ನಾಟದಂತಾಗಲು, ಇಬ್ಬರೂ ಒಮ್ಮೆಲೇ ಮಲ್ಲಯುದ್ಧವನ್ನು ಆರಂಭಿಸಿದರು. ॥೩೨॥

ಇವರ ಬಲ, ಚುರುಕುತನ, ಯುದ್ಧ ಪ್ರಾವೀಣ್ಯ ಇವನ್ನು ನೋಡಿದ ಷಡಾನನನು "ಇವರನ್ನು ಇನ್ನೂ ಹೆಚ್ಚುಕಾಲ ಬದುಕಿರಗೊಡಬಾರದೆ"ಂದು ನಿಶ್ಚಯಿಸಿ ತನ್ನ ಆರು ಕೈಗಳ ಮುಷ್ಟಿಗಳಿಂದಲೂ ಧರ್ಮಾಧರ್ಮರ ಜುಟ್ಟನ್ನು ಬಲಾತ್ಕಾರದಿಂದ ಭದ್ರವಾಗಿ ಹಿಡಿದುಬಿಟ್ಟನು ॥೩೩॥

ಹಾಗೆಯೇ ಅವರನ್ನು ಮೇಲಕ್ಕೆತ್ತಿ ಅನೇಕಸಲ ಗರಗರ ತಿರುಗಿಸುತ್ತ ನೆಲಕ್ಕೊಮ್ಮೆ ಧೊಪ್ಪನೆ ಕುಕ್ಕಿದನು. ಬೂದುಗುಂಬಳಕಾಯಿಯನ್ನು ಎತ್ತರವಾದ ಸ್ಥಳದಿಂದ ಕಲ್ಲಿನಮೇಲೆ ಬೀಳುವಂತೆ ಬಲವಾಗಿ ಅಪ್ಪಳಿಸಿದರೆ ಅದರ ಪರಿಣಾಮವೇನಾಗಬಹುದೋ, ಪ್ರಕೃತ ರಾಕ್ಷಸರಾಜನ ಮಕ್ಕಳ ಪರಿಸ್ಥಿತಿಯೂ ಅದರಂತೆ ಆಗಿ, ಅವರು ನೂರಾರು ಚೂರುಗಳಾದರು. ॥೩೪॥

ರಾಕ್ಷಸರ ಸೇನೆಯೊಡನೆ ಅದರ ಪ್ರಮುಖರೂ ಮೃತರಾಗಿ ಹೋಗಲು, ಷಡಾನನನು ವಿಜಯವನ್ನು ಹೊಂದಿದನು. ಕೂಡಲೇ ರಣವಾದ್ಯಗಾರರು ವಿಜಯವನ್ನು ಸೂಚಿಸುವಂತೆ ವಾದ್ಯಗಳನ್ನು ಬಾರಿಸಿದರು. ಸೈನಿಕರೆಲ್ಲ ವಂದಿ, ಮಾಗಧರ ಧ್ವನಿಯೊಂದಿಗೆ ತಮ್ಮ ಸ್ವರವನ್ನೂ ಸೇರಿಸಿ "ಮಯೂರೇಶ್ವರ, ನೀನು ಜಯಶಾಲಿಯಾಗು," ಎಂದು ಉಚ್ಚ ಸ್ವರದಿಂದ ಕೂಗುತ್ತ, ದೇವನ ಬಳಿಗೆ ಬಂದರು. ॥೩೫॥

ಸೈನಿಕರೊಂದಿಗೆ ವೀರಭದ್ರ, ಷಡಾನನ, ಹಿರಣ್ಯಗರ್ಭ ಹಾಗೂ ಭೂತರಾಜರು ಸಹ ಉಚ್ಚ ಸ್ವರದಿಂದ ಜಯಧ್ವನಿಯನ್ನು ಮಾಡುತ್ತ, ತಮ್ಮ ಪ್ರಭುವಾದ ಮಯೂರೇ

**ಪ್ರಾಪ್ತಾ ಇವ ಪುನರ್ಜನ್ಮ ಮುಮುದುಸ್ತೇ ಪರಸ್ಪರಮ್ ।**
**ಶಶಂಸುಸ್ಸರ್ವವೃತ್ತಾಂತಂ ಶಿವಾಯೈ ಚ ಶಿವಾಯ ಚ ॥೩೭॥**
**ಸೇನಾಂ ಚ ನಿಹತಾಂ ಸಿಂಧೋಃ ಪುತ್ರೌ ಚ ಬಲವತ್ತರೌ ॥೩೮॥**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸಿಂಧುಪುತ್ರವಧೋ' ನಾಮೈಕೋನ ವಿಂಶತ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ**

ಶ್ವರನ ಸಮೀಪಕ್ಕೆ ಬಂದರು. ಸಂತೋಷದಿಂದ ದೇವನನ್ನು ಆಲಿಂಗಿಸಿದರು ಮತ್ತು ತಮ್ಮ ತಮ್ಮೊಳಗೆ ಹೀಗೆ ಮಾತನಾಡಿಕೊಂಡರು. ॥೩೬॥

"ಅಬ್ಬಬ್ಬಾ! ಈ ಯುದ್ಧದಿಂದ ನಾವು ಪಾರಾಗಿ ಬಂದುದೆಂದರೆ ಪುನರ್ಜನ್ಮ ವನ್ನೆತ್ತಿ ಬಂದಂತಾಯಿತು" ಎಂದು ಸಂತೋಷದಿಂದ ಮಾತನಾಡಿದರು. ಮಹಾ ಬಲಿಷ್ಠರಾದ ಸಿಂಧುವಿನ ಪುತ್ರರು, ಅವರ ಅಸಂಖ್ಯವಾದ ಸೇನೆ ಎಲ್ಲವೂ ನಿಹತವಾದ ಸಂತೋಷದ ಸಂಗತಿಯನ್ನು ಪರಶಿವ-ಶಿವೆಯರಿಗೆ ವಿಸ್ತರಿಸಿ ಹೇಳಿದರು. ॥೩೭–೩೮॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಭಾಗದಲ್ಲಿ "ಸಿಂಧು ಪುತ್ರರ ವಧೆ" ಎಂಬಲ್ಲಿಗೆ ನೂರ ಹತ್ತೊಂಭತ್ತನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

## ಅಥ ವಿಂಶತ್ಯುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಹತಶಿಷ್ಟಾಃ ಕೇಽಪಿ ವೀರಾಃ ಸ್ರವದ್ರಕ್ತಾಃ ಸು-ದುಃಖಿತಾಃ ।**
**ಸಿಂಧುಂ ಸಭಾಗತಂ ಚೇತ್ಥಂ ಭೀತಭೀತಾ ಅಥಾಬ್ರುವನ್ ॥೧॥**

**ವೀರಾ ಊಚುಃ :—**

**ಧನುರ್ಧರ ! ನಿಬೋಧೇದಮತಿದುಃಖಕರಂ ವಚಃ ।**
**ಧರ್ಮಾಧರ್ಮೌ ತವ ಸುತೌ ಕೃತ್ವಾ ಯುದ್ಧಂ ಮಹತ್ತರಮ್ ॥೨॥**

**ನಿನ್ಯತುರ್ದೇವಸೇನಾಂ ತೌ ಹತ್ವಾ ಹತ್ವಾ ಯಮಕ್ಷಯಮ್ ।**
**ತತಃ ಕೋಽಪಿ ಮಹಾವೀರೋ ಮುಖ್ಯೈಃ ಷಡ್ಭಿರ್ವಿರಾಜಿತಃ ॥೩॥**

---

ಶ್ರೀ ಮಂಗಲಮೂರ್ತಯೇ ನಮಃ ॥

## ೧೨೦ ನೆಯ ಅಧ್ಯಾಯ

ಬ್ರಹ್ಮ:—

ಯುದ್ಧದಲ್ಲಿ ಕಳಿದುಳಿದವರ ಪೈಕಿ ಕೆಲವು ವೀರರು ತಮ್ಮ ದೇಹದಲ್ಲುಂಟಾದ ಗಾಯಗಳಿಂದ ಧಾರಾಕಾರವಾಗಿ ರಕ್ತ ಸುರಿಯುತ್ತಿರಲು, ಬಹಳ ನರಳುತ್ತ, ಸಭೆಯ ಮಧ್ಯೇ ಕುಳಿತಿದ್ದ ಸಿಂಧುದೈತ್ಯನ ಬಳಿಗೆ ಬಂದು, ಹೆದರುತ್ತ ಹೀಗೆಂದು ನುಡಿದರು. ॥೧॥

ವೀರರು :

ಧನುರ್ವಿದ್ಯಾಪಾರಂಗತನೇ! ನಾವು ಬಹಳ ದುಃಖಕಾರಕವಾದ ಯುದ್ಧದ ಸುದ್ದಿಯನ್ನು ತಂದಿದ್ದೇವೆ. ಕೇಳು. ನಿನ್ನ ಮಕ್ಕಳಾದ ಧರ್ಮಾಧರ್ಮರು ಯುದ್ಧರಂಗಕ್ಕೆ ಬಂದಕೂಡಲೇ ನಮ್ಮವರಾರಿಂದಲೂ ಮಾಡಲಾಗದಂತಹ ಘೋರ ವಾದ ಯುದ್ಧವನ್ನು ಮಾಡಿದರು. ॥೨॥

ಅವರು ಶತ್ರುಸೇನಾ ದಳವನ್ನು ಕೊಂದು ಕೊಂದು ವೈವಸ್ವತನ ನಗರಕ್ಕೆ ವಿಲಂಬಿಸದೆ ಕಳಿಸಿಕೊಟ್ಟರು. ಎಷ್ಟೋ ಕಾಲ ಹೀಗೆ ನಡೆಯುತ್ತಿದ್ದುದನ್ನು ನೋಡಿ,

**ಸೋಽಪಿ ತಾಭ್ಯಾಂ ರಣೇ ಘೋರೇ ಪಾತಿತೋ ಧರಣೀತಲೇ ।**
**ಪುನಸ್ತೇನ ಧೃತೌ ವೀರೌ ಶಿಖಾಯಾಂ ತಾವುಭಾವಪಿ ॥೪॥**
**ಭ್ರಾಮಯಿತ್ವಾ ಬಹುತರಂ ಪಾತಿತೌ ತೌ ಧರಾತಲೇ ।**
**ಶತಧಾ ಶೀರ್ಣದೇಹೌ ತೌ ಗತೌ ಸ್ವರ್ಗಮನುತ್ತಮಮ್ ॥೫॥**
**ಕ ಉವಾಚ :—**
**ಏವಮಾಕರ್ಣ್ಯ ತದ್ವಾಕ್ಯಂ ನೃಪತದ್ದೈತ್ಯಪುಂಗವಃ ।**
**ಶೋಕಸಾಗರಮಗ್ನೋಽಭೂದ್ವಜ್ರಾಹತ ಇವಾಚಲಃ ॥೬॥**
**ಧಾವಮಾನೈಸ್ಸುಹೃದ್ವರ್ಗೈಸ್ಸ ಆಶೂತ್ಥಾಪಿತೋ ಬಲಾತ್ ।**
**ಮುಹೂರ್ತಾತ್ಪ್ರಕೃತಿಂ ಯಾತಃ ಶುಶೋಚ ಬಹುದುಃಖಿತಃ ॥೭॥**

---

ಶತ್ರುಪಡೆಯ ಪ್ರಮುಖವೀರರ ಪೈಕಿ ಯಾರೋ ಒಬ್ಬನು ಮುಂದೆ ಬಂದನು. ಅವನು ಆರು ಮುಖಗಳಿಂದ ವಿರಾಜಿತನಾಗಿದ್ದನು. ಅವನ ವೀರ್ಯಅಸಾಧಾರಣವಾದುದು.॥೩॥

ಅವನು ನಮ್ಮ ನಾಯಕರಾಗಿದ್ದ ನಿನ್ನ ಮಕ್ಕಳೊಂದಿಗೆ ಘೋರವಾಗಿ ಕದನ ವನ್ನಾಡಲಾರಂಭಿಸಿದನು. ಧರ್ಮಾಧರ್ಮರಿಬ್ಬರೂ ಅವನ ಮೇಲೆರಗಿ ಕಾದಾಡಿ ಅವನನ್ನು ಒಮ್ಮೆ ನೆಲಕ್ಕೆ ಕೆಡಹಿದರು. ನೆಲಕ್ಕೆ ಬಿದ್ದ ಆ ಆರು ಮೋರೆಯವನು ಮತ್ತೆ ಮೇಲಕ್ಕೆದ್ದು, ನಿನ್ನ ಮಕ್ಕಳಿಬ್ಬರ ಜುಟ್ಟುಗಳನ್ನೂ ತನ್ನ ಕೈಗಳಿಂದ ಬಲವಾಗಿ ಹಿಡಿದುಕೊಂಡನು. ॥೪॥

ಮತ್ತು ಅವರನ್ನು ಅನೇಕ ಬಾರಿ ಗರಗರ ಸುತ್ತಿಸಿ ಸುತ್ತಿಸಿ, ನೆಲಕ್ಕೊಮ್ಮೆ ಧೊಪ್ಪನೆ ಕುಕ್ಕಿದನು. ಏಟು ಬಹಳ ಬಲವಾಗಿ ಬಿದ್ದುದರಿಂದ, ಅವರಿಬ್ಬರ ದೇಹ ಗಳು ನುಚ್ಚುನುಗ್ಗಾಗಿ ನೂರಾರು ಹೋಳುಗಳಾದವು. ಅವರು ಸದ್ದಿಲ್ಲದೆ ಸತ್ತು ಉತ್ತಮವಾದ ವೀರಸ್ವರ್ಗವನ್ನು ಕುರಿತು ಕೂಡಲೇ ಪ್ರಯಾಣ ಬೆಳೆಸಿದರು. ॥೫॥

ಬ್ರಹ್ಮ :

ವೀರರಾಡಿದ ಈ ದುರ್ವಾಕ್ಯಗಳನ್ನು ಕೇಳಿದೊಡನೆಯೇ ದೈತ್ಯಶ್ರೇಷ್ಠ; ಸಿಂಧು ಭದ್ರಾಸನದಿಂದುರುಳಿ ನೆಲಕ್ಕೆ ಬಿದ್ದನು. ಇಂದ್ರನು ವಜ್ರಾಯುಧದಿಂದ ರೆಕ್ಕೆ ಗಳನ್ನು ಕತ್ತರಿಸಿದಾಗ ಪರ್ವತಗಳು ನೆಲಕ್ಕುರುಳಿದಂತಾಯಿತು. ರಾಕ್ಷಸನು ದುಃಖ ಸಾಗರದಲ್ಲಿ ಮುಳುಗಿ ಹೋದನು. ॥೬॥

ಸಭೆಯಲ್ಲಿ ಕುಳಿತಿದ್ದ ಸಿಂಧುವಿನ ಸ್ನೇಹಿತವರ್ಗ ಬೇಗನೆ ಓಡಿ ಬಂದು, ಅಸುರ ನನ್ನು ಬಲಾತ್ಕಾರದಿಂದ ಮೇಲಕ್ಕೆಬ್ಬಿಸಿ ಶೈತ್ಯೋಪಚಾರವನ್ನು ಮಾಡಿದರು. ಒಂದು ಮುಹೂರ್ತವಾದನಂತರ ರಾಕ್ಷಸನು ಮತ್ತೆ ಸಂಜ್ಞೆಯನ್ನು ಹೊಂದಿದನು. ದೇಹದ ಮೇಲೆ ಭಾನ ಬಂದಕೂಡಲೇ ಪುತ್ರರ ಮರಣದ ದುಃಖವು ಅವನನ್ನಾವರಿಸಿತು. ಅತಿ

**ಸಿಂಧುರುವಾಚ :—**

**ಶಕ್ರಾದಯೋ ಲೋಕಪಾಲಾ ಜಿತಾ ಯಾಭ್ಯಾಂ ರಣೇ ಪುರಾ ।**
**ತೌ ಹತೌ ನು ಕಥಂ ವೀರೌ ಷಡಾಸ್ಯೇನ ಮಹಾಬಲೌ ॥೮॥**

**ವಿಹಾಯ ಮೃತ್ಯುಲೋಕೇ ಮಾಂ ಕಥಂ ಸ್ವರ್ಗಂ ಗತಾವುಭೌ ।**
**ಸುರಸೇನಾನಿಹಂತಾರೌ ಕೃತಾಂತಸ್ಯಾಂತಕಾವುಭೌ ॥೯॥**

**" ನಾನೇಷ್ಯೇ ಶತ್ರುಮೂರ್ಧಾನಂ ತದಾಸ್ಯಂ ದರ್ಶಯೇ ನ ಚ" ।**
**ಗಮನಾವಸರೇ ಪ್ರೋಕ್ತಂ ತತ್ಸತ್ಯಂ ಕಿಂ ಕೃತಂ ತ್ವಯಾ ॥೧೦॥**

**ಕ ಉವಾಚ :—**

**ಅಥ ದುರ್ಗಾಂ ಸಖೀಭಿಸ್ತು ವೃತ್ತಾಂತೋಽಂತಃಪುರೇ ತಥಾ ।**
**ಕಥಿತೋ ವಿಸ್ತರೇಣೈವ ರುದತೀಭಿಃ ಸು-ದುಃಖಿತಃ ॥೧೧॥**

ಯಾಗಿ ಶೋಕಿಸಿದನು, ಮತ್ತು ಮೃತರ ಶೌರ್ಯವನ್ನು ಈ ರೀತಿ ಸ್ಮರಿಸಿದನು. ॥೭॥

ಸಿಂಧು :—

ಹಿಂದೆ ನಡೆದ ಘೋರ ಯುದ್ಧಗಳಲ್ಲಿ ಯಾವ ಧರ್ಮಾಧರ್ಮರು ಇಂದ್ರ, ಅಗ್ನಿ ಯಮ ಮೊದಲಾದ ಅಷ್ಟ ದಿಕ್ಪಾಲಕರನ್ನೂ ಸೋಲಿಸಿದ್ದರೋ, ಅಂತಹ ವೀರರು ಸಾಯೋಣವೆಂದರೇನರ್ಥ ? ಅದೂ ಬಾಲಕ ; ಷಡಾನನನು ಅವರ ಮೃತಿಗೆ ಕಾರಣನಾದನೆಂದರೆ ಕೇವಲ ಲಾಂಛನವೇ ಸರಿ. ॥೮॥

ಈ ಯುದ್ಧಕ್ಕೆ ಕಾರಣನಾದವನು ನಾನು. ನನ್ನನ್ನು ಮಾತ್ರ ಈ ಮೃತ್ಯು ಲೋಕದಲ್ಲೇ ಬಿಟ್ಟು, ತಾವಿಬ್ಬರೇ ಹೇಗೆ ಸ್ವರ್ಗಲೋಕಕ್ಕೆ ತೆರಳಿರಬಹುದು ? ಅವ ರಾದರೋ, ಸಾಮಾನ್ಯರಾದವರಲ್ಲ. ಸುರಸೇನೆಯನ್ನೆಲ್ಲ ಧ್ವಂಸಗೊಳಿಸಿದವರು. ಯಮನಿಗೂ ಯಮನಂತಿದ್ದವರು. ॥೯॥

" ಯುದ್ಧದಲ್ಲಿ ಶತ್ರುವಿನ ತಲೆಯನ್ನು ಕತ್ತರಿಸಿ ಇಲ್ಲಿಗೆ ತರಲಾಗದಿದ್ದರೆ, ನಾವು ನಮ್ಮ ಮುಖವನ್ನೇ ಯಾರಿಗೂ ತೋರಿಸುವುದಿಲ್ಲ." ಎಂದು ಯುದ್ಧಕ್ಕೆ ಹೊರಡುವ ಮುನ್ನ ಹೇಳಿ ಹೋಗಿದ್ದಿರಿ. ಕೊನೆಗೂ ಅದನ್ನೇ ಸತ್ಯಗೊಳಿಸಿಬಿಟ್ಟಿ ರಲ್ಲ ? ನೀವು ಹೀಗೆ ಮಾಡಬಹುದೇ ? ॥೧೦॥

ಅನಂತರ ಈ ದುಷ್ಟವಾರ್ತೆ ಕರ್ಣಾಕರ್ಣಿಕೆಯಾ ದುರ್ಗಾದೇವಿಯ ಸಖಿ ಯರಿಗೂ ತಲುಪಿ,ಅವರಿಂದ ನಿಮಿಷಮಾತ್ರದಲ್ಲಿ ಅಂತಃಪುರದಲ್ಲೆಲ್ಲ ಹಬ್ಬಿಹೋಯಿತು. ಅಲ್ಲಿದ್ದ ಸ್ತ್ರೀಜನರು ದುಃಖಾರ್ತರಾಗಿ, ಮರ ಮರ ಮರುಗಿದರು. ದೇವಿಯ ಸಖಿ

**ಸಖ್ಯ ಊಚುಃ :—**
**ಭರ್ತಾ ರೋದಿತಿ ತೇ ಸುಭ್ರು ! ಧರ್ಮಾಧರ್ಮೌ ಮೃತಾವಿತಿ ।**
**ಕ ಉವಾಚ :—**
**ಸಾಥ ಪರ್ಯಂಕಸುಗತಾ ನ್ಯಪತತ್ಪೃಥಿವೀತಲೇ ॥೧೨॥**
**ರಂಭೇವ ವಾತನಿಹತಾ ಕೋಮಲಾರುಣಪಲ್ಲವಾ ।**
**ಸಖೀದುಷ್ಟವಚೋಭಿಸ್ಸಾ ಬಾಣೈರಿವ ಹೃದಿ ಕ್ಷತಾ ॥೧೩॥**
**ವಿಃಸ್ರಸ್ತಕೇಶಾಭರಣಾ ಸಾಪ್ಯರೋದೀತ್ತದಾ ಭೃಶಮ್ ।**
**ವಿಃಸ್ರಸ್ತವಸ್ತ್ರಾ ವಿಕಸದ್ಬಿಲ್ವಚಾರುಪಯೋಧರಾ ॥೧೪॥**
**ಅಶ್ರುಶ್ಯಾಮಲಗಂಡಾ ಸಾ ಶೋಕಾನಲಹೃತಪ್ರಭಾ ।**

ಯರು ದೀನಸ್ವರದಿಂದ ಅಳುತ್ತ ದಾರುಣವಾದ ಈ ಸಂಗತಿಯನ್ನು ರಾಣಿಯ ಎದುರು ವಿಧಿ ಇಲ್ಲದೆ ಹೇಗೋ ಹೇಳಿಬಿಟ್ಟರು. ॥೧೧॥

ಸಖಿಯರು :

ಸುಭ್ರು ! ರಾಜಕುಮಾರರಾದ ಧರ್ಮಾಧರ್ಮರು ಯುದ್ಧದಲ್ಲಿ ಮೃತರಾದ ರೆಂಬ ಸಂಗತಿಯನ್ನು ಕೇಳಿ ನಿನ್ನ ಪತಿ ; ಸಿಂಧುರಾಜನು ಅಳುತ್ತಲಿದ್ದಾನೆ.

ಬ್ರಹ್ಮಾ :—

ಸಖಿಯರ ಮುಖದಿಂದ ಈ ಮಾತು ಹೊರಟುದೇ ತಡ, ಮಂಚದ ಮೇಲೆ ಸುಖವಾಗಿ ಮಲಗಿದ್ದ ದುರ್ಗಾದೇವಿಯು ಧೊಪ್ಪನೆ ನೆಲಕ್ಕುರುಳಿ ಬಿದ್ದಳು. ॥೧೨॥

ಎಳೆಯ ಚಿಗುರಿನಂತೆ ಕೋಮಲಾಂಗಳೂ, ಅರುಣಾರುಣ ದೇಹಕಾಂತಿಯುಳ್ಳವಳೂ ಆದ ಮಹಾರಾಣಿ ; ದುರ್ಗಾದೇವಿಯು ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ಬುಡ ಸಹಿತ ನೆಲಕ್ಕುರುಳಿದ ಬಾಳೆಯ ಗಿಡದಂತೆ ಬಾಡಿಯೇ ಹೋದಳು. ಸಖಿಯರಾಡಿದ ದುಷ್ಟಮಾತುಗಳಿಂದ ಇರಿದು ಹೋದ ಅವಳ ಹೃದಯ ಬಾಣಾಹತವಾದಂತಾಯಿತು. ॥೧೩॥

ಹೊರಳಾಟದಲ್ಲಿ ನೀಳವಾದ ಅವಳ ತಲೆಗೂದಲು ಗಂಟು ಬಿಚ್ಚಿ ಹರವಿ ಹೋಯಿತು. ತಲೆಯಲ್ಲಿ ಧರಿಸಿದ್ದ ಆಭರಣಗಳು ಅಸ್ತವ್ಯಸ್ತವಾಗಿ ಬಿದ್ದವು. ಅವಳು ಬಹಳ ಅತ್ತುಬಿಟ್ಟಳು. ದುಃಖವು ಕ್ಷಣಕ್ಷಣಕ್ಕೂ ಏರುತ್ತಲಿದ್ದುದರಿಂದ ಅವಳಿಗೆ ಮೈಮೇಲೆ ಸ್ಮೃತಿಯೇ ಉಳಿಯಲಿಲ್ಲ. ಉಟ್ಟ ಬಟ್ಟೆ, ಸೆರಗು ಇವು ಎತ್ತಲೊ ಜಾರಿದ್ದವಾದುದರಿಂದ ಬಿಲ್ವದ ಕಾಯಿಯಂತೆ ಕಠಿಣವಾದ ಅವಳ ಸುಂದರ ಸ್ತನ ಯುಗ್ಮವು ಎಲ್ಲರ ಕಣ್ಣುಗಳಿಗೂ ಕಾಣುವಂತಾಯಿತು. ॥೧೪॥

ಕಣ್ಣೀರು ಕಾಡಿಗೆಯೊಂದಿಗೆ ಹರಿದು ಕೆನ್ನೆಗಳ ಮೇಲೆಲ್ಲ ಪಸರಿಸಿತು. ಬೆಂಕಿ

ಜಘ್ನೇ ಮುಖಂ ಸಾ ಪಾಣಿಭ್ಯಾಂ ದಂತಾಸೃಕ್ಸಿಕ್ತಭೂತಲಾ ||೧೫||

ನಿರಸ್ತದೇಹಭಾವಾ ಸಾ ವಿಕಲಾ ವಿಗತತ್ರಪಾ ।
ಸಭಾಂಗಣಗತಾ ಲುಂಠದ್ಧಕೃದ್ಬಾಲಕೋ ಯಥಾ ||೧೬||

ಸರ್ವೇ ತತಃ ಸಭ್ಯವರಾ ರುರುದುರ್ದುಃಖಕರ್ಶಿತಾಃ ।
ಪ್ರಸ್ರವನ್ನೇತ್ರಸಲಿಲಾ ಪ್ರಾಬ್ರುವೀತ್ತಾರ್ತ್ತ ಸಭಾಸದಃ ||೧೭||

ದುರ್ಗೋವಾಚ :—

ಕಥಂ ಸರ್ವೇಷು ವೀರೇಷು ಜೀವತ್ಸು, ತೌ ಸುತೌ ಮಮ ।
ಪ್ರೇಷಿತೌ ರಣಭೂಮಿಂ ತೌ ಮಾಮಪೃಷ್ಟ್ವಾ ತು ಕೋಮಲೌ ||೧೮||

ಮಯಾಶೀಃಶ್ಚೇನ್ನಿಯುಕ್ತಾಸ್ಯಾನ್ನ ತಯೋರ್ಮರಣಂ ಭವೇತ್ ।

---

ಯಂತೆ ಸುಡಲಾರಂಭಿಸಿದ ಪುತ್ರವಿಯೋಗ ದುಃಖ, ಅವಳ ಮುಖಕಾಂತಿಯನ್ನು ಕುಂದಿಸಿತು. ಅಂಗೈಯಿಂದ ತುಟಿಗಳಿಗೆ ಪದೇ ಪದೇ ಹೊಡೆದುಕೊಳ್ಳುತ್ತಲಿದ್ದ ಳಾದುದರಿಂದ ಅವಳ ಹಲ್ಲುಗಳು ರಕ್ತವನ್ನು ಕಾರಿ ನೆಲವನ್ನು ನೆನೆಸಿದವು. ||೧೫||

ಅವಳಿಗೆ ದೇಹದ ಮೇಲೆ ಭಾನವೇ ಉಳಿದಿರಲಿಲ್ಲವೆಂದ ಬಳಿಕ, ಸಮೀಪದಲ್ಲಿ ಯಾರಿದ್ದಾರೆ, ಯಾರಿಲ್ಲವೆಂಬುದು ತಿಳಿಯುವುದೆಂತು? ಸ್ತ್ರೀ ಸಹಜವಾದ ಲಜ್ಜೆ ಸಹ ತಾತ್ಕಾಲಿಕವಾಗಿ ಅವಳಿಂದ ದೂರವಾಯಿತು. ತಾನು ತುಂಬಿದ ಸಭಾಂಗಣದಲ್ಲಿದ್ದರೂ ರಚ್ಚೆ ಹಿಡಿದ ಬಾಲಕನಂತೆ ನೆಲದ ಮೇಲೆ ಬಿದ್ದು ಉರುಳಾಡಿದಳು. ||೧೬||

ಹೃದಯವಿದ್ರಾವಕವಾದ ಆ ಕರುಣದೃಶ್ಯವನ್ನುಕಂಡು ಎಲ್ಲರಕಣ್ಣುಗಳೂ ಒದ್ದೆ ಯಾದವು. ದುಃಖವನ್ನು ತಡೆಯಲಾರದೇ, ಅಲ್ಲಿ ಕುಳಿತಿದ್ದ ಸಭಿಕರೆಲ್ಲ ತಾವೂ ಘಟ್ಟಿ ಯಾಗಿ ಅತ್ತುಬಿಟ್ಟರು. ದುರ್ಗಾದೇವಿಯಂತೂ ಕಣ್ಣೀರಿನ ಕೋಡಿಯನ್ನು ಹರಿಸುತ್ತ, ಗದ್ಗದ ಕಂಠದಿಂದ ಸಭಿಕರನ್ನು ಕುರಿತು, ತನ್ನ ಹೊಟ್ಟೆಯ ದುಃಖವನ್ನು ಹೀಗೆಂದು ತೋಡಿಕೊಂಡಳು. ||೧೭||

ದುರ್ಗಾ :—

ಇದೇನು ನನ್ನ ಕರ್ಮವಿರಬಹುದು ? ಯುದ್ಧಕ್ಕಾಗಿ ತೆರಳಿದ ವೀರರೆಲ್ಲರೂ ಬದುಕಿ ಹಿಂದಿರುಗಿಬಂದಿರುವಾಗ ನನ್ನ ಮಕ್ಕಳಾದ ಧರ್ಮಾಧರ್ಮರು ಮಾತ್ರ ಏಕೆ ಮೃತರಾಗಿದ್ದಾರು? ನನ್ನ ಅನುಮತಿ ಇಲ್ಲದೇ, ಕೋಮಲಕಾಯರಾದ ಅವರಿಬ್ಬರನ್ನೂ ರಣರಂಗಕ್ಕೆ ಏತಕ್ಕಾಗಿ ಕಳಿಸಿದಿರಿ ? ||೧೮||

ಯುದ್ಧಕ್ಕೆ ಹೊರಡುವ ಮುನ್ನ, ನಾನು ಅವರನ್ನು ಆಶೀರ್ವದಿಸಿ ಕಳಿಸಿದ್ದರೆ,

ನಹಿ ಮೇ ವಚನಂ ಧಾತಾ ಮಿಥ್ಯಾಕರ್ತುಂ ಸಮಿಹತೇ ॥೧೯॥

ಯಾಭ್ಯಾಂ ಜಿತಾ ದೇವಗಣಾಸ್ತೌ ಕಥಂ ನಿಧನಂಗತೌ ? ।
ಕ್ವ ದ್ರಕ್ಷ್ಯಾಮ್ಯಹಮೇತೌ ಯೌ ಜಿಗ್ಯತುರ್ಮದನಂ ರುಚಾ ॥೨೦॥
ಬುದ್ಧೀನಾಂ ತೌ ಸರಸ್ವಂತೌ ಮಾಂ ತ್ಯಕ್ತ್ವಾ ತು ಕಥಂ ಗತೌ ? ।
ತಯೋಃಶೋಕಾಗ್ನಿನಾ ದಗ್ಧಾ ಮರಿಷ್ಯಾಮ್ಯಹಮದ್ಯ ವೈ ॥೨೧॥

ಕ ಉವಾಚ :—
ಇತ್ಯುಕ್ತ್ವಾ ನ್ಯಪತದ್ಭೂಮೌ ನಿಘ್ನತೀ ಹೃದಯಂ ಮುಹುಃ ।
ತತಸ್ಸಖ್ಯೋ ನಾಗರಾಶ್ಚ ಬೋಧಯಾಮಾಸುರಂಜಸಾ ॥೨೨॥

ತಾ ಊಚುಃ :—
ನ ಮಾತಃ ! ಕೋಽಪಿ ಶೋಕೇನ ಯೋ ಮೃತಃ ಪುನರಾಗತಃ ।
ಮೃತ್ಯುಲೋಕೇ ಚಿರಂ ಸ್ಥಾತಾ ನೇಕ್ಷಿತೋ ನ ಶ್ರುತೋಽಪಿ ಚ ॥೨೩॥

---

ಎಂದೆಂದಿಗೂ ಅವರು ಮೃತರಾಗುತ್ತಿರಲಿಲ್ಲ. ನನ್ನ ಬಾಯಿಯಿಂದ ಹೊರಟ ಮಾತುಗಳನ್ನು ಸುಳ್ಳಾಗಿ ಮಾಡಲು ಬ್ರಹ್ಮದೇವನು ಸಹ ಪ್ರಯತ್ನಿಸಲಾರ. ॥೧೯॥

ಯಾರ ಭುಜಬಲ-ಪರಾಕ್ರಮಗಳಿಂದ ದೇವತಾಗಣವೆಲ್ಲ ಸೋತು ಹೋಗಿದ್ದಿತೋ, ಅಂತಹ ವೀರಕುಮಾರರು ಇಂದು ಹೇಗೆ ಸತ್ತಿದ್ದಾರು? ಮನ್ಮಥನಿಗಿಂತಲೂ ಸುಂದರಕಾಯರವರು. ಅಂಥವರನ್ನು ನಾನು ಇನ್ನು ಎಲ್ಲಿ, ಹೇಗೆ ಕಂಡೇನು? ॥೨೦॥

ನನ್ನ ಮಕ್ಕಳು ಸರಸ್ವತೀದೇವಿಗೆ ಸಮಾನವೆನಿಸಿದ ಬುದ್ಧಿಯುಳ್ಳವರು. ಇಂಥವರ್ರು ನನ್ನನ್ನು; ಹೆತ್ತ ತಾಯಿಯನ್ನು ತ್ಯಜಿಸಿ ಹೇಗೆ ಹೋಗಿದ್ದಾರು ? ಅವರ ವಿಯೋಗ ಶೋಕವು ಜ್ವಲಿಸುವ ಅಗ್ನಿಯಂತೆ ನನ್ನನ್ನು ದಹಿಸುತ್ತಲಿದೆ. ನಾನು ತಡೆಯಲಾರೆ. ಈಗಲೇ ಈ ದೇಹವನ್ನು ತ್ಯಜಿಸಿಬಿಡುವೆನು. ॥೨೧॥

ಬ್ರಹ್ಮ:—
ಹೀಗೆ ನುಡಿದು, ಎರಡು ಕೈಗಳಿಂದಲೂ ಎದೆಯನ್ನು ಹೊಡೆದುಕೊಳ್ಳುತ್ತ ನೆಲಕ್ಕೆ ಮತ್ತೆ ಧೊಪ್ಪನೆ ಬಿದ್ದಳು. ಆಗ ಅಲ್ಲಿದ್ದ ನಾಗರಿಕರು ಮತ್ತು ಸಖಿಯರು ಸೇರಿ ಅವಳ ಸಂಕಟವನ್ನು ಕಡಿಮೆಮಾಡುವಂತಹ ಮಾತುಗಳನ್ನಾಡುತ್ತ ಸಂತವಿಸತೊಡಗಿದರು. ॥೨೨॥

ಸಖಿಯರು :—

ತಾಯೆ, ದುರ್ಗಾದೇವಿ ! ಶೋಕಿಸುವುದರಿಂದ ಸತ್ತುಹೋದವರಾರೂ ಹಿಂದಿರುಗಿ ಬರುವುದಿಲ್ಲ. ಮತ್ತು ಈ ಮರ್ತ್ಯ ಲೋಕದಲ್ಲಿ ಇರತಕ್ಕವರಾರೂ ಹೆಚ್ಚುಕಾಲ ಎಂದರೆ ಪುರುಷಾಯುಷ್ಯವನ್ನು ಮೀರಿ ಬದುಕಿರತಕ್ಕವರೂ ಅಲ್ಲ. ಅಂಥವರನ್ನಾರೂ

ವಿಹಾಯ ಹನುಮಂತಂ ಚ [1]ಕೃಪಂ ಶಾರದ್ವತಂ ಬಲಿಮ್ ।
ವ್ಯಾಸಂ ಪರಶುರಾಮಂ ಚ ವಿಭೀಷಣಮಥಾಪಿ ಚ ॥೨೪॥

[2]ದ್ರೌಣಿಂ ನಾನ್ಯಶ್ಚಿರಂ ಸ್ಥಾಯೀ ನ ಭೂತೋ ನ ಭವಿಷ್ಯತಿ ।
ಬ್ರಹ್ಮಾದೀನಾಂ ಭವೇನ್ಮೃತ್ಯುಃ ಕಾ ತತ್ರ ಗಣನಾತ್ಮನಃ ॥೨೫॥

ರೋದನಂ ತೇನ ಕರ್ತವ್ಯಂ ನ ಸ್ಯಾನ್ಮೃತ್ಯುಃ ಕದಾಸ್ಯ ಚೇತ್ ।
ಕ್ಷೀಣೇ ಋಣಾನುಬಂಧೇ ಚ ಸ್ತ್ರೀ ಪುತ್ರಃ ಪಶುರೇವ ಚ ॥೨೬॥

---

ನೋಡಿರುವುದಿಲ್ಲವಷ್ಟೇ ಅಲ್ಲ, ಹೀಗಿದ್ದವರ ಬಗ್ಗೆ ಸುದ್ದಿಯನ್ನು ಸಹ ಯಾರೂ ಕೇಳಿರುವುದಿಲ್ಲ. ॥೨೩॥

ತಪಸ್ವಿಗಳೂ ಪುಣ್ಯಶರೀರಿಗಳೂ ಆದ ಕೆಲವರು ಅದೂ ಕೇವಲ ಬೆರಳುಗಳಿಂದ ಎಣಿಸಬಹುದಾದಷ್ಟು ಮಂದಿ ಹೊರತು, ಮಿಕ್ಕವರೆಲ್ಲರೂ ಒಂದಿಲ್ಲೊಂದು ದಿವಸ ಇಲ್ಲಿಂದ ಹೊರಟು ಹೋಗತಕ್ಕವರೇ. ಇದರಲ್ಲಿ ಸಂದೇಹವಿಲ್ಲ. ಆ ಕೆಲವು ಮಹಾತ್ಮರಾರೆನ್ನುವೆಯೋ, ಅದನ್ನು ಹೇಳುತ್ತೇವೆ, ಕೇಳು, ವಾನರಶ್ರೇಷ್ಠ; ಹನೂಮಾನ್, ಶರದ್ವಂತರ ಮಕ್ಕಳಾದ ಕೃಪಾಚಾರ್ಯರು, ಮಹಾದಾನಿ ಎನಿಸಿದ ಬಲಿರಾಜ, ಸರ್ವಜ್ಞ; ವೇದವ್ಯಾಸ, ತಪಸ್ವೀ ಹಾಗೂ ಕ್ಷತ್ರಕುಲಾಂಗಾರ ಪರಶುರಾಮ; ರಾವಣಾನುಜ; ಭಗವದ್ಭಕ್ತ ವಿಭೀಷಣ, ॥೨೪॥

ಸಾಕ್ಷಾದ್ರುದ್ರಾವತಾರಿ, ದ್ರೋಣಾಚಾರ್ಯಪುತ್ರ ಅಶ್ವತ್ಥಾಮಾ, ಇವರನ್ನುಳಿದು ಹೆಚ್ಚು ಕಾಲ ಬದುಕಿರತಕ್ಕವನು ಹಿಂದೆ ಹುಟ್ಟಲಿಲ್ಲ, ಮುಂದೆ ಹುಟ್ಟುವುದೂ ಇಲ್ಲ. ವಿಚಾರಮಾಡಿದರೆ, ಸೃಷ್ಟಿಕರ್ತನಾದ ಬ್ರಹ್ಮದೇವನೊಬ್ಬನು ಚಿರಕಾಲವಿರತಕ್ಕವನೆಂದು ಹೇಳಿಕೊಳ್ಳಬಹುದಾದರೂ, ಬ್ರಾಹ್ಮಮಾನರೀತ್ಯಾ ನೂರು ವರ್ಷಗಳಿಗೆ ಮಿಕ್ಕಿ ಅವನೂ ಬದುಕಿರುವುದಕ್ಕೆ ಸಾಧ್ಯವಿಲ್ಲ. ಹೀಗಿರುವಾಗ, ಅತ್ಯಲ್ಪಾಯುಗಳಾದ ಮಾನವರ ಪಾಡೇನು ? ॥೨೫॥

ಯಾರಿಗೆ ಸರ್ವಾತ್ಮನಾ ಮೃತ್ಯುವೇ ಬರಬಾರದೋ, ಅಂಥವನು ಮೃತ್ಯುವಶನಾದರೆ, ಆಗ ಅವನಿಗಾಗಿ ಅಳುವುದು ನ್ಯಾಯವಾಗಿದೆ. ಜನ್ಮಾಂತರದ ಋಣಗಳನ್ನು ತೀರಿಸುವುದಕ್ಕಾಗಲಿ ಅಥವಾ ಆ ಋಣಗಳನ್ನು ಹಿಂದಿರುಗಿ ಪಡೆಯಲಿಕ್ಕಾಗಲಿ ಪ್ರಾಣಿಗಳು ಒಬ್ಬರೊಂದಿಗೊಬ್ಬರು ಕೂಡಿರುವರು. ಕೊಡಬೇಕಾದಷ್ಟು ಋಣವನ್ನು ಕೊಟ್ಟಕೂಡಲೆ, ಹಾಗೂ ಪಡೆಯಬೇಕಾದಷ್ಟನ್ನು ಪಡೆದ ಕೂಡಲೆ ಯಾರೊಬ್ಬರ ದಾಕ್ಷಿಣ್ಯ, ಒತ್ತಾಯಗಳಿಗೂ ಒಳಪಡದೇ, ತಮ್ಮ ಪಾಡಿಗೆ ತಾವು

ನ ತಿಷ್ಠತಿ ಧ್ರುವಂ ತತ್ರ ಕೃತಃ ಶೋಕೋ ವೃಥಾ ಭವೇತ್ ॥
ಯಥಾ ಕಾಷ್ಠಂ ಕಾಷ್ಠಗತಂ ಪೂರೇಸ್ಯಾಚ್ಚ ನಿಯುಜ್ಯತೇ ॥೨೭॥
ತದ್ವಜ್ಜಂತುರ್ವಿಯೋಗಂ ಚ ಯೋಗಂ ಚ ಪ್ರಾಪ್ನುತೇಽವಶಃ ।
ನಾನಾಪಕ್ಷಿಗಣಾ ರಾತ್ರಾವೇಕವೃಕ್ಷಂ ಗತಾ ಯಥಾ ॥೨೮॥
ಪ್ರಾತರ್ದಶ ದಿಶೋ ಯಾಂತಿ ತತ್ರ ಕಿಂ ಪರಿದೇವನಮ್ ?

---

ಬೇರ್ಪಟ್ಟು ಹೋಗುವರು. ಅಂತೆಯೇ ಸ್ತ್ರೀ, ಪುತ್ರ, ಪಶು ಇತ್ಯಾದಿಗಳು ನಿಯತ ಕಾಲವನ್ನು ಮೀರಿ ಒಬ್ಬನ ಬಳಿ ಇರಲಾರವು. ॥೨೬॥

ಇಂತಹ ನಶ್ವರ ವಸ್ತುಗಳು ನನ್ನವು, ಎಂದೂ, ನನ್ನನ್ನು ಬಿಟ್ಟಗಲುವುದಿಲ್ಲ ಎಂದೂ ಲೋಕವು ವಿಭ್ರಮುಗೊಳ್ಳುವುದು. ತತ್ತ್ವವನ್ನರಿತವನು ಹೀಗೆ ಭ್ರಮಿಸುವುದಿಲ್ಲ. ಬಂದ ರೋಗ ಅನುಭವಿಸುವ ಕಾಲಾನಂತರ ಹೋದರೆ "ಇದು ನನ್ನನ್ನು ಬಿಟ್ಟು ಹೋಯಿತಲ್ಲ ?" ಎಂದು ನಾವು ಅಳುವೆವೇನು ? ಅಂತೆಯೇ ಋಣನಿಮಿತ್ತ ಬಂಧುಗಳೆನಿಸಿದವರ ಬಗ್ಗೆಯೂ ಅಳಬಾರದು. ಅತ್ತರೆ, ಅದು ವ್ಯರ್ಥವೇ ಸರಿ. "ಆದಾವಂತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ" ಎಂದರೆ ವಸ್ತುವಿನ ಸಂಬಂಧ ಏರ್ಪಡುವ ಮುನ್ನ ಆ ವಸ್ತು ಹೇಗೆ ನಮ್ಮದಾಗಿರಲಿಲ್ಲವೋ, ಮತ್ತು ವಸ್ತು ನಮ್ಮ ಕೈಬಿಟ್ಟು ಹೋದ ಬಳಿಕ ಹೇಗೆ ನಮ್ಮದಾಗಲಾರದೋ,ಅಂತಹ ವಸ್ತು ಇದ್ದರೂ ಇಲ್ಲದಂತೆಯೇ ಸರಿ ಎಂಬ ತಿಳಿವನ್ನು ತಂದುಕೊಂಡು, ಮನಸ್ಸನ್ನು ಸಮಾಧಾನಪಡಿಸಿಕೊಳ್ಳಬೇಕು. ಸೌದೆಯು ಸೌದೆಯ ರಾಶಿಯೊಂದಿಗೆ ಸೇರಿಸಿದಾಗ 'ಹೊರೆ' ಎನಿಸುವುದು. ಅದನ್ನು ವಿಂಗಡಿಸಿ ಬಿಸುಟಾಗ 'ಸೌದೆಯ ತುಂಡೆ'ನಿಸುವುದು. ॥೨೭॥

ಅಂತೆಯೇ ಋಣಾನುಬಂಧಗಳ ಎಳೆತಕ್ಕೆ ಸಿಕ್ಕಿದ ಪ್ರಾಣಿಯು ತನಗಿಷ್ಟವಿರಲಿ, ಅಥವಾ ಇಷ್ಟವಿಲ್ಲದಿರಲಿ ಇತರ ಪ್ರಾಣಿಗಳೊಂದಿಗೆ ಸಂಯೋಗ-ವಿಯೋಗಗಳನ್ನು ಹೊಂದಲೇ ಬೇಕಾಗುವುದು. ಪ್ರತ್ಯಕ್ಷವಾಗಿ ಕಂಡು ಬರುವ ಉದಾಹರಣೆಯನ್ನು ಹೇಳುವೆವು, ಕೇಳು. ಸಂಜೆಯಾದೊಡನೆ ನಾನಾಜಾತಿಯ ಪಕ್ಷಿಗಳು ಎಲ್ಲೆಲ್ಲಿಂದಲೋ ಬಂದು ಒಂದು ದೊಡ್ಡ ವೃಕ್ಷವನ್ನಾಶ್ರಯಿಸಿರುತ್ತವೆ. ॥೨೮॥

ಬೆಳಕು ಹರಿಯುವ ವರೆಗೂ ಅಲ್ಲಿಯೇ ಇರಬೇಕಾದುದರಿಂದ ಒಂದರೊಂದಿಗೊಂದು ಮೈತ್ರಿಯನ್ನೂ ಬೆಳೆಸುತ್ತವೆ. ಬೆಳಕಾಗುವುದೇ ತಡ, ಪ್ರತಿಯೊಂದು ಪಕ್ಷಿಯೂ ತನ್ನ ದಾರಿಯನ್ನು ಹಿಡಿದುಕೊಂಡು ಹಾರಿಯೇ ಹೋಗುವುದು. ಕ್ಷಣಿಕ ಜೀವಿಗಳು ಇಂತಹ ಸಂಯೋಗ-ವಿಯೋಗಗಳಿಗಾಗಿ ಅತ್ತರೆ, ಫಲವೇನಿದೆ? ಅಳುವುದೇ ಆದರೆ, ಏತಕ್ಕಾಗಿ, ಎಷ್ಟು ಕಾಲ, ಎಷ್ಟು ಜನರಿಗಾಗಿ ಅಳಬೇಕಾದೀತು ? ವಿಚಾರಮಾಡು.

ಕ ಉವಾಚ :—
ಏವಂ ಪ್ರಬೋಧಿತಾ ದುರ್ಗಾ ಸಿಂಧುಶ್ಚ ಜನ ಏವ ಚ ॥೨೯॥
ಹಠಾಚ್ಛೋಕಂ ನಿಗೃಹ್ಯಾಸಾವಾಸನೇ ಸಂವಿವೇಶ ಹ ।
ಉಪಹಾಸಂ ಕರಿಷ್ಯಂತಿ ಸಪತ್ನಾ ರುದತಾಮಿತಿ ॥೩೦॥
ದುರ್ಗಾಂ ಧೃತ್ವಾ ಬಲಾಲ್ಲೋಕಾ ನಿನ್ಯುರಂತಃಪುರಂ ಹಿ ತ್ವಾವ್ ।
ನಿಃಶ್ವಸಂತೀ ಪಪಾತಾಸೌ ಪರ್ಯಂಕೇ ಶೋಕಕರ್ಶಿತಾ ॥೩೧॥
ಸ ಸಿಂಧುಃ ಕ್ರೋಧಸಂಯುಕ್ತೋ ಜಗ್ರಾಹ ಶಸ್ತ್ರಸಂಚಯಮ್ ।
ಪುತ್ರಯೋರ್ನಿಷ್ಕೃತಿಂ ಕರ್ತುಂ ಹಯಾರೂಢೋ ಯಯೌ ರಣಮ್॥೩೨॥

---

ಬ್ರಹ್ಮ :—

ಹೀಗೆ ದುರ್ಗೆಯನ್ನು ಜನರು ಬೋಧಿಸಿ ಸಮಾಧಾನಗೈದರು. ಅತ್ತ ಸಿಂಧು ರಾಜನಿಗೂ ಧೈರ್ಯ-ಶಾಂತಿಗಳನ್ನು ಉಪದೇಶಿಸಿದರು. ॥೨೯॥

ಆಗ ದಂಪತಿಗಳಿಬ್ಬರೂ ಬಹಳ ಬಲಾತ್ಕಾರದಿಂದ ತಮಗೆ ಉಂಟಾಗಿದ್ದ ಮಹಾ ದುಃಖವನ್ನು ತಡೆದುಕೊಂಡರು. ಅನಂತರ ಸಿಂಧುರಾಜನು ತನ್ನ ಭದ್ರಾಸನದ ಮೇಲೆ ಕುಳಿತನು. "ಶತ್ರುಗಳು ಹಾಸ್ಯಮಾಡುವರೆ"ಂಬುದು ಅಳುವನ್ನು ನಿಲ್ಲಿಸಲಿಕ್ಕೆ ಮತ್ತೊಂದು ಪ್ರಬಲತರ ಕಾರಣವಾಯಿತು. ॥೩೦॥

ದುರ್ಗೆ ಎಷ್ಟೆಂದರೂ ಕರುಳನ್ನು ಕಳೆದುಕೊಂಡ ಹೆಂಗಸು. ಸಿಂಧುವಿನಷ್ಟು ಸ್ಥೈರ್ಯ, ಬಲಗಳು ಅವಳಿಗಿರಲಿಲ್ಲ. ನಿಲ್ಲಲು ಸಹ ಅವಳಿಗೆ ತ್ರಾಣವಿಲ್ಲದೇ ಹೋಯಿತು. ಆಗ ಸಖಿಯರೂ, ಇತರ ಸ್ತ್ರೀಯರೂ ಅವಳನ್ನು ಬಲಾತ್ಕಾರದಿಂದ ಅಂತಃಪುರಕ್ಕೆ ಕರೆದೊಯ್ದರು. ಅವಳು ದುಃಖವನ್ನು ತಡೆಯಲಾರದೇ ಘಟ್ಟಿಯಾಗಿ ನಿಟ್ಟುಸಿರನ್ನು ಮೇಲ್ಮೇಲೆ ಬಿಡುತ್ತ ತನ್ನ ಮಂಚದ ಮೇಲೆ ಬಿದ್ದುಬಿಟ್ಟಳು. ॥೩೧॥

ದುಃಖೋದ್ವೇಗಗಳಿಗೆ ಉತ್ತೇಜಕಳಾಗಿದ್ದ ದುರ್ಗೆಯು ಅಂತಃಪುರಕ್ಕೆ ತೆರಳಿದ ಬಳಿಕ, ಇದುವರೆಗೂ ಅಳುವಿನ ರೂಪವನ್ನು ತಳೆದಿದ್ದ ಪುತ್ರವಿಯೋಗ ದುಃಖ, ಪ್ರಕೃತ ಪ್ರಳಯ ಪ್ರಕೋಪದ ಸ್ವರೂಪವನ್ನು ತಳೆದು, ರಾಕ್ಷಸನ ಅಂಗಾಂಗಗಳಲ್ಲೆಲ್ಲ ಪಾದರಸದಂತೆ ಅತಿ ವೇಗದಿಂದ ಸಂಚರಿಸಿತು. ಅವನು ಆಸನದಿಂದ ಒಮ್ಮೆಲೇ ಮೇಲೆದ್ದು ನಿಂದು ತನ್ನ ಶಸ್ತ್ರಾಸ್ತ್ರಗಳ ಶೇಖರಣೆಯನ್ನೆಲ್ಲ ಕೈಗೆ ತೆಗೆದುಕೊಂಡನು. ತಮ್ಮ ಮಕ್ಕಳ ನಾಶಕ್ಕೆ ತಕ್ಕ ಪ್ರತೀಕಾರವನ್ನು ಶತ್ರುಗಳಿಗೆ ಮಾಡಬೇಕೆಂಬ ಆತುರ ಅವನ ಮನಸ್ಸಿನಲ್ಲಿ ಕಟೆಯಲಾರಂಭಿಸಿತು. ಆಗ ಅವನು ತನ್ನ ಕುದುರೆಯನ್ನೇರಿ ನೆಟ್ಟಗೆ ರಣರಂಗಕ್ಕೆ ಓಡಿ ನಡೆದುಬಿಟ್ಟನು. ॥೩೨॥

ಯಾತೇ ತಸ್ಮಿನ್ ಮಹಾಸೈನ್ಯಂ ಚತುರಂಗಂ ರಣೋತ್ಸುಕಮ್ ।
ಉಡ್ಡೀಯೋಡ್ಡೀಯ ಧಾವಂತೋ ಯಯುಃ ಪೂರ್ವಂ ಪದಾತಯಃ ॥೩೩॥

ನಾನಾವರ್ಣಾ ಏಕರೂಪಾ ನಾನಾ ಶಸ್ತ್ರಾಸ್ತ್ರಪಾಣಯಃ ।
ತತೋ ವಾರಣಸಂಘಾತಾ ನಾನಾಧಾತುವಿಚಿತ್ರಿತಾಃ ॥೩೪॥

ಘಂಟಾಭರಣಶೋಭಾಢ್ಯಾ ದಾನೋದಕಪ್ರವರ್ಷಿಣಃ ।
ಚೀತ್ಕಾರಭೀಷಿತಪರಾ ಮಹಾರಾವಭಯಂಕರಾಃ ॥೩೫॥

ತತೋಽಶ್ವಾಃ ಪ್ರಾಗಮನ್ ಸಾದಿಯುಕ್ತಾ ವಾಯುಜವಾ ರಣಮ್ ।
ಖುರಾಘಾತಾದ್ವಿಸ್ಫುಲಿಂಗಾ ನಿಪತಂತೋ ಧರಾತಲೇ ॥೩೬॥

---

ಸಿಂಧುರಾಜನು ಹೊರಟೊಡನೆಯೇ ಚತುರಂಗಬಲ ಸಮೇತವಾದ ಮಹಾ ಸೈನ್ಯವೂ ರಣೋತ್ಸಾಹಗೊಂಡು ಅವನನ್ನು ಹಿಂಬಾಲಿಸಿತು. ಸೈನ್ಯದ ಪೈಕಿ ಪದಾತಿಗಳಿಗೆ ನೆಲದ ಮೇಲೆ ನಡೆದು ಹೋಗುವಷ್ಟು ಸಹ ಸಹನೆ ಉಳಿಯದ್ದರಿಂದ ನೆಗೆಯುತ್ತ, ಓಡುತ್ತ ಎಲ್ಲರಿಗಿಂತಲೂ ಮುಂದಾದರು. ॥೩೩॥

ಬಗೆಯ ಬಗೆಯ ಬಣ್ಣಗಳ ಉಡುಪನ್ನು ಧರಿಸಿದ್ದರೂ, ಬಲ-ಪರಾಕ್ರಮಗಳಲ್ಲಿ ಎಲ್ಲರೂ ಸಮಾನರಾಗಿದ್ದರು. ಪ್ರತಿಯೊಬ್ಬ ಯೋಧನ ಕೈಗಳಲ್ಲೂ ಅನೇಕಾನೇಕ ಶಸ್ತ್ರಾಸ್ತ್ರಗಳು ಸಜ್ಜಾಗಿದ್ದವು. ಪದಾತಿಗಳ ಹಿಂದುಗಡೆ ಆನೆಯ ಸೈನ್ಯ ಹೊರಟಿತು- ಅವಕ್ಕೆ ಮಾಹುತರು ನಾನಾ ಬಣ್ಣಗಳಿಂದ ಅಲಂಕರಿಸಿ ಚಿತ್ರ-ವಿಚಿತ್ರವಾಗಿ ಕಾಣುವಂತೆ ಮಾಡಿದ್ದರು. ॥೩೪॥

ಘಂಟೆ-ಆಭರಣ ಇತ್ಯಾದ್ಯಲಂಕರಣಗಳಿಂದ ಅವು ಮೆರೆಯುತ್ತಿದ್ದವು. ಕುಂಭಸ್ಥಳಗಳಿಂದ ಮದೋದಕವನ್ನು ಸುರಿಸುತ್ತಲಿದ್ದವು. ಘೀಂಕಾರದಿಂದ ಶತ್ರುಗಳನ್ನು ಹೆದರಿಸುತ್ತಿದ್ದವು. ಮಧ್ಯೇ ಮಧ್ಯೇ ಘಟ್ಟಿಯಾಗಿ ಗರ್ಜಿಸುತ್ತಲಿದ್ದುದರಿಂದ ಶತ್ರುಭಯಂಕರವಾಗಿದ್ದವು. ॥೩೫॥

ಅನಂತರ ಅಶ್ವಗಳ ಪಡೆ ನಡೆದಿತ್ತು. ಪ್ರತಿಯೊಂದು ಕುದುರೆಯ ಮೇಲೂ ಅಶ್ವಾರೋಹಿಗಳು ಯುದ್ಧಸನ್ನದ್ಧರಾಗಿ ಕುಳಿತಿದ್ದರು. ಕುದುರೆಗಳು ವಾಯುವಿನಂತೆ ವೇಗವಾಗಿ ರಣಮುಖಕ್ಕೆ ಓಡುತ್ತಲಿದ್ದುದರಿಂದ ಅವುಗಳ ಕಾಲಿನಗೊರಸಿಗೆ ಹಾಕಿದ್ದ ಲಾಳಗಳು ಮಾರ್ಗದಲ್ಲಿರುವ ಕಲ್ಲುಗಳಿಗೆ ತಗುಲಿ, ಅಲ್ಲಿಂದ ಕಿಡಿಗಳೆದ್ದು ನೆಲಕ್ಕೆ ಬೀಳುತ್ತಿದ್ದವು. ॥೩೬॥

ಶುಶುಭುಃ ಸಾದಿನಸ್ತತ್ರ ಖೇಟಕುಂತಾಸಿಪಾಣಯಃ ।
ಚಂದನಾಗರುಲಿಪ್ತಾಂಗಾ ನಾನಾಮಾಲಾವಿಭೂಷಿತಾಃ ॥೩೭॥

ತನುತ್ರಾಣಭೃತಸ್ಸರ್ವೇ ಕಂಕಟಭ್ರಾಜಿಮಸ್ತಕಾಃ ।
ಗ್ರಸಂತ ಇವ ಚಾಕಾಶಂ ನಾದಯಂತೋ ದಿಶೋ ದಶ ॥೩೮॥

ರಥಾಸ್ತತೋಽಗಮನ್ನಾನಾ ಮಹಾವೀರೈರಧಿಷ್ಠಿತಾಃ ।
ನಾನಾಶಸ್ತ್ರಾಸ್ತ್ರಸಂಪೂರ್ಣಾ ಧನುಸ್ತೂಣೀರಸಂಯುತಾಃ ॥೩೯॥

ತನ್ಮಧ್ಯೇ ಶುಶುಭೇ ಸಿಂಧುರ್ಮಹಾಮುಕುಟಕುಂಡಲಃ ।
ನಾನಾಶಸ್ತ್ರಧನುಷ್ಪಾಣಿಸ್ತೂಣೀರಕೃತಭೂಷಣಃ ॥೪೦॥

ಅಶ್ವಾರೋಹಿಗಳು ತಮ್ಮ ಕೈಗಳಲ್ಲಿ ಖೇಟ, ಕುಂತ, ಖಡ್ಗ ಮೊದಲಾದ ತೀಕ್ಷ್ಣಾಯುಧಗಳನ್ನು ಧರಿಸಿದ್ದರಿಂದ ಹೆಚ್ಚಿನ ವೀರಶ್ರೀಯೊಂದಿಗೆ ವಿರಾಜಮಾನರಾಗಿದ್ದರು. ಅವರು ತಮ್ಮ ದೇಹಗಳಿಗೆ ಚಂದನ, ಅಗರು ಮುಂತಾದ ಸುಗಂಧಿವಸ್ತುಗಳನ್ನು ಲೇಪಿಸಿಕೊಂಡಿದ್ದರಿಂದಲೂ, ನಾನಾಬಣ್ಣಗಳ ಹೂಗಳಿಂದ ನಿರ್ಮಿತವಾದ ಮಾಲೆಗಳನ್ನು ಧರಿಸಿದ್ದರಿಂದಲೂ ಅತಿಯಾಗಿ ಶೋಭಿಸುತ್ತಿದ್ದರು. ॥೩೭॥

ತಮ್ಮ ಶರೀರಗಳನ್ನು ಸಂರಕ್ಷಿಸಿಕೊಳ್ಳಲು ಪ್ರತಿಯೊಬ್ಬನೂ ಉಕ್ಕಿನ ಕವಚವನ್ನು ತೊಟ್ಟಿದ್ದನು. ಮೊನಚಾದ ಮುಳ್ಳುಗಳುಳ್ಳ ಉಕ್ಕಿನ ಟೋಪಿಗಳನ್ನು ತಲೆಗೆ ಧರಿಸಿದ್ದನು. ಇಡೀ ಬಯಲನ್ನೇ ನುಂಗಿಬಿಡುವರೋ ಎಂಬಂತೆ ತೋರಿಬರುವ ಅಶ್ವದಳದವರ ಧ್ವನಿ ಬಹಳ ಭಯಂಕರವಾಗಿದ್ದಿತು. ಅದರಿಂದ ದಿಗ್ದಿದಿಕ್ಕುಗಳನ್ನೆಲ್ಲ ಪ್ರತಿಧ್ವನಿಗೊಳಿಸಿದರು. ॥೩೮॥

ಅಶ್ವಸೇನೆಯ ಹಿಂಬದಿಯಿಂದ ರಥಗಳು ಸಾಲುಸಾಲಾಗಿ ಬಂದವು. ಅತಿರಥಮಹಾರಥರೆನಿಸಿದ ಅನೇಕ ಮಂದಿ ವೀರರು ಅವನ್ನೇರಿ ಕುಳಿತಿದ್ದರು. ಯುದ್ಧಕ್ಕೆ ಬೇಕಾಗುವ ಎಲ್ಲ ಶಸ್ತ್ರಾಸ್ತ್ರಗಳೂ ಪ್ರತಿಯೊಂದು ರಥದಲ್ಲೂ ಸಿದ್ಧವಾಗಿದ್ದವು. ಬಾಣ ತುಂಬಿದ ಬತ್ತಳಿಕೆಗಳಿಗೆ ಲೆಖ್ಖವೇ ಇರಲಿಲ್ಲ. ॥೩೯॥

ಈ ಸೇನಾ ಪರಿವಾರದ ನಡುವೆ ಸಿಂಧುದೈತ್ಯನು ಬಹಳ ಆಢ್ಯತೆಯಿಂದ ಬರುತ್ತಲಿದ್ದನು. ಅವನ ಕಿರೀಟ-ಕುಂಡಲಗಳು ಅಮೂಲ್ಯ ರತ್ನಗಳ ಕಾಂತಿಯಿಂದ ಝಗಝಗ ಹೊಳೆಯುತ್ತಿದ್ದವು. ನಾನಾವಿಧ ಶಸ್ತ್ರಗಳನ್ನೂ, ಬಲವಾದ ಧನುಸ್ಸು, ಬಾಣಪೂರ್ಣ ಬತ್ತಳಿಕೆಗಳು ಇವನ್ನೂ ಅಲಂಕಾರವಾಗಿ ಕಾಣುವಂತೆ ಧರಿಸಿದ್ದನು. ॥೪೦॥

ವೀರಕಂಕಣಶೋಭಾಢ್ಯಃ ಕಟಿಸೂತ್ರಾಂಗದಪ್ರಭಃ ।
ಕ್ರೋಧಸಂರಕ್ತನಯನೋ ಲೋಕತ್ರಯಬುಭುಕ್ಷಯಾ ॥೪೧॥
ವಾದ್ಯತ್ಸು ಸರ್ವವಾದ್ಯೇಷು ವಂದೀಷು ಚ ಸ್ತುವತ್ಸು ಚ ।
ಯಾವದ್ಯಾತಿ ಮಹಾವೇಗಾತ್ತಾವದ್ದೂತಸ್ತಮಬ್ರವೀತ್ ॥೪೨॥

ದೂತ ಉವಾಚ :—
ಪಿತಾ ತೇ ಯಾತಿ ದೈತ್ಯೇಶ ! ತಂ ಪ್ರತೀಕ್ಷಸ್ವ ಸುವ್ರತ ! ।

ಕ ಉವಾಚ :—
ಪರಾವೃತ್ಯೇಕ್ಷತೇ ಯಾವತ್ತಾವದಶ್ವಗತಂ ಸುತಮ್ ॥೪೩॥
ಅಪಶ್ಯದಭ್ಯಾಶಗತಂ ನಮಶ್ಚಕ್ರೇ ಸ ಚಾಪಿ ತಮ್ ।

---

ಮುಂಗೈಗೆ ವೀರಕಂಕಣವನ್ನು ತೊಟ್ಟಿದ್ದರಿಂದ ಬಹಳ ಶೋಭಾಯಮಾನ ನಾಗಿದ್ದನು. ನಡುಪಟ್ಟಿ, ಅಂಗರೇಕುಗಳಲ್ಲಿದ್ದ ರತ್ನಗಳು ತಮ್ಮ ಪ್ರಭೆಯನ್ನು ಅವನ ಮೇಲೆ ಬೀರಿದ್ದವು. ಕೋಪದಿಂದ ಕಣ್ಣುಗಳು ಕೆಂಪಡರಿ ಹೋಗಿದ್ದವು. ಅವನ ಉತ್ಸಾಹ-ಶಕ್ತಿ ಇವನ್ನು ಗಮನಿಸಿದರೆ “ ಮೂರು ಲೋಕಗಳನ್ನೂ ಇವನು ಒಮ್ಮೆಲೇ ನುಂಗಿಬಿಡುವನೋ,” ಎಂಬಂತೆ ಕಂಡುಬರುತ್ತಲಿದ್ದವು. ॥೪೧॥

ರಣವಾದ್ಯಗಳು ಬಹಳ ಕರ್ಕಶಧ್ವನಿಯಿಂದ ಭೋರ್ಗರೆದು ರಕ್ಕಸನ ರಣೋದ್ಯಮಕ್ಕೆ ಹೆಚ್ಚಿನ ಉತ್ತೇಜನವನ್ನು ಕೊಡತೊಡಗಿದವು. ವಂದಿ-ಮಾಗಧರು ಸಿಂಧುವಿನ ಬಲ-ಪರಾಕ್ರಮಗಳನ್ನು ಉಚ್ಚ ಸ್ವರದಿಂದ ಹೊಗಳುತ್ತಿದ್ದರು. ಇನ್ನೇನು, ಯುದ್ಧಕ್ಕೆ ಹೊರಟುಬಿಡಬೇಕು ಎನ್ನುವಷ್ಟರಲ್ಲಿ ಒಬ್ಬ ದೂತನು ವೇಗವಾಗಿ ಓಡಿ ಬಂದು, ದೈತ್ಯನನ್ನು ಕುರಿತು ಹೀಗೆಂದು ನುಡಿದನು. ॥೪೨॥

ದೂತ :—

ದೈತ್ಯೇಶ್ವರ ; ನಿನ್ನನ್ನು ಕಂಡು ಮಾತನಾಡಲು ತವಕಕೊಂಡು ನಿನ್ನ ತಂದೆ ನಿನ್ನ ಸನ್ನಿಧಿಗೆ ಧಾವಿಸಿ ಬರುತ್ತಲಿದ್ದಾನೆ. ಸುವ್ರತ ! ಅವನು ಬರುವ ವರೆಗೂ ಸ್ವಲ್ಪ ಕಾಲ ಕಾದು ನೋಡು.

ಬ್ರಹ್ಮಾ :—

ದೂತನ ಅಪ್ರಸ್ತುತವಾದ ಅಡ್ಡ ಮಾತನ್ನು ಕೇಳಿದ ಕೂಡಲೇ ದೈತ್ಯನು ಕುದುರೆಯ ಮೇಲೆ ಕುಳಿತಿದ್ದಂತೆಯೇ ಹಿಂದಿರುಗಿ ನೋಡಿದನು. ಆ ವೇಳೆಗೆ ಅವನ ತಂದೆ ಚಕ್ರಪಾಣಿಯು ಕುದುರೆಯ ಮೇಲೆ ಕುಳಿತಿದ್ದ ಮಗನನ್ನು ॥೪೩॥

ಸಮೀಪಿಸಿದ್ದನು ಕೂಡಲೇ ದೈತ್ಯನು ತಂದೆಯನ್ನು ವಂದಿಸಿದನು. ಆಗ

ದದೌ ಪಿತಾ ತತ್ರ ಸುತಂ ದುರ್ಗಂ ಕೃತ್ವಾ ಚಮೂಚರೈಃ ||೪೪||
ಉಪದೇಶಂ ಚ ಕೃತವಾರ್ನ್ ಸುಖಾಯಾಮುತ್ರ ಚೇಹ ಚ |
ಚಕ್ರಪಾಣಿರುವಾಚ :—
ಗರ್ವೇಣ ವರ್ತಸೇ ಪುತ್ರ, ಶ್ರಿಯಾ ಮತ್ತೋ ನ ಬುದ್ಧ್ಯಸೇ ||೪೫||
ಅರ್ಥಜ್ಞಾನೇ ಮಹಾವೃದ್ಧಾಃ ಪ್ರಷ್ಟವ್ಯಾ ಭೂತಿಮಿಚ್ಛತಾ |
ಅಗ್ರೇ ಶುಭೇಚ್ಛಯಾ ಪೂರ್ವಂ ಅಶುಭಂ ನ ಸಮಾಚರೇತ್ ||೪೬||
ಅಲ್ಪೇನ ಕರ್ಮಣಾ ನಾಶಂ ಪುಣ್ಯಮೇತ್ಯಶುಭೇನ ಹ |
ಅಣುರಗ್ನಿರ್ದಹೇತ್ಸರ್ವಂ ಪುಣ್ಯಂ ದೋಷಸ್ತಥಾ ಸುತ ! ||೪೭||
ನ ಲಾಭೋ ದೃಶ್ಯತೇ ಪುತ್ರ ! ಬದ್ಧೇಷು ತೇಷು ತೇ ಕ್ವಚಿತ್ |
ಸ ಏವ ಪುತ್ರೋ ಯೋ ಮಾತೃ-ಪಿತೃವಾಕ್ಯಕರೋಽನಿಶಮ್ ||೪೮||

---

ಚಕ್ರಪಾಣಿಯು ಸೈನ್ಯದವರನ್ನೆಲ್ಲ ಸ್ವಲ್ಪ ದೂರ ಸುತ್ತುವರೆದು ನಿಲ್ಲುವಂತೆ ಸೂಚಿಸಿ, ಅವರು ಹಾಗೆ ನಿಂತ ಬಳಿಕ, ಏಕಾಂತವಾಗಿ ಮಗನಿಗೆ ಕೆಲವು ಮಾತುಗಳನ್ನು ||೪೪||

ಉಪದೇಶರೂಪವಾಗಿ ಹೇಳಿದನು. ಅವನು ಮಾಡಿದ ಉಪದೇಶವು ಐಹಿಕ ಹಾಗೂ ಆಮುಷ್ಮಿಕಗಳಲ್ಲಿ ಸುಖವನ್ನು ಕೊಡತಕ್ಕಂತಹದು.

ಚಕ್ರಪಾಣಿ :—

ಪುತ್ರ, ಸಿಂಧೋ ! ನೀನು ಬಹಳ ಗರ್ವಿಷ್ಠನಾಗಿ ಹೋದೆ. ಎಲ್ಲರೊಂದಿಗೂ ಸೊಕ್ಕಿನಿಂದಲೇ ವ್ಯವಹರಿಸುತ್ತಿರುವೆ. ಮಿತಿ ಇಲ್ಲದ ಐಶ್ವರ್ಯ ನಿನಗೆ ದೊರೆತುದೇ ನಿನ್ನ ಈ ಉನ್ಮಾದಕ್ಕೆ ಕಾರಣ. ಮದಾಂಧನಾದ ನೀನು " ಮುಂದೇನಾದೀತು? " ಎಂಬುದನ್ನು ಅರಿಯಲಾರದವನಾಗಿರುವೆ. ||೪೫||

ಪೌರುಷದಿಂದ ಸಾಧಿಸಬೇಕಾದ ಕೆಲಸಗಳಲ್ಲಿ ಅನುಭವಿಗಳೂ, ವೃದ್ಧರೂ ಆದವರ ಸಲಹೆಯನ್ನು ಪಡೆಯತಕ್ಕದ್ದು ಬಹಳ ಆವಶ್ಯಕ. ಬದುಕಿ ಬಾಳಬೇಕಾದವರು ಹೀಗೆಯೇ ಮಾಡುತ್ತಾರೆ. " ಮುಂದೆ ನನಗೆ ಒಳ್ಳೆಯದಾಗಬೇಕು " ಎಂದು ಬಯಸುವವನು ಮೊದಲಿಗೆ ಅಶುಭವನ್ನು ಎಂದೆಂದಿಗೂ ಆಚರಿಸಬಾರದು. ||೪೬||

ಅಶುಭವಾದ ಕರ್ಮ ಎಷ್ಟೇ ಅಲ್ಪ ಪ್ರಮಾಣ ಉಳ್ಳದ್ದಾಗಿದ್ದರೂ, ಅದರಿಂದ ಇವನು ಮಾಡಿದ ಪುಣ್ಯಕರ್ಮಗಳೆಲ್ಲ ನಾಶವಾಗಿ ಹೋಗುವುವು. ಅಗ್ನಿಯ ಸಣ್ಣ ಕಿಡಿ ಸರ್ವವನ್ನೂ ದಹಿಸಿಬಿಡುವುದಿಲ್ಲವೇ ? ಅದರಂತೆ ಸುತ ! ದೋಷವು ಅಲ್ಪವಾಗಿದ್ದರೂ ಪುಣ್ಯ ರಾಶಿಯನ್ನು ಹಾಳುಮಾಡಿಬಿಡುವುದು. ||೪೭||

ಪುತ್ರ ! ನೀನು ಪ್ರಕೃತ ದೇವತೆಗಳನ್ನು ಬಂಧನದಲ್ಲಿರಿಸಿರುವೆಯಷ್ಟೇ ? ಇದರಿಂದ ನಿನಗೆ ಯಾವ ಪ್ರಕಾರ ಲಾಭವಾಗುತ್ತಿರುವುದೋ, ಅದು ನನಗಂತೂ ತಿಳಿ

**ತಸ್ಯ ಚೋಲ್ಲಂಘನೇ ಪುಣ್ಯಂ ನಾಶಮೇತಿ ಚ ಜಾಯತೇ ।**
**ದೋಷಜಾಲಂ ಮೋಹಜಾಲಂ ನಾನಾನಿರಯದಂ ಸುತ ! ॥೪೯॥**
**ಅತಃ ಶೃಣು, ಹಿತಂ ವಾಕ್ಯಂ ಮೋಚಯಾಶು ಸುರಾನ್ ಸುತ ! ।**
**ಮುಕ್ತೇಷು ತು ಭವೇನ್ಮಿತ್ರಂ ಮಯೂರೇಶೋಽಖಿಲಾರ್ಥದಃ ॥೫೦॥**
**ನ ಚೇಹ ದ್ವೇಷತಃ ಕಶ್ಚಿತ್ಸುಖಂ ಪ್ರಾಪ್ತೋ ಧರಾತಲೇ ।**
**ವಿನಾಶಂ ಪ್ರಾಪಿತಾ ದೇವೈರ್ಹಿರಣ್ಯಾಕ್ಷಾದಯೋಽಸುರಾಃ ॥೫೧॥**
**ಕ ಉವಾಚ :—**
**ಏವಂ ಪಿತೃವಚಃ ಶ್ರುತ್ವಾ ಚುಕೋಪಾತಿತರಾಂ ಸುತಃ ।**
**ಧಿಕ್ಕೃತ್ಯ ಪಿತರಂ ಪ್ರಾಹ**

ಯದು. ನೋಡು, ಲೋಕದಲ್ಲಿ ಸಾಮಾನ್ಯವಾಗಿ ಯಾರನ್ನು "ಸುವ್ರತ" ಎಂದು ಕರೆಯುವರು ? ತಂದೆ-ತಾಯಿಯರ ಮನಸ್ಸಿಗೆ ನೋವಾಗದಂತೆ ನಡೆಯಲು ಅಹರ್ನಿಶಿ ಯಾರು ಪ್ರಯತ್ನಿಸುವರೋ, ಅವರನ್ನಲ್ಲವೇ ಹಾಗೆನ್ನುವುದು ? ||೪೮||

ತಂದೆ-ತಾಯಿಯರು, ಗುರು-ಹಿರಿಯರಾದವರು ಇಂಥವರ ಹಿತನುಡಿಯನ್ನು ಮೀರಿ ನಡೆದವನು ತಾನು ಆರ್ಜಿಸಿದ ಪುಣ್ಯರಾಶಿಯನ್ನೆಲ್ಲ ಕಳೆದುಕೊಳ್ಳುವುದು ಮಾತ್ರವಲ್ಲದೇ, ಅವನಿಗೆ ಮಹಾಪಾತಕವು ಸಂಭವಿಸುವುದು. ಪಾಪಹತಬುದ್ಧಿಯಾದ ಅವನು ಮೋಹಜಾಲಕ್ಕೆ ಸಿಲುಕಿ, ಮಾಡಬಾರದ ಕೆಲಸಗಳನ್ನೆಲ್ಲ ಮಾಡುತ್ತ, ಕೊನೆಗೆ ಎಷ್ಟು ಬಗೆಯ ನರಕಗಳಿವೆಯೋ, ಅಲ್ಲೆಲ್ಲ ಚಿರಕಾಲ ವಾಸಮಾಡಬೇಕಾಗುತ್ತದೆ. ಪುತ್ರ ! ಈ ವಿಷಯ ನಿನಗೆ ನೆನಪಿರಲಿ. ||೪೯||

ಆದುದರಿಂದ ನಾನು ಹೇಳುವ ಹಿತ ನುಡಿಯನ್ನು ಕೇಳು. ಪುತ್ರ ! ಬದ್ಧರಾಗಿ ದೇವತೆಗಳನ್ನು ಮೊದಲು ಬೇಗನೆ ಬಿಡುಗಡೆ ಮಾಡು. ಇವರನ್ನು ನೀನು ಬಿಡುಗಡೆಮಾಡುವುದೇ ತಡ, ಈಗ ನಿನ್ನ ಭಾಗಕ್ಕೆ ಶತ್ರುವಾಗಿ ತೋರುವ ಮಯೂರೇಶ್ವರನು ಪರಮ ಮಿತ್ರನಾಗಿಬಿಡುವನು. ಮಯೂರೇಶ್ವರನು ಸಾಮಾನ್ಯ ಮಾನವನಲ್ಲ. ಯಾರು ಏನನ್ನು ಬೇಡಿದರೂ ಒಡನೆಯೇ ಕೊಡತಕ್ಕವನು. ||೫೦||

ದ್ವೇಷವನ್ನು ಸಾಧಿಸಿ ತನ್ಮೂಲಕ ಸುಖವನ್ನು ಪಡೆದಂತಹ ವ್ಯಕ್ತಿ, ಈ ಲೋಕದಲ್ಲಿ ಯಾರೂ ಇರುವುದಿಲ್ಲ. ಹಿಂದೆ ನಮ್ಮವರು ; ಹಿರಣ್ಯಾಕ್ಷ, ಹಿರಣ್ಯಕಶಿಪು ಮೊದಲಾದ ಪ್ರಬಲ ರಾಕ್ಷಸರು ದೈವದ ವಿಷಯದಲ್ಲಿ ದ್ವೇಷವನ್ನೇ ಸಾಧಿಸುತ್ತಲಿದ್ದರು. ದೇವತೆಗಳು ಸಮಯ ಕಾದು ದೇವೋತ್ತಮನ ಮೂಲಕ ಅವರನ್ನೆಲ್ಲ ನಾಶಗೊಳಿಸಿಬಿಟ್ಟರು. ||೫೧||

ಬ್ರಹ್ಮಾ:—

ತಂದೆ ನುಡಿದ ಹಿತ ವಚನಗಳನ್ನು ಕೇಳಿದ ಕೂಡಲೇ, ಸಿಂಧುದೈತ್ಯನು ಮಿತಿ

ಸಿಂಧುರುವಾಚ :—

ಮಮ ಭ್ರಾಂತಿರಭೂತ್ಪುರಾ ||೫೨||
ಚತುರಸ್ತ್ವಂ ಪಿತಾ ಮೇ ವೈ ಜ್ಞಾನಂ ಸಮ್ಯಕ್ಪ್ರಕಾಶಿತಮ್ ।
ಭಾಷಸೇ ಮೂಢವತ್ತಾತ ! ಕೃತ್ವಾ ಶ್ಯಾಮಂ ಮುಖಂ ವ್ರಜ ||೫೩||
ಯೇನ ಮೇ ನಿಹತಾ ಸೇನಾ ಪರಾರ್ಧಗಣಿತಾ ಪಿತಃ ! ।
ತೇನೇದಾನೀಂ ಕಥಂ ಸಾಮ ಕರ್ತವ್ಯಮಯಶಸ್ಕರಮ್ ||೫೪||
ಕುಶಾಕ್ಷಮಾಲಾಧರಣಂ ರಾಜಧರ್ಮೋ ಹಿ ನೇಷ್ಯತೇ ।
ತಸ್ಮಾದ್ದಯಾ ನರೇಂದ್ರೇಣ ನ ಕಾರ್ಯಾ ಶತ್ರುಸಂಚಯೇ ||೫೫||
ನಿರ್ದಯತ್ವಮರಾವೇವ ಸ್ಮೃತಂ ನೀತ್ಯಾಮಯೇ ಯಥಾ ।

ಮೀರಿದ ಕೋಪವನ್ನು ತಾಳಿದನು. ಮತ್ತು ತನ್ನ ತಂದೆಯ ಕಡೆ ತಿರುಗಿ ತಿರಸ್ಕಾರವನ್ನು ಬೀರುತ್ತ, ಧ್ವನಿಯನ್ನು ಗಡುಸುಮಾಡಿಕೊಂಡು ಹೀಗೆಂದು ನುಡಿದನು.

ಸಿಂಧು :—

ನೀನು ಮಹಾಪ್ರಾಜ್ಞ ಎಂಬ ಭಾವನೆ ನನ್ನಲ್ಲಿ ಮೂಡಿದ್ದಿತು. ಅದೆಲ್ಲ ಭ್ರಮೆಯೇ ಸರಿ ||೫೨||

ಮಾತಿನಲ್ಲಿ ಎಂತಹ ಚಾತುರ್ಯವನ್ನು ತೋರಿಸುತ್ತಿರುವೆ ? ನೀನು ನನ್ನಂತಹ ಅಭಿಮಾನಿ ವೀರನಿಗೆ ತಂದೆಯಾಗಿಯೂ ಹೀಗೆಲ್ಲ ಮಾತನಾಡುವೆ ಎಂದರೆ ಪರಮಾಶ್ಚರ್ಯವಾಗುವುದು. ನಿನ್ನ ಸ್ವರೂಪವನ್ನು ಚನ್ನಾಗಿಯೇ ಪ್ರಕಾಶಪಡಿಸಿದೆ. ಇದೇಕೆ, ಹೀಗೆ ಮೂಢರಂತೆ ಮಾತನಾಡುವೆ ? ಸಾಕು ನಿನ್ನ ಪಾಂಡಿತ್ಯ. ಮುಖವನ್ನು ಕಪ್ಪುಮಾಡಿಕೊಂಡು ಬಂದ ದಾರಿಯನ್ನು ಹಿಡಿದು ಹಿಂದಕ್ಕೆ ಹೋಗು ||೫೩||

ಅರ್ಧ ಪರಾರ್ಧದಷ್ಟು ನನ್ನ ಸೇನೆಯನ್ನು ನಾಶಮಾಡಿದ ಶತ್ರುವಿನೊಡನೆ ಈಗ ನಾನು ಸಂಧಿಯನ್ನು ಮಾಡಿಕೊಳ್ಳಬೇಕಂತೆ. ಇದು ಹೇಗೆ ಸಾಧ್ಯ ? ತಂದೆ ! ಮಾನಿಷ್ಠನಾದವನು ಇಂತಹ ಅಯಶಸ್ಕರವಾದ ಕಾರ್ಯವನ್ನು ಎಂದಿಗೂ ಮಾಡುವುದಿಲ್ಲ. ||೫೪||

ದರ್ಭೆಯ ಕಂತೆ, ಜಪಸರ ಇವನ್ನು ಹಿಡಿದು ಗೊಣ-ಗೊಣ ಎಂದು ಜಪಿಸುತ್ತ ಕುಳ್ಳಿರುವುದು ರಾಜಧರ್ಮವಲ್ಲ. ಆದುದರಿಂದ ರಾಜನಾದವನು ಶತ್ರುವಿನ ಮೇಲೆ ದಯೆಯುಳ್ಳವನಾಗಿರಬಾರದು. ||೫೫||

ಅರಿಯ ವಿಷಯದಲ್ಲಿ ಸರ್ವದಾ ನಿರ್ದಯಭಾವದಿಂದಲೇ ವರ್ತಿಸಬೇಕೆಂದು ರಾಜನೀತಿ ಸಾರುತ್ತಿದೆ. ರೋಗದ ವಿಷಯದಲ್ಲಿ ದಯೆ ತೋರಿದರೆ, ಅದರಿಂದ ರೋಗಿಗೆ ಉಪಕಾರಮಾಡಿದಂತಾಗುವುದೇನು ?

ಕ ಉವಾಚ :—
ಏವಮುಕ್ತ್ವಾ ನಮಸ್ಕೃತ್ಯ ಪಿತರಂ ಸಿಂಧುದೈತ್ಯರಾಟ್ ||೫೬||
ಪರಾವೃತ್ಯ ಬಲಾತ್ತಂ ಸ ಯಯೌ ಯೋದ್ಧುಂ ರಣೋತ್ಸುಕಃ ||೫೭||

ಇತಿ ಶ್ರೀ ಗಣೇಶಪುರಾಣೇ ಉತ್ತರಾರ್ಧೇ 'ಸಿಂಧು ತತ್ಪಿತೃ ಸಂವಾದೋ' ನಾಮ ವಿಂಶತ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ

ಬ್ರಹ್ಮಾ :—

ಹೀಗೆ ನುಡಿದ ಸಿಂಧುದೈತ್ಯನು ತಂದೆಯಾದ ಚಕ್ರಪಾಣಿಗೆ ಅಭ್ಯಾಸಬಲ ವಿದ್ದುದರಿಂದ ಕೊನೆಯದಾಗಿ ಒಮ್ಮೆ ನಮಸ್ಕರಿಸಿದನು. ||೫೬||

'ಇನ್ನು ಹೆಚ್ಚು ಕಾಲ ತಂದೆಯು ಇಲ್ಲಿಯೇ ಇದ್ದರೆ ಇನ್ನೇನನ್ನಾದರೂ ನುಡಿದು, ತನ್ನ ಮನಸ್ಸನ್ನು ತಿರುಗಿಸಲೆತ್ನಿಸಬಹುದೆ'ಂಬ ಶಂಕೆಯಿಂದ ಚಕ್ರಪಾಣಿಯನ್ನು ಬಲಾತ್ಕಾರವಾಗಿ ಹಿಂದಕ್ಕೆ ಕಳಿಸಿ, ದ್ವಿಗುಣಿತ ರಣೋತ್ಸಾಹದಿಂದ ಯುದ್ಧಮಾಡಲಿಕ್ಕಾಗಿ ಹೊರಟು ನಡೆದನು. ||೫೭||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಾರ್ಧದಲ್ಲಿ "ಸಿಂಧು-ಚಕ್ರಪಾಣಿಗಳ ಸಂವಾದ" ಎಂಬಲ್ಲಿಗೆ ನೂರ ಇಪ್ಪತ್ತನೆಯ ಅಧ್ಯಾಯಾನುವಾದವು ಮುಕ್ತಾಯವಾಯಿತು.

॥ ಶ್ರೀ ಗಣೇಶಾಯ ನಮಃ ॥

# ಅಥೈಕವಿಂಶೋತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ವೀರಭದ್ರಾದಿಭಿರ್ವೀರೈಃ ಸುಖಾಸೀನಂ ಗಣೇಶ್ವರಮ್ ।**
**ಆಯಯುರ್ವೇಗತೋ ದೇವಾ ಭೀತಾಃ ಶ್ವಾಸಸಮಾಕುಲಾಃ ॥೧॥**

**ನ್ಯವೇದಯಂತ ವೃತ್ತಾಂತಂ 'ಸ್ವಯಂ ಸಿಂಧುಸ್ಸಮಾಗತಃ ।**
**ಮೇನಿರೇ ತೇ ಪುನಃ ಪ್ರಾಪ್ತಂ ಕಾಲಂ ಸಂಹರ್ತುಮಾತ್ಮನಃ' ॥೨॥**

**ತತೋ ಹರ್ಷಾನ್ಮಯೂರೇಶೋ ರುರೋಹ ಶಿಖಿನಂ ತದಾ ।**
**ಆಯುಧಾನಿ ಚ ಚತ್ವಾರಿ ಪ್ರಗೃಹ್ಯ ಚ ಜಗರ್ಜ ಚ ॥೩॥**

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೨೧ ನೆಯ ಅಧ್ಯಾಯ

ಬ್ರ —

ಮಹಾಗಣಪತಿಯು ಶಿಬಿರದಲ್ಲಿ ಸುಖಾಸನದ ಮೇಲೆ ಕುಳಿತಿದ್ದನು. ವೀರಭದ್ರಾದಿ ದೇವವೀರರು ದೇವನ ಸುತ್ತಲೂ ಕುಳಿತಿದ್ದರು. ಆ ವೇಳೆಗೆ ದೇವತೆಗಳು ಹೆದರಿ ಮೇಲುಸಿರನ್ನು ಬಿಡುತ್ತ, ಓಡೋಡಿ ದೇವನ ಸಮೀಪಕ್ಕೆ ಬಂದರು. ॥೧॥

" ಸಿಂಧು ದೈತ್ಯನು ಪುನಃ ಯುದ್ಧಭೂಮಿಗೆ ಬಂದಿದ್ದಾನೆ. ಇವನನ್ನು ಕಂಡು ನಮ್ಮ ಸೇನೆಯವರು ತಮ್ಮನ್ನು ಕೊಲ್ಲಲಿಕ್ಕಾಗಿ ಬಂದಿರುವ ಯಮನೋ ಎಂದು ಭಾವಿಸಿ, ನಡುಗುತ್ತಲಿದ್ದಾರೆ" ಎಂಬ ಸಂಗತಿಯನ್ನು ದೇವದೇವ ; ಗಣನಾಯಕನಿಗೆ ನಿವೇದಿಸಿದರು. ॥೨॥

ದೇವತೆಗಳಾಡಿದ ಮಾತುಗಳನ್ನು ಕೇಳಿ, ಮಯೂರೇಶ್ವರನು ಬಹಳ ಸಂತೋಷಗೊಂಡನು. ಎರಡನೆಯ ಮಾತನ್ನು ಸಹ ಆಡದೇ, ತನ್ನ ವಾಹನವಾದ ಮಯೂರವಿದ್ದೆಡೆಗೆ ಹೋಗಿ, ಅದನ್ನೇರಿ ಕುಳಿತನು. ತನ್ನ ನಾಲ್ಕು ಬಗೆಯ ಆಯುಧಗಳನ್ನೂ ಕೈಗೆ ತೆಗೆದುಕೊಂಡು ಘಟ್ಟಿಯಾಗಿ ಒಮ್ಮೆ ಗರ್ಜಿಸಿದನು. ॥೩॥

ನಮಸ್ಕೃತ್ಯ ಶಿವಂ ವೇಗಾದ್ಯಯೌ ಪ್ರದ್ಯೋತಯನ್ ದಿಶಃ ।
ತದಾಶೀಃಕವಚೋ ವೀರಸಂಹಿತೋ ವಾಹಿನೀಯುತಃ ॥೪॥

ಯಾವತ್ಸ ತುರತೋ ಯಾತಿ ಸಿಂಧುಂ ಹಂತುಂ ಸಮುದ್ಯತಃ ।
ತಾವತ್ಷಡಾನನಃ ಪ್ರಾಹ

ಷಡಾನನ ಉವಾಚ :—

ಯಾಮಿ ಯುದ್ಧಾಯ ವಿಘ್ನರಾಟ್ ! ॥೫॥

ತಿಷ್ಠತ್ಸು ಬಹುವೀರೇಷು ಕಥಂ ಯುದ್ಧಾಯ ಯಾಸ್ಯಸಿ ? ।
ಪೌರುಷಂ ಪಶ್ಯ ಸರ್ವೇಷಾಂ ತಸ್ಮಿನ್ ಕ್ಷೀಣೇ ರಣಂ ಕುರು ॥೬॥

ಕ ಉವಾಚ :—

ಏವಮುಕ್ತ್ವಾ ನಮಸ್ಕೃತ್ಯ ಯಯೌ ಯುದ್ಧಾಯ ಷಣ್ಮುಖಃ ।

---

ತಂದೆಯ ಬಳಿಗೆ ಬಂದು ಆಚಾರಾನುಗುಣವಾಗಿ ನಮಸ್ಕರಿಸಿ ಅತಿ ವೇಗದಿಂದ ಯುದ್ಧಭೂಮಿಗೆ ಹೊರಟುಬಿಟ್ಟನು. ತನ್ನ ದಿವ್ಯದೇಹದ ಕಾಂತಿಯಿಂದ ಎಲ್ಲ ದಿಕ್ಕುಗಳನ್ನೂ ಬೆಳಗಿದನು, ಮಹಾದೇವನ ಅಮೋಘವಾದ ಆಶೀರ್ವಾದವೆಂಬ ವಜ್ರಕವಚವನ್ನು ಧರಿಸಿದ್ದ ಗಣಪತಿಯು ಅನೇಕ ವೀರರಿಂದೊಡಗೂಡಿದ ತನ್ನ ಚತುರಂಗ ವಾಹಿನಿಯನ್ನು ಸಂಗಡ ಕರೆದುಕೊಂಡು ಮುಂದೆ ನಡೆದನು. ॥೪॥

ಸಿಂಧುದೈತ್ಯನನ್ನು ಕೊಲ್ಲುವುದಕ್ಕಾಗಿ ಮಯೂರೇಶನು ಮುಂದಕ್ಕೆ ಹೊರಡುತ್ತಿರುವಷ್ಟರಲ್ಲಿ, ಷಡಾನನನು ದೇವನೆದುರು ಬಂದು, ವಿನಯದಿಂದ ಹೀಗೆಂದು ವಿಜ್ಞಾಪಿಸಿಕೊಂಡನು.

ಷಡಾನನ :—

ವಿಘ್ನಾಧಿಪ ! ಯುದ್ಧಕ್ಕೆ ಹೊರಡಲು ನಾನು ಸಿದ್ಧನಾಗಿದ್ದೇನೆ. ॥೫॥

ದೇವ ! ನಿನ್ನ ಆಜ್ಞೆಗೆ ಬದ್ಧರಾಗಿ ಅನೇಕ ವೀರರು ನಿನ್ನ ಸೈನ್ಯದಲ್ಲಿ ಸಿದ್ಧರಿರುವಾಗ, ಅವರನ್ನು ಮುಂದೆ ಕಳಿಸುವುದಕ್ಕೆ ಬದಲಾಗಿ ನೀನೇ ಈ ಕೆಲಸಕ್ಕೆ ಹೊರಡೋಣವೆಂದರೇನು ? ಅವರಿಗೆ ಪೌರುಷವೆಷ್ಟಿದೆ ? ಎಂಬುದನ್ನು ಒಮ್ಮೆ ನೋಡು. ಅವರಿಂದಲೇ ಕಾರ್ಯ ಸಾಧಿಸಿದರೆ, ಒಳ್ಳೆಯದೇ ಆಯಿತು ಕದಾಚಿತ್ ಅವರ ಶಕ್ತಿ-ಸಾಮರ್ಥ್ಯಗಳು ಕ್ಷೀಣವಾಗುವ ಪಕ್ಷಕ್ಕೆ, ನೀನೇ ಸ್ವತಃ ಯುದ್ಧವನ್ನು ಮಾಡುವೆಯಂತೆ. ॥೬॥

ಬ್ರಹ್ಮಾ :—

ಷಣ್ಮುಖನು ಹೀಗೆ ವಿಜ್ಞಾಪಿಸಿ ದೇವನನ್ನು ನಮಸ್ಕರಿಸಿದ ಬಳಿಕ, ಯುದ್ಧ

ಚತುರಂಗಬಲಂ ಗೃಹ್ಯ ಸಿಂಧುಸೇನಾಮುಖಾವಧೀತ್ ॥೭॥
ಸೋಽಪಿ ತಾಂ ನ್ಯಹನತ್ಸೇನಾಂ ನಾನಾಶಸ್ತ್ರೈಃ ಶರವ್ರಜೈಃ ।
'ಸಹಸ್ವ, ಪ್ರಹರಸ್ವಾದ್ಯ, ಹನ್ಮಿ ಸಂಮುಖತಾಂ ವ್ರಜ' ॥೮॥
ಏವಂ ಕೋಲಾಹಲೋಽಸ್ಯಾಸೀದ್ಧೀರಾಣಾಂ ತತ್ರ ಯುದ್ಧ್ಯತಾಮ್ ।
ಪೇತುರ್ವೀರಾಃ ಶಸ್ತ್ರಹತಾಃ ಶರಜಾಲಗತಾಸವಃ ॥೯॥
ಛಿನ್ನಾಂಗಾ ಭಿನ್ನಪಾದಾಶ್ಚ ಛಿನ್ನಬಾಹೂರುಮಸ್ತಕಾಃ ।
ಅಸಿಭಿರ್ಭಿಂಡಿಪಾಲೈಶ್ಚ ಕುಂತೈರ್ಮುದ್ಗರಸಂಚಯೈಃ ॥೧೦॥
ಮಾರಯನ್ಮಿಶ್ರಿತಾ ವೀರಾಸ್ಸ್ವಾನ್ ಪರಾನ್ ಯುದ್ಧದುರ್ಮದಾನ್ ।
ಕೋಲಾಹಲೋ ಮಹಾನಾಸೀತ್ ಕ್ಷ್ವೇಡಿತೈರ್ಹೇಷಿತೈರಪಿ ॥೧೧॥

ಕ್ಕಾಗಿ ಹೊರಟುಹೋದನು. ಸಂಗಡ ಚತುರಂಗ ಸೇನೆಯನ್ನೂ ಕರೆದೊಯ್ದಿದ್ದನು. ಯುದ್ಧರಂಗವನ್ನು ಪ್ರವೇಶಿಸಿದ ಕೂಡಲೇ ಸಿಂಧುದೈತ್ಯನ ಸೇನೆಯನ್ನು ನದೆ ಬಡಿದನು. ॥೭॥

ಇದನ್ನು ತಿಳಿದ ಅಸುರನು ಸಹ ನಾನಾವಿಧ ಶಸ್ತ್ರಗಳನ್ನೂ, ಬಾಣಗಳ ಸಮುದಾಯವನ್ನೂ ಮೇಲ್ಮೇಲೆ ಪ್ರಯೋಗಿಸುತ್ತ, ಷಡಾನನನ ಸಂಗಡ ಬಂದ ಸೇನೆಯನ್ನು ಹೊಡೆದು ಹಿಂಸಿಸಿದನು. "ಈ ಹೊಡೆತವನ್ನು ಸಹಿಸಿಕೋ, ಈಗ ಪ್ರಹರಿಸು, ನೋಡೋಣ ? ಎದುರಿಗಂತೂ ಬಾ, ಕೊಂದೇ ಬಿಡುವೆನು" ॥೮॥

ಎಂದು ಮುಂತಾಗಿ ಉಭಯ ಪಕ್ಷಗಳ ಸೈನಿಕರೂ ಉಚ್ಚ ಧ್ವನಿಯಿಂದ ಕೂಗಾಡುತ್ತಲಿದ್ದರು. ಯುದ್ಧದ ಬಿರುಸಿನೊಂದಿಗೆ ಈ ಕೂಗಾಟವೂ ಸೇರಿ, ದೊಡ್ಡ ಕೋಲಾಹಲವೇ ಎದ್ದಿತು. ಶಸ್ತ್ರಗಳ ಕಡಿತಕ್ಕೆ ಸಿಲುಕಿ, ಎಷ್ಟೋ ಮಂದಿ ವೀರರು ನೆಲಕ್ಕೆ ಬಿದ್ದರು. ಬಾಣಗಳ ಜಾಲಕ್ಕೆ ಸಿಲುಕಿದವರು ಪ್ರಾಣಗಳನ್ನು ಕಳೆದುಕೊಂಡರು. ॥೯॥

ಅಂಗಾಂಗಗಳು ಭಂಗ ಹೊಂದಿದವರು, ಕಾಲುಗಳು ಮುರಿದು ಹೋದವರು, ತೋಳು, ತೊಡೆ, ತಲೆ ಇವನ್ನು ಒಡೆದುಕೊಂಡವರು ಲೆಕ್ಕವಿಲ್ಲದೇ ನೆಲದಲ್ಲಿ ಬಿದ್ದು ನರಳುತ್ತಿದ್ದರು. ಖಡ್ಗ, ಭಿಂಡಿಪಾಲ, ಕುಂತ, ಮುದ್ಗರ ಮೊದಲಾದ ಆಯುಧ ಸಮುದಾಯದಿಂದ ॥೧೦॥

ಯೋಧರು ಕದನವಾಡಿ, ಅನೇಕ ಮಂದಿ ಶತ್ರುವೀರರನ್ನು ಕೊಂದರು. ಸೈನ್ಯವು ಒಂದರಲ್ಲಿ ಮತ್ತೊಂದು ಬೆರತು ಹೋದುದರಿಂದ ಯುದ್ಧದುರ್ಮದರಾದ ವೀರರು ಆವೇಶದ ಭರದಲ್ಲಿ ಪರಕೀಯರೊಂದಿಗೆ ಸ್ವಕೀಯ ಸೈನಿಕರನ್ನೂ ಕೊಂದು ಬಿಸು

**ವಾದ್ಯಧ್ವನಿಪ್ರತಿಧ್ವಾನೈರ್ಬೃಂಹಿತೈರಥನೇಮಿಭಿಃ ।**
**ಅಸಂಬದ್ಧಮಭೂದ್ಯುದ್ಧಂ ಸೇನಯೋರುಭಯೋರಪಿ ॥೧೨॥**
**ಯಥಾಪ್ರತಿಜ್ಞಂ ವೀರಾಸ್ತೇ ನಿಜಘ್ನುರ್ಮಸ್ತಕಂ ಮುಖಮ್ ।**
**ನೇತ್ರೇ ಬಾಹೂದರಂ ಪಾದೌ ಗುಲ್ಫೌ ಚ ಜಾನುನೀಷು ಚ ॥೧೩॥**
**ಕೋಽಪಿ ಹಸ್ತೇನ ಪಾದೇನ ಕೋಽಪಿ ಖಡ್ಗೇನ ನಾಶಯತ್ ।**
**ಅಸಿನಾ ಕೇಽಪ್ಯರಿಗಣಾನ್ ಅಂಧಕಾರೇ ಮಹತ್ಯಪಿ ॥೧೪॥**
**ಅಸ್ತಂ ಯಾತೇ ದಿನಕರೇಽದೃಷ್ಟ್ವಾಸ್ಪೃಷ್ಟ್ವಾ ನಿಜಘ್ನಿರೇ ।**
**ದೇವಾನ್ ಜ್ಞಾತ್ವಾಸುರಾನ್ ಜಘ್ನುರಿತರಾನಿತರೇಽಪಿ ಚ ॥೧೫॥**

ಟೆರು. ವೀರರ ಕೈಚಪ್ಪಾಳೆ, ಕೂಗಾಟ ಚೀರಾಟಗಳಿಂದಾಗಿ ರಣರಂಗದಲ್ಲೆಲ್ಲ ದೊಡ್ಡ ಕೋಲಾಹಲವೇ ಉಂಟಾಯಿತು. ॥೧೧॥

ರಣವಾದ್ಯಗಳ ಧ್ವನಿ, ಆನೆಗಳ ಘೀಂಕಾರ, ಕುದುರೆಗಳ ಹೇಷಾರವ, ರಥಗಳ ಓಡಾಟದಿಂದುಂಟಾದ ಗಡಗಡ ಶಬ್ದ ಇತ್ಯಾದಿಗಳಿಂದ ಯಾರು ಎಷ್ಟು ಘಟ್ಟಿಯಾಗಿ ಕೂಗಿಕೊಂಡರೂ, ಸಮೀಪದಲ್ಲಿದ್ದವರಿಗೆ ಸಹ ಸ್ಪಷ್ಟವಾಗಿ ಕೇಳುವುದು ಕಷ್ಟವಾಗಿದ್ದಿತು. ಈ ಸ್ಥಿತಿ ಉಭಯಪಕ್ಷ ಸೇನೆಗಳಲ್ಲೂ ಸಮಾನವಾಗಿದ್ದಿತು. ಯುದ್ಧದ ನೀತಿಯೇ ಯಾರಲ್ಲೂ ಉಳಿಯಲಿಲ್ಲ. ॥೧೨॥

ವೀರರು ತಾವು ಹೇಗೆಲ್ಲ ಪ್ರತಿಜ್ಞೆಯನ್ನು ಮಾಡಿ ಯುದ್ಧಕ್ಕೆ ಬಂದಿದ್ದರೋ, ಮತ್ತು ಶತ್ರುಗಳ ಎದುರಿಗೆ ವೀರವಾದಗಳನ್ನು ನುಡಿದಿದ್ದರೋ, ಅದರಂತೆಯೇ ಹೋರಾಡಿ ಶತ್ರುಗಳ ತಲೆ, ಮುಖ, ಕಣ್ಣುಗಳು, ಭುಜಗಳು, ಹೊಟ್ಟೆ, ಪಾದಗಳು, ಗುಲ್ಫಮೊಣಕಾಲು ಇವನ್ನೆಲ್ಲ ತುಂಡರಿಸಿ ಚಲ್ಲಿದರು. ॥೧೩॥

ಒಬ್ಬ ಯೋಧನು ಎದುರಾಳಿಯನ್ನು ಕೈಯಿಂದ ಗುದ್ದಿ ಸಾಯಿಸಿದರೆ, ಮತ್ತೊಬ್ಬನು ಕಾಲಿನಿಂದ ಬಲವಾಗಿ ಒದೆದು ಸಾಯಿಸಿದನು. ಕೆಲವರು ಖಡ್ಗಗಳನ್ನು ಗರಗರ ತಿರುಗಿಸಿ ಶತ್ರುಗಳನ್ನು ತುಂಡರಿಸಿದರು. ರಣರಂಗದಲ್ಲಿ ಧೂಳು ತುಂಬಿದ್ದರಿಂದ ಕತ್ತಲಾದಂತಾಗಿದ್ದರೂ ಅಸಿ (Double edged Swords) ಗಳ ಮೂಲಕ ಅನೇಕ ಶತ್ರುಗಳನ್ನು ಕೊಂದರು. ॥೧೪॥

ಅಷ್ಟರಲ್ಲಿ ಸೂರ್ಯನೂ ಅಸ್ತಮಿಸಿದ್ದರಿಂದ ತಮಸ್ಸು ಘೋರ ರೂಪವನ್ನು ತಾಳಿ, ಎಲ್ಲೆಡೆಯಲ್ಲೂ ವ್ಯಾಪಿಸಿತು. ಸ್ಪಷ್ಟವಾದ ಬೆಳಕಿರುವಾಗಲೇ ಸ್ವ-ಪರ ಭೇದವಿಲ್ಲದೆ ಹೊಡೆದಾಡಿದ ಹುಂಬ ಸೈನಿಕರಿಗೆ ಕತ್ತಲೂ ಕವಿದ ಬಳಿಕ ಕೇಳುವುದೇನಿದೆ ? ' ಯಾರು ? ' ಎಂಬುದನ್ನು ಕೇಳುವಂತೆಯೂ ಇಲ್ಲ, ನೋಡುವುದಕ್ಕೆ ಸಾಧ್ಯವೂ

**ಅಸೃಕ್ಪ್ರವಾಹಸ್ತತ್ರಾಸೀತ್ಪ್ರಧನೇ ತುಮುಲೇ ತದಾ ।**
**ವರ್ಹ ಪ್ರೇತಾನ್ನಿಮಜ್ಜೀರ್ವಾ ಹುಂಕಾರೇಣ ಚ ತಾ ಪರೇ ॥೧೬॥**

**ಬಲಾನ್ನಿಷ್ಕಾಸಯಾಮಾಸುರ್ವಿಶಲ್ಯಾಂಶ್ಚಕ್ರಿರೇ ಯಧಾ ।**
**ಇತೋ ನ ಸೇನೇ ಪಂಚಾಹನಿರಾಮಂ ಯುದ್ಧಲಂಪಟೇ ॥೧೭॥**

**ಏವಂ ಪದಾತಾಸ್ಸಿಂಧೋಸ್ತೇ ಕೋಟಿಶೋಽಥ ಹತಾಃ ಸುರೈಃ ।**
**ತತೋಽಗಾತ್ತದ್ಗಣಾನೀಕಮಸಂಖ್ಯಂ ಶಸ್ತ್ರಸಂಯುತಮ್ ॥೧೮॥**

---

ಇರಲಿಲ್ಲವಾದ್ದರಿಂದ ತಮ್ಮ ಸಮೀಪದಲ್ಲಿ ಯಾರೇ ಸುಳಿದಂತೆ ಭಾಸವಾಗಲಿ, ಕೂಡಲೇ ಶಸ್ತ್ರವನ್ನು ಬೀಸಿ ಬಿಡುವರು. ಶತ್ರುಗಳು ಸುಳಿದಿದ್ದರಂತೂ ಸರಿ. ಇಲ್ಲದೆ ದುರ್ದೈವಿಯಾದ ಆತ್ಮೀಯನು ಸಮೀಪಕ್ಕೆ ಸುಳಿದು ಶಸ್ತ್ರಾಘಾತಕ್ಕೆ ಸಿಲುಕಿದ್ದರೆ, ಅವನ ಅವತಾರವು ಮುಗಿದೇ ಹೋಗುತ್ತಲಿತ್ತು. ಎಂದರೆ ಸಮೀ ಬಂದವರುಪಕ್ಕೆ ದೇವತೆಗಳು ಎಂದು ಭ್ರಮಿಸಿ ಅಸುರರು ತಮ್ಮವರೆಷ್ಟೋ ಮಂದಿಯನ್ನು ಕೊಂದರು. ಇದರಂತೆ ಅಸುರರೆಂಬ ಭ್ರಮೆಯಿಂದ ದೇವತೆಗಳೂ ತಮ್ಮವರನ್ನೇ ಕೊಂದರು. ॥೧೫॥

ಯುದ್ಧವು ಬಹಳ ಬಿರುಸಿನಿಂದ ನಡೆಯಿತಾಗಿ ಮೃತರ, ಘಾಯಗೊಂಡವರ ದೇಹಗಳಿಂದ ಧಾರಾಕಾರವಾಗಿ ಹೊರಟ ರಕ್ತವು, ದೊಡ್ಡ ಪ್ರವಾಹ ರೂಪವನ್ನು ತಾಳಿ, ಅತಿ ವೇಗದಿಂದ ಹರಿಯಿತು. ಪ್ರೇತರು, ಬಾಣಾದ್ಯಾಘಾತಗಳಿಂದ ಮೃತ ಲಾಗಲಿರುವರು, ಇವರನ್ನು ತೇಲಿಸುತ್ತಲಿದ್ದಿತು. ಬಾಣ, ಶಲ್ಯ ಮುಂತಾದ ಆಯುಧ ಗಳಿಂದ ಏಟು ತಿಂದು, ಇನ್ನೂ ಪ್ರಾಣ ಹೋಗದೇ ನರಳುತ್ತ ಮಲಗಿದ್ದ ವೀರರನ್ನು ಶತ್ರುಗಳು ಬಂದು ತಮ್ಮ ಹುಂಕಾರಗಳಿಂದ ಭರ್ತ್ಸನಮಾಡುತ್ತಲಿದ್ದರು. ॥೧೬॥

ಮತ್ತು ಅಂಥವರನ್ನು ಹೆಣಗಳ ರಾಶಿಯಿಂದ ಈಚೆಗೆಳೆದು ಅವರ ಅಂಗಾಂಗ ಗಳಲ್ಲಿ ನಾಟಿದ ನಾರಾಚಗಳನ್ನು ಬಲಾತ್ಕಾರದಿಂದ ಹೊರಕ್ಕೆ ಹಿರಿದು, ಅವರನ್ನು ಸುಖವಾಗಿ ಸಾಯಗೊಡುತ್ತಲಿದ್ದರು. ಉಭಯ ಪಕ್ಷಗಳ ಸೈನಿಕರೂ ಆಹಾರ ಪಾನೀಯಗಳ ಮೇಲಿನ ಗಮನವನ್ನೂ ತೊರೆದು, ಐದು ದಿನಗಳ ವರೆಗೆ ಅಹರ್ನಿಶಿ ಏಕಪ್ರಕಾರವಾಗಿ ಯುದ್ಧವನ್ನು ಮಾಡಿದರು ॥೧೭॥

ಈ ಯುದ್ಧದಲ್ಲಿ ಸಿಂಧುದೈತ್ಯನ ಸೇನೆಯ ಕೋಟ್ಯವಧಿ ಪದಾತಿಗಳು ದೇವತೆ ಗಳ ಆಯುಧಗಳಿಗೆ ಬಲಿಯಾಗಿ ಮೃತರಾದರು. ಪದಾತಿ ದಳವು ಧ್ವಂಸವಾದು ದನ್ನರಿತ ಕೂಡಲೇ, ಅಸುರ ಸೇನಾನಾಯಕರು ಆನೆಗಳ ಸೈನ್ಯವನ್ನು ಮುಂದೆ ನುಗ್ಗಿ ಹೋಗುವಂತೆ ಸೂಚಿಸಿದರು. ಆಗ ಆನೆಗಳ ಪಡೆ ಮುಂದಕ್ಕೆ ಬಂದಿತು. ಅವನ್ನೇರಿ ಕುಳಿತಿದ್ದ ವೀರ ಯೋಧರು ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿದ್ದರು. ಆ ಪಡೆಗಳು ಅಸಂಖ್ಯವಾಗಿದ್ದವು. ॥೧೮॥

ಧಿಷ್ಠಿತಂ ಸಾದಿಭಿರ್ವಿರೈರ್ನಾನಾಯುದ್ಧವಿಶಾರದೈಃ ।
ವೀರಭದ್ರಾದಯೋ ಜಘ್ನುರ್ಗಜಸೇನಾಂ ದುರತ್ಯಯಾಮ್ ॥೧೯॥

ಕೇಷಾಂಚಿನ್ಮಸ್ತಕಾ ಭಿನ್ನಾಃ ಕೇಷಾಂಚಿಚ್ಚ ಕರಾ ದ್ವಿಜಾಃ ।
ಅಗ್ನಿಶಸ್ತ್ರಧರೈಃ ಕೇಚಿತ್ಪಾತಿತಾ ವೀರಸಂಯುತಾಃ ॥೨೦॥

ವೀರಭದ್ರೋಽತಿವೀರ್ಯೇಣ ಗಜೇನೈವಾಹನದ್ಗಜಮ್ ।
ಅಷ್ಟಧಾ ಪೇತತುರ್ಭಿನ್ನಾವುಭಾವಪಿ ತದಾ ಗಜೌ ॥೨೧॥

ತತಃ ಷಡಾನನೋ ನಿಘ್ನನ್ ಗಜಾನೀಕೇ ವ್ಯರೋಚತ ।
ವೀರೈಸ್ತು ಸಹಿತಾನ್ ಮತ್ತಾನನಂತಾನ್ ಕರಿಸಂಚಯಾನ್ ॥೨೨॥

---

ಯುದ್ಧದ ಮರ್ಮವನ್ನರಿತವರೂ, ಸ್ವಯಂ ವೀರರೂ ಆದ ಮಾಹುತರು ತಮ್ಮ ಕೈಗಳಲ್ಲೂ ನಾನಾವಿಧ ಶಸ್ತ್ರಾಸ್ತ್ರಗಳನ್ನು ಧರಿಸಿಕೊಂಡು, ಆ ಆನೆಗಳ ಮೇಲೆ ಕುಳಿತು ಅವನ್ನು ಸಂದರ್ಭಾನುಗುಣವಾಗಿ ಮುನ್ನುಗ್ಗಿಸುತ್ತಲಿದ್ದರು. ಆ ಗಜಸೇನೆಯು ಯಾರಿಗೂ ಜಗ್ಗುವಂತಹವಾಗಿಲ್ಲದಿದ್ದರೂ, ಮಹಾ ಪ್ರತಾಪಿಗಳಾದ ವೀರಭದ್ರಾದಿ ವೀರಯೋಧರು ಅದನ್ನು ನಿರ್ಲಕ್ಷ್ಯಭಾವದಿಂದ ಕೊಂದುಹಾಕಿದರು. ॥೧೯॥

ಯೋಧ, ಮಾಹುತ ಇವರಿಂದೊಡಗೂಡಿದ ಕೆಲವು ಆನೆಗಳ ತಲೆಗಳು ಒಡೆದುಹೋದವು. ಕೆಲವಕ್ಕೆ ಕೋರೆ ಹಲ್ಲುಗಳೇ ಮುರಿದು ಹೋದವು. ಕೆಲವಕ್ಕಂತೂ ಸೊಂಡಿಲುಗಳೇ ಕತ್ತರಿಸಿ ಹೋದವು. ಆಗ ಅವು ಕಿರ್ರನೆ ಕಿರಿಚುತ್ತ ಮಾಹುತ, ವೀರ ಇವರನ್ನೆಲ್ಲ ನೆಲಕ್ಕೆ ಕೆಡಹಿ, ಜನರನ್ನೆಲ್ಲ ತುಳಿಯುತ್ತ ಮನಸ್ವಿಯಾಗಿ ಓಡಿ ಹೋದವು. ಇವನ್ನಟ್ಟಿಕೊಂಡು ಹೋದ ಯೋಧರು. ತಮ್ಮ ಕೈಗಳಲ್ಲಿದ್ದ ಅಗ್ನಿಯನ್ನುಗುಳುವ ಆಯುಧ (ತುಪಾಕಿ) ಗಳಿಂದ ಅವನ್ನು ಹೊಡೆದು ನಾಶಗೊಳಿಸಿದರು. ॥೨೦॥

ಮಹಾ ಬಲಿಷ್ಠನಾದ ವೀರಭದ್ರನು ಬಹಳ ಒರಟು ಸ್ವಭಾವದವನು. ಅವನು ಮುಂದೆ ನುಗ್ಗಿ, ಆನೆಯೊಂದನ್ನು ಎತ್ತಿ ಮತ್ತೊಂದರ ಮೇಲೆ ಬೀಸಿ ಎಸೆಯುವನ್ನು ಆವೆರಡೂ ಏಟನ್ನು ತಾಳಲಾರದೆ, ಅಸುಗೆಟ್ಟು ಒದೆದಾಡಿ ಒಂದೊಂದು ಆನೆಯೂ ಎಂಟು ಎಂಟು ಹೋಳುಗಳಾದವು. ॥೨೧॥

ಅನಂತರ ಷಡಾನನನೂ, ಮುಂದೆ ಬಂದು, ಅನೇಕ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತ, ಗಜಸೇನೆ, ಅದರ ಸಂಗಡ ಬಂದ ಯೋಧರು ಎಲ್ಲರನ್ನೂ ಧ್ವಂಸಗೊಳಿಸಿದನು. ॥೨೨॥

ಶಕ್ತ್ಯಾ ಶರೈರನೇಕೈಃ ಸೋನಾಶಯತ್ಷಡ್ಧನುಶ್ಚ್ಯುತೈಃ ।
ಹಿರಣ್ಯಗರ್ಭೋಽನೇಕವೀರಯುತಾಂಸ್ತಾನಪಾತಯತ್ ॥೨೩॥

ಭೂತರಾಜೋಽಪಿ ಶಸ್ತ್ರೈಸ್ತಾನ್ ಗಜಾನ್ನಾನಾವಿಧಾನ್ರಣೇ ।
ನ್ಯಪಾಯದ್ವೀರಯುಕ್ತಾನ್ನಾರಾಚಕ್ಷತಜೀವಿತಾನ್ ॥೨೪॥

ಸಿಂಹೋ ಭೂತ್ವಾ ಪುಷ್ಪದಂತೋ ದಾರಯಾಮಾಸ ತಾನ್ ಗಜಾನ್ ।
ನಂದೀ ತು ಗಜರೂಪೇಣ ಬಭಂಜ ತಾನ್ ಗಜಾನ್ ಬಹೂನ್ ॥೨೫॥

ಅನ್ಯೈಶ್ಚ ಶರಸಂಘಾತೈಃ ಸರ್ವೇ ತೇ ವಿನಿಪಾತಿತಾಃ ।
ಕಂಚಿತ್ಪುಚ್ಛೇ ಗೃಹೀತ್ವೇಭಂ ಭ್ರಾಮಯಿತ್ವಾಪರೇಽಕ್ಷಿಪತ್ ॥೨೬॥

ಉಭಾವಪಿ ಲಯಂ ಯಾತೌ ದೃಢಾಘಾತೇನ ಚೂರ್ಣಿತೌ ।
ತತೋಽಶ್ವಚಾರಾ ಯುಯುಧುರ್ಗಜಾನೀಕೇ ನಿವಾರಿತೇ ॥೨೭॥

ಶಕ್ತ್ಯಾಯುಧವನ್ನು ಪ್ರಬಲರ ಮೇಲೆ ಪ್ರಯೋಗಿಸಿದನು. ತನ್ನ ಕೈಗಳಲ್ಲಿ ಹಿಡಿದಿದ್ದ ಆರು ಧನುಸ್ಸುಗಳಲ್ಲೂ ಒಂದೊಂದು ಸಲಕ್ಕೆ ಅನೇಕ ಬಾಣಗಳನ್ನು ಸಂಧಾನ ಮಾಡಿ, ಅವನ್ನು ಶತ್ರುಗಳ ಮೇಲೆ ಎಸೆಯುವನು. ಹಿರಣ್ಯಗರ್ಭನು ಅನೇಕ ವೀರರಿಂದೊಳಗೊಂಡು ಬಂದಿದ್ದ ಗಜಸೇನೆಯನ್ನು ಧೂಳಿನಂತೆ ಹಾರಿಸಿಬಿಟ್ಟನು. ॥೨೩॥

ಭೂತರಾಜನೂ ಗಜಸೇನೆಯ ಮೇಲೆ ನುಗ್ಗಿ, ಶಸ್ತ್ರಗಳನ್ನು ಝಳುಪಿಸುತ್ತ ರಣರಂಗದಲ್ಲೆಲ್ಲ ಸುತ್ತಾಡಿ ಅನೇಕ ವೀರರು, ಗಜಗಳು ಇವನ್ನು ಕೊಂದುದಲ್ಲದೆ, ಬಾಣಗಳಿಂದ ಪೀಡಿತರಾಗಿ ಇನ್ನೂ ಜೀವ ಹೋಗದೆ ಇರತಕ್ಕ ಆನೆಗಳು, ವೀರರು ಇವರನ್ನೆಲ್ಲ ಮತ್ತೊಮ್ಮೆ ಹೊಡೆದು ನೆಲಕ್ಕೆ ಕೆಡಹಿದನು. ॥೨೪॥

ಯೋಗಸಿದ್ಧನಾದ ಪುಷ್ಪದಂತನು ತನ್ನ ಯೋಗಶಕ್ತಿಯಿಂದ ಸಿಂಹದ ಸ್ವರೂಪವನ್ನು ತಳೆದು, ಆ ಮತ್ತ ಗಜಗಳನ್ನೆಲ್ಲ ಸೀಳಿ ಹಾಕಿದನು. ಅತ್ತ ನಂದಿಯು ಸಹ ದೊಡ್ಡ ಸಲಗದ ರೂಪವನ್ನು ತಾಳಿ, 'ಕೊಂಬುಗಳಿಂದ ತಿವಿಯುತ್ತ, ಅನೇಕ ಗಜಗಳನ್ನು ಭಂಗಗೊಳಿಸಿದನು. ॥೨೫॥

ಮತ್ತೆ ಕೆಲವು ದೇವಸೈನಿಕರು, ಗುರಿನೋಡಿ ದೂರದಿಂದಲೇ ರಾಶಿಗಟ್ಟಲೆ ಬಾಣಗಳನ್ನು ಬಿಟ್ಟು, ತನಗೆ ಎದುರಾದ ಆನೆಗಳನ್ನೆಲ್ಲ ಕೊಂದುಹಾಕಿದನು. ಮತ್ತೊಬ್ಬ ಧೀರನು ಮುಂದೆ ಬಂದು, ಒಂದು ಆನೆಯ ಬಾಲವನ್ನು ಭದ್ರವಾಗಿ ಹಿಡಿದುಕೊಂಡು ಗರಗರ ತಿರುಗಿಸಿ, ಮತ್ತೊಂದು ಆನೆಯ ಮೇಲೆ ಬೀಸಿ ಎಸೆದನು. ॥೨೬॥

ಒಂದೊಂದು ಸಲಕ್ಕೆ ಎರಡೆರಡರಂತೆ ಆನೆಗಳು ಒಂದಕ್ಕೊಂದು ತಗುಲಿ ಎರಡಕ್ಕೂ ಏಟುಗಳು ಬಲವಾಗಿ ಬೀಳುತ್ತಿದ್ದುದರಿಂದ ಪುಡಿಪುಡಿಯಾಗಿ ನೆಲಕ್ಕುರುಳಿ

ಅಸಂಖ್ಯಾತಾನ್ನಿಜಘ್ನುಸ್ತಾನ್ ಸುರಾನ್ ನಾನಾಯುಧೈರಣೇ ।
ಪತಿತಾ ಮೂರ್ಛಿತಾ ದೇವಾಃ ಪುನಃ ಸಂಜ್ಞಾಂ ಚ ಲೇಭಿರೇ ॥೨೮॥
ತತೋ ವಿವಿಧುರಶ್ವಸ್ಥಾನ್ ವೀರಾನಶ್ವಾನಥೋ ರುಷಾ ।
ಕ್ರೋಧೇನ ದೇವಾನ್ ಘ್ನಂತಿ ಸ್ಮ ಹಯಾರೂಢಾ ಮಹಾಸುರಾಃ ॥೨೯॥
ಸುರಾಸ್ತಾನ್ನಿನ್ಯುರಂತಂ ತೇ ಶಸ್ತ್ರಾಸ್ತ್ರಶರವೃಷ್ಟಿಭಿಃ ।
ಷಡ್ವೀರಾಃ ಪುನರಾಯಾತಾಃ ಶ್ರುತ್ವಾ ದೇವಾನ್ ಹತಾನ್ ಯುಧಿ ॥೩೦॥
ತತಸ್ತೇ ಪುನರಾಜಘ್ನುರ್ದೈತೇಯಾನಶ್ವಸಾದಿನಃ ।
ಚತ್ವಾರಸ್ತೇ ಚತುರ್ದಿಕ್ಷು ಪ್ರಾಯುಧ್ಯನ್ ಬಲವತ್ತರಮ್ ॥೩೧॥

---

ಸಾಯಲಾರಂಭಿಸಿದವು. ಹೀಗಾಗಿ, ಗಜಸೇನೆಯು ಹೇಳಲು ಹೆಸರಿಲ್ಲದಂತಾಗಿ ಹೋಗಲು, ಆನೆಯ ಸಾಲುಗಳ ಹಿಂದಿದ್ದ; ಕುದುರೆಯ ಪಡೆಯವರು ಶತ್ರುಗಳ ಮೇಲೆ ಯುದ್ಧವನ್ನಾಡಲು ಮುಂದಕ್ಕೆ ಬಂದರು. ||೨೭||

ಅಶ್ವಗಳ ಮೇಲೇರಿದ್ದ ಯೋಧರು ಅನೇಕ ಆಯುಧಗಳನ್ನು ಪ್ರಯೋಗಿಸಿ, ಸುರ ಸೈನ್ಯದಲ್ಲಿದ್ದ ಅನೇಕ ಮಂದಿ ವೀರರನ್ನು ಘಾಯಗೊಳಿಸಿ, ನೆಲಕ್ಕೆ ಕೆಡಹಿದರು. ಏಟುಗಳಿಗೆ ಸಿಲುಕಿದ ದೇವ ವೀರರು ನೆಲಕ್ಕೆ ಬಿದ್ದ ಕೂಡಲೆ ಗಾಸಿಗೊಂಡು ಮೂರ್ಛೆ ಬಿದ್ದರು. ಆದರೂ, ಅಸುಗೆಡದೆ, ಸ್ವಲ್ಪ ವೇಳೆಯೊಳಗಾಗಿಯೇ ಮತ್ತೆ ಸಂಜ್ಞೆಯನ್ನು ಪಡೆದು ಎದ್ದುನಿಂತರು ||೨೮||

ಅವರಿಗಿದ್ದ ಯುದ್ಧೋತ್ಸಾಹ, ಶತ್ರುಗಳ ಮೇಲಿನ ಸಿಟ್ಟು, ಛಲ ಇವು ದ್ವಿಗುಣಿತವಾದವು. ಕೂಡಲೇ ಮೇಲೆದ್ದು ಕುದುರೆ ಸೈನಿಕರಾದ ವೀರರನ್ನೆಲ್ಲ ಅನೇಕ ರೀತಿಯಿಂದ ಹೊಡೆದರು. ಅಶ್ವಸಾದಿಗಳಾದ ಮಹಾ ಅಸುರರು ಸಾಮಾನ್ಯದವರಾಗಿರಲಿಲ್ಲ. ಅವರಿಗೂ ಕೋಪ ಮಿತಿಮೀರಿದುದರಿಂದ ದೇವತೆಗಳನ್ನು ಘಾತಿಸ ತೊಡಗಿದರು. || ೨೯||

ದೇವತೆಗಳಿಗೆ ರೊಚ್ಚು ಹೆಚ್ಚಿ, ಆ ಶಸ್ತ್ರಾಸ್ತ್ರಗಳ ಸಹಾಯದಿಂದ ದೈತ್ಯಸೈನಿಕರನ್ನೆಲ್ಲ ಅಂತಗೊಳಿಸಲಾರಂಭಿಸಿದರು. ದೇವತಾಸೇನೆಯಲ್ಲಿದ್ದವರ ಪೈಕಿ, ಅನೇಕ ಮಂದಿ ನೆಲಕ್ಕುರುಳಿದ ಹಾಗೂ ಮೃತಿಯನ್ನೈದಿದ ಸಂಗತಿಯನ್ನು ಕೇಳಿದ ಕೂಡಲೇ ದೇವತಾ ಸೇನೆಯಲ್ಲಿದ್ದ ಆರು ಮಂದಿ ಪ್ರಮುಖ ವೀರರು ಯುದ್ಧರಂಗಕ್ಕೆ ಧಾವಿಸಿ ಬಂದರು. ||೩೦||

ಬಂದ ಆರು ಮಂದಿ ವೀರರು ಅಸುರನ ಅಶ್ವಪಡೆಯ ಸೈನಿಕರನ್ನು ಸದೆಬಡಿಯಲಾರಂಭಿಸಿದರು. ಆ ಆರು ಮಂದಿಗಳ ಪೈಕಿ, ನಾಲ್ಕು ಜನ ವೀರರು ನಾಲ್ಕು ದಿಕ್ಕುಗಳಲ್ಲಿದ್ದ ರಣಮುಖಗಳಲ್ಲಿ ಬಹಳ ಬಲವಾಗಿ ಯುದ್ಧವನ್ನು ಮಾಡಲಾರಂಭಿಸಿದರು. ||೩೧||

ರರಕ್ಷತುರುಙ್ಖೌ ಸೈನ್ಯಂ ಸ್ವೀಯಂ ದೇವಗಣೈರ್ಯುತಮ್ ।
ಮಾರಯಾಮಾಸುರಶ್ವಾಂಸ್ತಾನಶ್ವಸ್ಥಾನ್ ವೀರ್ಯಸಂಯುತಾನ್ ॥೩೨॥

ಅಯುದ್ಧ್ಯನ್ ಪಾದಚಾರೇಣ ನಿಘ್ನಂತೋಽರಿಗಣಾನ್ ಬಹೂನ್ ।
ಕೋಟಿಕೋಟಿಮಿತಾಸ್ತತ್ರ ಪೇತುಸ್ತೇ ತು ಶರಾರ್ದಿತಾಃ ॥೩೩॥

ನಂದೀ ಭೃಂಗೀ ಹತಾನಶ್ವಾನ್ ಪತಿತಾನ್ ವೀಕ್ಷ್ಯ ಸಾದಿನಃ ।
ಪಾದಾಘಾತೇನ ತೇನಾಶು ಪಾತಯನ್ನಂದಿಕೇಶ್ವರಃ ॥೩೪॥

ವೀರಭದ್ರೋಽಪ್ಯಸಂಖ್ಯಾತಾನಶ್ವಯೋಧಾನ್ನ್ಯಪಾತಯತ್ ।
ಹತೇಷು ಮುಖ್ಯವೀರೇಷು ಚತುರ್ಭಿಸ್ಸರ್ವತೋ ದಿಶಮ್ ॥೩೫॥

---

ಬಾಕಿ ಇಬ್ಬರು ವೀರರು ದೇವಗಣಗಳಿಂದ ಕೂಡಿದ ತಮ್ಮ ಪಕ್ಷದ ಸೈನ್ಯ ಸಮುದಾಯವನ್ನು ಶತ್ರುಗಳ ಏಟುಗಳಿಗೆ ಸಿಕ್ಕದಂತೆ ಸಂರಕ್ಷಿಸುತ್ತಲಿದ್ದರು. ಮತ್ತು ತಮ್ಮ ಸೇನೆಯ ಗೊಡವೆಗೆ ಬರುವ ಅಶ್ವದಳದವರನ್ನು ಹಿಂದು ಮುಂದೆ ನೋಡದೆ, ಕೊಲ್ಲಲಾರಂಭಿಸಿದರು. ಇದರಿಂದ ಲೆಖ್ಖವಿಲ್ಲದಷ್ಟು ಕುದುರೆಗಳು, ಅವನ್ನೇರಿ ಕುಳಿತಿದ್ದ ವೀರಪುರುಷರು ಇವರೆಷ್ಟೋ ಮಂದಿ ಕೊಲೆಗೀಡಾದರು. ॥೩೨॥

ಅಶ್ವಸಾದಿಗಳಿಲ್ಲದಿದ್ದಾಗ ಪಾದಚಾರಿಗಳೊಂದಿಗೆ ಅವರು ಕದನವಾಡುತ್ತ, ಖಡ್ಗ, ಖೇಟೆ ಮುಂತಾದ ಆಯುಧಗಳಿಂದ ಅವರನ್ನೆಲ್ಲ ಸವರುತ್ತ, ಬಹುಮಂದಿ ರಿಪುಗಳನ್ನು ಕೊಂದು ಚಲ್ಲಿದರು. ಶರಾಘಾತಗಳಿಗೆ ಸಿಲುಕಿ, ಕೋಟಿ ಕೋಟಿ ಗಟ್ಟಲೆ ದೈತ್ಯವೀರರು ಮಡಿದು ಬಿದ್ದರು. ॥೩೩॥

ನಂದೀ ಭೃಂಗೀ ಇವರು, ಸತ್ತು ಹೋದ ಕುದುರೆಗಳನ್ನೂ, ನೆಲಕ್ಕುರುಳಿ ನರಳುತ್ತಿದ್ದ ಸವಾರರನ್ನೂ ಕಂಡು ಹಂಗಿಸುತ್ತ, ಕಾಲುಗಳಿಂದ ಮತ್ತೆ ಮತ್ತೆ ಒದೆದು ನೆಲದಲ್ಲಿ ಉರುಳಾಡುವಂತೆ ಮಾಡಿ, ತಮ್ಮ ಸೇಡನ್ನು ತೀರಿಸಿಕೊಂಡರು. ॥೩೪॥

ಇತ್ತ, ಬಲಶಾಲಿಯಾದ ವೀರಭದ್ರನೂ ಸುಮ್ಮನಿರಲಿಲ್ಲ. ಅವನು ಸಹ ತನ್ನ ಶಕ್ತಿ-ಸಾಹಸಗಳನ್ನು ಮಿತಿಮೀರಿ ಉಪಯೋಗಿಸಿ, ಅಶ್ವಗಳು, ಅವನ್ನೇರಿದ್ದ ಯೋಧರು ಎಲ್ಲರನ್ನೂ ನೆಲಕ್ಕೆ ಕೆಡಹಿದನು. ದೈತ್ಯಸೇನೆಯಲ್ಲಿದ್ದ ಪ್ರಮುಖ ವೀರರು ಎಲ್ಲೇ ಇರಲಿ, ಅವರೆಲ್ಲರನ್ನೂ ದೇವಸೇನೆಯ ನಾಲ್ವರು ಶೂರರು ಹುಡುಕಿ ಹುಡುಕಿ, ಕೊಂದು ಬಿಸುಟರು. ಯಾವ ದಿಙ್ಮೂಲೆಯಲ್ಲಿ ನೋಡಿದರೂ, ದೈತ್ಯವೀರರ ಹೆಣಗಳೇ ಕಾಣುವಂತೆ ಮಾಡಿದರು. ॥೩೫॥

ಕಲ್ಪಾಂತ ಇವ ತತ್ರಾಸೀದ್ದೈತ್ಯಾನಾಂ ರಣಕರ್ಮಿಣಾಮ್ ।
ತತಃ ಕೇಚಿತ್ಸುರಗಣಾನ್ ಪೇದಿರೇ ಶರಣಂ ತದಾ ॥೩೬॥
ಹಾಹಾಕಾರೋ ಮಹಾನಾಸೀದ್ದೈತ್ಯಸೈನ್ಯಾಶ್ವಸಾದಿಷು ।
ಏವಂ ಹತ್ವಾಖಿಲಾಂ ಸೇನಾಂ ಷಡ್ವೀರಾಸ್ತೇ ಮುದಂ ಯಯುಃ ॥೩೭॥
ವಾದ್ಯತ್ಸು ಸರ್ವವಾದ್ಯೇಷು ಜಗರ್ಜುಸ್ತುಷ್ಟುವುರ್ವಿಭುಮ್ ।
" ಜಯಃ ಪ್ರಾಪ್ತೋ ಮಯೂರೇಶಪ್ರಭಾವಾತ್ಸ್ಮರಣಾನ್ನತೇಃ " ॥೩೮॥
ತತಃ ಸಿಂಧುಃ ಸಮಾಕರ್ಣ್ಯ ಶರಣಾಗತವಾಕ್ಯತಃ ।
ವೃತ್ತಾಂತಂ ಹತಸೇನಾಯಾ ಹಸ್ತ್ಯಶ್ವರಥಸಂಯುತಃ ॥೩೯॥

ರಣನಿರತರಾದ ದೈತ್ಯರಿಗೆ ಪ್ರಕೃತ ಒದಗಿದ ಸಂಗ್ರಾಮವು " ಇದು ಮಹಾ ಪ್ರಳಯಕಾಲವೋ " ಎಂದೆನಿಸಿಬಿಟ್ಟಿತ್ತು. ಯುದ್ಧೋನ್ಮತ್ತರಾದ ದೇವಸೇನೆಯ ವೀರರ ರೌದ್ರರೂಪವನ್ನು ನೋಡಿ, ದೈತ್ಯರು ಗಡಗುಟ್ಟಿ ನಡುಗಿದರು. ಆ ಪೈಕಿ ಕೆಲವರು ನಾಚಿಕೆ–ಹೇಸಿಗೆಗಳನ್ನೂ, ಮಾನಾಪಮಾನಗಳನ್ನೂ ಬದಿಗೊತ್ತರಿಸಿ, ಬದುಕಿದರೆ ಸಾಕು ಎಂಬ ಭಾವನೆಯಿಂದ ಆ ನಾಲ್ವರು ದೇವವೀರರಿಗೆ ಶರಣು ಬಂದರು. ॥೩೬॥

ದೈತ್ಯಸೇನಾಪಡೆಯಲ್ಲಿ ಹೆಚ್ಚಾಗಿ ಹಾಹಾಕಾರವೆದ್ದಿತು. ಅದರಲ್ಲೂ ಅಶ್ವಸೇನೆಯವರು ಎದೆಯೊಡೆದು ಹೋದರು. ಆಗ ದೇವತಾಸೇನಾವೀರರಾದ ಆ ಆರು ಮಂದಿ ಅಖಿಲ ದೈತ್ಯಸೇನೆಯನ್ನೂ ನಿರ್ಮೂಲಗೊಳಿಸಿ ಕೃತಕೃತ್ಯರಾದುದರಿಂದ ಬಹಳ ಸಂತೋಷವನ್ನು ಹೊಂದಿದರು. ॥೩೭॥

ರಣವಾದ್ಯಗಳು ಒಮ್ಮೆಲೇ ಭೋರ್ಗರೆದು, ತಮ್ಮ ಸೇನೆಗೆ ವಿಜಯ ದೊರೆತ ಅಂಶವನ್ನು ಉದ್ಘೋಷಿಸಿದವು. ಇದರಿಂದ ಉತ್ತೇಜಿತರಾದ ದೇವಸೇನಾಪಡೆಯವರು ಗರ್ಜಿಸುತ್ತ, ಸಿಂಹನಾದವನ್ನು ಮಾಡಿದರು ಮತ್ತು ತಮ್ಮ ನಾಯಕನಾದ ಮಯೂರೇಶ್ವರನನ್ನು ಹೀಗೆಂದು ಸ್ತುತಿಸಿದರು. ' ಮಯೂರೇಶ್ವರನ ಪ್ರಭಾವ ವಿಶೇಷದಿಂದಲೂ, ನಾವು ಸರ್ವದಾ ಆ ವಿಭುವನ್ನು ಸ್ಮರಿಸುತ್ತಲೂ, ನಮಿಸುತ್ತಲೂ ಇದ್ದುದರಿಂದಲೂ ನಮಗೆ ನಿರಾಯಾಸವಾಗಿ ವಿಜಯ ದೊರೆಯಿತು.' ॥೩೮॥

ಶರಣಾಗತರಾದ ದೈತ್ಯರು ಜೀವದೊಂದಿಗೆ ರಣರಂಗವನ್ನು ಬಿಟ್ಟು ತಮ್ಮ ಪಾಳಯಕ್ಕೆ ಹಿಂದಿರುಗಿದವರು, ನೆಟ್ಟಗೆ ತಮ್ಮ ಅರಸನಾದ ಸಿಂಧುದೈತ್ಯನನ್ನು ಸಂಧಿಸಿ, ಸಮರದಲ್ಲಿ ಸಂಭವಿಸಿದ ಸಂಗತಿಯನ್ನೆಲ್ಲ ಅರಿಕೆಮಾಡಿಕೊಂಡರು. ಹಸ್ತ್ಯಶ್ವರಥಪದಾತಿ ಸಹಿತವಾದ ತನ್ನ ಪ್ರಚಂಡ ಸೇನೆಯು ಹತವಾಗಿ ಹೋದ ವೃತ್ತಾಂತವನ್ನು ಕೇಳಿದೊಡನೆಯೇ ॥೩೯॥

**ಅಮಾತ್ಯಾನ್ ಸರ್ವವೀರಾಂಶ್ಚ ಪ್ರೋವಾಚ ಯುದ್ಧಲಾಲಸಃ ।**
**ಸಿಂಧುರುವಾಚ :—**
**ಯೇ ಯೇ ಗಚ್ಛಂತಿ ಯೋದ್ಧಾರಸ್ತಾನ್ ಶೃಣೋಮಿ ಹತಾನ್ ಪರೈಃ ॥೪೦॥**
**ಇದಾನೀಂ ಯಾಮಿ ತಂ ಹಂತುಂ ಗುಣೇಶಂ ಚ ಸ್ವಯಂ ಬಲಾತ್ ।**
**ಕ ಉವಾಚ :—**
**ಇತ್ಯುಕ್ತ್ವಾ ಕ್ಷ್ವೇಡಿತೇನಾಸೌ ಗಗನಂ ಚ ದಿಶೋ ದಶ ॥೪೧॥**
**ನಾದಯಾಮಾಸ ತ್ರೀನ್ ಲೋಕಾನ್ ಗ್ರಸನ್ ಭೂ-ಸ್ವರ್ಗಮಂಡಲಮ್ ।**
**ಯೋಜಯಿತ್ವಾಕ್ಷಿಪದ್ಬಾಣಮಾಕರ್ಣಕರ್ಷಣಾಜ್ಜವಾತ್ ॥೪೨॥**

---

ಯುದ್ಧಲಾಲಸನಾದ ಸಿಂಧುದೈತ್ಯನು ತನ್ನ ಯುದ್ಧಮಂತ್ರಿಗಳನ್ನು ಮತ್ತು ಕಳೆದುಳಿದ ವೀರ ಯೋಧರನ್ನು ಸಮೀಪಕ್ಕೆ ಬರಮಾಡಿಕೊಂಡು, ಅವರನ್ನು ಕುರಿತು ಹೀಗೆಂದು ನುಡಿದನು.

ಸಿಂಧು :—

ವೀರಯೋಧರೆ ! ಈಗ ನಮ್ಮೆದುರು ಉಳಿದಿರುವುದು ಶತ್ರುಗಳನ್ನೆದುರಿಸುವುದೊಂದೇ ಕಾರ್ಯ. ಯಾರು ಯಾರು ಯುದ್ಧಮಾಡಲು ಹೋಗಿದ್ದರೋ, ಅವರೆಲ್ಲರೂ ಮೃತರಾದರೆಂದು ಕೇಳುತ್ತಿದ್ದೇನೆ. ಪ್ರಕೃತ ಯಾರು ಸನ್ನದ್ಧರಿರುವಿರೋ, ಮತ್ತು ಪ್ರಸಂಗ ಒದಗಿದರೆ, ಶತ್ರುಗಳ ಹೊಡೆತಕ್ಕೆ ಸಿಕ್ಕು ಸಾಯಲಿಕ್ಕೂ ಸಿದ್ಧರಿರುವಿರೋ ಅಂಥವರನ್ನು ನಾನು ಸ್ಪಷ್ಟವಾಗಿ ಕೇಳುತ್ತಲಿದ್ದೇನೆ ॥೪೦॥

ಇದೋ, ಆ ಗುಣೇಶನೊಂದಿಗೆ ಹೋರಾಡಿ, ಅವನನ್ನು ಬಲಾತ್ಕಾರದಿಂದ ಕೊಂದು ಬರುವುದಕ್ಕಾಗಿ ನಾನೇನೋ ಹೊರಟಿದ್ದೇನೆ. ಇಷ್ಟ ಉಳ್ಳವರು ನನ್ನ ಸಂಗಡ ಬರಬಹುದು.

ಬ್ರ

ಎಂದು ಘಟ್ಟಿಯಾಗಿ ಕೂಗಿ ಹೇಳಿ, ಒಮ್ಮೆ ತನ್ನ ಎರಡೂ ಕೈಗಳನ್ನು ಬಲವಾಗಿ ತಟ್ಟಿದನು. ಈ ಚಪ್ಪಾಳೆಗೆ ದಿಗಂತಗಳು ಗಡಗಡನೆ ನಡುಗಿ, ಅದನ್ನು ಗುಡುಗಿನ ರೂಪದಿಂದ ಅಂತರಿಕ್ಷದಲ್ಲಿ ಅಭಿವ್ಯಕ್ತಪಡಿಸಿದವು. ॥೪೧॥

ರಾಕ್ಷಸನು ತನ್ನ ಧನುಸ್ಸಿನ ಹುರಿಯನ್ನೊಮ್ಮೆ ಬಲವಾಗಿ ಹಿಡಿದೆಳೆದು ಟಂಕಾರವನ್ನುಮಾಡಿದನು. ಆ ಧ್ವನಿಯು ಬಹಳ ಕರ್ಕಶವಾಗಿದ್ದುದರಿಂದ-ಸ್ವರ್ಗ, ಭೂ-ಪಾತಾಳ ಲೋಕಗಳೂ ನಡುಗಿದವು. ಆ ಧನುಸ್ಸಿನಲ್ಲಿ ಅಸುರನು ಬಹು ತೀಕ್ಷ್ಣವಾದ ಒಂದು ಬಾಣವನ್ನು ಹೂಡಿದನು. ಅದರ ರೀತಿಯನ್ನು ನೋಡಿದರೆ, ಮೂರೂ ಲೋಕಗಳನ್ನು ಒಮ್ಮೆಲೇ ನುಂಗಿಬಿಡುವನೋ ಎಂಬಂತೆ ತೋರಿಬರುತ್ತಲಿದ್ದಿತು. ಬಾಣಸಂಯೋ

ಸೇನಾಯಾಂ ವೀರಭದ್ರಾದಿಪಾಲಿತಾಯಾಂ ಮಹಾಬಲೈಃ ।
ನಿರೀಕ್ಷ್ಯ ಸರ್ವವೀರಾನ್ ಸ ಬಾಣಂ ಧನುಷಿ ಸಂದಧೇ ॥೪೩॥
ಅಸ್ತ್ರಮಂತ್ರೇಣ ಸಹಸಾ ಶತಜಪ್ತೇನ ದೈತ್ಯರಾಟ್ ।
ಕೃಪೀಟಯೋನಿಃ ಸಹಸಾ ತಸ್ಮಾಜ್ಜಾತೋ ದದಾಹ ತಾಮ್ ॥೪೪॥
ದೇವಸೇನಾಂ ಚ ಪೃಥಿವೀಂ ಸ-ವನಾಂ ಚ ಸ-ಪರ್ವತಾಮ್ ।
ತತೋಽಪಶ್ಯನ್ ಸೈನಿಕಾಸ್ತೇ ದಹ್ಯಮಾನಾನ್ ಕೃಶಾನುನಾ ॥೪೫॥
ಪುರುಷಂ ವಹ್ನಿಸಂಭೂತಂ ಜಟಿಲಂ ದೀಪ್ತತೇಜಸಮ್ ।
ವಿದ್ಯುಜ್ಜಿಹ್ವಂ ಕರಾಲಾಸ್ಯಂ ಗಿಲಂತಂ ದೇವಸೈನಿಕಾನ್ ॥೪೬॥

---

ಜನೆಯಾದನಂತರ ಅದರ ತುದಿಯೊಂದಿಗೆ ಬಿಲ್ಲಿನ ಹುರಿಯನ್ನೂ ತನ್ನ ಕಿವಿಗಳ ವರೆಗೆ ಎಳೆದು ರಭಸದಿಂದ ಶತ್ರುಸೇನೆಯ ಮೇಲೆ ಎಸೆದನು. ॥೪೨॥

ಅಸುರನು ಆ ಅಂಬುವನ್ನು ಪ್ರಯೋಗಿಸುವುದಕ್ಕೆ ಮೊದಲು, ಮಹಾ ಬಲಿಷ್ಠರಾದ ವೀರಭದ್ರಾದಿ ದೇವ ವೀರರಿಂದ ಪಾಲಿತವಾದ ಸೇನೆ ಯಾವ ಸ್ಥಳದಲ್ಲಿರುವುದೋ ಅದನ್ನೂ ಮತ್ತು ವೀರರೆಲ್ಲ ಎಲ್ಲೆಲ್ಲಿ ನಿಂದಿರುವರೋ ಅದನ್ನೂ ಸೂಕ್ಷ್ಮವಾಗಿ ಗಮನಿಸಿದನು ॥೪೩॥

ಅಸ್ತ್ರಾಭಿಮಾನಿಯಾದ ದೇವತೆಯನ್ನು ಸಂತೋಷಪಡಿಸುವಂತಹ ದಿವ್ಯ ಮಂತ್ರವನ್ನು ಮನಃಪೂರ್ವಕವಾಗಿ ಒಂದು ನೂರು ಸಲ, ದೈತ್ಯರಾಜನು ಜಪಿಸಿದನು ಅಸುರನು ಅಸ್ತ್ರವನ್ನು ಪ್ರಯೋಗಿಸಿದುದೇ ತಡ, ಅದರಿಂದ ಪ್ರಚಂಡವಾದ ಅಗ್ನಿಜ್ವಾಲೆಯು ಒಮ್ಮೆಲೇ ಹೊರಹೊಮ್ಮಿ ದೇವಸೇನೆಯನ್ನೆಲ್ಲ ದಹಿಸಲಾರಂಭಿಸಿತು. ॥೪೪॥

ದೇವಸೇನೆಯನ್ನು ಆಹುತಿಯನ್ನಾಗಿ ತೆಗೆದುಕೊಳ್ಳತೊಡಗಿದ ವಹ್ನಿಯು ವನಗಳು, ಪರ್ವತಗಳು ಇತ್ಯಾದಿಗಳಿಂದ ಕೂಡಿದ ಇಡೀ ಪೃಥಿವಿಯನ್ನೇ ವ್ಯಾಪಿಸಿ ಸುಡತೊಡಗಿತು. ವ್ಯಾಸ! ಆ ಅಸ್ತ್ರದ ಪ್ರಭಾವವನ್ನು ಏನೆಂದು ಹೇಳಲಿ ? ಭಯಂಕರಾಕಾರದ ಒಬ್ಬ ರಾಕ್ಷಸನೇ ಅದರಿಂದ ಉದಿಸಿ ಬಂದನು. ಹಾಗೆ ಬಂದವನು ಅಗ್ನಿಯಿಂದ ದಹಿಸಿಹೋಗುತ್ತಲಿದ್ದ ದೇವತೆಗಳನ್ನು ಕೆಕ್ಕರಿಸಿ ನೋಡುತ್ತ ನಿಂತನು. ॥೪೫॥

ಅಗ್ನಿಸಂಭೂತನಾದ ರಾಕ್ಷಸನು ಉದ್ದವಾದ ಜಟೆಯಿಂದ ಕೂಡಿದ್ದನು. ಅವನ ದೇಹದ ಕಾಂತಿ ಎಲ್ಲರ ಕಣ್ಣುಗಳನ್ನೂ ಕುಕ್ಕುತ್ತಲಿದ್ದಿತು. ಅವನ ನೀಳವಾದ ನಾಲಿಗೆ ಮಿಂಚಿನಂತೆ ಚಂಚಲವಾಗಿಯೂ, ಅಷ್ಟೇ ಹೊಳೆಯುತ್ತಲೂ ಇದ್ದಿತು. ಅವನ ಮುಖ ಬಹಳ ಭಯಂಕರವಾಗಿದ್ದಿತು. ಅವನು ಕೈಗಳನ್ನು ಚಾಚಿ ಕೈಗೆ ಸಿಕ್ಕಿದಷ್ಟು ದೇವತೆಗಳನ್ನು ಒಂದೊಂದು ತುತ್ತಿಗೆ ನುಂಗಲಾರಂಭಿಸಿದನು. ॥೪೬॥

ಷಡಾನನಾದಯೋ ಭೀತಾ ದುದ್ರುವುಸ್ತೇ ದಿಶೋ ದಶ ।
ಯಂ ಯಂ ಸ ಭಕ್ಷತಿ ಸ್ಮಾಜೌ ಸ ಸ ಪ್ರಾಪ ಸ್ಮರನ್ಮೃದಾ ॥೪೭॥
ನಿಜಧಾಮ ಮಯೂರೇಶಮೇವಮುತ್ತಾಖಿಲಾ ಚಮೂಃ ।
ಯತೋ ಯತೋ ಯಾತಿ ಸೇನಾ ತತಸ್ತದ್ವಕ್ತ್ರಸಂಭವಃ ॥೪೮॥
ತನೂನಪಾದ್ದಹತ್ಯೇನಾಂ ಪ್ರಲಯಾಗ್ನಿರಿವ ಜ್ವಲನ್ ।
ಏವಂ ಸಾ ವಹ್ನಿನಾ ದಗ್ಧಾ ಮಯೂರೇಶಸ್ಯ ವಾಹಿನೀ ॥೪೯॥
ಧೂಮಾಂಧಕಾರೇ ಮಹತಿ ನ ಪ್ರಾಜ್ಞಾಯತ ಕಿಂಚನ ।
ತತಸ್ಸರ್ವೇ ಮಯೂರೇಶಪೃಷ್ಠಭಾಗಂ ಸಮಾಶ್ರಿತಾಃ ॥೫೦॥

---

ಇದುವರೆಗೆ ಎಂತೆಂತಹ ದೈತ್ಯರೊಡನೆ ಕಾದಾಡುವ ಪ್ರಸಂಗ ಅನೇಕ ಸಲ ಒದಗಿದ್ದಾಗ್ಯೂ, ವಿದ್ಯುಜ್ಜಿಹ್ವನಂತಹ ಭಯಂಕರಾಕಾರನನ್ನು ಅವರು ಕಂಡಿರಲಿಲ್ಲ. ಕೇಳಿಯೂ ಇರಲಿಲ್ಲ. ಇದ್ದಕ್ಕಿದ್ದಂತೆ ಎಂದೂ ಕಂಡು ಕೇಳಿ ಅರಿಯದ ಆ ರಾಕ್ಷಸನ ರೂಪವು ಷಡಾನನಾದಿಗಳಂತಹ ಧೈರ್ಯಶಾಲಿಗಳನ್ನೂ ನಡುಗಿಸಿ ಬಿಟ್ಟಿತು. ಅವರೆಲ್ಲ ಹೆದರಿ, ಹತ್ತು ದಿಕ್ಕುಗಳಿಗೂ ಓಡಿ ಹೋದರು. ಯುದ್ಧರಂಗದಲ್ಲಿ ವಿದ್ಯುಜ್ಜಿಹ್ವನು ಯಾರು ಯಾರನ್ನೆಲ್ಲ ನುಂಗಿದನೋ, ಅವರು ಅಂತ್ಯಕಾಲದಲ್ಲಿ ॥೪೭॥

ಪರಮಾತ್ಮಾ; ಮಯೂರೇಶನನ್ನು ಅನನ್ಯಭಾವದಿಂದ ಸ್ಮರಿಸುತ್ತ, ಮರಣಾನಂತರ ದೇವನ ಲೋಕಕ್ಕೆ ತೆರಳಿದರು. ಹೀಗೆಯೇ ಪ್ರತಿಯೊಬ್ಬ ಸೈನಿಕನೂ ಮಾಡುತ್ತ ಸದ್ಗತಿಯನ್ನು ಪಡೆದನು. ಬೆನ್ನಟ್ಟಿ ಬರುತ್ತಲಿದ್ದ ಬೆಂಕಿಗೆ ಬೆದರಿ, ಸೈನಿಕರು ತಪ್ಪಿಸಿಕೊಳ್ಳಲು ಎತ್ತಬೇಕಾದರೂ ಓಡಿಹೋಗಲಿ, ಆ ವಿದ್ಯುಜ್ಜಿಹ್ವನ ಬಾಯಿಯಿಂದ ಹೊರಟ ಅಗ್ನಿ ಅವರಿದ್ದ ಸ್ಥಳದವರೆಗೆ ವ್ಯಾಪಿಸಿ ॥೪೮॥

ಪ್ರಳಯಕಾಲದ ಅಗ್ನಿಯಂತೆ ಜಾಜ್ವಲ್ಯಮಾನವಾಗಿ ಉರಿಯುತ್ತ, ಆ ಸೇನೆಯನ್ನೆಲ್ಲ ದಹಿಸಿತು. ಈ ಪ್ರಕಾರ ಮಯೂರೇಶ್ವನ ಸೇನೆಯು ಆ ಅಗ್ನಿಜ್ವಾಲೆಗೆ ಸಿಲುಕಿ, ಸಂಪೂರ್ಣವಾಗಿ ದಹಿಸಿಹೋಯಿತು. ॥೪೯॥

ಎಲ್ಲಿ ನೋಡಿದರೂ ಹೊಗೆಯು ವ್ಯಾಪಿಸಿದ್ದರಿಂದ ಬೆಳಕೇ ಇಲ್ಲದಂತಾಗಿ ಕತ್ತಲು ಕವಿಯಿತು. ಅಲ್ಲಿ ಏನೇನು ನಡೆಯುತ್ತಲಿದೆ, ಎಂಬುದು ಸಹ ಯಾರಿಗೂ ತಿಳಿಯುವಂತಿರಲಿಲ್ಲ. ಆ ಸಮಯದಲ್ಲಿ ಕಳೆದುಳಿದ ದೇವತೆಗಳು ನಡುಗಿ “ ಮುಂದೇನು ಗತಿ ’ ಎಂದು ಆಲೋಚಿಸುತ್ತ ನೆಟ್ಟಗೆ ಓಡಿ ಬಂದು, ಮಯೂರೇಶ್ವರನ ಹಿಂಭಾಗದಲ್ಲಿ ಅಡಗಿ ನಿಂತು ॥೫೦॥

'ತ್ರಾಹಿ, ತ್ರಾಹೀ'ತಿ ಜಲ್ಪಂತೋ ದಗ್ಧಾಸ್ತೇ ಜಾತವೇದಸಾ ।
ಅನಿವಾರ್ಯಂ ಮಹಾಸ್ತ್ರಂ ತದ್ದೃಷ್ಟ್ವಾ ದೇವೋ ಮಯೂರರಾಟ್ ॥೫೧॥

ನಿಸ್ತೇಜಾಶ್ಚಿಂತಯಾಮಾಸ ಭೀತೋ ಲೋಕೇ ಲಘುತ್ವತಃ ।
'ಶಿವಃ ಪ್ರಸಾದಂ ಚೇತ್ಕುರ್ಯಾತ್ತದೈವಾತ್ರ ಜಯೋ ಭವೇತ್' ॥೫೨॥

ಇತ್ಯುಕ್ತ್ವಾ ಪರಶುಂ ಗೃಹ್ಯ ಮಂತ್ರಯಿತ್ವಾಕ್ಷಿಪದ್ಬಲಾತ್ ।
ಮಹಸಾ; ಜಿತಸೂರ್ಯಸ್ಸ ಗರ್ಜಯನ್ ಗಗನಂ ದಿಶಃ ॥೫೩॥

ಯಾತೋ ದಹನ್ ವೈರಿಸೇನಾಂ ಜಗತ್ಕಲ್ಪಾನಲೋ ಯಥಾ ।
ತಸ್ಮಾದಪಿ ಮಹಾನೇಕಃ ಪುರುಷಃ ಸಮಜಾಯತ ॥೫೪॥

' ದೇವ! ಈ ಬೆಂಕಿಯ ಕಾಟದಿಂದ ನಮ್ಮನ್ನು ಸಂರಕ್ಷಿಸು, ಈ ಅಗ್ನಿಯ ಜ್ವಾಲೆಗೆ ನಿನ್ನ ಸೇನೆ ಎಲ್ಲ ದಹಿಸಿ ಹೋಯಿತು ' ಎಂದು ಬಹು ಬಗೆಯಾಗಿ ಹಲುಬಲಾರಂಭಿಸಿದರು. ,ರಾಕ್ಷಸನು ಪ್ರಯೋಗಿಸಿದ ಮಹಾಸ್ತ್ರವನ್ನು ಮತ್ತಾವ ಅಸ್ತ್ರದಿಂದಲೂ ಉಪಸಂಹರಿಸಲಿಕ್ಕೆ ಸಾಧ್ಯವಿಲ್ಲವಾಗಿದ್ದುದರಿಂದ ಕ್ಷಣ ಕಾಲ ಮಯೂರೇಶ್ವರನು ಸಹ ಚಿಂತೆಗೊಳಗಾದನು. ॥೫೧॥

ಮಯೂರೇಶ್ವರನ ಮುಖದ ಮೇಲಿದ್ದ ಯುದ್ಧೋತ್ಸಾಹವೇ ಕುಂದಿ ಹೋದಂತಾಗಲು " ಇದನ್ನು ಪರಿಹರಿಸದೇ ಇದ್ದರೆ, ಲೋಕವೆಲ್ಲ ನನ್ನನ್ನು ನಿರ್ವೀರ್ಯನೆಂದು ಭಾವಿಸುವುದಲ್ಲ, ಮುಂದೇನು ಗತಿ ? " ಎಂದು ಮನಸ್ಸಿನಲ್ಲೇ ಸಂಕೋಚಪಟ್ಟನು. " ನನ್ನ ತಂದೆ; ಪರಮೇಶ್ವರನು ಅನುಗ್ರಹಿಸುವುದಾದರೆ, ಈ ಕ್ಷಣದಲ್ಲೇ ನನಗೆ ವಿಜಯ ದೊರೆಯುವುದರಲ್ಲಿ ಸಂದೇಹವಿಲ್ಲ " ॥೫೨॥

ಎಂದು ನುಡಿದು. ತನ್ನ ತೀಕ್ಷ್ಣಾಯುಧವಾದ ಪರಶುವನ್ನು ಕೈಯಿಗೆ ತೆಗೆದುಕೊಂಡನು. ಮತ್ತು ಅಸಾಧಾರಣ ಮಂತ್ರಗಳನ್ನುಚ್ಚರಿಸುತ್ತ ಆ ಪರಶುವನ್ನು ಮತ್ತಷ್ಟು ವೀರ್ಯವತ್ತರವನ್ನಾಗಿ ಮಾಡಿ, ತನ್ನ ದೈವೀ ಬಲವನ್ನೆಲ್ಲ ಉಪಯೋಗಿಸಿ ಅದನ್ನು ಅಸುರನು ಬಿಟ್ಟಿದ್ದ ಅಸ್ತ್ರದ ಮೇಲೆ ಪ್ರತಿಯಾಗಿ ಪ್ರಯೋಗಿಸಿದನು. ದೇವನ ಪರಶು ಮೊದಲೇ ,ಮಹಾತೇಜಸ್ವಿಯಾದುದು. ಆಗ ಅದನ್ನು ದೇವನು ಮಂತ್ರಪೂತವನ್ನಾಗಿಯೂ ಮಾಡಿದ್ದರಿಂದ ಅದರ ತೇಜವು ಸೂರ್ಯಮಂಡಲವನ್ನೂ ತಿರಸ್ಕರಿಸುವಂತಿದ್ದಿತು. ಪರಶು ಅಂತರಿಕ್ಷದಲ್ಲಿ ವೇಗಗತಿಯಿಂದ ಹೊರಟಾಗ ಭಯಂಕರವಾಗಿ ಗರ್ಜಿಸುತ್ತಲಿದ್ದುದರಿಂದ, ನಭೋಮಂಡಲ, ದಿಕ್ಕು ಇವೆಲ್ಲ ಪ್ರತಿಧ್ವನಿಯನ್ನು ಬೀರಿದವು. ॥೫೩॥

ವೈರಿಸೇನೆಯು ನಿಂದಿದ್ದೆಡೆಯನ್ನು ಮುಟ್ಟುವುದೇ ತಡ, ಪ್ರಳಯಾಗ್ನಿಯಂತೆ ಉರಿಯು ಬೆಳೆದು, ವೈರಿಸೇನೆಯನ್ನೆಲ್ಲ ದಹಿಸಿ ಭಸ್ಮವನ್ನಾಗಿ ಮಾಡತೊಡಗಿತು.

**ಯಸ್ಯಾಸ್ಯೇ ಸರ್ವ ಭೂ-ಗೋಲಃ ನಿಮ್ನಮಾಸ್ಯತಿ ಸಾಂಬರಃ ।**
**ಪುರುಷಃ ಪುರುಷೇಣಾಸಾವಸ್ತ್ರಮಸ್ತ್ರೇಣ ವೈ ತದಾ ॥೫೫॥**

**ಅಯುದ್ಧ್ಯತಾಂ ತತೋ ಜಗ್ಮುರ್ದ್ರಷ್ಟುಂ ದೇವರ್ಷಯಸ್ತದಾ ।**
**ದೈತ್ಯಾಸ್ತ್ರಂ ಭಕ್ಷಿತಂ ತೇನ ಕೃತಾಂತಾಸ್ತ್ರೇಣ ಸತ್ವರಮ್ ॥೫೬॥**

**ಯಯೌ ಸೇನಾಂ ಚ ನಿರ್ದಗ್ಧುಂ ಜ್ವಾಲಾಮಾಲೀವ ಹವ್ಯಭುಕ್ ।**
**ದೈತ್ಯರಾಜೋಽಪಿ ತಂ ದೃಷ್ಟ್ವಾ ಬಾಣವೃಷ್ಟಿಮವಾಸೃಜತ್ ॥೫೭॥**

**ಏಕಸ್ಮಾನ್ಮಂತ್ರಿತಾದ್ಬಾಣಾದನಂತಾ ನಿಃಸೃತಾಃ ಶರಾಃ ।**
**ದೇವಸೇನಾಚರಾಸ್ತೇಷು ನಿಮಗ್ನಾ ವೇಗಶಾಲಿನಃ ॥೫೮॥**

ಅಸುರನ ಅಸ್ತ್ರಪ್ರಭಾವದಿಂದ ವಿದ್ಯುಜ್ಜಿಹ್ವನಂತಹ ಬಲಿಷ್ಠ ರಾಕ್ಷಸನು ಉದ್ಭವಿಸಿ ಬಂದಂತೆ, ದೇವನು ಪ್ರತಿಯಾಗಿ ಪ್ರಯೋಗಿಸಿದ ಪರಶುವಿನ ಮಹಿಮೆಯಿಂದಲೂ ವಿದ್ಯುಜ್ಜಿಹ್ವನಿಗಿಂತ ಬಹಳ ಬಲಿಷ್ಠನಾದ ಮತ್ತೊಬ್ಬ ಭಯಂಕರಾಕಾರದ ಪುರುಷನು ಒಡಮೂಡಿದನು. ॥೫೪॥

ಗಂಭೀರ (ಅಳ) ವಾಗಿದ್ದ ಅವನ ಬಾಯಿಯಲ್ಲಿ ಇಡೀ ಭೂ-ಗೋಲ, ನಕ್ಷತ್ರ ಮಂಡಲದಿಂದ ಕೂಡಿದ ಅಂತರಿಕ್ಷ ಇವು ಅಡಗಿ ಹೋಗಬಹುದಾಗಿದ್ದವು. ಅಷ್ಟು ಚಿಕ್ಕದು, ಅವನ ಬಾಯಿ. ಹೊಸದಾಗಿ ಉದ್ಭವಿಸಿ ಬಂದ ಅತ್ಯದ್ಭುತ ಪುರುಷನು ಅಸುರನ ಅಸ್ತ್ರದಿಂದ ಈ ಪೂರ್ವದಲ್ಲಿ ಉದ್ಭವಿಸಿಬಂದ ವಿದ್ಯುಜ್ಜಿಹ್ವನೊಂದಿಗೆ ಕಾದಾಡಲು ಅನುವಾಗಿ ನಿಂತನು. ರಾಕ್ಷಸ, ಮಯೂರೇಶರು ಪ್ರಯೋಗಿಸಿದ ಅಸ್ತ್ರ-ಕುಠಾರಗಳು ಪರಸ್ಪರ ಕಡಿದಾಡತೊಡಗಿದವು. ॥೫೫॥

ಭಯಂಕರವಾದ ಆ ಯುದ್ಧವನ್ನು ನೋಡಲು, ದೇವರ್ಷಿಗಳೆಲ್ಲ ಬಂದು ನೆರೆದರು. ದೇವನು ಪ್ರಯೋಗಿಸಿದ ಅಸ್ತ್ರಕ್ಕೆ 'ಕೃತಾಂತಾಸ್ತ್ರ' ಎಂದು ಹೆಸರು. ರಾಕ್ಷಸನು ಪ್ರಯೋಗಿಸಿದ್ದ ಅಸ್ತ್ರಕ್ಕೆ 'ವಿದ್ಯುದಸ್ತ್ರ' ಎಂದು ಹೆಸರು. ಕೃತಾಂತಾಸ್ತ್ರವು ಅತಿವೇಗದಿಂದ ಮುನ್ನುಗ್ಗಿ, ಆ ದೈತ್ಯಾಸ್ತ್ರವನ್ನು ನುಂಗಿ ಬಿಟ್ಟಿತು. ॥೫೬॥

ಜ್ವಾಲೆಗಳ ಮಾಲೆಯಿಂದ ರಾರಾಜಿಸುವ ಪ್ರಚಂಡಾಗ್ನಿಯಂತೆ ಅದು ಉರಿಯಿತು. ಕೃತಾಂತಾಸ್ತ್ರವು ದೈತ್ಯನ ಸೇನೆಯನ್ನು ದಹಿಸಲಿಕ್ಕಾಗಿ ಹೊರಟು ಎಲ್ಲರನ್ನೂ ಸುಡಲಾರಂಭಿಸಿತು. ಇದನ್ನು ನೋಡಿದ ದೈತ್ಯರಾಜನು ಸ್ವಲ್ಪವೂ ವಿಲಂಬಮಾಡದೇ, ಆ ಅಸ್ತ್ರದ ಮೇಲೆ ಅತ್ಯಮೋಘಗಳಾದ ಬಾಣಗಳ ವೃಷ್ಟಿಯನ್ನು ಸುರಿಸಿದನು. ॥೫೭॥

ರಾಕ್ಷಸನು ಪ್ರಯೋಗಿಸಿದ ಪ್ರತಿಯೊಂದು ಬಾಣವೂ ಮಂತ್ರಿತವಾಗಿದ್ದುದರಿಂದ ಒಂದೊಂದು ಬಾಣವೂ ಲೆಖ್ಖವಿಲ್ಲದಷ್ಟು ಉಪ ಬಾಣಗಳನ್ನು ಸೃಜಿಸುತ್ತ

ಮಯೂರೇಶಃ ಕ್ರೋಧವಶಾನ್ನಾನಾಸ್ತ್ರಾಣಿ ತದಾಸೃಜತ್ ।
ತೈರಸ್ತ್ರೈರ್ದೈತ್ಯರಾಜಸ್ಯ ನಿರಸ್ಯಾಸ್ತ್ರಾಣಿ ಸರ್ವಶಃ ॥೫೯॥

ಅಭಕ್ಷಯದ್ದೈತ್ಯಸೇನಾಂ ಸ ಕಾಲಪುರುಷಃ ಪುನಃ ।
ಯತೋ ಯತಃ ಪಲಾಯಂತೇsಸುರಾಸ್ತತ್ರ ಚ ಯಾತಿ ಸಃ ॥೬೦॥

ಚಿಂತಾಕ್ರಾಂತಸ್ತತೋ ದೈತ್ಯಃ ಕರ್ತವ್ಯಂ ನಾಭ್ಯಪದ್ಯತ ।
ಕಿಂ ಕರ್ತವ್ಯಂ, ಕ್ವ ಗಂತವ್ಯಂ, ಕ್ವ ನ ಸ್ಥೇಯಮಚಿಂತಯತ್ ॥೬೧॥

ಅಸ್ತಂ ಯಾತೇ ದಿನಕರೇ, ಸ್ವಧಾಮ ಪ್ರತ್ಯಪದ್ಯತ ।
ಗಚ್ಛನ್ ಸ್ಖಲನ್ ಪತನ್ ಭೂಮೌ ನಷ್ಟಕುಂಡಲಭೂಷಣಃ ॥೬೨॥

---

ಲಿದ್ದಿತು. ಅವು ಬಹು ವೇಗವಾಗಿ ಬಂದು, ದೇವಸೇನಾಚರರಾದ ಸೈನಿಕರ ದೇಹಗಳನ್ನು ಪ್ರವೇಶಿಸಿ, ಹಿಂಸಿಸಲಾರಂಭಿಸಿದವು. ॥೫೮॥

ಆ ಅನಾಹುತವನ್ನು ಕಂಡು, ಮಯೂರೇಶನಿಗೆ ಬಹಳ ಕ್ರೋಧ ಉಂಟಾಯಿತು ಆಗ ದೇವನು ನಾನಾಬಗೆಯ ದಿವ್ಯಾಸ್ತ್ರಗಳನ್ನು ಸೃಜಿಸಿ, ದೈತ್ಯನು ಪ್ರಯೋಗಿಸಿದ ಅಸ್ತ್ರಗಳ ಮೇಲೆ ಪ್ರತಿಯಾಗಿ ಬಿಟ್ಟನು. ಅವು ಸರ್ವತ್ರ ವ್ಯಾಪೃತವಾಗಿದ್ದ ದೈತ್ಯ ನಿರ್ಮಿತ ಅಸ್ತ್ರಗಳನ್ನೆಲ್ಲ ನಿಮಿಷಮಾತ್ರದಲ್ಲಿ ನಿರಸನಮಾಡಿಬಿಟ್ಟವು ॥೫೯॥

ಇಷ್ಟಾದ ಕೂಡಲೆ, ಕೃತಾಂತಾಸ್ತ್ರದಿಂದ ಜನಿಸಿದ ಕಾಲಪುರುಷನಿಗೆ ಎಷ್ಟೋ ಬಿಡುಗಡೆಯಾದಂತಾಗಲು, ಮತ್ತೆ ದೈತ್ಯಸೇನೆಯನ್ನು ಭಕ್ಷಿಸಲಾರಂಭಿಸಿದನು. ಅವನಿಗೆ ಹೆದರಿ, ದೈತ್ಯಸೇನಾಚರರು ಸಂದಿ-ಮೂಲೆಗಳೆನ್ನದೇ ಎತ್ತೆತ್ತ ಓಡಿ ನಡೆದರೋ, ಕಾಲಪುರುಷನೂ ಅವರನ್ನು ಬೆನ್ನಟ್ಟಿ ಅಲ್ಲಿಗೆಲ್ಲ ಹೋದನು. ॥೬೦॥

ಆ ಅದ್ಭುತವನ್ನು ನೋಡಿ ಸಿಂಧುದೈತ್ಯನಿಗೆ ಮಂಕು ಹಿಡಿದು ಹೋಯಿತು. ಚಿಂತೆಯು ತಾನೇ ತಾನಾಗಿ ಅವನ ಮೆದುಳನ್ನು ಕೆಡಿಸಿತು. ಮುಂದೆ ಏನನ್ನು ಮಾಡಬೇಕೆಂಬುದೇ ಅವನಿಗೆ ಹೊಳೆಯಲೊಲ್ಲದು. 'ಯಾವ ಉಪಾಯವನ್ನು ಮಾಡಲಿ, ಎಲ್ಲಿಗೆ ಹೋಗಲಿ, ಎಲ್ಲಿ ನಿಲ್ಲಬಾರದು' ಎಂದು ಚಿಂತಿಸಲಾರಂಭಿಸಿದನು. ॥೬೧॥

ಅಷ್ಟರಲ್ಲಿ ಸೂರ್ಯನು ಅಸ್ತಮಿಸಲು, ದೈತ್ಯನಿಗೆ ತಲೆ ತಪ್ಪಿಸಿಕೊಳ್ಳಲಿಕ್ಕೆ ಸೊಗಸಾದ ಒಂದು ಸನ್ನಿವೇಶ ದೊರೆತಂತಾಯಿತು. ಯಾವ ಮಾತನ್ನೂ ಆಡದೇ, ಸದ್ದು-ಗದ್ದಲವಿಲ್ಲದಂತೆ ತನ್ನ ಶಿಬಿರಕ್ಕೆ ಹೋಗಿ ಅವಿತುಕೊಂಡನು. ಓಡಿ ಹೋಗುವ ಭರದಲ್ಲಿ ಅನೇಕಸಲ ಎಡವಿ ನೆಲಕ್ಕೆ ಉರುಳಿದನು. ಅವನು ಕಿವಿಯ ಸ್ಥಾನಗಳಲ್ಲಿ ಸೂಕ್ಷ್ಮವಾಗಿ ಕಟ್ಟಿಕೊಂಡಿದ್ದ ಕುಂಡಲಗಳು ಎಲ್ಲಿಯೋ ಬಿದ್ದು ಕಳೆದುಹೋಗಿದ್ದವು. ॥೬೨॥

ನಗರಂ ಪ್ರಾವಿಶದಸೌ ತತಃ ಶಂಭುರಿವಾಪರಃ ।
ಗುಪ್ತ ಏವಾವಸತ್ಕ್ವಾಪಿ ಸ್ತ್ರೀಣಾಂ ಚೈವಾನುಜೀವಿನಾಮ್ ॥೬೩॥

ಜಗರ್ಜ ಸಗಣೋ ದೇವೋ ಜ್ಞಾತ್ವಾ ತದ್ವೃತ್ತಮಾಶು ಸಃ ।
ತೇನ ನಾದೇನ ಸಹಸಾ ನಾದಿತಂ ಭುವನತ್ರಯಮ್ ॥೬೪॥

ಸಂಜಹಾರ ಕೃತಾಂತಾಸ್ತ್ರಂ ಮಂತ್ರವಿದ್ಭುಜಗಂ ಯಥಾ ।
ಸ್ವ ನಿವೇಶಂ ಜಗಾಮಾಶು ಮಯೂರೇಶೋ ಗಣೈರ್ವೃತಃ ॥೬೫॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಕೃತಾಂತಾಸ್ತ್ರೋಪಸಂಹರಣಂ' ನಾಮ್ಯೈಕವಿಂಶತ್ಯುತ್ತರಶತತಮೋಽಧ್ಯಾಯಃ ಸಮಾಪ್ತಃ

ಹಾಗೆಯೇ ಮುಂದೆ ಮುಂದೆ ದಾಟಿ, ಕೊನೆಗೆ ಗಂಡಕೀ ನಗರವನ್ನೂ ಪ್ರವೇಶಿಸಿದನು. ಆ ವೇಳೆಗೆ ಅವನು ಶಂಭುವಿನಂತೆ ಕಂಡನು(ಎಂದರೆ ಪರಮೇಶ್ವರನು ದಿಗಂಬರ. ಅವನಂತೆ ಇವನೂ ಉಡಲು ಬಟ್ಟೆ ಸಹ ಇಲ್ಲದೇ, ದಿಗಂಬರನಾಗಿದ್ದನೆಂದು ಅರ್ಥ.) ಯಾರಿಗೂ ; ವಿಶೇಷವಾಗಿ ಸ್ತ್ರೀ ಪರಿವಾರದವರಿಗೆ ಕಾಣಿಸಿಕೊಳ್ಳದಂತೆ ಒಂದು ಏಕಾಂತ ಸ್ಥಳದಲ್ಲಿ ಅಡಗಿ ಕುಳಿತು ಬಿಟ್ಟನು. ॥೬೩॥

ಅತ್ತ ರಣರಂಗದಲ್ಲಿದ್ದ ಮಯೂರೇಶ್ವರನು ದೈತ್ಯನು ಪರಾಜಿತನಾಗಿ ಓಡಿಹೋದುದನ್ನು ನೋಡಿ, ಘಟ್ಟಿಯಾಗಿ ಒಮ್ಮೆ ಗರ್ಜಿಸಿದನು. ದೇವನು ಸಿಂಹನಾದವನ್ನು ಮಾಡಿದುದನ್ನು ಕೇಳಿ ಗಣಗಳೆಲ್ಲ ಗರ್ಜಿಸಿದವು ಆ ಧ್ವನಿಯು ಭುವನತ್ರಯವನ್ನೂ ಪ್ರತಿನಾದಗೊಳಿಸಿತು. ॥೬೪॥

ಮಾಂತ್ರಿಕನು ತನ್ನ ಮಂತ್ರಶಕ್ತಿಯಿಂದ ಸರ್ಪವನ್ನು ನಿರ್ವೀರ್ಯಗೊಳಿಸುವಂತೆ ದೇವನು ಕೃತಾಂತಾಸ್ತ್ರವನ್ನು ಉಪಸಂಹರಿಸಿದನು. ಅನಂತರ ತನ್ನವರನ್ನೆಲ್ಲ ಸಂಗಡ ಕರೆದುಕೊಂಡು ತನ್ನ ಶಿಬಿರಕ್ಕೆ ತೆರಳಿದನು. ॥೬೫॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ಕೃತಾಂತಾಸ್ತ್ರೋಪಸಂಹಾರ' ಎಂಬಲ್ಲಿಗೆ ನೂರ ಇಪ್ಪತ್ತೊಂದನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ದ್ವಾವಿಂಶದುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಸಿಂಹಾಸನಸ್ಥೇ ದೇವೇಶೇ ಮಯೂರೇಶೇ ಗಣೈರ್ವೃತೇ ।**
**ಗೌತಮಾದ್ಯಾ ಮುನಿಗಣಾಃ ಪ್ರಶಶಂಸುರ್ಗಣೇಶ್ವರಮ್ ॥೧॥**

**ಋಷಯ ಊಚುಃ :—**

**ಯೇನ ಶಕ್ರೋ ಜಿತಃ ಸಂಖ್ಯೇ ನಾಗೈಃ ಶೇಷೋ ಧರಾತಲೇ ।**
**ತಸ್ಯ ಕಾ ಗಣನಾನ್ಯೇಷಾಂ ಸೋಽಪಿ ಯುದ್ಧೇ ಜಿತಸ್ತ್ವಯಾ ॥೨॥**
**ರಕ್ಷಿತಾ ಬಹವಸ್ತಸ್ಮಾತ್ಸಿಂಧೋರ್ದುಷ್ಟಾತ್ಸುರೇಶ್ವರ ! ।**
**ಗಣಾನಾಂ ಸರ್ವಲೋಕಾನಾಮನ್ಯಥಾ ಜೀವನಂ ಕಥಮ್ ? ॥೩॥**

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೨೨ ನೆಯ ಅಧ್ಯಾಯ

ಬ್ರಹ್ಮಾ:—

ವಿಜಯಿಯಾಗಿ ತನ್ನ ಶಿಬಿರಕ್ಕೆ ಬಂದ ಮಯೂರೇಶ್ವರನು ಸಿಂಹಾಸನದ ಮೇಲೆ ಮಂಡಿಸಿದ್ದನು. ಪರಿವಾರದವರಾದ ಪ್ರಮಥಗಣದವರು, ಷಡಾನನ ಮೊದಲಾದ ವೀರರು ಇವರೆಲ್ಲ ದೇವನನ್ನು ಸುತ್ತುವರೆದು ಕುಳಿತಿದ್ದರು. ಆ ವೇಳೆಗೆ ಸರಿಯಾಗಿ ಗೌತಮಾದಿ ಮುನಿ ಸಮುದಾಯವು ದೇವನ ಸನ್ನಿಧಿಗೆ ಬಂದು, ಮಯೂರೇಶ್ವರನನ್ನು ಹೀಗೆಂದು ಸ್ತುತಿಸಲಾರಂಭಿಸಿದರು. ॥೧॥

ಋಷಿಗಳು :—

ಯಾರು ಮಹೇಂದ್ರನನ್ನೇ ಸೋಲಿಸಿದ್ದನೋ; ಅನೇಕ ವಿಷಮಯ ಸರ್ಪ ಪರಿವಾರದಿಂದ ಪರಿವೃತನಾದ ಆದಿಶೇಷನನ್ನೂ ಪರಾಜಯಗೊಳಿಸಿದ್ದನೋ, ಅವನಿಗೆ ಭೂಲೋಕದವರ ಗಣನೆಯೇ ಇರಲಿಲ್ಲ. 'ಬಲಿಷ್ಠನಾದ ಅಂತಹ ದುಷ್ಟ ದೈತ್ಯ ; ಸಿಂಧುವನ್ನು ದೇವ ! ನೀನು ಇಂದು ಪರಾಜಯಗೊಳಿಸಿಬಿಟ್ಟಿರುವೆ ॥೨॥

ಸಿಂಧುವಿಗಾಗಿ ಹೆದರಿ ಅನೇಕರು "ಜೀವಿಸುವ ಬಗೆ ಹೇಗೆ ?" ಎಂದು ಚಿಂತಿಸುತ್ತಲಿದ್ದರು. ಸುರೇಶ್ವರ ! ನೀನು ಅಂಥವರನ್ನೆಲ್ಲ ರಕ್ಷಿಸಿದೆ. ನೀನು

**ಕ ಉವಾಚ :—**
**ಇತ್ಥಂ ತೇಷು ವದತ್ಸ್ವೇವ ತತ್ಕೀರ್ತಿಂ ಗಿರಿಜಾಯಯೌ ।**
**ಆಲಿಂಗ್ಯ ಪ್ರಾಹ ಪುತ್ರಂ ಸಾ**
**ಗಿರಿಜೋವಾಚ :—**
**ಶ್ರಾಂತೋಽಸಿ ಯುದ್ಧಲಾಲಸಃ ॥೪॥**
**ಕ ಉವಾಚ :—**
**ತತಃ ಶೀಘ್ರಂ ಸಮಾಯಾತೋ ಭರ್ಗೋ ದೇವಂ ಸಸ್ವಜೇ ।**
**ಉವಾ —**
**ಶಿವ ಉವಾಚ :—**
**ಚೇಂದ್ರಾದಿಭಿರ್ದೇವೈರಸಾಧ್ಯಂ ಕೃತವಾನಸಿ ॥೫॥**
**ಪರಬ್ರಹ್ಮಸ್ವರೂಪಸ್ಯ ಚರಾಚರಗುರೋರಪಿ ।**
**ಸರ್ವಜ್ಞಸ್ಯ ಧರಾಭಾರೋದ್ಧರಣೇ ನಿರತಸ್ಯ ತೇ ॥೬॥**

---

ರಕ್ಷಿಸದೇ ಇದ್ದಿದ್ದರೆ, ಈ ಗಣಗಳಿಗೂ, ಹೆಚ್ಚೇನು? ಸರ್ವಲೋಕಕ್ಕೂ ಸಂರಕ್ಷಕರಾರಿದ್ದರು? ॥ ೩ ॥

ಬ್ರಹ್ಮ :—

ಋಷಿಗಳು ಮುಕ್ತಕಂಠದಿಂದ ದೇವನ ಸತ್ಕೀರ್ತಿಯನ್ನು ಹೀಗೆ ವರ್ಣಿಸುತ್ತಿರುವಷ್ಟರಲ್ಲಿ ಜಗನ್ಮಾತೆ, ಗಿರಿಜೆಯು ಆ ಸ್ಥಳಕ್ಕೆ ಬಂದಳು. ಮಗನನ್ನು ಪ್ರೀತಿಯಿಂದ ದೃಢವಾಗಿ ಅಪ್ಪಿಕೊಂಡಳು. ವಾತ್ಸಲ್ಯವು ಉಕ್ಕಿ ಬಂದುದರಿಂದ ಅವನನ್ನು ನೇವರಿಸುತ್ತ ಹೀಗೆಂದು ಬಣ್ಣಿಸಿದಳು.

ಗಿರಿಜೆ :—

ಪುತ್ರ! ಇದುವರೆಗೆ ಯುದ್ಧದಲ್ಲಿ ಆಸಕ್ತನಾಗಿದ್ದ ನೀನು, ಬಹಳ ಆಯಾಸಗೊಂಡಿರುವೆ. ॥೪॥

ಬ್ರಹ್ಮ :

ಅಷ್ಟರಲ್ಲಿ ಪರಶಿವನು ಓಡುತ್ತ ಬಂದು, ಮಯೂರೇಶ್ವರನನ್ನು ಪ್ರೇಮದಿಂದ ಆಲಿಂಗಿಸಿಕೊಂಡನು. ಮತ್ತು ಹೀಗೆಂದು ದೇವನನ್ನು ಬಣ್ಣಿಸಿದನು.

ಶಿವ :—

ಮೂವತ್ತು ಮೂರು ಕೋಟಿ ದೇವತೆಗಳಿಂದ ಕೂಡಿದ ದೇವೇಂದ್ರನಿಗೆ ಕೂಡ ಯಾರನ್ನು ಜಯಿಸುವುದು ಅಸಾಧ್ಯವಾಗಿದ್ದಿತೋ, ಅಂಥವನನ್ನು ಗಣಪತೇ! ನೀನು ಜಯಿಸಿರುವೆ. ॥೫॥

ಸಚ್ಚಿದಾನಂದಸ್ವರೂಪವೆನಿಸುವ ಪರಬ್ರಹ್ಮವಸ್ತುವೇ ನೀನು. ಚರಾಚರ ಜೀವವರ್ಗಕ್ಕೆಲ್ಲ ಮಾರ್ಗದರ್ಶಕ; ಗುರುವಾಗಿರುವೆ. ಸರ್ವಸ್ವವನ್ನೂ ಸ್ಪಷ್ಟವಾಗಿ

ಮಹಿಮಾನಂ ಸ್ವರೂಪಾಣಿ ಬ್ರಹ್ಮಾದ್ಯಾ ನ ವಿದುಃ ಸುರಾಃ ।
ಗೌತಮಾದ್ಯಾಶ್ಚ ಮುನಯಃ ಶಕ್ತಿಃ ಕಾ ತತ್ರ ನೋ ಭವೇತ್ ? ॥೭॥
ಕ ಉವಾಚ :—
ಇತ್ಥಂ ವದತಿ ದೇವೇಶೇ ಶಿವೇಽಥ ಪಾರ್ವತೀಂ ಜಗೌ ।
ನಾರದೋ ಮುನಿವರ್ಯೋಽಸೌ
ನಾರದ ಉವಾಚ :—
ಮಾತಃ ! ಶ್ರುಣು ವಚೋ ಮಮ ॥೮॥
ಬಹವೋ ವಾಸರಾ ಜಾತಾ ಅತ್ರಸ್ಥಾನೇ ಕದಾ ಶಿವೇ !
ಮೋಕ್ಷಮೇಷ್ಯತಿ ದೈತ್ಯೋಽಸೌ ಸಿಂಧುರ್ದುಷ್ಟತಮೋಽನಘೇ ! ॥೯॥
ಕದಾ ವಿವಾಹೋ ಭವಿತಾ ಮಯೂರೇಶಸ್ಯ ಸುವ್ರತೇ ! ।
ವಾಸವಾದ್ಯಾ ಜಿತಾ ಯೇನ ನಾಶಂ ಸ ಕಥಮೇಷ್ಯತಿ ? ॥೧೦॥

ತಿಳಿದವನು ನೀನು. ಭೂಮಿಯ ಭಾರವನ್ನು ಇಳಿಸುವುದಕ್ಕಾಗಿಯೇ ನೀನು ಅವತರಿಸಿರುವೆ. ಇಂತಹ ನಿನಗೆ ಇದಾವ ಅಗಾಧವಾದ ಕೆಲಸವೆನಿಸೀತು ? ॥೬॥

ನಿನ್ನ ಮಹಿಮೆ, ವಾಸ್ತವ ಸ್ವರೂಪ ಇವನ್ನು ಬ್ರಹ್ಮಾದಿ ದೇವತೆಗಳು ಸಹ ಅರಿಯಲಾರರು. ಸರ್ವಜ್ಞರೆನಿಸಿದ ತಪಸ್ಸಿದ್ಧ ಗೌತಮಾದಿ ಮಹರ್ಷಿಗಳಿಗೂ ಇವನ್ನು ತಿಳಿಯುವಷ್ಟು ಶಕ್ತಿ ಇರುವುದಿಲ್ಲ. ಎಂದ ಮೇಲೆ ನಮ್ಮ ವಾಡೇನು ? ॥೭॥

ಬ್ರಹ್ಮ :—

ಪರಶಿವನು ಹೀಗೆಂದು ಪಾರ್ವತೀನಂದನನನ್ನು ವರ್ಣಿಸುತ್ತಿರಲು. ಕದನ ಕುತೂಹಲಿಯಾದ ನಾರದ ಮುನಿವರನು ಅಲ್ಲಿಗೆ ಬಂದನು. ಮತ್ತು ಪಾರ್ವತೀ ದೇವಿಯನ್ನು ಕುರಿತು ಹೀಗೆಂದು ನುಡಿದನು.

ನಾರದ :—

ತಾಯೇ ! ಇತ್ತ ತಿರುಗು. ನಾನಾಡುವ ಮಾತುಗಳನ್ನು ಸ್ವಲ್ಪ ಲಾಲಿಸು. ॥೮॥

ಪರಶಿವೆ ! ಈ ಊರಿನ ಅಂಚಿಗೆ ಬಂದು, ಎಷ್ಟೋ ದಿವಸಗಳು ಕಳೆದವು ? ಪುಣ್ಯಶೀಲಳೆ ! ಈ ದುಷ್ಟದೈತ್ಯ; ಸಿಂಧು ಸತ್ತು ಮೋಕ್ಷವನ್ನು ಹೊಂದುವುದು ಎಂದಿಗೋ ಗೊತ್ತಾಗುತ್ತಿಲ್ಲದು. ॥೯॥

ರಾಕ್ಷಸನನ್ನು ವಧಿಸಿದ ಮೇಲಷ್ಟೇ, ದೇವತೆಗಳು ಬಂಧವಿಮುಕ್ತರಾಗುವುದು ? ಅದಾದ ಮೇಲೆ ತಾನೆ, ಸುವ್ರತೆ ! ಮಯೂರೇಶ್ವರನ ವಿವಾಹವಾಗುವುದು ? ಎಂದ ಮೇಲೆ ಇದು ಶೀಘ್ರದಲ್ಲಿ ನಡೆಯತಕ್ಕ ಕೆಲಸವೆಂದು ನನಗಂತೂ ತೋರುವುದಿಲ್ಲ. ಏತಕ್ಕೆಂದರೆ, ಸಿಂಧುದೈತ್ಯನು ಸಾಮಾನ್ಯ ರಾಕ್ಷಸರಂತಲ್ಲ. ಮಹಾಬಲಿಷ್ಠ. ಇಂದ್ರಾದಿ

**ಆಜ್ಞಾಂ ದೇಹಿ ಗಮಿಷ್ಯಾಮಃ ಪುನರೇಷ್ಯಾಮ ಸತ್ವರಮ್ ।**
**ಕದಾ ಸ್ಯಃ ಸಿಂಧುದೈತ್ಯಾತ್ತೇ ದೇವಾಶ್ಚ ಮುಕ್ತಬಂಧನಾಃ ॥೧೧॥**
**ದೈತ್ಯಸ್ಯ ಮರಣಂ ಮಾತರಸಾಧ್ಯಂ ದೃಶ್ಯತೇ ಮಯಾ ।**
**ಕ ಉವಾಚ :—**
**ಸುರರ್ಷೇರ್ವಾಕ್ಯಮಾಕರ್ಣ್ಯ ಪ್ರೋಚುಸ್ತಂ ತೇ ಗಣಾಸ್ತದಾ ॥೧೨॥**
**ಷಡಾನನಾದಯೋ ವೀರಾ ನಾರದಂ ದೇವದರ್ಶನಮ್ ।**
**ಉದ್ದೀಪಯಂತಂ ತಂ ದೇವಂ ಮಯೂರೇಶಂ ಸುರೇಶ್ವರಮ್ ॥೧೩॥**

---

ದೇವೋತ್ತಮರು ಸಹ ಅವನನ್ನು ಎದುರಿಸಲಾರದೆ, ಪರಾಜಿತರಾಗಿ ಅವನ ಬಂಧನದಲ್ಲಿ ಬಿದ್ದು ಇಂದಿಗೂ ಕೊಳೆಯುತ್ತಲಿದ್ದಾರೆ. ಇಂತಹ ಬಲಿಷ್ಠನು ಅಷ್ಟು ಸುಲಭವಾಗಿ ನಾಶವಾಗೋಣವೆಂದರೇನು ? ॥೧೦॥

ಏನಾದರೂ ಆಗಲಿ, ಹೆಚ್ಚಿನ ಪ್ರಸಂಗ ನಮಗೇಕೆ ಬೇಕಾಗಿದೆ? ನಮ್ಮ ಕೆಲಸ ವೇನೋ, ಅದನ್ನು ನಾವು ಗಮನಿಸಿದರೆ ಸಾಕಾಗಿದೆ. ಪ್ರಕೃತ ನಮಗೆ ಅನುಜ್ಞೆಯನ್ನು ಕೊಡು, ನಾವು ಹೋಗಿಬರುತ್ತೇವೆ. ಮಯೂರೇಶ್ವರನು ಸಿಂಧುವನ್ನು ನಾಶಗೊಳಿಸಿ, ದೇವತೆಗಳನ್ನು ಎಂದಿಗೆ ಬಿಡುಗಡೆ ಮಾಡುವನೋ, ಆ ವೇಳೆಗೆ ಸರಿಯಾಗಿ ನಾವು ನಿಮ್ಮ ಸನ್ನಿಧಿಗೆ ಧಾವಿಸಿ ಬರುತ್ತೇವೆ. ॥೧೧॥

ತಾಯೇ ! ಮೊದಲಿಗೇ ನಾನು ಹೀಗೆ ಅಮಂಗಲವನ್ನು ನುಡಿಯುತ್ತೇನೆಂದು ನನ್ನ ಮೇಲೆ ಸಿಟ್ಟಾಗಬೇಡ. ಸಿಂಧುವಿನಂತಹ ಪ್ರಬಲ ದೈತ್ಯನು ಮರಣವನ್ನು ಹೊಂದುವುದು ಅತ್ಯಸಾಧ್ಯವೆಂದೇ ನನಗೇನೋ ತೋರುತ್ತದೆ.

ಬ್ರಹ್ಮಾ:—

ಸುರರ್ಷಿ ; ನಾರದನು ಆಡಿದ ಆ ನಿಷ್ಠುರ ಮಾತುಗಳನ್ನು ಕೇಳಿ, ಪ್ರಮಥರು ಮುನಿಯನ್ನು ಕುರಿತು ಅನೇಕ ಬಗೆಯಿಂದ ಸಮಾಧಾನ ಹೇಳಿದರು. ॥೧೨॥

ಅನಂತರ ಷಡಾನನ ಮೊದಲಾದ ವೀರರು ಸಾಕ್ಷಾತ್ಪುರಾಣಪುರುಷ; ಪರಮಾತ್ಮನಂತೆ ತೋರುವ ನಾರದನನ್ನು ಕುರಿತು ಹೀಗೆಂದು ನುಡಿದರು. ಕದನ ಕುತೂಹಲಿಯಾದ ನಾರದನಿಗೆ ಯುದ್ಧ ಪ್ರಕರಣವು ಪ್ರಕೃತ ಸಾಮಾನ್ಯವಾದ ರೀತಿಯಲ್ಲಿ ನಡೆಯುತ್ತಲಿರುವುದು, ಸೊಗಸೆನಿಸಲಿಲ್ಲ. ಸಿಂಧು ಪರಾಜಿತನಾಗಿ ಹೋದುದನ್ನರಿತು, ದಯಾಳುವಾದ ದೇವನು ದೈತ್ಯನನ್ನು ಮನ್ನಿಸಿ ಬಿಡಬಾರದೇಕೆ? ಹೀಗಾದರೆ, ಸೋತು ಹೋಗಿ ಇಂದು ನಮ್ರನಂತೆ ತೋರಿ ಬರುವ ಈ ದೈತ್ಯನು, ಸ್ವಲ್ಪ ರೆಕ್ಕೆ-ಪುಕ್ಕಗಳು ಬೆಳೆದ ಬಳಿಕ ಸಾಧು-ಸಜ್ಜನರನ್ನೂ, ದೇವತೆಗಳನ್ನೂ ಪೀಡಿಸದೆ ಬಿಟ್ಟಾನೆಯೇ? ಇವನನ್ನು ಈಗ ಕೊಲ್ಲಿಸದೇ ಹೀಗೆಯೇ ಬಿಟ್ಟರೆ, ಆಗ ಇಂದಿಗಿಂತಲೂ ದ್ವಿಗುಣಿತವಾಗಿ ಪೀಡಿಸಿಯಾನು. ಕೈಗೆ ಸಿಲುಕಿದ ವೇಳೆಯಲ್ಲೇ ಇವನನ್ನುಮುಕ್ತಾಯಗೊಳಿಸಿಬಿಟ್ಟರೆ, ಯಾರಿಗೂ ಯಾವ ವಿಧವಾದ ತೊಂದರೆಯೂ ಇರುವುದಿಲ್ಲವಾದುದರಿಂದ ಆದಷ್ಟು

**ವೀರಾ ಊಚುಃ :—**

**ಆಶ್ಚರ್ಯಂ ನಾರದಮುನೇ ! ಸರ್ವಜ್ಞಸ್ಯಾಪಿ ತೇಽನಘ ! ।**
**ಏತದರ್ಥಂ ಸಮಾಯಾತೋ ನಿಜಧಾಮ್ನೋ ಭುವಂ ವಿಭುಃ ॥೧೪॥**

**ಅವಾಪ್ತಸಕಲಾರ್ಥೋಽಸೌ ಮಯೂರೇಶೋಽಖಿಲಾರ್ಥಕೃತ್ ।**
**ಅಗುಣಸ್ಯ ಗುಣೇಶಸ್ಯ ಗುಣಕ್ಷೋಭವಿಧಾಯಿನಃ ॥೧೫॥**

**ಸ್ವರೂಪಂ ಕಿಂ ನ ಜಾನಾಸಿ ? ಬ್ರಹ್ಮಾದ್ಯೈರನಿರೂಪಿತಮ್ ।**
**ಮಯೂರೇಶಸ್ಯ ವೀರ್ಯಂ ಚ ಭೂ-ಭಾರೋತ್ತಾರಣೈಷಿಣಃ ॥೧೬॥**

**ಇಂದ್ರಾದ್ಯವಧ್ಯಾನಸುರಾನ್ನಿಘ್ನತೋ ಬಲಶಾಲಿನಃ ।**
**ಅನೇಕಕೋಟಿಬ್ರಹ್ಮಾಂಡನಾಯಕಸ್ಯಾಖಿಲಾತ್ಮನಃ ॥೧೭॥**

ಚುಚ್ಚು ಮಾತುಗಳನ್ನಾಡಿ ದೇವದೇವನ ಅಭಿಮಾನವನ್ನು ಕೆರಳಿಸಿ, ಕೂಡಲೇ ಸಿಂಧು ದೈತ್ಯನನ್ನು ದೇವನು ಸಿಟ್ಟಿನಿಂದ ಕೊಂದುಹಾಕಬೇಕು ಹಾಗೆ ಮಾಡಿಸಲೋಸುಗ ದೇವನ ಕ್ರೋಧಾಗ್ನಿಯನ್ನು ಈ ರೀತಿ ಉದ್ದೀಪನ ಗೊಳಿಸಿದನು. ||೧೩||

ವೀರರು :

ನಾರದಮುನೆ ! ನಿನ್ನ ಮಾತುಗಳನ್ನು ಕೇಳಿ, ನಮಗೆ ಬಹಳ ಆಶ್ಚರ್ಯವೆನಿಸುತ್ತದೆ. ಪಾಪರಹಿತನೆ ! ನೀನು ಸರ್ವಜ್ಞನಾದವನು. ವಿಭುವಾದ ದೇವನು ತನ್ನ ಆನಂದಧಾಮವನ್ನು ಬಿಟ್ಟು, ಭೂಲೋಕದಲ್ಲಿ ಖಂಡರೂಪದಿಂದ ಅವತರಿಸಿ ಬಂದುದು ಈ ರಾಕ್ಷಸನನ್ನು ನಿಗ್ರಹಿಸುವುದಕ್ಕಾಗಿಯಲ್ಲವೇ ? ಈ ವಿಷಯ ನಿನಗೆ ತಿಳಿಯದೇನು ? ||೧೪||

ದೇವನಿಗೆ ಹೊಸದಾಗಿ ಲಭಿಸಬೇಕಾದಂತಹ ವಸ್ತು ಈ ಲೋಕದಲ್ಲೆಲ್ಲಾದರೂ ಇರುವುದೇನು ? ಮಯೂರೇಶ್ವರನು ನಿತ್ಯಾಪ್ತಕಾಮನು ಜನರ ಸಕಲಾಭೀಷ್ಟಗಳನ್ನೂ ನೆರವೇರಿಸಿಕೊಡತಕ್ಕವನು. ಇವನಿಗೆ ಸತ್ತ್ವ ರಜಸ್ತಮೋಗುಣಗಳ ಸಂಪರ್ಕವಿರುವುದಿಲ್ಲ. ಸ್ವಭಿನ್ನರಲ್ಲಿ ಆ ಗುಣಗಳನ್ನು ಕ್ಷೋಭೆಗೊಳಿಸಿ, ತನ್ಮೂಲಕ ಪ್ರಾಣಿಗಳಿಂದ ಕೆಲಸಗಳನ್ನು ಮಾಡಿಸತಕ್ಕವನು ||೧೫||

ದೇವನ ಸ್ವರೂಪವು ಬ್ರಹ್ಮಾದಿಗಳಿಂದಲೂ ನಿರೂಪಿಸಲಿಕ್ಕೆ ಸಾಧ್ಯವಲ್ಲದ್ದು ಎಂಬುದನ್ನು ನೀನು ಅರಿಯೆಯಾ ? ಭೂ-ಭಾರವನ್ನು ಇಳಿಸುವುದಕ್ಕೋಸ್ಕರವೇ ಅವತಾರವನ್ನೆತ್ತಿದ ಮಯೂರೇಶನ ವೀರ್ಯ ಸಾಮಾನ್ಯವಾದುದೇ ? ಹೀಗೇಕೆ ಏನನ್ನೂ ಅರಿಯದವನಂತೆ ಮಾತನಾಡುತ್ತಿರುವೆ ? ||೧೬||

ಸಿಂಧು ದೈತ್ಯನು ಇಂದ್ರಾದಿಗಳಿಗೂ ಅವಧ್ಯನಾದವನು, ಆದುದರಿಂದಲೇ ಅವನನ್ನು ಕೊಲ್ಲುವುದು ಅಸಾಧ್ಯವೆಂದು ತೋರುತ್ತದೆ ಎಂದಲ್ಲವೇ, ನೀನು ನುಡಿದೆ ?

**ಉತ್ಪತ್ತಿ-ಸ್ಥಿತಿಸಂಹಾರಕಾರಿಣೋ ಜಗತಾಮಪಿ ।**
**ಕ ಉವಾಚ :—**
**ಇತಿ ತದ್ಭಾರತೀಂ ಶ್ರುತ್ವಾ ಪುನಃ ಪ್ರೋವಾಚ ನಾರದಃ ॥೧೮॥**
**ನಾರದ ಉವಾಚ :—**
**ಯದಾ ದ್ರಕ್ಷ್ಯಾಮಿ ತಂ ದೈತ್ಯಂ ನಿಹತಂ ಮುಕ್ತಿಮಾಗತಮ್ ।**
**ತದಾ ಸರ್ವಂ ವಚಃ ಸತ್ಯಂ ಮನ್ಯೇಽಹಂ ನಾನ್ಯಥಾ ಕ್ವಚಿತ್ ॥೧೯॥**
**ಕ ಉವಾಚ :—**
**ನಿಶಮ್ಯೇತ್ಥಂ ವಚಸ್ತಸ್ಯ ಚುಕ್ರೋಧ ಸ ಮಯೂರರಾಟ್ ।**

ನೋಡು, ಇಂದ್ರಾದಿಗಳಿಂದ ವಧಿಸಲಾಗದಂತಹ ಎಷ್ಟೋ ಮಂದಿ ರಕ್ಕಸರನ್ನು ದೇವನು ಕೇವಲ ಲೀಲೆಯಿಂದಲೇ ನಿಗ್ರಹಿಸಿಲ್ಲವೆ? ಎಂದ ಮೇಲೆ, ಇವನ ಬಲವೆಷ್ಟಿದೆ ಎಂಬುದನ್ನು ತಿಳಿದುಕೋ. ದೇವನು ಅನೇಕ ಕೋಟಿ ಬ್ರಹ್ಮಾಂಡಗಳಿಗೆ ನಾಯಕನಾಗಿದ್ದಾನೆ. ಸಕಲರ ಹೃದಯ ಗುಹೆಯಲ್ಲೂ ಅವರಿಗೆ ಅಂತರಾತ್ಮನಾಗಿ ನೆಲೆಸಿದ್ದಾನೆ. ॥೧೭॥

ಈ ಎಲ್ಲ ಬ್ರಹ್ಮಾಂಡಗಳಿಗೂ ಉತ್ಪತ್ತಿ, ಸ್ಥಿತಿ ಹಾಗೂ ಲಯಗಳನ್ನು ಮಾಡತಕ್ಕವನಿವನು.

ಬ್ರಹ್ಮಾ :—

ಗಣವೀರರಾಡಿದ ಮಾತುಗಳನ್ನು ಕೇಳಿ, ನಾರದನು ದೇವನ ಅಭಿಮಾನವನ್ನು ಮತ್ತಷ್ಟು ಕೆಣಕಿ, ದೇವತೆಗಳ ಕಾರ್ಯವನ್ನು ಆದಷ್ಟು ಬೇಗನೆ ಸಾಧಿಸುವುದಕ್ಕಾಗಿ, ಹೀಗೆಂದು ಅವರಿಗೆ ಪ್ರತ್ಯುತ್ತರಿಸಿದನು. ॥೧೮॥

ನಾರದ :—

ಯಾರು ಎಷ್ಟೇ ಪರಿಯಿಂದ ಬೇಕಾದರೂ ವರ್ಣಿಸಿರಿ. ಈ ಬರೀ ಮಾತುಗಳಿಂದ ನನಗಂತೂ ವಿಶ್ವಾಸ ಹುಟ್ಟುವುದಿಲ್ಲ. ಸಿಂಧುದೈತ್ಯನು ಹತನಾದುದನ್ನು ನಾನು ನನ್ನ ಕಣ್ಣುಗಳಿಂದ ಕಾಣುವಂತಾಗಬೇಕು. ಮತ್ತು ಅಸುರನು ಪುನರುಜ್ಜೀವನವನ್ನು ಹೊಂದದಂತೆ ಆತ್ಯಂತಿಕ ಮುಕ್ತಿಯನ್ನೇ ಹೊಂದಿ ಬಿಡಬೇಕು. ಆಗ ಮಾತ್ರ ನೀವಾಡಿದ ಈ ವರ್ಣನೆಯ ಮಾತುಗಳನ್ನು ನಾನು ನಿಜವೆಂದು ನಂಬಿಯೇನು. ಇಲ್ಲವಾದರೆ, ನನಗಂತೂ ಈ ಬರೀ ಮಾತುಗಳಲ್ಲಿ ಸರ್ವಥಾ ನಂಬುಗೆ ಬರುವುದಿಲ್ಲ. ॥೧೯॥

ಬ್ರಹ್ಮಾ :—

ನಾರದನು ಈ ರೀತಿ ಜರಿದು ಮಾತನಾಡಿದುದನ್ನು ಕೇಳಿ, ದೇವರ ದೇವ ; ಮಯೂರರಾಜನು ಪರಮಾವಧಿ ಕೋಪವನ್ನು ತಳೆದನು. ವ್ಯಾಸ! ಲೋಕದ

ಜಗರ್ಜ ಕ್ರೋಧದೀಪ್ತೋಽಸೌ ನಾದಯನ್ ಭುವನತ್ರಯಮ್ ॥೨೦॥
ದಹನ್ನಿವ ತ್ರಿ-ಲೋಕೀಂ ಸ ಶೀರ್ಣಯನ್ ಪೃಥಿವೀಮಪಿ ।
ಮೇಘಗಂಭೀರಯಾ ವಾಚಾ ಬಭಾಣ ತಂ ಮುನಿಂ ತದಾ ॥೨೧॥

ಮಯೂರೇಶ ಉವಾಚ :—

ಮಾನ್ಯೋಽಸಿ ಬ್ರಹ್ಮಪುತ್ರತ್ವಾತ್ಸರ್ವಜ್ಞತ್ವಾನ್ಮುನೀಶ್ವರ ! ।
ಅತಸ್ತ್ವಾಂ ಪ್ರಬ್ರವೀಮ್ಯದ್ಯ ಮರ್ಯಾದಾಂ ಪರಿಪಾಲಯನ್ ॥೨೨॥
ತವ ಪ್ರಸಾದಾದ್ಬ್ರಹ್ಮಾಂಡಂ ಗ್ರಾಸಯಿಷ್ಯೇಽಂತಕಂ ಕ್ಷಣಾತ್ ।
ಭೂ-ಗೋಲಂ ಮುಷ್ಟಿಜ್ಞತಾಂ ನೇಷ್ಯೇ ಶೋಷಯಿಷ್ಯೇಽಂಬುಧೀನಪಿ ॥೨೩॥

---

ಸ್ವಭಾವವಾದರೂ ಹೀಗೆಯೇ ಇದೆ. "ಜ್ವಲತಿ ಚಲಿತೇಂಧನೋಽಗ್ನಿರ್ವಿಪ್ರಕೃತಃ ಪನ್ನಗಃ ಫಣಾಂ ಕುರುತೇ॥ ಪ್ರಾಯಃ ಸ್ವಂ ಮಹಿಮಾನಂ ಕ್ಷೋಭಾತ್ಪ್ರತಿಪದ್ಯತೇ ಹಿ ಜನಃ" ॥ ಎಂದರೆ ಕಟ್ಟಿಗೆಯನ್ನು ಕೆದಕಿದರೆ, ಕೆಂಡವು ಕೆರಳಿ ಜ್ವಲಿಸುವುದು. ಸರ್ಪವನ್ನು ರೇಗಿಸಿದರೆ, ಅದು ಹೆಡೆಯನ್ನು ಹರಡುವುದು. ಇದರಂತೆ ಮನುಷ್ಯನ ಅಭಿಮಾನವನ್ನು ಕೆಣಕಿದರೆ ಅವನ ಸ್ವಾಭಾವಿಕವಾದ ಮಹಿಮೆ ಹೊರಹೊಮ್ಮಿ ಗೋಚರಿಸುವುದು. ಅಸ್ತು. ಕ್ರೋಧದಿಂದ ಜ್ವಲಿಸಲಾರಂಭಿಸಿದ ಮಯೂರೇಶನು ಘಟ್ಟಿಯಾಗಿ ಒಮ್ಮೆ ಗರ್ಜಿಸಿ, ತ್ರಿಭುವನಗಳನ್ನೂ ಪ್ರತಿನಾದಗೊಳಿಸಿದನು. ॥೨೦॥

ಮೂರು ಲೋಕಗಳನ್ನೂ ದಹಿಸಿಯೇ ಬಿಡುವನೋ, ಪೃಥಿವಿಯನ್ನು ತುಂಡು ತುಂಡಾಗಿ ಸೀಳಿ ಬಿಡುವನೋ ಎಂಬುವಷ್ಟು ಕೋಪ ದೇವನಿಗೆ ಬಂದಿತು. ಆಗ ಮುನಿಯನ್ನು ಕುರಿತು ಮೇಘದಂತೆ ಗಂಭೀರವಾದ ತನ್ನ ಧ್ವನಿಯಿಂದ ಈ ರೀತಿ ಮಾತನಾಡಿದನು. ॥೨೧॥

ಮಯೂರೇಶ :—

ನಾರದಮುನಿಗಳೇ ! ಬ್ರಹ್ಮನ ಮಾನಸ ಪುತ್ರರಾದುದರಿಂದಲೂ, ಸರ್ವಜ್ಞರಾದುದರಿಂದಲೂ ನೀವು ಎಲ್ಲರಿಗೂ ಮಾನ್ಯರಾಗಿದ್ದೀರಿ. ಆದುದರಿಂದ ನನ್ನ ಈ ಅವತಾರಕ್ಕೆ ತಕ್ಕಂತಹ ಮರ್ಯಾದೆಯನ್ನು ನಿಮ್ಮ ವಿಷಯದಲ್ಲಿ ತೋರಿಸುವುದೇ ಪ್ರಕೃತ ಕರ್ತವ್ಯವಾಗಿದೆ. ಆದುದರಿಂದ ನಿಮ್ಮನ್ನು ಗೌರವಿಸಿಯೇ ನಾನು ಮಾತನಾಡುತ್ತೇನೆ. ॥೨೨॥

ನಿಮ್ಮ ಅನುಗ್ರಹ ಒಂದಿದ್ದರೆ ಇಡೀ ಈ ಬ್ರಹ್ಮಾಂಡವನ್ನೇ ಏಕಾಪೋಶನದಂತೆ ನುಂಗಿ ಬಿಡುವೆನು. ಒಂದು ಕ್ಷಣದೊಳಗಾಗಿಯೇ ಈ ಅಂತಕನನ್ನು ಸಹ ಅಂತಗೊಳಿಸಿ ಬಿಡುವೆನು. ಈ ಭೂಗೋಲವನ್ನು ನಣ್ಣ ಮುಷ್ಟಿಯಲ್ಲಿ ಅಡಕವಾಗುವಂತೆ ಹಿಡಿದು ಬಿಟ್ಟೇನು. ಸಪ್ತ ಸಮುದ್ರಗಳನ್ನೂ ಶೋಷಿಸಿ ಬಿಡುವೆನು. ॥೨೩॥

**ಚಾಲಯಿಷ್ಯೇ ತಥಾ ಮೇರುಂ ಮುನೇ ! ನಿಃಶ್ವಾಸವಾಯುನಾ ।**
**ಶ್ರುಣು ನಾರದ ! ಸತ್ಯಾಂ ಮೇ ಪ್ರತಿಜ್ಞಾಮದ್ಯ ಸರ್ವಗ ! ॥೨೪॥**
**ಹನಿಷ್ಯೇ ಸಿಂಧುದೈತ್ಯಂ ತಂ ನಾತ್ರ ಕಾರ್ಯಾ ವಿಚಾರಣಾ ।**
**ಕ ಉವಾಚ :—**
**ಇತ್ಯುಕ್ತ್ವಾ ಪ್ರಯಯೌ ಯೋದ್ಧುಂ ಬರ್ಹ್ಯಾರೂಢೋ ವಿನಾಯಕಃ॥೨೫॥**
**ಆಹತುಸ್ತಂ ತದಾ ನಂದೀ ಭೃಂಗೀ ಚೋಭೌ ವಿನಾಯಕಮ್ ।**
**ತಾವೂಚತುಃ :—**
**ಆವಾಂ ಯುದ್ಧಂ ಕರಿಷ್ಯಾವೋ ಪಶ್ಯ ನೌ ರಣಕೌಶಲಮ್ ॥೨೬॥**
**ಕ ಉವಾಚ :—**
**ಇತ್ಯುಕ್ತ್ವಾ ವಾಯುವೇಗೇನ ಗತೌ ತೌ ಗಂಡಕೀಂ ಪುರೀಮ್ ।**

---

ಅದರಂತೆ ಮುನೆ! ಒಮ್ಮೆ ನಿಃಶ್ವಾಸವನ್ನು ಬಿಟ್ಟು ಮೇರು ಪರ್ವತವನ್ನು ಸಹ ಅಲುಗಾಡಿಸಿ ಬಿಡುವೆನು. ನೀವು ಎಲ್ಲೆಡೆಯಲ್ಲೂ ಓಡಿಯಾಡತಕ್ಕವರು. ಎಲ್ಲವನ್ನೂ ತಿಳಿದವರು. ಸತ್ಯವಾದ ನನ್ನ ಈ ಪ್ರತಿಜ್ಞೆಯನ್ನಾದರೂ ಕೇಳಿ. ॥೨೪॥

ಸಿಂಧುದೈತ್ಯನನ್ನು ನಿಮಿಷದಲ್ಲಿ ನಿಗ್ರಹಿಸಿಬಿಡುವೆನು. ಈ ವಿಷಯದಲ್ಲಿ ಯಾರೂ, ಎಳ್ಳಷ್ಟೂ ವಿಚಾರವನ್ನು ಮಾಡಬೇಕಾಗಿಲ್ಲ.

ಬ್ರಹ್ಮ:—

ಎಂದು ನುಡಿದ ವಿನಾಯಕನು ಒಡನೆಯೇ ತನ್ನ ವಾಹನವಾದ ನವಿಲನ್ನೇರಿ ಕುಳಿತು, ಯುದ್ಧಮಾಡುವುದಕ್ಕಾಗಿ ಹೊರಟು ಬಿಟ್ಟನು. ॥೨೫॥

ತಾವು ಸಮರ್ಥರಾಗಿರುವಾಗ ಈ ಕೆಲಸಕ್ಕಾಗಿ ವಿನಾಯಕನನ್ನು ಕಳಿಸಿಕೊಡುವುದು ಪರಮೈಕಾಂತಭಕ್ತರಾದ ನಂದೀ, ಭೃಂಗೀ ಇವರ ಮನಸ್ಸಿಗೆ ಸರ್ವಥಾ ಬರಲಿಲ್ಲ. ಕೂಡಲೇ ಮುಂದೆ ಬಂದು, ದೇವನನ್ನು ಕುರಿತು ಹೀಗೆಂದು ಹೇಳಿದರು.

ನಂದೀ, ಭೃಂಗೀ :—

ದೇವ! ನಾವು ಹೋಗಿ ಯುದ್ಧವನ್ನು ಮಾಡುತ್ತೇವೆ. ನಮ್ಮಿಬ್ಬರ ರಣಕೌಶಲವನ್ನಾದರೂ ಒಮ್ಮೆ ನೋಡು. ॥೨೬॥

ಬ್ರಹ್ಮ:—

ಹೀಗೆ ಹೇಳಿ, ಅವರಿಬ್ಬರೂ ವಾಯುವೇಗದಿಂದ ಗಂಡಕೀನಗರವನ್ನು ಕುರಿತು

ವೀರಭದ್ರೋ ಭೂತರಾಜೋ ಯಯೌ ಶ್ರುತ್ವಾ ತಯೋರ್ಗತಿಮ್ ॥೨೭॥
ತದಾ ಚಕಂಪೇ ಧರಣೀ ಶೇಷೋ ವಿಹ್ವಲತಾಂ ಯಯೌ ।
ದದೃಶುಸ್ತೇ ಚ ಚತ್ವಾರೋ ದುರ್ಗಂ ದುರ್ಗಂ ಸುರೇಶ್ವರೈಃ ॥೨೮॥
ಪರ್ಯಂಕೇ ಸುಖಮಾಸೀನಂ ಸಿಂಧುಂ ಚಾರಾ ನ್ಯವೇದಯನ್ ।

ಚಾರಾ ಊಚುಃ :—

ಚತ್ವಾರಃ ಪರ್ವತಾಕಾರಾ ಗರ್ಜಯಂತೋ ದಿಶೋ ನಭಃ ॥೨೯॥
ವೀರಾಸ್ತವ ಪುರೀಂ ಯಾತಾಃ ಕಿಂ ಸ್ಥಿತೋಽಸಿ ಮಹಾಸುರ !

ಕ ಉವಾಚ :—

ಶ್ರುತ್ವೇತ್ಥಂ ವಚನಂ ಸಿಂಧುರ್ಮಗ್ನಶ್ಚಿಂತಾರ್ಣವೇ ಕ್ಷಣಾತ್ ॥೩೦॥

---

ಪ್ರಯಾಣ ಬೆಳೆಸಿದರು, ತಮ್ಮ ಸಂಗಡಿಗರಿಬ್ಬರೇ ಸಿಂಧುವಿನ ಮೇಲೆ ಯುದ್ಧಕ್ಕಾಗಿ ಹೊರಟ ಸಂಗತಿಯನ್ನು ತಿಳಿದೊಡನೆಯೇ ವೀರಭದ್ರ, ಭೂತರಾಜ ಇವರಿಬ್ಬರೂ ಅವರ ಮಾರ್ಗವನ್ನೇ ಹಿಡಿದು, ಪ್ರಯಾಣ ಮಾಡಿದರು. ॥೨೭॥

ಉತ್ಸಾಹಾತಿಶಯದಿಂದ ಈ ನಾಲ್ವರು ಹಾರುತ್ತ, ಚೀರುತ್ತ ನಡೆಯುವಾಗ ಭೂಮಿಯು ಕಂಪಿಸಿತು, ತನ್ನ ತಲೆಯ ಮೇಲಿದ್ದ ಭೂಮಿ ಇದ್ದಕ್ಕಿದ್ದಂತೆ ಚಲಿಸಿದುದನ್ನು ತಿಳಿದು ಆದಿಶೇಷನು ವಿಹ್ವಲಗೊಂಡನು. ಈ ನಾಲ್ವರು ವೀರರು ಪ್ರತಿ ದುರ್ಗದಲ್ಲೂ ಹುಡುಕಿ ಹುಡುಕಿ ನೋಡಿದರು. ಎಲ್ಲ ದುರ್ಗಗಳೂ ಬದ್ಧರಾದ ದೇವತೆಗಳಿಂದ ತುಂಬಿದ್ದವು. ॥೨೮॥

ದುರ್ಗಗಳ ನಡುವೆ ಇದ್ದ ತನ್ನ ಅರಮನೆಯ ಮಧ್ಯೇ ಮಂಚದ ಮೇಲೆ ಸಿಂಧು ಸುಖವಾಗಿ ಮಲಗಿದ್ದನು. ಆಗ ಅವನ ಚಾರರು ರಕ್ಕಸನ ಸಮೀಪಕ್ಕೆ ಬಂದು ಹೀಗೆಂದು ನಿವೇದಿಸಿದರು.

ಚಾರರು :—

ಮಹಾರಾಜ ! ಪರ್ವತದಂತೆ ದೃಢಾಂಗರಾದ ನಾಲ್ವರು ವೀರರು ಗರ್ಜಿಸುತ್ತಲೂ, ತನ್ಮೂಲಕ ದಿಕ್ಕು–ನಭಸ್ಸು ಇವನ್ನು ಪ್ರತಿಧ್ವನಿಗೊಳಿಸುತ್ತಲೂ ॥೨೯॥

ಬಂದು ನಿನ್ನ ನಗರಿಯನ್ನು ಮುತ್ತಿದ್ದಾರೆ. ಹೀಗಿದ್ದರೂ ಮಹಾಸುರ ! ಇದೇನು, ನೀನು ಸುಮ್ಮನೆ ಕುಳಿತಿರುವೆಯಲ್ಲ ?

ಬ್ರಹ್ಮಾ :—

ಚಾರರಾಡಿದ ಈ ಮಾತುಗಳನ್ನು ಕೇಳಿದೊಡನೆಯೇ ಸಿಂಧುದೈತ್ಯನು ಕ್ಷಣ ಕಾಲ ಚಿಂತಾಸಾಗರದಲ್ಲಿ ಮುಳುಗಿ ಬಿಟ್ಟನು. ॥೩೦॥

ದುರ್ಗಾಪಿ ಚಿಂತಯಾವಿಷ್ಟಾ ಸಾ ಸೋऽಪಿ ಶ್ಯಾಮತಾಮಿಯಾತ್ ।
ಅಧೋಮುಖತಯಾ ಚೋಭೌ ದುಃಖಂ ಪ್ರಾಪತುರಂಜಸಾ ॥೩೧॥
ದುರ್ಗಾ ಪ್ರೋಚೇ
ದುರ್ಗೋವಾಚ :—
ಮಹಾರಾಜ ! ಮಯೋಕ್ತಂ ನ ಕೃತಂ ತ್ವಯಾ ।
ತಸ್ಯೇದಂ ಹಿ ಫಲಂ ಪ್ರಾಪ್ತಮಿದಾನೀಂ ಕಿಂ ನು ಚಿಂತಯಾ ? ॥೩೨॥
ಕ ಉವಾಚ :—
ಏವಂ ವದತಿ ಸಾ ವಾಕ್ಯಂ ತಾವತ್ತೇ ವೀರಸತ್ತಮಾಃ ।
ನಾನಾಶ್ಚರ್ಯಯುತಂ ನಾನಾ ರತ್ನ-ಕಾಂಚನನಿರ್ಮಿತಮ್ ॥೩೩॥
ಅನೇಕಶಿಖರಂ ತಸ್ಯ ಸಭಾಮಂಡಪಮಾಯಯುಃ ।
ಉಡ್ಡೀಯ ಸಹಸಾ ಭೃಂಗೀ ತಸ್ಥೌ ಕ್ರುದ್ಧಸ್ತು ಮಂಡಪೇ ॥೩೪॥

---

ಅಲ್ಲೇ ಸಮೀಪದಲ್ಲಿ ಕುಳಿತಿದ್ದ ದುರ್ಗೆಗೂ ಈ ಸಂಗತಿ ತಿಳಿದು, ಅವಳೂ ಚಿಂತಾವಿಷ್ಟಳಾದಳು. ಇಬ್ಬರ ಮುಖಗಳೂ ಕಪ್ಪಿಟ್ಟು ಹೋದವು. ತಲೆಗಳನ್ನು ತಗ್ಗಿಸಿ ಇಬ್ಬರೂ ಅತಿಯಾಗಿ ದುಃಖಿಸಲಾರಂಭಿಸಿದರು. ॥೩೧॥

ಆಗ ದುರ್ಗೆಯು ಇದ್ದುದರಲ್ಲೇ ಧೈರ್ಯವನ್ನು ತಂದುಕೊಂಡು ಸಿಂಧುವನ್ನು ಕುರಿತು ಹೀಗೆ ನುಡಿದಳು.

ದುರ್ಗಾ :—

ಮಹಾರಾಜ! ನಾನು ಮೊದಲೇ ಈ ಬಗ್ಗೆ ಬಹಳ ಬೇಡಿಕೊಂಡೆ. ನೀನು ನನ್ನ ಮಾತಿನಂತೆ ಆಗ ನಡೆಯಲಿಲ್ಲ. ಆಗ ನಾನಾಡಿದ ಹಿತೋಕ್ತಿಗಳನ್ನು ಕೇಳದಿದ್ದುದಕ್ಕೆ ಇದೋ, ಈಗ ದುಷ್ಫಲ ಪ್ರಾಪ್ತವಾಗಿದೆ. ಈಗ ಚಿಂತಿಸುತ್ತ ಕುಳಿತರೆ ಪ್ರಯೋಜನವಾದರೂ ಏನಿದೆ? ॥೩೨॥

ಬ್ರಹ್ಮಾ:—

ಇವಳು ಇಷ್ಟು ಮಾತುಗಳನ್ನಾಡುತ್ತಿರುವಷ್ಟರಲ್ಲಿ ಆ ನಾಲ್ವರು ದೇವಸೇನಾ ವೀರರು ನಾನಾಶ್ಚರ್ಯಗಳಿಂದ ಕೂಡಿದ ನಾನಾವಿಧ ರತ್ನ ಸುವರ್ಣ ಇತ್ಯಾದ್ಯುತ್ತಮ ಲೋಹ-ಮಣಿಗಣಗಳಿಂದ ಖಚಿತವಾದ ॥೩೩॥

ಉನ್ನತವಾದ ಅನೇಕ ಶಿಖರಗಳಿಂದ ಕೂಡಿದ ಅಸುರನ ಸಭಾಮಂಡಪದ ಒಳಕ್ಕೆ ಬಂದು ಬಿಟ್ಟರು. ಬಂದ ಕೂಡಲೇ ಆ ನಾಲ್ವರು ವೀರರ ಪೈಕಿ ಬಲಿಷ್ಠನಾದ ಭೃಂಗಿಯು ಛಂಗನೆ ಮೇಲಕ್ಕೆ ನೆಗೆದು ಹಾರಾಡುತ್ತ, ಆ ಮಂಡಪದ ಮೇಲೆ ಹತ್ತಿ ಕುಳಿತನು. ಕ್ಷಣ ಕ್ಷಣಕ್ಕೂ ಅವನಿಗೆ ಕೋಪ ಉಕ್ಕುತ್ತಲಿದ್ದಿತು. ॥೩೪॥

ಬಭಂಜ ಮಂಡಪಂ ಸದ್ಯಃ ಸಬಲೇನ ಮಹಾಬಲಃ ।
ಅಂಗಣೇ ತಸ್ಯ ಖಂಡಾನಿ ಪತಿತಾನಿ ಸಮಂತತಃ ॥೩೫॥

ತತಸ್ತ್ರಯೋಽಪಿ ತೇ ವೀರಾ ಭೃಂಗಿನಂ ಸಮುಪಾಗತಾಃ ।
ಯುದ್ಧಾವೇಶಾ ರಣಮುಖಾಃ ಸಸೈನ್ಯಂ ತಂ ಗ್ರಸಿಷ್ಣವಃ ॥೩೬॥

ದೃಷ್ಟ್ವಾ ತತ್ಕರ್ಮ ತೇಷಾಂ ತು ಸಿಂಧುಸೇನಾಯಯೌ ಪುರಃ ।
ಖಡ್ಗಚರ್ಮಧನುರ್ಬಾಣಕುಂತಮುದ್ಗರಧಾರಿಣೀ ॥೩೭॥

" ಘ್ನಂತು, ಘ್ನಂತು ಮಹಾವೇಗಾಂಶ್ಚತುರೋ ವೀರಪುಂಗವಾನ್ । "
ಇತ್ಯುಕ್ತ್ವಾ ಚತುರೋ ಹಂತುಮಾಗತಾ ದೈತ್ಯಸೈನಿಕಾಃ ॥೩೮॥

ತನ್ನ ಬಲವನ್ನೆಲ್ಲ ಪ್ರಯೋಗಿಸಿ, ಅಲ್ಲಿದ್ದ ಶಿಖರಗಳನ್ನು ಕಿತ್ತಿ ನೆಲಕ್ಕೆ ಕೆಡಹಿದನು. ಆ ಶಿಖರಗಳು ಅಸುರನು ಕುಳಿತಿದ್ದ ಸಭಾಂಗಣದಲ್ಲೆಲ್ಲ ನೂರಾರು, ಸಾವಿರಾರು ಚೂರುಗಳಾಗಿ ಸುತ್ತಲೂ ಬಿದ್ದು ಬಿಟ್ಟವು. ॥೩೫॥

ಅಷ್ಟರಲ್ಲಿ ಉಳಿದವರಾದ ವೀರಭದ್ರ, ಭೂತರಾಜ ಮತ್ತು ನಂದಿ ಈ ಮೂರು ಮಂದಿ ವೀರರೂ ಬಂದು, ಭೃಂಗಿಯೊಡನೆ ಸೇರಿಕೊಂಡರು. ಇವರಿಗೆ ಸರ್ವದಾ ಯುದ್ಧಾವೇಶವಿರುತ್ತಲೇ ಇದ್ದಿತು. ಯಾವ ಸ್ಥಳವೇ ಆಗಿರಲಿ, ಅದನ್ನೇ ರಣಮುಖವನ್ನಾಗಿ ಮಾಡಿಕೊಳ್ಳಬಲ್ಲರವರು. ಅವರು ಸೇನಾಸಹಿತನಾಗಿದ್ದ ಆ ಸಿಂಧುದೈತ್ಯನನ್ನು ಒಮ್ಮೆಲೇ ನುಂಗಿ ಬಿಡುವುದಕ್ಕೂ ಸಮರ್ಥರಾದವರು ಮತ್ತು ಆ ಪ್ರಯತ್ನಕ್ಕಾಗಿಯೇ ಅಲ್ಲಿಗೆ ಬಂದವರು. ॥೩೬॥

ಆ ನಾಲ್ವರು ವೀರರನ್ನೂ, ಅವರು ನಡೆಸಿದ ಹಾವಳಿಯನ್ನೂ ಕಂಡು ಸಿಂಧುದೈತ್ಯನ ಸೇನೆಯು ಮುನ್ನುಗ್ಗಿ ಅವರೆಡೆ ಬಂದಿತು. ಪ್ರತಿಯೋರ್ವ ಯೋಧನೂ ಖಡ್ಗ, ಚರ್ಮ, ಧನುಸ್ಸು, ಬಾಣ, ಕುಂತ, ಮುದ್ಗರ ಇವೇ ಮೊದಲಾದ ತೀಕ್ಷ್ಣಾಯುಧಗಳನ್ನು ಧರಿಸಿದ್ದನು. ॥೩೭॥

" ಮಹಾ ವೇಗವಂತರಾದ ಈ ನಾಲ್ವರು ವೀರಪುಂಗವರನ್ನೂ ಉಳಿಯಗೊಡಬೇಡಿ, ಮೊದಲು ಕೊಲ್ಲಿ, ಹಿಂದೆಗೆಯಬೇಡಿ, ಕೂಡಲೇ ಕೊಂದುಬಿಡಿ" ಎಂದು ಆರ್ಭಟಿಸುತ್ತ, ಆ ನಾಲ್ವರನ್ನೂ ಒಮ್ಮೆಲೇ ಕೊಂದುಬಿಡುವುದಕ್ಕಾಗಿ ದೈತ್ಯನ ಸೈನಿಕರು ಅವರ ಮೇಲೆ ನುಗ್ಗಿ ಬಂದರು. ॥೩೮॥

ಅಸಂಖ್ಯಾತಾಶ್ಚತುರ್ಭಿಸ್ತೈರ್ಯುಯುಧುರ್ಜಾತಸಂಭ್ರಮಾಃ ।
"ಹನ್ಮಿ ತ್ವಾಂ, ಜಹಿ ಮುಹ್ಯಂ" ಚೇತ್ಯತ್ರ ಕೋಲಾಹಲೋಽಭವತ್ ॥೩೯॥
ತತೋಽಭೂತ್ತುಮುಲಂ ಯುದ್ಧಂ ಚತುರ್ಭಿರ್ದೈತ್ಯಸೇನಯಾ ।
ರಜೋಂಧಕಾರೇ ಶಸ್ತ್ರಾಣಾಂ ಪ್ರಕಾಶೇನಾವಲೋಕಯನ್ ॥೪೦॥
ಶತಕೋಟಿಹತಾ ದೈತ್ಯಾಶ್ಚತುರ್ಭಿಃ ಸಂಯುಗೇ ತದಾ ।
ಅಸಂಖ್ಯಾತಾನ್ ಮಹಾವೀರಾನ್ ಪೋಥಯಾಮಾಸುರೋಜಸಾ ॥೪೧॥
ಗೃಹೀತ್ವಾ ಪಾದಯೋಸ್ತೇ ತಾನ್ ಭ್ರಾಮಯಿತ್ವಾ ಪುನಃ ಪುನಃ ।
ನಭೋಽಕ್ಷಿಪನ್ಮಹಾವೀರಾಂಸ್ತೇ ಭೂಮೌ ಶತಧಾಪತನ್ ॥೪೨॥

---

ದೇವನ ಕಡೆಯವರು ನಾಲ್ಕು ಜನರು ಮಾತ್ರ. ದೈತ್ಯನ ಕಡೆಯ ಸೈನಿಕರು ಅಸಂಖ್ಯಾತರಾಗಿದ್ದರು. ಅವರಿಗೂ, ಇವರಿಗೂ ಘೋರವಾದ ಯುದ್ಧವಾರಂಭವಾಯಿತು. ಎಲ್ಲ ಯೋಧರಿಗೂ ಯುದ್ಧದ ಸಂಭ್ರಮವೇರಿದ್ದಿತು. "ಇದೋ, ನಿನ್ನನ್ನು ಈಗಲೇ ಕೊಂದುಬಿಟ್ಟೆ, ಎಲ್ಲಿ ಹೊಡಿ, ನೋಡೋಣ" ಎನಮಾದಿ ಮಾತುಗಳಿಂದ ದೊಡ್ಡ ಕೋಲಾಹಲವೇ ಎದ್ದಿತು. ॥೩೯॥

ದೈತ್ಯ ಸೈನಿಕರಿಗೂ, ನಂದೀ, ಭೂತರಾಜ, ಭೃಂಗೀ, ವೀರಭದ್ರ ಇವರಿಗೂ ಖಾಡಾಖಾಡಿಯಾಗಿ ಯುದ್ಧ ನಡೆಯಿತು. ಇವರ ಕಾಲ್ತುಳಿತದಿಂದ ನೆಲದ ರಜಸ್ಸು ಮೇಲಕ್ಕೆದ್ದು ಕತ್ತಲು ಕವಿಯಿತು. ಫಳ ಫಳ ಹೊಳೆಯುವ ಶಸ್ತ್ರಗಳಿಂದ 'ಇವರು ಶತ್ರುಗಳು, ಇವರು ನಮ್ಮವರು' ಎಂಬುದನ್ನು ತಿಳಿಯುತ್ತಿದ್ದರು. ॥೪೦॥

ಆ ನಾಲ್ವರು ಬಹಳ ಸಾಹಸದಿಂದ ಎದುರಿಸಿ, ನೂರಾರು ಕೋಟಿಯಷ್ಟು ಇದ್ದ ದೈತ್ಯನ ಸೈನಿಕರನ್ನು ಧೈರ್ಯದಿಂದ ಯುದ್ಧದಲ್ಲಿ ಹಣಿದರು. ಅಸಂಖ್ಯಾತರಾದ ಆ ಮಹಾ ವೀರರನ್ನು ಲಕ್ಷ್ಯವಿಲ್ಲದೆ ನೆಲಕ್ಕೆ ಅಪ್ಪಳಿಸುತ್ತಲಿದ್ದರು. ಅವರ ಆವೇಶ, ಓಜಸ್ಸು ಇವು ವರ್ಣನಾತೀತವಾಗಿದ್ದವು. ॥೪೧॥

ಆ ನಾಲ್ವರೂ ತಮ್ಮ ಮೇಲೆ ಯುದ್ಧಕ್ಕಾಗಿ ಬಂದ ಮಹಾವೀರನ ಕಾಲುಗಳೆರಡನ್ನೂ ಭದ್ರವಾಗಿ ಮೊದಲು ಹಿಡಿದುಕೊಳ್ಳುವರು. ಅನಂತರ ಅವರನ್ನು ಹಾಗೆಯೇ ಮೇಲಕ್ಕೆತ್ತಿ ಗರ ಗರ ಚಕ್ರದಂತೆ ಮತ್ತೆ ಮತ್ತೆ ಸುತ್ತಿಸುವರು. ಆಮೇಲೆ ಅವರನ್ನು ಅಂತರಿಕ್ಷದ ವರೆಗೂ ತೂರಿ ಎಸೆದು ಬಿಡುವರು. ಆ ವೀರರು ಬಿರುಗಾಳಿಗೆ ಸಿಕ್ಕಿದ ಎಂಜಲು ಹಾಳೆಗಳಂತೆ ಹಾರಾಡಿ ಸೋತು, ನೆಲಕ್ಕೆ ಧೊಪ್ಪನೆ ಬೀಳುವರು. ಬಿದ್ದ ಕೂಡಲೇ, ನೂರಾರು ಚೂರುಗಳಾಗುವರು. ಪ್ರತಿಯೊಬ್ಬ ಯೋಧನ ಪರಿಣಾಮವೂ ಹಾಗೆಯೇ ಆಯಿತು. ॥೪೨॥

ಶಿತೈರಸ್ತ್ರೈಶ್ಚ ಶಸ್ತ್ರೈಶ್ಚ ಪಾದೇನ ಕರಘಾತತಃ ।
ನಾಶಿತಾ ಸರ್ವಸೇನಾ ಸಾ ದೈತ್ಯೇಯಾ ರಣಮಂಡಲೇ ॥೪೩॥

ತತಸ್ತೇ ತದ್ಗೃಹಂ ಗತ್ವಾ ಸಿಂಧುಂ ಪರ್ಯಂಕಸಂಸ್ಥಿತಮ್ ।
ರಣಸ್ತಂಭಂ ಸಮಾನಿನ್ಯುರ್ಧೃತ್ವಾ ಕೇಶೇಷು ವೇಗತಃ ॥೪೪॥

ತತಸ್ಸಿಂಧುರ್ಮಹಾಸ್ತ್ರೈಸ್ಸ ಚಕ್ರೇ ಯುದ್ಧಂ ತು ತೈಸ್ಸಹ ।
ವ್ಯಸೃಜತ್ಪನ್ನಗಾಸ್ತ್ರಂ ಸ ಭುಜಗೈರ್ವೇಷ್ಟಿತಾಸ್ತ್ರಯಃ ॥೪೫॥

ಗರುಡಾಸ್ತ್ರಂ ಚ ಸಹಸಾ ಭೃಂಗಿಣಾಮೋಚಿ ತತ್ಕ್ಷಣಾತ್ ।
ಅಗ್ನ್ಯಸ್ತ್ರೇ ಮೋಚಿತೇ ತೇನ ಪರ್ಜನ್ಯಾಸ್ತ್ರಂ ತತೋಽಸೃಜತ್ ॥೪೬॥

ದೂರದಲ್ಲಿದ್ದ ದೈತ್ಯನ ಸೈನಿಕರ ಮೇಲೆ ಅಸ್ತ್ರಗಳನ್ನು ಪ್ರಯೋಗಿಸಿ ಕೊಂದರು. ಸ್ವಲ್ಪ ಸಮೀಪದಲ್ಲಿದ್ದವರನ್ನು ಶಸ್ತ್ರಗಳಿಂದ ಘಾಸಿಗೊಳಿಸಿದರು. ಮತ್ತೂ ಹತ್ತಿರ ವಿದ್ದವರನ್ನು ಕಾಲುಗಳಿಂದ ಒದೆದು ಸಾಯಿಸಿದರು. ಪಕ್ಕದಲ್ಲೇ ನಿಂತವರ ಕೆನ್ನೆ ಗಳಿಗೆ ಬಲವಾಗಿ ಹೊಡೆದು, ಪುನಃ ಅವರು ಮೇಲಕ್ಕೆ ಏಳದಂತೆ ಮಾಡಿದರು. ಈ ರೀತಿಯಾಗಿ ಎಲ್ಲ ದೈತ್ಯಸೇನೆಯು ಮಾಸಲೆ (Sample) ಗೂ ಉಳಿಯದಂತೆ ನಾಶವಾಗಿ ಹೋಯಿತು. ॥೪೩॥

ತಮ್ಮ ಗತಿಯನ್ನು ತಡೆಯತಕ್ಕವರಾರೂ ಇಲ್ಲದಾಗಲು, ನೆಟ್ಟಗೆ ಸಿಂಧುವಿನ ಮನೆಯನ್ನೇ ಹೊಕ್ಕರು. ಮಂಚದ ಮೇಲೆ ಸುಖವಾಗಿ ಕುಳಿತಿದ್ದ ಸಿಂಧು ದೈತ್ಯನ ತಲೆಗೂದಲನ್ನು ಬಲಾತ್ಕಾರದಿಂದ ಹಿಡಿದು ಜುಂಗಿಸುತ್ತ, ರಣಸ್ತಂಭದ ವರೆಗೂ ಅವನನ್ನು ವೇಗವಾಗಿ ಎಳೆದು ತಂದರು. ॥೪೪॥

ಮಹಾ ಪ್ರತಾಪಿಯಾದ ಸಿಂಧು ಸಾಹಸವನ್ನು ಹೂಡಿ, ಅವರ ಹಿಡಿತದಿಂದ ತನ್ನ ಜುಟ್ಟನ್ನು ಹೇಗೋ ಬಿಡಿಸಿಕೊಂಡು, ಅವರ ಮೇಲೆ ಮಹಾಸ್ತ್ರಗಳನ್ನು ಪ್ರಯೋಗಿ ಸುತ್ತ, ಅವರೊಡನೆ ಯುದ್ಧವನ್ನಾರಂಭಿಸಿದನು. ಮೊದಲು ಶತ್ರುಗಳ ಮೇಲೆ ನಾಗಾಸ್ತ್ರವನ್ನು ಅಭಿಮಂತ್ರಿಸಿ ಪ್ರಯೋಗಿಸಿದನು. ಅದರ ಮಹಿಮೆಯಿಂದ ಬಾಕೀ ಮೂವರೂ ಸರ್ಪಬದ್ಧರಾಗಿ ಬಿದ್ದು ಬಿಟ್ಟರು. ॥೪೫॥

ಭೃಂಗಿ ಈ ರಹಸ್ಯವನ್ನು ತಿಳಿದು ಸ್ವಲ್ಪವೂ ವಿಲಂಬಮಾಡದೇ ನಾಗಾಸ್ತ್ರಕ್ಕೆ ಪ್ರತಿಯಾಗಿ ಗಾರುಡಾಸ್ತ್ರವನ್ನು ಸಾಹಸದಿಂದ ಪ್ರಯೋಗಿಸಿದನು. ಆಗ ಅಸುರನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು, ಭೃಂಗಿಯು ಪರ್ಜನ್ಯಾಸ್ತ್ರದಿಂದ ಅಸುರನ ಅಸ್ತ್ರ ವನ್ನು ಶಮನಗೊಳಿಸಿದನು. ॥೪೬॥

ವಾಯವ್ಯಸ್ತ್ರೇ ಮೋಚಿತೇ ತೇನ ಪರ್ವತಾಸ್ತ್ರಂ ಚ ತೇಽಸೃಜನ್ ।
ತತಸ್ತೇ ಮಲ್ಲಯುದ್ಧೇನ ಯೋಧಯಾಮಾಸುರಾದರಾತ್ ॥೪೭॥

ನಂದೀ ತು ಪಾತಯಾಮಾಸ ಮುಕುಟಂ ದೈತ್ಯಮಸ್ತಕಾತ್ ।
ಭೃಂಗೀ ತು ತಾಡಯಾಮಾಸ ಪೃಷ್ಠೇ ದೈತ್ಯಂ ಮಹಾರುಷಾ ॥೪೮॥

ವೀರಭದ್ರೋಽಗ್ರಹೀದ್ಭಾರ್ಯಾಂ ಕಚೇ ತಸ್ಯಾಥ ಪಶ್ಯತಃ ।
ಭೂತರಾಜೋ ಜಘಾನೈನಂ ಲತ್ತಯಾ ವೈರಭಾವತಃ ॥೪೯॥

ದುರ್ಗಾ ನೇತ್ರೇ ನಿಮೀಲ್ಯೈವ ನಾಪಶ್ಯತ್ತಂ ತಥಾವಿಧಮ್ ।
ನಿಂದತೀ ತಸ್ಯ ಕರ್ಮಾಣಿ ಪಪಾಲ ನಿಜಮಂದಿರಮ್ ॥೫೦॥

ರಾಕ್ಷಸನಿಗೆ ಬಹಳ ಕೋಪ ಬಂದು, ಶತ್ರುಗಳ ಮೇಲೆ ವಾಯವೀಯಾಸ್ತ್ರವನ್ನು ಪ್ರಯೋಗಿಸಲು, ಎಲ್ಲೆಲ್ಲೂ ಬಿರುಗಾಳಿ ಎದ್ದು, ಜನರು ಉಟ್ಟು ಹೊದೆದಿದ್ದ ವಸ್ತ್ರಗಳನ್ನೆಲ್ಲ ಹಾರಿಸಿಬಿಟ್ಟಿತು. ಇದಕ್ಕೆ ಪ್ರತಿಯಾಗಿ ಪರ್ವತಾಸ್ತ್ರವನ್ನು ಭೃಂಗಿಯು ಪ್ರಯೋಗಿಸಿ, ಗಾಳಿಯ ಉರುಬನ್ನು ತಡೆದುಬಿಟ್ಟನು. ಆಗ ಅಸ್ತ್ರಯುದ್ಧವನ್ನು ಅಸುರನು ಅಷ್ಟಕ್ಕೇ ನಿಲ್ಲಿಸಿ, ಮಲ್ಲಯುದ್ಧವನ್ನಾರಂಭಿಸಿದನು. ಅವರಿಬ್ಬರೂ ವ್ಯಾಯಾಮನಿಷ್ಣಾತರಾಗಿದ್ದುದರಿಂದ ಆದರಪೂರ್ವಕವಾಗಿ ಯುದ್ಧವನ್ನಾಡತೊಡಗಿದರು. ॥೪೭॥

ಆಗ ನಂದಿಯು ಅವರಿಬ್ಬರ ಬಳಿಗೆ ಬಂದು, ರಾಕ್ಷಸನ ತಲೆಯ ಮೇಲಿದ್ದ ಕಿರೀಟವನ್ನು ನೆಲಕ್ಕೆ ಕೆಡಹಿದನು. ಅದೇ ಸಮಯಕ್ಕೆ ಭೃಂಗಿಯು ಬಹಳ ಕೋಪಾವಿಷ್ಟನಾಗಿ, ಸಿಂಧುದೈತ್ಯನ ಬೆನ್ನೆಲುಬು ಮುರಿದು ಹೋಗುವಂತೆ ಬಲವಾಗಿ ಗುದ್ದಿದನು. ॥೪೮॥

ಅತ್ತ ವೀರಭದ್ರನು ಮುಂದೆ ಬಂದು, ಸಮೀಪದಲ್ಲೇ ನಿಂತಿದ್ದ ಸಿಂಧುದೈತ್ಯನ ಭಾರ್ಯೆ; ಉಗ್ರೆಯ ಮುಡಿಗೆ ಕೈ ಹಾಕಿ, ಎಲ್ಲರೂ, ವಿಶೇಷವಾಗಿ ಅಸುರನು ನೋಡುತ್ತಿರುವಾಗಲೇ ಹಿಡಿದೆಳೆಯಲಾರಂಭಿಸಿದನು. ಭೂತರಾಜನೂ ರಕ್ಕಸನ ಬಳಿಗೆ ಬಂದು ಅವನಲ್ಲಿ ತನಗಿದ್ದ ವೈರ ಭಾವವನ್ನೆಲ್ಲ ಕೇಂದ್ರೀಕರಿಸಿ ಅನೇಕ ಲತ್ತೆಗಳನ್ನು ಕೊಟ್ಟು ಅಸುರನನ್ನು ಹಿಂಸಿಸಿದನು. ॥೪೯॥

ತನ್ನ ಗಂಡ; ಸಿಂಧುದೈತ್ಯನಿಗೆ ದೇವವೀರರು ಕೊಡುತ್ತಲಿದ್ದ ಅಪಮಾನಕರ ಹಿಂಸೆಯನ್ನೂ, ತನ್ನನ್ನು ಸ್ಪರ್ಶಿಸಿದುದನ್ನೂ ನೋಡಿ ಸಹಿಸಲಾರದೇ, ಎರಡೂ ಕಣ್ಣುಗಳನ್ನು ಭದ್ರವಾಗಿ ಮುಚ್ಚಿಕೊಂಡುಬಿಟ್ಟಳು. ಗಂಡನು ಹಾಗೂ ಶತ್ರುಗಳು ಅದುವರೆಗೆ ಮಾಡಿದ ದುಷ್ಕರ್ಮಗಳಿಗಾಗಿ ಅವರನ್ನು ಮನಸ್ಸಿನಲ್ಲೇ ನಿಂದಿಸುತ್ತ, ತನ್ನ ಮಂದಿರಕ್ಕೆ ಓಡಿ ಹೋದಳು. ॥೫೦॥

ಆವೇಶಾತ್ಸಿಂಧುದೈತ್ಯೋಽಪಿ ವೀರಭದ್ರಂ ಪದೇಽಗ್ರಹೀತ್ ।
ಮುಷ್ಟಿನಾ ನಂದಿನಂ ಹತ್ವಾ ಶಿಖಾಮಾಕ್ರಮ್ಯ ಭೃಂಗಿಣಃ ॥೫೦॥
ಅಪಾತಯದ್ಭೂಮಿತಲೇ ಭೂತರಾಜೋ ಮುಮೂರ್ಛ ಹ ।
ಮುಕುಟಂ ಮಸ್ತಕೇ ನ್ಯಸ್ಯ ಮುಕ್ತಾಹಾರಂ ಗಲೇ ತಥಾ ॥೫೨॥
ತುರಂಗವರಮಾರುಹ್ಯ ಶೇಷಾನಾಹೂಯ ಸೈನಿಕಾನ್ ।
" ಹನಿಷ್ಯೇಽದ್ಯ ಮಯೂರೇಶಮಿ"ತ್ಯುಕ್ತ್ವಾ ಯುಯುಧೇ ಪುನಃ। ॥೫೩॥
ಜಗರ್ಜ ಸಹಸಾ ದೈತ್ಯೋ ಗರ್ಜಯನ್ ವಿದಿಶೋ ದಿಶಃ ।
ಗತೇಷು ತೇಷು ವೀರೇಷು ಚತುರ್ಷು ಗಣನಾಯಕಮ್ ॥೫೪॥
ವದತ್ಸು " ದೈತ್ಯಸೇನಾಯಾಂ ಸರ್ವೇಷಾಂ ನಾಶನಂ ಕೃತಮ್ ।
ಆನೀತಃ ಸಿಂಧುದೈತ್ಯೋಽಪಿ ರಣಭೂಮಿಂ ಗಣೇಶ್ವರ ॥೫೫॥

ಸಿಂಧುದೈತ್ಯನೂ ಬಹಳ ಆವೇಶದಿಂದ ಕಾದಾಡುತ್ತ ಸಂಧಿಯನ್ನು ಸಾಧಿಸಿ, ವೀರಭದ್ರನ ಕಾಲುಗಳನ್ನು ಬಿಗಿಯಾಗಿ ಹಿಡಿದು ಅತ್ತಿತ್ತ ಚಲಿಸದಂತೆ ಮಾಡಿದನು. ನಂದಿಯನ್ನು ಮುಷ್ಟಿಯಿಂದ ಬಲವಾಗಿ ಗುದ್ದಿದನು. ಭೃಂಗಿಯ ಜುಟ್ಟನ್ನು ಹಿಡಿದು ಬಲವಾಗಿ ಜುಂಗಿಸಿದನು. ॥೫೦॥

ಭೂತರಾಜನು ಓಡಿ ಬರುತ್ತಿದ್ದುದನ್ನು ನೋಡಿ, ದೈತ್ಯನು ತನ್ನ ಕಾಲಿನಿಂದ ಅವನ ಕಾಲಿಗೆ ತೊಡಕು ಹಾಕಿ, ಅವನನ್ನು ನೆಲಕ್ಕೆ ಕೆಡಹಿದನು. ಬಿದ್ದ ಹೊಡೆತಕ್ಕೆ ಭೂತರಾಜನು ಪ್ರಬಲವಾದ ಮೂರ್ಛೆಯನ್ನು ಹೊಂದಿದನು. " ಶತ್ರುವಿನ ಮೇಲೆ ಬೀಳಲು ಇದೇ ಸರಿಯಾದ ಸಂಧಿ" ಎಂದು ನಿಶ್ಚಯಿಸಿ, ನೆಲದ ಮೇಲೆ ಉರುಳಿ ಬಿದ್ದಿದ್ದ ತನ್ನ ಕಿರೀಟವನ್ನು ತಲೆಗೆ ಹಾಕಿಕೊಂಡನು. ಮುತ್ತಿನ ಹಾರವನ್ನು ಕೊರಳಲ್ಲಿ ಧರಿಸಿದನು. ॥೫೨॥

ಪಟ್ಟದ ಕುದುರೆಯನ್ನೇರಿ ತನ್ನ ಹತಶಿಷ್ಟರಾದ ಸೈನಿಕರನ್ನೆಲ್ಲ ಸಂಗಡ ಕರೆದುಕೊಂಡು " ಇಗೋ, ಈ ಕ್ಷಣದಲ್ಲೇ ಮಯೂರೇಶ್ವರನನ್ನು ಕೊಂದು ಬಿಡುವೆನು, ನೋಡುತ್ತಿರಿ " ಎಂದು ನುಡಿಯುವುದರಿಂದ ಭಯಾರ್ತರಾಗಿದ್ದ ಸೈನಿಕರನ್ನು ಉತ್ತೇಜನಗೊಳಿಸಿ, ಯುದ್ಧವನ್ನು ಮತ್ತೆ ಬಿರುಸಿನಿಂದ ಆರಂಭಿಸಿದನು. ॥೫೩॥

ಯುದ್ಧರಂಗವನ್ನು ಪ್ರವೇಶಿಸಿದ ಕೂಡಲೇ ದೈತ್ಯನು ಒಮ್ಮೆ ಬಲವಾಗಿ ಗರ್ಜಿಸಿದನು. ಆ ಗರ್ಜನೆಯಿಂದ ದಿಗ್ವಿದಿಕ್ಕುಗಳೆಲ್ಲ ಪ್ರತಿಧ್ವನಿಗೈದವು. ಆ ವೇಳೆಗಾಗಲೇ ನಂದೀ, ಭೃಂಗೀ ಮೊದಲಾದ ನಾಲ್ಕು ಮಂದಿ ಗಣೇಶನ ಬಳಿಗೆ ಬಂದಿದ್ದರು ॥೫೪॥

"ದೈತ್ಯನ ಸೇನೆಯಲ್ಲಿದ್ದವರನ್ನೆಲ್ಲ ಸಾಮಾನ್ಯವಾಗಿ ನಾಶಗೊಳಿಸಿದಂತೆ ಆಗಿದೆ. ಗುಣೇಶ್ವರ! ತಪ್ಪಿಸಿಕೊಂಡು ಹೋಗಿ ಅಡಗಿ ಕುಳಿತಿದ್ದ ಸಿಂಧುದೈತ್ಯನು ರಣಭೂಮಿಗೆ ಬರುವಂತೆ ಮಾಡಿ, ಅವನನ್ನೂ ಇಲ್ಲಿಗೆ ಎಳೆದು ತಂದಿವೆ ೇವೆ. ॥೫೫॥

**ಅಲ್ಪಸೇನಾಚರೈರ್ಯುಕ್ತಂ ನೋಚಯ್ಯೈನಂ ಭವಾರ್ಣವಾತ್ ।**
**ವಯಮೇವ ಹನಿಷ್ಯಾಮೋ ನಾಜ್ಞಾಸೀತ್ತವ ವಿಘ್ನರಾಟ್ !** ॥೫೬॥

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ ' ಸಿಂಧೋಃ ಪುನರ್ಯುದ್ಧಾಗಮನಂ ' ನಾಮ ದ್ವಾವಿಂಶದುತ್ತರ ಶತತಮೋಽಧ್ಯಾಯಸ್ಸಮಾಪ್ತಃ**

---

ಪ್ರಕೃತ, ಅವನ ಬಳಿ ಹೆಚ್ಚು ಸೇನಾ ಸಹಾಯವೂ ಇರುವುದಿಲ್ಲ. ಕೇವಲ ಅಲ್ಪ ಸೇನೆಯೊಂದಿಗೆ ಇಲ್ಲಿಗೆ ಬಂದಿದ್ದಾನೆ. ಈಗ ಅವನನ್ನು ಸಂಸಾರಸಾಗರದಿಂದ ಉದ್ಧರಿಸಿ ಬಿಡುಗಡೆಯನ್ನು ಮಾಡು. ವಿಘ್ನರಾಜ! ಸಿಂಧುವನ್ನು ಈ ಒಳಗಾಗಿ ನಾವೇ ಕೊಂದುಬಿಡುತ್ತಲಿದ್ದೆವು. ಆದರೆ, ಮಾಡುವುದೇನು? ಆ ರೀತಿ ಮಾಡಲು ನಿನ್ನ ಆಜ್ಞೆಯಾಗಿರಲಿಲ್ಲವಾದುದರಿಂದ ಸುಮ್ಮನಿರಬೇಕಾಗಿ ಬಂದಿತು. ಎಂದು ನುಡಿದರು. ॥೫೬॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ಸಿಂಧು ಮರಳಿ ಯುದ್ಧಕ್ಕೆ ಬಂದುದು " ಎಂಬಲ್ಲಿಗೆ ನೂರ ಇಪ್ಪತ್ತೆರಡನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

## ಅಥ ತ್ರಯೋವಿಂಶದುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಆಗತಂ ಸಿಂಧುಮಾಕರ್ಣ್ಯ ಜಹೃಷೇ ಸ ಮಯೂರರಾಟ್ ।**
**ನೀಲಕಂಠಂ ಸಮಾರುಹ್ಯ ಯಯೌ ಯುದ್ಧಾಯ ಸತ್ವರಃ ॥೧॥**

**ಚತುರ್ಭಿರಾಯುಧೈಸ್ಸರ್ವಾ ಭಾಸಯನ್ ವಿದಿಶೋ ದಿಶಃ ।**
**ಕಲ್ಪಾಂತಮೇಘಸದೃಶನಾದೇನ ನಾದಯನ್ನಭಃ ॥೨॥**

**ದದರ್ಶ ಪುರತಃ ಸಿಂಧುಂ ಯುದ್ಧಾಯ ಕೃತನಿಶ್ಚಯಮ್ ।**
**ಸೋಽಪ್ಯೇನಂ ಸಮರೇ ದೃಷ್ಟ್ವಾ ಪಶ್ಯತಿ ಸ್ಮ ಪುನಃ ಪುನಃ ॥೩॥**

---

॥ ಶ್ರೀ ಮಂಗಲಮೂರ್ತಯೇ ನಮಃ ॥

### ೧೨೩ ನೆಯ ಅಧ್ಯಾಯ

ಬ್ರಹ್ಮ:—

"ಸಿಂಧುದೈತ್ಯನು ರಣಭೂಮಿಗೆ ಬಂದಿದ್ದಾನೆ" ಎಂಬ ವಿಷಯವನ್ನು ಗಣಗಳ ಮುಖದಿಂದ ಕೇಳಿ ಮಯೂರೇಶ್ವರನು ಬಹಳ ಸಂತೋಷವನ್ನು ಹೊಂದಿದನು. ತತ್‌ಕ್ಷಣ ತನ್ನ ವಾಹನವಾದ ಮಯೂರವನ್ನೇರಿ ಯುದ್ಧಕ್ಕಾಗಿ ವೇಗದಿಂದ ಹೊರಟು ಬಿಟ್ಟನು. ॥೧॥

ತನ್ನ ಆಯುಧಗಳ ಹೊಳಪಿನಿಂದ ದಿಗ್ವಿದಿಕ್ಕುಗಳನ್ನೆಲ್ಲ ಬೆಳಗಿಸಿದನು. ಪ್ರಳಯ ಕಾಲದ ಸಂವರ್ತಾದಿ ಮೇಘಗಳ ಧ್ವನಿಯಂತೆ ಘಟ್ಟಿಯಾಗಿ ಪದೇ ಪದೇ ಗರ್ಜಿಸುತ್ತ, ಇಡೀ ಮೇಘಮಂಡಲವು ಪ್ರತಿಧ್ವನಿಗೈಯುವಂತೆ ಮಾಡಿದನು. ॥೨॥

ಯುದ್ಧರಂಗವನ್ನು ಪ್ರವೇಶಿಸಿದ ಕೂಡಲೇ, ಯುದ್ಧಮಾಡುವುದಕ್ಕಾಗಿ ಸಿದ್ಧತೆ ಯೊಡನೆ ಎದುರಿಗೆ ಧೈರ್ಯದಿಂದ ನಿಂದಿದ್ದ ಮಹಾವೀರ; ಸಿಂಧು ದೈತ್ಯನನ್ನು ಕಂಡನು ರಾಕ್ಷಸ ರಾಜನು ಸಹ ಯುದ್ಧಭೂಮಿಗೆ ಪ್ರವೇಶಿಸಿದ ಮಯೂರೇಶನನ್ನು

**ಯಥಾ ಸಿಂಹಂ ನಾಗರಾಜೋ ಗರುಡಂ ಚಾಥ ವಾಯುಭುಕ್ ।**
**ಮಧುಕೈಟೌ ಯಥಾ ವಿಷ್ಣುಂ ತ್ರಿಪುರೋ ವಾ ಶಿವಾಪತಿಮ್ ॥೪॥**

**ಶುಂಭೋ ವಾಪಿ ನಿಶುಂಭೋ ವಾ ಜಗದಂಬಾಂ ಮಹಾಬಲಾಮ್ ।**
**ತತೋ ಯುದ್ಧಂ ಪ್ರಕುರ್ವಾತೇ ನಾನಾಶಸ್ತ್ರೈಃ ಪರಸ್ಪರಮ್ ॥೫॥**

**ಜಪಾಕುಸುಮಸಂಕಾಶೌ ದೇಹೌ ಜಾತೌ ತದಾ ತಯೋಃ ।**
**ದದಾಹ ಪೃಥಿವೀಂ ಸಾದ್ರಿಂ ಶಸ್ತ್ರಸಂಘಟ್ಟಜೋಽನಲಃ ॥೬॥**

**ಚಕಂಪೇ ಪೃಥಿವೀ ಸರ್ವಾ ಸಾಬ್ಧಿದ್ವೀಪಾ ಸಪರ್ವತಾ ।**
**ಬಾಣಮಾದಾಯ ಸಿಂಧುಸ್ಸ ವಹ್ನ್ಯಸ್ತ್ರೇಣ ನಿಮಂತ್ರ್ಯ ಚ ॥೭॥**

---

ನೋಡಿದನು. ಆ ಕೂಡಲೇ ಅವನಿಗೆ ಏನೋ ಒಂದು ಬಗೆಯ ಆಂತರಿಕ ಭೀತಿಯುಂಟಾಯಿತು. ಮತ್ತೆ ಮತ್ತೆ ದೇವನನ್ನು ದೃಷ್ಟಿಸಿ ನೋಡಿದನು. ॥೩॥

ಗಜರಾಜನು ಸಿಂಹವನ್ನು, ಸರ್ಪವು ಗರುಡನನ್ನು, ಮಧು-ಕೈಟಭ ದೈತ್ಯರು ತಮ್ಮನ್ನು ನಿಗ್ರಹಿಸಲು ಸಿದ್ಧನಾಗಿದ್ದ ಶ್ರೀಮನ್ನಾರಾಯಣನನ್ನು, ತ್ರಿಪುರಾಸುರನು ಪರಶಿವೆಯ ಪತಿಯಾದ ಪರಮೇಶ್ವರನನ್ನು, ॥೪॥

ಶುಂಭ-ನಿಶುಂಭರೆಂಬ ರಕ್ತಬೀಜಾಸುರರು ಮಹಾಬಲಶಾಲಿನಿಯಾದ ಜಗದಂಬೆಯನ್ನು ನೋಡಿದಂತೆ ಬೆದರು ಕಣ್ಣುಗಳಿಂದ ನೋಡಿದನು. ಪರಸ್ಪರರನ್ನು ವೀಕ್ಷಿಸಿದ ಬಳಿಕ, ಇಬ್ಬರೂ ನಾನಾವಿಧ ಶಸ್ತ್ರಗಳನ್ನು ಪ್ರಯೋಗಿಸುತ್ತ, ಯುದ್ಧವನ್ನಾರಂಭಿಸಿದರು. ॥೫॥

ಶಸ್ತ್ರಾಘಾತಗಳು ಇಬ್ಬರ ದೇಹಗಳಿಗೂ ತಗುಲಿದ್ದರಿಂದ ಆ ದೇಹಗಳು ಧಾರಾಕಾರವಾಗಿ ರಕ್ತವನ್ನು ಕಾರುತ್ತಿದ್ದವು. ನೋಡಿದರೆ, ಅವರು ಕೆಂಪು ದಾಸವಾಳದ ಹೂವಿನಂತೆ ಕಾಣುತ್ತಿದ್ದರು. ಪರಸ್ಪರರ ಶಸ್ತ್ರಗಳು ಒಂದಕ್ಕೊಂದು ಘರ್ಷಣೆಯಾದಾಗ ಅದರಿಂದ ಕಿಡಿಗಳು ಉತ್ಪನ್ನವಾಗಿ ಭೂಮಿ, ಪರ್ವತಗಳು ಇವನ್ನೆಲ್ಲ ದಹಿಸಲಾರಂಭಿಸಿದವು. ॥೬॥

ಭೂಮಿಯು ಗಡಗಡ ನಡುಗಿತು. ಸಮುದ್ರಗಳು ಉಕ್ಕಿ ಹರಿದವು. ದ್ವೀಪಗಳು ಹೊಯ್ದಾಡಿದವು. ಪರ್ವತಗಳು ಚಲಿಸಿ ಹೋದವು. ಆಗ ಸಿಂಧುದೈತ್ಯನು ತನ್ನ ಬಿಲ್ಲಿನಲ್ಲಿ ನಿಶಿತವಾದ ಬಂದು ಬಾಣವನ್ನು ಹೂಡಿ, ಅದನ್ನು ವಹ್ನಿಮಂತ್ರದಿಂದ ಅಭಿಮಂತ್ರಿಸಿ, ಅಗ್ನ್ಯಸ್ತ್ರವನ್ನಾಗಿ ॥೭॥

**ಸಸರ್ಜ ದಗ್ಧುಂ ತಂ ದೇವಂ ಮಯೂರೇಶಂ ರಣಾಂಗಣೇ ।**
**ಸ ದದರ್ಶ ದೇವಸೇನಾಂ ತಾಂ ದಶದಿಕ್ಷು ಸಸರ್ಪ ಹ ॥೮॥**

**ತತಃ ಪಾಶಂ ಮಯೂರೇಶೋ ಮೇಘಾಸ್ತ್ರೇಣ ಸು-ಯೋಜ್ಯ ಚ ।**
**ನ್ಯಕ್ಷಿಪದ್ದೈತ್ಯಸೇನಾಯಾಂ ಕಂಪಯನ್ ಭುವನತ್ರಯಮ್ ॥೯॥**

**ಆಶಮುಚ್ಚ ತತೋ ವಹ್ನಿರ್ಜಲಧಾರಾಭಿವೃಷ್ಟಿಭಿಃ ।**
**ಪ್ರಭೂತೇನಾಥ ತಮಸಾ ದಿಶೋ ವ್ಯಾಪ್ತಾ ದಶಾಪಿ ಚ ॥೧೦॥**

**ವಿಶೀರ್ಣಾಃ ಪರ್ವತಾಸ್ತಾಭಿಃ ಪತಿತಾ ವೃಕ್ಷಸಂಚಯಾಃ ।**
**" ಅಯಂ ಕಿಂ ಪ್ರಲಯಃ ಪ್ರಾಪ್ತ " ಇತ್ಯಶೋಚತ್ಸ ದೈತ್ಯರಾಟ್ ॥೧೧॥**

---

ಮಾಡಿ ಪ್ರಯೋಗಿಸಿದನು. ಹೀಗೆ ಪ್ರಯೋಗಿಸುವಾಗ " ದೇವರದೇವ; ಮಯೂರೇಶನನ್ನು ಈ ರಣಾಂಗಣದಲ್ಲೇ ದಹಿಸಿಬಿಡುವೆನು " ಎಂದು ಸಂಕಲ್ಪಿಸಿದ್ದನು. ಆ ಅಸ್ತ್ರವು ದೇವಸೇನೆಯನ್ನು ದಹಿಸುತ್ತ ಹತ್ತು ದಿಕ್ಕುಗಳಲ್ಲೂ ಸರಸರ ಸುಳಿದಾಡತೊಡಗಿತು. ॥೮॥

ಆಗ ಮಯೂರೇಶನು ಪಾಶವನ್ನು ಕೈಗೆ ತೆಗೆದುಕೊಂಡು, ಅದನ್ನು ಮಹಾ ಮೇಘಾಸ್ತ್ರ ಮಂತ್ರಗಳಿಂದ ಸಂಸ್ಕರಿಸಿ ಸಜ್ಜುಗೊಳಿಸಿದನು. ಮತ್ತು ಅದನ್ನು ದೈತ್ಯನ ಸೇನೆಯ ಮೇಲೆ ಬೀಸಿ ಎಸೆದನು. ಪಾಶವನ್ನು ಪ್ರಯೋಗಿಸಿದೊಡನೆಯೇ ಅದು ತ್ರಿಭುವನಗಳನ್ನೂ ನಡುಗಿಸಿತು. ॥೯॥

ಪಾಶವು ಒಡನೆಯೇ ಕುಂಭದ್ರೋಣಾಕಾರದಲ್ಲಿ ಧಾರಾಪೂರ್ವಕವಾಗಿ ಮಳೆಯನ್ನುಸುರಿಸಿ, ದೈತ್ಯಶಸ್ತ್ರಪ್ರಭಾವದಿಂದುಂಟಾದ ಅಗ್ನಿಜ್ವಾಲೆಯನ್ನೆಲ್ಲ ಆರಿಸಿ ಬಿಟ್ಟಿತು. ನಭೋಮಂಡಲವು ಮೇಘಗಳಿಂದ ಆವೃತವಾಗಿ ಸೂರ್ಯನೇ ಕಾಣದಂತಾದನು. ಸೂರ್ಯನ ಪ್ರಕಾಶವಿಲ್ಲದಂತಾಗಲು, ಎಲ್ಲೆಡೆಯಲ್ಲೂ ಕತ್ತಲು ನಿಬಿಡವಾಗಿ ಕವಿದು ಬಿಟ್ಟಿತು. ॥೧೦॥

ಮಳೆಯ ಹೊಡೆತಕ್ಕೆ ಪರ್ವತಗಳು ವಿಶಕಲಿತವಾಗಿಕರಗಿಹೋದವು. ಗಿಡ–ಮರಗಳು ಬೇರು ಸಹಿತ ಕಿತ್ತು ನೆಲಕ್ಕೆ ಉರುಳಿ ಬಿದ್ದವು. " ಇದೇನು? ಈ ಅನಾಹುತವನ್ನು ನೋಡಿದರೆ, ಪ್ರಲಯಕಾಲವೇ ಪ್ರಾಪ್ತವಾದಂತೆ ತೋರುವುದಲ್ಲ? ಮುಂದೇನು ಗತಿ ? " ಎಂದು ರಾಕ್ಷಸರಾಜನು ಬಹುಪರಿಯಾಗಿ ಶೋಕಿಸಿದನು. ॥೧೧॥

ಪವನಾಸ್ತ್ರೇಣ ತಾನ್ ಮೇಘಾಂಸ್ತದಾ ಸಿಂಧುರ್ನ್ಯವಾರಯತ್ ।
ಸ ವಾಯುಃ ಕಂಪಯಾಮಾಸ ಗಗನಂ ಚ ದಿಶೋ ದಶ ॥೧೨॥

ತತೋ ದೇವೋಽಮಂತ್ರಯತ್ಸ ಕಮಲಂ ನಿಜಹಸ್ತಕೇ ।
ಪರ್ವತಾಸ್ತ್ರೇಣ ಸಹಸಾ ತತ್ಯಾಜ ದೈತ್ಯಪುಂಗವೇ ॥೧೩॥

ಉನ್ಮೂಲ್ಯ ತದ್ದ್ರುಮಾನ್ ವ್ಯೋಮ ದ್ಯೋತಯಚ್ಚ ದಿಶೋ ದಶ ।
ಅಗಚ್ಛದ್ದೈತ್ಯಸೇನಾಯಾಂ ಪ್ರಾಸುವತ್ಪರ್ವತಾನ್ ಬಹೂನ್ ॥೧೪॥

ಅಸಂಖ್ಯಾತೈರ್ಗಿರಿವರ್ಯೈಃ ಛಾದಿತಂ ಪೃಥಿವೀತಲಮ್ ।
ನ ಸ್ಥಾತುಮವಕಾಶೋಽಭೂನ್ನ ಚ ಗಂತುಮಥಾಪಿ ಚ ॥೧೫॥

---

ಕ್ಷಣಕಾಲದಲ್ಲೇ ತನ್ನ ಮನಸ್ಸನ್ನು ಸ್ವಾಧೀನಕ್ಕೆ ತೆಗೆದುಕೊಂಡು ಪರ್ಜನ್ಯಾಸ್ತ್ರದ ಹಾವಳಿಯನ್ನು ತಡೆಗಟ್ಟಲು ವಾಯವೀಯಾಸ್ತ್ರವನ್ನು ಪ್ರಯೋಗಿಸಿ, ನಿಬಿಡವಾಗಿದ್ದ ಮೇಘಗಳನ್ನೆಲ್ಲ ದೂರಹೋಗುವಂತೆ ಚದುರಿಸಿ, ಮಳೆಯನ್ನು ನಿಲ್ಲಿಸಿಬಿಟ್ಟನು. ಅಸುರನು ಪ್ರಯೋಗಿಸಿದ ವಾಯವ್ಯಾಸ್ತ್ರವು ಬಹಳ ವೇಗ ಗತಿಯಿಂದ ಬೀಸುತ್ತ, ಗಗನ, ದಿಕ್ಕು ಇವನ್ನು ಸಹ ನಡುಗಿಸಿಬಿಟ್ಟಿತು. ॥೧೨॥

ಆಗ ದೇವನು ತನ್ನ ಕೈಯಲ್ಲಿದ್ದ ಮತ್ತೊಂದಾಯುಧ; ಕಮಲವನ್ನು ಕೈಗೆ ತೆಗೆದುಕೊಂಡು ಪರ್ವತಾಸ್ತ್ರ ಮಂತ್ರದಿಂದ ಅದನ್ನು ಅಭಿಮಂತ್ರಿಸಿ, ವೇಗವಾಗಿ ದೈತ್ಯನ ಮೇಲೆ ಬೀಸಿ ಎಸೆದನು. ॥೧೩॥

ಆ ಪರ್ವತಾಸ್ತ್ರ ಝಗಝಗಿಸುತ್ತ ನಭೋಮಂಡಲದಲ್ಲಿ ಹೊರಟಿತು. ಅದರ ದಿವ್ಯ ತೇಜಸ್ಸು ದಿಗಂತಗಳನ್ನೆಲ್ಲ ಬೆಳಗಿತು. ಅದು ದೈತ್ಯನ ಸೇನೆ ಇದ್ದಲ್ಲಿಗೆ ಬಂದು, ಎಣಿಕೆಗೆ ಸಿಕ್ಕಲಾರದಷ್ಟು ದೊಡ್ಡ ದೊಡ್ಡ ಪರ್ವತಗಳನ್ನು ನಿರ್ಮಿಸಿ ಹಾಕಿತು. ಇದರಡಿಯಲ್ಲಿ ಸಿಕ್ಕು ಎಷ್ಟೋ ಮರಗಳು ಹೇಳಲು ಹೆಸರೂ ಇಲ್ಲದಂತಾಗಿ ಹೋದವು. ॥೧೪॥

ಭೂಭಾಗವೆಲ್ಲ ಪರ್ವತಗಳಿಂದ ತುಂಬಿಹೋಯಿತು. ಯಾವ ಸಂದಿ ಮೂಲೆಗಳಲ್ಲಿ ನೋಡಿದರೂ, ಅಲ್ಲೆಲ್ಲ ಪರ್ವತಗಳೇ ಕಾಣತೊಡಗಿದವು. ಭೂಮಿಯ ಮೇಲೆ ನಿಲ್ಲೋಣವೆಂದರಾಗಲಿ, ಅಥವಾ ಅಲ್ಲಿಂದ ಹೊರಹೊರಟು ಬರೋಣವೆಂದರಾಗಲಿ ಸ್ವಲ್ಪವೂ ಅವಕಾಶ ಸಿಕ್ಕುತ್ತಿರಲಿಲ್ಲ. ॥೧೫॥

ಪವನಂ ಕುಂಠಿತಂ ದೃಷ್ಟ್ವಾ ಪರ್ವತಾನ್ ಸರ್ವತೋಽಪಿ ಚ ।
ವಜ್ರಾಸ್ತ್ರಂ ಪ್ರೇರಯಾಮಾಸ ತತೋ ವಜ್ರಾಣಿ ನಿರ್ಯಯುಃ ॥೧೬॥
ಅಸಂಖ್ಯಾತೈಶ್ಚ ವಜ್ರೈಶ್ಚ ಪರ್ವತಾಶ್ಚೂರ್ಣಿತಾಸ್ತದಾ ।
ತತೋಽಂಕುಶಂ ಮಯೂರೇಶೋ ವಜ್ರಾಸ್ತ್ರೇಣ ನ್ಯಮಂತ್ರಯತ್ ॥೧೭॥
ಸಸರ್ಜ ತೇಷು ವಜ್ರೇಷು ವಜ್ರಯುದ್ಧಮಭೂತ್ತದಾ ।
ತಚ್ಛಬ್ದೇನ ಚಕಂಪೇ ಭೂಃ ಪಾತಾಲಾನಿ ದಿಶೋ ನಭಃ ॥೧೮॥
ನ್ಯಪತದ್ವಜ್ರಘಾತೇನ ವಹ್ನಿರ್ಲೋಕಾನ್ ದದಾಹ ಸಃ ।
ಪರಸ್ಪರಂ ನಿರಸ್ತಾನಿ ವಜ್ರಾಣ್ಯಂತರ್ದಧುಸ್ತದಾ ॥೧೯॥
ತತೋಽವದನ್ಮಹಾದೈತ್ಯೋಽಮಾತ್ಯಾನ್ ಪ್ರತಿ ಮಹಾರುಷಾ ।

ವಾಯವ್ಯಾಸ್ತ್ರವು ಕುಂಠಿತವಾದುದನ್ನೂ, ಎಲ್ಲಿ ನೋಡಿದರೂ ಪರ್ವತಗಳು ರಾಶಿ ರಾಶಿಯಾಗಿದ್ದುದನ್ನೂ ನೋಡಿ, ಆ ಪರ್ವತಗಳನ್ನು ಭೇದಿಸಲಿಕ್ಕಾಗಿ ರಾಕ್ಷಸನು ವಜ್ರಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದ ಮಹಿಮೆಯಿಂದ ದೊಡ್ಡ ದೊಡ್ಡ ಬಂಡೆಯಾಕಾರದ ವಜ್ರಗಳು ಮೇಲ್ಮೇಲೆ ಉದುರಿ, ಆ ಪರ್ವತಗಳನ್ನೆಲ್ಲ ಪುಡಿಪುಡಿ ಮಾಡತೊಡಗಿದವು. ಆಗ ದೇವೇಶನು ಅಂಕುಶವನ್ನು ಕೈಗೆ ತೆಗೆದುಕೊಂಡು, ಅದನ್ನು ಮಹಾ ವಜ್ರಾಸ್ತ್ರ ಮಂತ್ರದಿಂದ ಅಭಿಮಂತ್ರಿಸಿ, ಸಶಕ್ತವನ್ನಾಗಿ ಮಾಡಿದನು. ॥೧೬-೧೭॥

ಸಿದ್ಧವಾದ ಮಹಾ ವಜ್ರಾಸ್ತ್ರರೂಪೀ ಆ ಅಂಕುಶಾಯುಧವನ್ನು ದೇವನು ರಾಕ್ಷಸನಿಂದ ನಿರ್ಮಿತವಾಗಿದ್ದ ವಜ್ರಾಸ್ತ್ರದ ಮೇಲೆ ಎರಗುವಂತೆ ಗುರಿ ನೋಡಿ ಬೀಸಿ ಎಸೆದನು. ಆಗಿನ ಅದ್ಭುತವನ್ನೇನೆಂದು ವರ್ಣಿಸಲಿ, ವ್ಯಾಸ! ಅವೆರಡೂ ಪರಸ್ಪರ ದ್ವೇಷದಿಂದ ಹೋರಾಡತೊಡಗಿದವು. ಅವೆರಡರ ಘರ್ಷಣೆಯಿಂದುಂಟಾದ ಖಣಲ್, ಖಣಲ್ ಎಂಬ ಭಯಂಕರ ಶಬ್ದವು ಭೂಮಿಯನ್ನು ನಡುಗಿಸಿತು. ಪಾತಾಳಲೋಕ ಅಲ್ಲೋಲ ಕಲ್ಲೋಲವಾಯಿತು. ದಿಕ್ಕುಗಳೆಲ್ಲ ತಿರುಗಲಾರಂಭಿಸಿದವು. ॥೧೮॥

ವಜ್ರಾಸ್ತ್ರಗಳೆರಡರ ಘರ್ಷಣೆಯಿಂದ ಅಗ್ನಿಯು ಉದ್ಭವಿಸಿ ನೆಲಕ್ಕೆ ಬಿದ್ದು, ಲೋಕಗಳನ್ನೆಲ್ಲ ದಹಿಸಿತು. ಪರಸ್ಪರರ ಆಯುಧಗಳಿಂದ ಹೊರಹೊಮ್ಮಿದ ವಜ್ರಗಳು ಅಲ್ಲಲ್ಲೇ ಅಂತರ್ಧಾನವನ್ನು ಹೊಂದಿದವು. ॥೧೯॥

ಪ್ರತಿಕಕ್ಷಿಯ ಚಾತುರ್ಯ ಬಲಗಳಿಂದ ದೈತ್ಯನಿಗೆ ಬಹಳ ಕೋಪ ಉಂಟಾಯಿತು. ಆಗ ತನ್ನ ಮಂತ್ರಿಗಳನ್ನು ಸಮೀಪಕ್ಕೆ ಕರೆದು, ಹೀಗೆಂದು ಹೇಳಿದನು :

**ಸಿಂಧುರುವಾಚ :—**

**ಕಿಮನೇನ ಪ್ರಯೋಗೇಣ ಭಸ್ಮ ಕುರ್ಯಾಂ ಕ್ಷಣಾದಮುಮ್ ॥೨೦॥**

**ಶಿವಾಬಾಲಂ ಶಿವಾಸ್ತನ್ಯಪಾಲದಕ್ಷಂ ಶಿವೋಚಿತಮ್ ।**

**ಕ ಉವಾಚ :—**

**ಇತ್ಯುಕ್ತ್ವಾಭಿದ್ರವದ್ದೈತ್ಯೋ ಹಂತುಂ ತಂ ಸ ಗುಣೇಶ್ವರಮ್ ॥೨೧॥**

**ದಧಾರ ತಂ ನಿರೀಕ್ಷ್ಯೈವಮಾಯಾಂತಂ ದೈತ್ಯಪುಂಗವಮ್ ।**

**ವಿರಾಡ್ರೂಪೋ ಮಯೂರೇಶೋ ಬಿಭೇದ ಸಹಸಾ ನಭಃ ॥೨೨॥**

**ಚರಣಾಕ್ರಾಂತಪಾತಾಲಃ ಶ್ರೋತ್ರವ್ಯಾಪ್ತದಿಗಂತರಃ ॥೨೩॥**

**ಸಹಸ್ರಪಾದಂ ಸಹಸಾ ನಿರೀಕ್ಷ್ಯ ಸಹಸ್ರನೇತ್ರಂ ಚ ಸಹಸ್ರಶೀರ್ಷಮ್ ।**

---

ಸಿಂಧು :—

ಇದೇನೀ ಆಟ. ಅಸ್ತ್ರ, ಪ್ರತ್ಯಸ್ತ್ರಗಳ ಪ್ರಯೋಗದಿಂದ ವ್ಯರ್ಥವಾಗಿ ಕಾಲಯಾಪನೆಯಾಗುತ್ತಿರುವುದಲ್ಲವೇ, ಮತ್ತಾವ ಪ್ರಯೋಜನವೂ ಆಗುವಂತೆ ಕಂಡುಬರಲೊಲ್ಲದು. ಆದುದರಿಂದ ಒಂದು ಕ್ಷಣದೊಳಗಾಗಿಯೇ ಇವನನ್ನು ಸುಟ್ಟು ಬೂದಿ ಮಾಡಿಬಿಡುವೆನು. ॥೨೦॥

ಶಿವನ ಬಾಲಕನಾದ ಈ ಪೋರನು ಶಿವೆ (ಪಾರ್ವತಿ) ಯ ಸ್ತನ್ಯವನ್ನು ಪಾನ ಮಾಡಲಿಕ್ಕೆ ಅರ್ಹನಾದವನು. ಇವನಿಗೇಕೆ ಬೇಕು, ಈ ಯುದ್ಧ. ಶಿವನು ಭಸ್ಮಲಿಪ್ತಾಂಗನಲ್ಲವೇ ? ಅವನ ಮಗನಾದ ಇವನೂ ಹಾಗೆಯೇ ಇರಬೇಕಾದುದು ಉಚಿತವಾದುದರಿಂದ ಈಗಲೇ ಇವನನ್ನು ಬೂದಿ ಮಾಡಿ ಬಿಡುವೆನು.

ಬ್ರ —

ಹೀಗೆಂದು ಆಲಂಕಾರಿಕ ಶಬ್ದಗಳನ್ನು ಪ್ರಯೋಗಿಸುತ್ತ ನುಡಿದನು ಮತ್ತು ಗುಣೇಶ್ವರನನ್ನು ಕೊಲ್ಲುವುದಕ್ಕಾಗಿ ಓಡಿ ಮುಂದಕ್ಕೆ ಬಂದನು. ॥೨೧॥

ಓಡಿಬರುತ್ತಿರುವ ಸಿಂಧು ದೈತ್ಯನನ್ನು ದೇವನು ಬಲವಾಗಿ ಕೈಗಳಿಂದ ಹಿಡಿದು ಒಡನೆಯೇ ವಿರಾಡ್ರೂಪವನ್ನು ಧರಿಸಿ, ನಭೋಮಂಡಲವನ್ನೂ ಭೇದಿಸಿ ಬೆಳೆದು ನಿಂತನು. ॥೨೨॥

ಅವನ ಚರಣಗಳು ಪಾತಾಳಲೋಕವನ್ನು ವ್ಯಾಪಿಸಿದ್ದವು. ಅವನ ಕಿವಿಗಳು ದಿಕ್ಕುಗಳ ಅಂಚಿಗೆ ಅಂಟಿಕೊಂಡಿದ್ದವು ॥೨೩॥

ದೇವನು ಸಹಸ್ರಾರು ಪಾದಗಳುಳ್ಳವನಾಗಿ ತೋರಿದನು. ಸಾವಿರಾರು ತಲೆಗಳು ದೇವನ ಕಂಧರದ ಮೇಲೆ ಕಂಡವು. ಅವಕ್ಕೆ ದ್ವಿಗುಣಿತವಾದ ಕಣ್ಣುಗಳು. ಅಂತಹ ಅದ್ಭುತಾಕಾರದ ವ್ಯಕ್ತಿಯು ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿ ನಿಂದಿದ್ದಿತು ತನ್ನನ್ನು

**ಖಂ ರೋದಸೀ ವ್ಯಾಪ್ಯ ಚ ತಿಷ್ಠಮಾನಂ ಸಿಂಧುರ್ಮುಮೂರ್ಛಾಥ ಪ**
**ತಚ್ಚ ಭೂಮೌ ||೨೪||**

**ಆಚ್ಛಾದಯಂತಂ ಹಸ್ತೇನ ವ್ಯೋಮ ಸರ್ವಂ ಸುರೇಶ್ವರಮ್ |**
**ಸಾವಧಾನಮನಾಃ ಕಿಂಚಿತ್ಸಸ್ಮಾರ ರವಿಜಂ ವರಮ್ ||೨೫||**

**ಸಿಂಧುರುವಾಚ :—**

**ರವಿಣಾ ಪೂರ್ವಮುಕ್ತೋऽಹಂ ವರದಾನೇ ಮಹೌಜಸಾ |**
**ಆಚ್ಛಾದಯೇದ್ಯೋ ಗಗನಮೇಕಹಸ್ತೇನ ತೇऽಸುರ | ||೨೬||**
**ಸ ತೇ ಮುಕ್ತಿಪದಂ ಸದ್ಯೋ ನೇಷ್ಯತೇ ಬಹುಕಾಲತಃ |**
**ಅತೋऽನೇನ ರಣೇನಾಲಂ ಯದ್ಭಾವ್ಯಂ ತದ್ಭವಿಷ್ಯತಿ ||೨೭||**

ಹಿಡಿದವರಾರೆಂದು ತಿಳಿಯಲು ಸಿಂಧುದೈತ್ಯನು ಸರ್ರನೆ ತಿರುಗಿ ನೋಡಿದನು. ಅಲ್ಲಿ ಅದ್ಭುತವಾದ ದೇವನ ರೂಪ ಕಂಡಿತು. ಆಗ ಅವನಿಗೆ ಸ್ಮೃತಿಯೇ ತಪ್ಪಿತು. ನಡುಗುತ್ತ ನೆಲಕ್ಕೆ ಧೊಪ್ಪನೆ ಬಿದ್ದುಬಿಟ್ಟನು. ||೨೪||

ದೇವನು ತನ್ನ ಒಂದು ಹಸ್ತದಿಂದ ನಭೋಮಂಡಲವನ್ನೆಲ್ಲ ಮುಚ್ಚಿಬಿಟ್ಟಿದ್ದನು. ಸಿಂಧು ಸ್ವಲ್ಪ ವೇಳೆ ಕಳೆದ ಬಳಿಕ, ಸಾವಧಾನವಾಗಿ ಸುದಾರಿಸಿಕೊಂಡು, ರವಿರಾಜ ತನಗೆ ವರವನ್ನು ಕೊಡುವಾಗ ಸೂಚಿಸಿದ ಸೂಕ್ಷ್ಮಾಂಶಗಳನ್ನೆಲ್ಲ ಒಂದೊಂದನ್ನಾಗಿ ಸ್ಮರಣಕ್ಕೆ ತಂದುಕೊಂಡನು. ||೨೫||

ಸಿಂಧು :—

ಮಹಾ ತೇಜಸ್ವಿಯಾದ ದಿನಮಣಿಯು ನನ್ನ ತಪಸ್ಸಿಗೆ ಮೆಚ್ಚಿ ವರಗಳನ್ನು ಕೊಡುವ ಸಂದರ್ಭದಲ್ಲಿ ಈ ಅಂಶವನ್ನು ನನಗೆ ತಿಳಿಯುವಂತೆ ಸ್ಪಷ್ಟವಾಗಿ ಹೇಳಿದ್ದನು. " ಅಸುರ ! ಯಾರು ತನ್ನ ಒಂದೇ ಹಸ್ತದಿಂದ ಈ ನಭೋಮಂಡಲವನ್ನೆಲ್ಲ ಮುಚ್ಚಿ ಬಿಡುವನೋ, ||೨೬||

ಅವನೇ ನಿನಗೆ ಒಡನೆಯೇ ಮುಕ್ತಿಯನ್ನು ಕೊಡುತ್ತಾನೆ. ಅರ್ಥಾತ್ ಈ ದೇಹಕ್ಕೆ ಅಂತಕನಾಗುತ್ತಾನೆ. ಈ ಘಟನೆ ಬಹಳ ಕಾಲ ಕಳೆದ ಬಳಿಕ ಸಂಭವಿಸುತ್ತದೆ " ಎಂದಿದ್ದ ರೀತಿಯಲ್ಲೇ ಈಗ ಹೀಗೆ ನಡೆದಿದೆ. ನನಗೆ ಮೃತ್ಯುಕಾಲ ಪ್ರಾಪ್ತಿಯಾಗಿದೆ ಎಂದು ಕಾಣುತ್ತದೆ. ಹೀಗಿರುವಾಗ, ಇನ್ನು ವೃಥಾ ಯುದ್ಧದ ಗೊಡವೆ ಏಕೆ ? ಏನೇನಾಗಬೇಕಾಗಿದೆಯೋ, ಅದೆಲ್ಲವೂ ನಡೆದೇ ನಡೆಯುತ್ತದೆ. ||೨೭||

**ಕ ಉವಾಚ :—**

**ಪುನರ್ನಿರೀಕ್ಷ್ಯಮಾಣೋಽಸೌ ಹ್ರಸ್ವಕಾಯಂ ದದರ್ಶ ತಮ್ !**
**ಷಡ್ಭುಜಂ ತು ಮಯೂರೇಶಂ ಪರಂ ವಿಸ್ಮಯಮಾಯಯೌ ||೨೮||**
**ತತೋಽವರುಹ್ಯ ದೇವೇಶೋ ಮಯೂರೇಶಃ ಶಿಖಂಡಿನಃ |**
**ಉಪಸ್ಪೃಶ್ಯ ಜಲಂ ಶುದ್ಧಂ ಜಜಾಪ ಪರಮಂ ಮನುಮ್ ||೨೯||**
**ಪರಶುಂ ಮಂತ್ರಯಾಮಾಸ ಮಹೋವ್ಯಾಪ್ತಂ ದಿಗಂತರಮ್ |**
**ಲಕ್ಷೀಕೃತ್ಯ ರಿಪೋರ್ನಾಭಿಂ ಸುಧಾಮಾತ್ರೇಣ ಸಂಯುತಮ್ ||೩೦||**
**ಸ್ಫೋಟಯನ್ನಿನ ಬ್ರಹ್ಮಾಂಡಂ ಕ್ರೋಧಸಂರಕ್ತಲೋಚನಃ |**
**ಜ್ವಾಲಾಮಾಲಾಕುಲಂ ತಂ ಸ ಮುಮೋಚ ಗಿರಿಜಾಸುತಃ ||೩೧||**

---

ಬ್ರಹ್ಮಾ :—

ಆ ಅದ್ಭುತಾಕಾರ ಕಂಡುಬಂದೆಡೆ ಮತ್ತೊಮ್ಮೆ ತಿರುಗಿ ನೋಡಿದನು. ಗಣಪತಿಯ ಮೂರ್ತಿ ಸಣ್ಣದಾಗಿ ಕಂಡುಬಂದಿತು. ಆರು ಭುಜಗಳಿಂದ ವಿರಾಜಿತನಾದ ಪುಟ್ಟ ಮಯೂರೇಶನನ್ನು ನೋಡಿ, ರಾಕ್ಷಸನಿಗೆ ಬಹಳ ಆಶ್ಚರ್ಯವಾಯಿತು. ||೨೮||

ಅನಂತರ ದೇವನು ತನ್ನ ವಾಹನವಾದ ಶಿಖಂಡಿಯ ಬೆನ್ನಿನಿಂದ ಇಳಿದು, ಶುದ್ಧ ಜಲವನ್ನು ಆಚಮಿಸಿ, ಅತ್ಯಮೋಘವಾದ ಮಹಾಮಂತ್ರವನ್ನು ಏಕಾಗ್ರತೆಯಿಂದ ಜಪಿಸಿದನು. ||೨೯||

ಸ್ವಭಾವಸುಂದರರಾದವರು ಒಳ್ಳೆ ಒಳ್ಳೆಯ ಒಡವೆ-ವಸ್ತುಗಳು, ಬೆಲೆಬಾಳುವ ಬಟ್ಟೆ, ಪುಷ್ಪ, ಚಂದನ ಇತ್ಯಾದಿಗಳಿಂದ ಅಲಂಕರಿಸಿಕೊಂಡರೆ, ಹೆಚ್ಚು ಸುಂದರರಾಗಿ ಕಂಡುಬರುವಂತೆ, ಸ್ವತಃ ಯೋಗೇಶ್ವರನಾದ ಜಗದೀಶ್ವರನು ದಿವ್ಯವಾದ ಶಿವೋಪದಿಷ್ಟ ಮಹಾಮನು (ಮಹಾಮಂತ್ರ)ವನ್ನು ಜಪಿಸಿದುದರಿಂದ ಅವತಾರಿಕ ಆ ದೇಹ, ಆಯುಧಗಳ ಶಕ್ತಿಯು ಮತ್ತಷ್ಟು ಪ್ರಬಲತರವಾಯಿತು. ಆ ಮಹಾಮಂತ್ರದಿಂದ ಹೊಳೆವ ತನ್ನ ಪರಶುವನ್ನು ದಿಗಂತದ ವರೆಗೂ ಬೆಳಗುವಂತೆ ಅಭಿಮಂತ್ರಿಸಿ, ಅಮೃತ ಮಂತ್ರ ಪರಿರಕ್ಷಿತವಾದ ಅಸುರನ ನಾಭಿ ಪ್ರದೇಶಕ್ಕೆ ಗುರಿಯಿಟ್ಟು ||೩೦||

ಬ್ರಹ್ಮಾಂಡವನ್ನೇ ಭೇದಿಸಿಬಿಡುವನೋ, ಎಂಬಂತೆ ಕ್ರೋಧಸಂರಕ್ತಲೋಚನನಾದ ಗಿರಿಜಾಸುತನು ಜ್ವಾಲಾಮಾಲೆಯಿಂದ ಉರಿಯಲಾರಂಭಿಸಿದ ಅದನ್ನು ಪ್ರಯೋಗಿಸಿದನು. ||೩೧||

ಸ ಮೋಚ್ಯಮಾನೋ ಗಗನಂ ನಾದಯನ್ ವಿದಿಶೋ ದಿಶಃ ।
ಭಾಸಯನ್ ಮಹಸಾ ಪೃಥ್ವೀಂ ಸ-ಪರ್ವತವನಾಕರಾಮ್ ॥೩೨॥

ದೃಷ್ಟ್ವಾ ದೈತ್ಯಃ ಸಮಾಯಾಂತಂ ಪರಶುಂ ಕಾಲಸನ್ನಿಭಮ್ ।
ಶೀಘ್ರಂ ಚಕ್ರೇ ಧನುರ್ಘೋರಂ ಶರಂ ಯಾವದ್ಧಿ ಯೋಜ್ಯತೇ ॥೩೩॥

ತಾವತ್ಸ ಬಿಭಿದೇ ನಾಭಿಮಮೃತಾಭಿಯುತಂ ಲಘು ।
ಅಮೃತೇ ನಿಃಸೃತೇ ದೈತ್ಯೋ ವಾತಾಹತ ಇವ ದ್ರುಮಃ ॥೩೪॥

ಪಪಾತ ಸಹಸಾ ಭೂಮೌ ವಜ್ರಾಹತ ಇವಾಚಲಃ ।
ಪ್ರಸಾರ್ಯ ವಕ್ತ್ರಂ ರುಧಿರಂ ವಮನ್ ಪ್ರಾಣಾನ್ ವಿಸೃಜ್ಯ ಸಃ ॥೩೫॥

---

ಆ ಪರಶು ದೇವನ ಹಸ್ತದಿಂದ ಹೊರಡುವಾಗ ಬಹಳ ಭಯಂಕರವಾದ ಶಬ್ದವನ್ನುಮಾಡಿತು. ಧ್ವನಿಯಿಂದ ಗಗನವೂ, ದಿಗ್ವಿದಿಕ್ಕುಗಳೂ ಎಲ್ಲವೂ ಒಮ್ಮೆಲೆ ಪ್ರತಿನಾದ ಮಾಡಿದವು. ಪರಶು ಬಹಳ ಪ್ರಕಾಶಮಾನವಾಗಿದ್ದುದರಿಂದ ವನ, ಪರ್ವತ ಇತ್ಯಾದಿ ವಸ್ತುಜಾತದಿಂದ ಕಂಗೊಳಿಸುವ ಇಡೀ ಪೃಥಿವಿಯನ್ನೇ ತನ್ನ ಪ್ರಭೆಯ ಮೂಲಕ ಬೆಳಗಿತು. ॥೩೨॥

ಮೃತ್ಯುವೇ ರಭಸದಿಂದ ಬಳಿಗೆ ಬರುತ್ತಿರುವಂತೆ ಪರಶು ತನ್ನನ್ನು ಲಕ್ಷಿಸಿ ಬರುತ್ತಲಿದೆ. ಅದನ್ನು ನೋಡಿ ದೈತ್ಯನು ಸ್ವಲ್ಪವೂ ಕಾಲಕಳೆಯದೇ, ಘೋರವಾದ ತನ್ನ ಧನುಸ್ಸನ್ನು ಸಿದ್ಧಗೊಳಿಸಿ, ಬಾಣವನ್ನು ಹೂಡಲು ಹವಣಿಸಿದನು. ಆದರೆ ದೈವಗತಿ, ಅಷ್ಟರೊಳಗಾಗಿಯೇ ॥೩೩॥

ಆ ಪರಶು ಬಹಳ ಚಮತ್ಕಾರಗತಿಯಿಂದ ಸುಂಯ್‌ಗುಟ್ಟುತ್ತ ರಾಕ್ಷಸನ ಸಮೀಪಕ್ಕೆ ಬಂದು, ಅಮೃತ ರಸದಿಂದ ತುಂಬಿದ ರಕ್ಕಸನ ನಾಭಿಯನ್ನುಭೇದಿಸಿ ಬಿಟ್ಟಿತು. ಒಡನೆಯೇ ಸಿಂಧುವಿನ ನಾಭೀ ಕುಹರದಿಂದ ಅಮೃತರಸವು ನೆಲಕ್ಕೆ ಸುರಿದು ಹೋಯಿತು. ಯಾವ ಅಮೃತದ ಬಲದಿಂದ ಅದುವರೆಗೂ ಯಾರಿಗೂ ರಕ್ಕಸನು ತಲೆಬಾಗಿರಲಿಲ್ಲವೋ, ಅಂತಹ ದೈತ್ಯನು ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಬಲ್ಬಜ ಗಿಡದಂತೆ ॥೩೪॥

ಒಮ್ಮೆಲೇ ನೆಲಕ್ಕುರುಳಿ ಬಿದ್ದುಬಿಟ್ಟನು. ವಜ್ರಾಯುಧದ ಏಟಿಗೆ ಸಿಲುಕಿದ ಪರ್ವತವು ನುಚ್ಚು ನೂರಾಗುವಂತೆ ಅಸುರನ ಸ್ಥಿತಿಯಾಯಿತು. ತೆರೆದ ಬಾಯಿಯಿಂದ ಧಾರಾಕಾರವಾಗಿ ರಕ್ತವನ್ನು ಕಾರುತ್ತ, ಸಿಂಧುದೈತ್ಯನು ವಿಧಿಯಿಲ್ಲದೇ ಪ್ರಾಣಗಳನ್ನು ತ್ಯಜಿಸಿಬಿಟ್ಟನು. ॥೩೫॥

**ಮಯೂರೇಶಪ್ರಸಾದೇನ ಮುಕ್ತಿಂ ಪ್ರಾಪ ಸು-ದುರ್ಲಭಾಮ್ ।**
**ಪಶ್ಯತಾಂ ಸರ್ವಲೋಕಾನಾಂ ತದದ್ಭುತಮಿವಾಭವತ್ ॥೩೬॥**

**ಅವತೇರುರ್ವಿಮಾನಾನಿ ಯುದ್ಧಂ ದ್ರಷ್ಟುಂ ಸ್ಥಿತಾನಿ ಹ ।**
**ಪಪಾತ ಪುಷ್ಪವೃಷ್ಟಿಶ್ಚ ಶನೈರ್ಮೇಘಾ ಜಗರ್ಜಿರೇ ॥೩೭॥**

**ಅಶೀಶಮದ್ರಜೋ ಭೌಮಂ ವವೌ ವಾತಸ್ಸುಖಾವಹಃ ।**
**ಪ್ರಸೇದುಶ್ಚ ದಿಶಃ ಸರ್ವಾ ಗಂಧರ್ವಾ ಮಧುರಂ ಜಗುಃ ॥೩೮॥**

**ನನೃತುಶ್ಚಾಪ್ಸರಸ್ಸಂಘಾಸ್ತುಷ್ಟುವುರ್ಮುನಿದೇವತಾಃ ।**
**ಷಡಾನನಾದಯೋ ವೀರಾ ಮಯೂರೇಶಂ ಮುದಾಯುತಾಃ ॥೩೯॥**

---

ಆ ದೃಶ್ಯವನ್ನು ಎಲ್ಲರೂ ನೋಡುತ್ತಲಿದ್ದರು. ಎಂತಹ ತಪಸ್ವಿದ್ಧರಿಗೂ ಸುಗಮವಲ್ಲದ ಮುಕ್ತಿಸಾಮ್ರಾಜ್ಯವನ್ನು ಮಹಾಗಣಪತಿಯು ಸಿಂಧುವಿಗೆ ಅನುಗ್ರಹಿಸಿ ಕೊಟ್ಟನು. ರಾಕ್ಷಸನು ದೇವನ ಅಡಿದಾವರೆಗಳಲ್ಲೇ ಐಕ್ಯವನ್ನು ಹೊಂದಿದನು. ಎಲ್ಲರಿಗೂ ಈ ಸನ್ನಿವೇಶ ಅತ್ಯದ್ಭುತವೆನಿಸಿತು. ॥೩೬॥

ಯುದ್ಧವನ್ನು ನೋಡಲಿಕ್ಕಾಗಿ ವಿಮಾನಗಳ ಮೇಲೇರಿ ಆಕಾಶದಲ್ಲಿ ಹಾರಾಡುತ್ತಲಿದ್ದವರೆಲ್ಲ ಮೆಲ್ಲಗೆ ಕೆಳಕ್ಕಿಳಿದು, ದೇವನ ಸನ್ನಿಧಿಗೆ ಬಂದರು. ಅಖಂಡವಾಗಿ ಪುಷ್ಪವೃಷ್ಟಿಯಾಯಿತು. ಮೇಘಗಳು ಮಂದವಾಗಿ ಗರ್ಜಿಸಿ, ದೇವನಿಗೆ ಜಯಕಾರವನ್ನು ಮಾಡಿದವು. ॥೩೭॥

ಮೇಘಗಳು ಮೃದುವಾಗಿ ಹನಿ ಹಾಕಿದುದರಿಂದ ಮೇಲೆದ್ದ ಭೂಮಿಯ ಧೂಳೆಲ್ಲ ಅಡಗಿಹೋಯಿತು. ಮಾರುತನು ಸುಖಕರವಾಗಿರುವಂತೆ ಮಂದಗತಿಯಿಂದ ಬೀಸಿದನು. ದಿಕ್ಕುಗಳೆಲ್ಲ ಪ್ರಸನ್ನವಾದವು. ದೇವಗಾಯಕರಾದ ಗಂಧರ್ವರು ಸು-ಮಧುರ ಧ್ವನಿಯಿಂದ ಭಗವಂತನ ಗುಣಗಣವನ್ನು ಗಾನಮಾಡಿದರು. ॥೩೮॥

ದೇವನರ್ತಕಿಯರಾದ ಅಪ್ಸರಾಂಗನೆಯರು ತಮ್ಮ ಗುಂಪಿನೊಂದಿಗೆ ಅನೇಕವಿಧ ಭಾವಭಂಗಿಗಳಲ್ಲಿ ನರ್ತಿಸಿದರು. ಮುನಿಗಳು, ದೇವತೆಗಳು ಸೇರಿ ದೇವರ ದೇವನನ್ನು ಅನನ್ಯಭಾವದಿಂದ ಸ್ತುತಿಸಿದರು. ಷಡಾನನ ಮೊದಲಾದ ದೇವಸೇನಾನಾಯಕರು ಮತ್ತು ದೇವವೀರರು ಸಿಂಧುವಿನ ಮರಣದಿಂದ ಅತಿ ಮುದಿತರಾಗಿ ಮಯೂರೇಶ್ವರನನ್ನು ಕುರಿತು ಹೀಗೆಂದು ಸ್ತುತಿಸಿದರು. ॥೩೯॥

**ಸರ್ವ ಊಚುಃ :—**

**ಪರಬ್ರಹ್ಮರೂಪಂ ಚಿದಾನಂದರೂಪಂ**
**ಸದಾನಂದರೂಪಂ ಸುರೇಶಂ ಪರೇಶಮ್ ।**
**ಗುಣಾಬ್ಧಿಂ ಗುಣೇಶಂ ಗುಣಾತೀತಮೀಶಂ**
**ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ** ॥೪೦॥
**ಜಗದ್ವಂದ್ಯಮೇಕಂ ಪರೋಂಕಾರಮೇಕಂ**
**ಗುಣಾನಾಂ ಪರಂ ಕಾರಣಂ ನಿರ್ವಿಕಲ್ಪಮ್ ।**
**ಜಗತ್ಪಾಲಕಂ ಹಾರಕಂ ತಾರಕಂ ತಂ**
**ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ** ॥೪೧॥

---

ವೀರರು :—

ಭಗರ್ವ! ನೀನು ಚತುರ್ಮುಖ ಬ್ರಹ್ಮನಿಗೂ ಮೂಲಾಧಾರವೆನಿಸಿದ ಪರಬ್ರಹ್ಮ ಸ್ವರೂಪನು. ಜ್ಞಾನಾನಂದಘನನು. "ಸಕ್ಕರೆ ಸಿಹಿಯಾಗಿದೆ" ಎಂದಂತೆ 'ನೀನು ಸರ್ವದಾ ಆನಂದದಿಂದಿರುವೆ'. (ಸಕ್ಕರೆ, ಸಿಹಿ ಇವು ಹೇಗೆ ಪರಸ್ಪರ ಅವಿನಾಭಾವವುಳ್ಳವೋ ಎಂದರೆ ಸಿಹಿರಸವೇ ಹೇಗೆ ಸಕ್ಕರೆಯೋ, ಅದರಂತೆಆನಂದವೇ ನೀನಾಗಿರುವೆ.) ಸುರರಿಗೆಲ್ಲ ನೀನು ಈಶ್ವರ (ನಿಯಾಮಕ) ನಾದವನು. ನಿನಗೆ ನಿಯಾಮಕನಾದವನು ಬೇರೊಬ್ಬನಿಲ್ಲವಾದುದರಿಂದ ನೀನು ಪರೇಶನೆನಿಸುವೆ. ನೀನು ಗುಣಪರಿಪೂರ್ಣನಾದರೂ, ಆ ಗುಣಗಳ ಸಂಪರ್ಕ ನಿನಗಿರುವುದಿಲ್ಲ. ಅಲ್ಲದೆ ಅವೆಲ್ಲ ನಿನಗೆ ಅಧೀನವಾಗಿವೆ. ಇಂತಹ ಪರಮಪುರುಷ; ಮಯೂರೇಶ್ವರನನ್ನು ನಾವು ನಮಿಸುತ್ತೇವೆ. (ಈ ಶ್ಲೋಕಗಳಲ್ಲಿ ಉಲ್ಲೇಖಗೊಂಡ "ನತಾಃ ಸ್ಮಃ" ಎಂಬ ಎರಡನೆಯ ಪದವನ್ನು "ಆದರಾತ್ ದ್ವಿರುಕ್ತಿಃ" ಎಂಬ ಸಂಪ್ರದಾಯಕ್ಕನುಸರಿಸಿ, ಹೆಚ್ಚು ಆದರವನ್ನು ತೋರಿಸುವುದಕ್ಕಾಗಿ ಉಚ್ಚರಿಸಿದುದು ಎಂದು ತಿಳಿಯಬೇಕು.) ॥೪೦॥

ಜಗದಂತರ್ಗತರೆಲ್ಲರೂ ನಿನ್ನನ್ನು ವಂದಿಸುವರು. ನಿನ್ನ ಹೊರತು ತೋರತಕ್ಕವರೆಲ್ಲ ನಿನ್ನ ಪ್ರತಿಬಿಂಬರಾದುದರಿಂದ ಅವರಿಗೆ ಮೂಲ ಬಿಂಬವಾಗಿರತಕ್ಕವನು ನೀನೊಬ್ಬನೇ. ಸಕಲ ವರ್ಣರಾಶಿಗೂ ಓಂಕಾರ (ಪ್ರಣವ) ವು ಹೇಗೆ ಮೂಲಾಧಾರವೋ, ಅದರಂತೆ ಸ್ಥಾವರ-ಜಂಗಮಾತ್ಮಕವಾದ ಈ ವಿಶ್ವಕ್ಕೆಲ್ಲ ನೀನೊಬ್ಬನೇ ಮೂಲಭೂತನು. ಸತ್ತ್ವ ರಜಸ್ತಮೋಗುಣಗಳಿಗೆ ಪರಮಮೂಲನಾದವನು. ನಿಶ್ಚಯಾತ್ಮಕವಾದ ಬುದ್ಧಿಯ ಸ್ವರೂಪನು. ಜಗತ್ತನ್ನು ಸ್ಥಿತಿಕಾಲದಲ್ಲಿ ಪರಿಪಾಲಿಸತಕ್ಕವನು. ನಿಯಮಿತಾವಧಿ ಮುಗಿದ ಬಳಿಕ, ಅದನ್ನು ಲಯಗೊಳಿಸತಕ್ಕವನು. ಸಾಂಸಾರಿಕ ದುಃಖಸಾಗರದಲ್ಲಿ ನಿಮಗ್ನರಾಗಿ ತೊಳಲುತ್ತಿರುವ ಭಕ್ತಾಗ್ರಣಿಗಳನ್ನು ಈ

ಮಹಾದೇವಸೂನುಂ ಮಹಾದೈತ್ಯನಾಶಂ
ಮಹಾಪೂರುಷಂ ಸರ್ವದಾ ವಿಘ್ನನಾಶಮ್ ।
ಸದಾ ಭಕ್ತಪೋಷಂ ಪರಂ ಜ್ಞಾನಕೋಶಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ||೪೨||

ಅನಾದಿಂ ಗುಣಾದಿಂ ಸುರಾದಿಂ
ಶಿವಾಯಾ ಮಹಾತೋಷದಂ ಸರ್ವದಾ ಸರ್ವವಂದ್ಯಮ್ ।
ಸುರಾರ್ಯಂತಕಂ ಭುಕ್ತಿ-ಮುಕ್ತಿಪ್ರದಂ ತಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ||೪೩||

ಪರಂ ಮಾಯಿನಂ ಮಾಯಿನಾಮಪ್ಯಗಮ್ಯಂ
ಮುನಿಧ್ಯೇಯಮಾಕಾಶಕಲ್ಪಂ ಜನೇಶಮ್ ।

---

ಬಂಧನದಿಂದ ಬಿಡಿಸಿ ಉದ್ಧರಿಸತಕ್ಕವನು. ಇಂತಹ ಪುರಾಣಪುರುಷ; ಮಯೂರೇಶ್ವರನನ್ನು ನಾವು ವಂದಿಸುವೆವು. ||೪೧||

ಮೂವತ್ತುಮೂರು ಕೋಟಿ ದೇವತೆಗಳಿಗೂ ಉತ್ತಮರಾದ ತ್ರಿಮೂರ್ತಿಗಳಲ್ಲಿ ಒಬ್ಬನಾದ ಮಹಾದೇವನಿಗೆ ಮಗನಾಗಿ ಜನಿಸಿದವನು. ಯಾರಿಂದಲೂ ಕೊಲ್ಲಲಾಗದಂತಹ ಮಹಾ ಪ್ರತಾಪಿಗಳಾದ ದುಷ್ಟ ದೈತ್ಯರನ್ನು ನಾಶಮಾಡಿದವನು. ಮಹಾ ಪುರುಷರೆನಿಸುವವರ ರೂಪದಿಂದ ತೋರಿಬರತಕ್ಕವನು. ಆರ್ತರಾದ ಭಕ್ತರ ಜೀವನದಲ್ಲೊದಗುವ ಸಕಲ ದುಃಖಗಳನ್ನೂ ನಾಶಪಡಿಸಲು ಸರ್ವದಾ ಸಿದ್ಧನಾಗಿರತಕ್ಕವನು. ಭಕ್ತರನ್ನು ಎಡೆಬಿಡದೆ, ಪೋಷಿಸತಕ್ಕವನು. ಪರಮಾಂತರಂಗವೆನಿಸುವ ವಿಜ್ಞಾನಮಯ ಕೋಶದಲ್ಲಿ ಅಭಿವ್ಯಕ್ತನಾಗತಕ್ಕವನು. ಇಂತಹ ಆದಿ ದೇವನನ್ನು ನಾವು ವಂದಿಸುವೆವು.||೪೨||

ದೇವ! ನೀನು ಉತ್ಪತ್ತಿರಹಿತನಾದವನು. ತ್ರಿಗುಣಗಳ ಉತ್ಪತ್ತಿಗೂ ಪೂರ್ವದಲ್ಲೇ ನೀನು ಇದ್ದವನಾದುದರಿಂದ ನಿನ್ನನ್ನು ಸನಾತನ ಪುರುಷನೆಂದು ಶ್ರುತಿಶಿರಗಳು ಸಾರುತ್ತಿವೆ. ದೇವತೆಗಳಲ್ಲೆಲ್ಲ ಆದಿ ದೇವನೆನಿಸಿದವನು. ನಿನ್ನ ಲೀಲಾವಿನೋದ ಪ್ರದರ್ಶನದಿಂದ ಜಗನ್ಮಾತೆ; ಪರಶಿವೆಗೆ ಪರಮಾನಂದವನ್ನುಂಟುಮಾಡಿದವನು. ಎಲ್ಲರಿಂದಲೂ ಸರ್ವದಾ ವಂದಿತ ಚರಣಾರವಿಂದನು. ಸುರವೈರಿಗಳಿಗೆ ಸೂರ್ಯಸುತ (ಯಮ) ನಂತಿರುವವನು. ಬೇಡುವ ಭಕ್ತರಿಗೆ ಭುಕ್ತಿ–ಮುಕ್ತಿಗಳನ್ನು ಅನುಗ್ರಹಿಸತಕ್ಕವನು. ಮಯೂರೇಶ್ವರ! ಚಿರಂತನನಾದ ನಿನ್ನನ್ನು ನಾವು ವಂದಿಸುವೆವು. ||೪೩||

ಪರತರವಾದ ಮಾಯೆಯನ್ನು ಆಡಳಿತದಲ್ಲಿರಿಸಿಕೊಂಡವನು. ಎಂತಹ ಪ್ರಬಲ ಮಾಯಾವಿಯಾದರೂ ಅವನು ನಿನ್ನನ್ನು ಅರಿಯಲಾರನು. ಮುನಿಗಳ ನಿರ್ವಿಕ-

ಅಸಂಖ್ಯಾವತಾರಂ ನಿಜಾಜ್ಞಾನನಾಶಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ||೪೪||

ಅನೇಕಕ್ರಿಯಾಕಾರಣಂ ಶ್ರುತ್ಯಗಮ್ಯಂ
ತ್ರಯೀಚೋದಿತಾನೇಕ ಕರ್ಮಾದಿಬೀಜಮ್ ।
ಕ್ರಿಯಾಸಿದ್ಧಿಹೇತುಂ ಸುರೇಂದ್ರಾದಿಸೇವ್ಯಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ||೪೫||

ಮಹಾಕಾಲರೂಪಂ ನಿಮೇಷಾದಿರೂಪಂ
ಕಲಾಕಲ್ಪರೂಪಂ ಸದಾಗಮ್ಯರೂಪಮ್ ।
ಜನಜ್ಞಾನಹೇತುಂ ನೃಣಾಂ ಸಿದ್ಧಿದಂ ತಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ||೪೬||

ಲ್ಪಕ ಸಮಾಧಿಗೆ ಮಾತ್ರ ಗೋಚರನಾಗತಕ್ಕವನು. ಆಕಾಶ (ಬಯಲು) ದಂತೆ ಎಲ್ಲ ಸ್ಥಳಗಳನ್ನೂ ವ್ಯಾಪಿಸಿರತಕ್ಕವನು. ಎಲ್ಲರ ಅಂತರಂಗದಲ್ಲೂ ತಾನೇ ತಾನಾಗಿ ನೆಲೆಸಿನಿಂದು, ಅವರವರ ಪ್ರಾರಬ್ಧ ಕರ್ಮಾನುಗುಣವಾಗಿ ಪ್ರೇರಿಸುತ್ತ ಅವರನ್ನೆಲ್ಲ ಸ್ವಾಧೀನದಲ್ಲಿರಿಸಿಕೊಂಡವನು. ದುಷ್ಟರನ್ನು ನಿಗ್ರಹಿಸಿ, ಪ್ರಪಂಚದ ಸ್ಥಿತಿಗೆ ಮೂಲಾಧಾರವಾದ ಧರ್ಮವನ್ನು ನಿಬಂಧನಗೊಳಿಸುವುದಕ್ಕಾಗಿಯೂ, ತನ್ಮೂಲಕ ಶಿಷ್ಟರನ್ನು ಸಂರಕ್ಷಿಸುವುದಕ್ಕಾಗಿಯೂ ಆಯಾ ಸಂದರ್ಭಕ್ಕನುಸಾರವಾಗಿ ನಾನಾಬಗೆಯ ಅವತಾರಗಳನ್ನೆತ್ತಿದವನು. ಸ್ವ-ಸ್ವರೂಪವನ್ನುಮರೆಮಾಡಿರುವ ಮೂಲ ಮಾಯೆಯನ್ನೂ ಮರೆಮಾಡತಕ್ಕವನು. ಪ್ರಭೋ, ಸರ್ವೇಶ್ವರ! ನಿನ್ನನ್ನು ನಾವು ವಂದಿಸುವೆವು. ||೪೪||

ಸಕಲ ಕ್ರಿಯೆಗಳಿಗೂ ಪ್ರಚೋದಕನಾದವನು. ಶ್ರುತಿ (ವೇದ) ಗೆ ಸಹ ಅಗೋಚರನಾದವನು. ತ್ರಯೀ (ವೇದ) ಚೋದಿತ ಅನೇಕ ಕರ್ಮಗಳಿಗೆ ಬೀಜಭೂತನಾದವನು. ಕ್ರಿಯಾಸಿದ್ಧಿಗೆ ಮೂಲಕಾರಣನಾದವನು. ಸುರರಾಜ; ಪುರಂದರಾದಿಗಳಿಂದ ಸೇವಿತನಾದವನು. ಓ, ಮಯೂರೇಶ್ವರ! ನಿನ್ನನ್ನು ವಂದಿಸುವೆವು. ||೪೫||

ನಿರವಧಿಕವಾದ ಈ ಮಹಾಕಾಲದ ಸ್ವರೂಪ ನೀನು. ಮಹಾಕಾಲದ ಸೂಕ್ಷ್ಮಾಂಶಗಳೆನಿಸಿದ ಕಲಾ, ಕಾಷ್ಠಾ, ಮುಹೂರ್ತ, ನಿಮೇಷಾದಿಗಳೂ ನಿನ್ನ ಸ್ವರೂಪವೇ ಆಗಿವೆ. ಪ್ರಳಯದ ಸ್ವರೂಪನೂ ನೀನೇ. ನಿನ್ನ ಸ್ವರೂಪವು ಇಂತಹದು ಎಂದು ಯಾರಿಗೂ ಗೋಚರವಾಗತಕ್ಕುದಲ್ಲ (ಎಂದರೆ ಇಂದ್ರಿಯಾದಿವೇದ್ಯವಾದುದಲ್ಲ.) ಜನರಿಗೆ ಜ್ಞಾನೋದಯವಾಗಲಿಕ್ಕೆ ಸಾಧಕನಾದವನು. ಸಾಧಕ

ಮಹೇಶಾದಿದೇವೈಃ ಸದಾ ಸೇವ್ಯಪಾದಂ
ಸದಾ ರಕ್ಷಕಂ ಯೋಗಿನಾಂ ಚಿತ್ಸ್ವರೂಪಮ್ ।
ಸದಾ ಕಾಮರೂಪಂ ಕೃಪಾಂಭೋನಿಧಿಂ ತಂ
ಮಯೂರೇಶಮಾದ್ಯಂ ನತಾಃ ಸ್ಮೋ ನತಾಃ ಸ್ಮಃ ॥೪೭॥

ಸದಾ ಭಕ್ತಾನಾಂ ತ್ವಂ ಪ್ರಣಯಪರಮಾನಂದಸುಖದೋ
ಯತಸ್ತ್ವಂ ಲೋಕಾನಾಂ ಪರಮಕರುಣಾಮಾಶು ತನುಷೇ ।
ಷಡೂರ್ಮೀಣಾಂ ವೇಗಂ ಸುರವರ ! ಸದಾ ನಾಶಯ ವಿಭೋ !
ತತೋ ಮುಕ್ತಿಃ ಶ್ಲಾಘ್ಯಾ ತವ ಭಜನತೋಽನಂತಸುಖದಾತ್ ॥೪೮॥

ಕಿಮಸ್ಮಾಭಿಃ ಸ್ತೋತ್ರಂ ಜಗದವನ ! ತೇ ಶಕ್ಯಮತುಲಂ
ವಿಧಾತುಂ ವಿಶ್ವಾತ್ಮನ್ ಗುಣನಿಧಿರಸಿ ಪ್ರೇಮಜಗತಾಮ್ ।
ನ ಚಾಸ್ಮಾಕಂ ಶಕ್ತಿಸ್ತವ ಗುಣಗಣಂ ವರ್ಣಿತುಮಹೋ
ತ್ವದೀಯೋಽಯಂ ವಾಕಾಂನಿಧಿರಿವ ಜಗತ್ಸರ್ಜನವಿಧಿಃ ॥೪೯॥

---

ರಾದ ನರರಿಗೆ ಸಕಲ ಸಿದ್ಧಿಗಳನ್ನೂ ಅನುಗ್ರಹಿಸಿಕೊಡತಕ್ಕವನು. ಪ್ರಭೋ, ಮಯೂರೇಶ ! ನಿನ್ನನ್ನು ವಂದಿಸುವೆವು. ॥೪೬॥

ಸುರಜ್ಯೇಷ್ಠರೆನಿಸಿದ ಮಹೇಶ್ವರಾದಿ ದೇವತೆಗಳು ಸಹ ನಿನ್ನ ಚರಣಕಮಲಗಳನ್ನು ಸರ್ವದಾ ಸೇವಿಸುತ್ತಲಿರುವರು. ಧ್ಯಾನನಿಷ್ಠರಾದ ಯೋಗಿಗಳನ್ನು ನೀನು ಯಾವಾಗಲೂ ಸಂರಕ್ಷಿಸತಕ್ಕವನು. ಶುದ್ಧ ಜ್ಞಾನವೇ ನಿನ್ನ ಸ್ವರೂಪ. ಇಚ್ಛೆಯ ಸ್ವರೂಪನೂ ನೀನೇ ಆಗಿರುವೆ. ಅವ್ಯಾಜಕರುಣಾಸಾಗರನಾದವನು ಇಂತಹ ಮಯೂರೇಶ್ವರನನ್ನು ನಾವು ವಂದಿಸುವೆವು. ॥೪೭॥

ನೀನು ನಿನ್ನ ಭಕ್ತರಾದವರಿಗೆ ಸರ್ವದಾ ನಿರತಿಶಯಾನಂದವನ್ನು ಕೊಟ್ಟು ಅನುಗ್ರಹಿಸತಕ್ಕವನು. ಆದುದರಿಂದಲೇ ಸರ್ವರ ವಿಷಯದಲ್ಲೂ ನೀನು ಕೃಪಾಪೂರ್ಣನಾಗಿರುವೆ. ಸುರವರ, ವಿಭೋ ! ಈ ಸಂಸಾರಸಾಗರದಲ್ಲಿ ದೊಡ್ಡ ದೊಡ್ಡ ತೆರೆಗಳಂತೆ ಮೇಲೆ ಮೇಲೆ ಉಕ್ಕಿ ಉಕ್ಕಿ ಬರುತ್ತಿರುವ ಕಾಮ, ಕ್ರೋಧ ಲೋಭ, ಮೋಹ, ಮದ ಮತ್ತು ಮಾತ್ಸರ್ಯಗಳನ್ನು ಶಮನಗೊಳಿಸು. ನಮ್ಮ ದೃಷ್ಟಿಯಲ್ಲಿ ಸಕಲ ಸಂಸಾರ ಬಂಧೋಚ್ಛೇದನರೂಪವಾದ ಮುಕ್ತಿಗಿಂತಲೂ ನಿನ್ನ ಭಜನೆಯೇ ಮಿಗಿಲೆನಿಸುವುದು. ॥೪೮॥

ಸಮಸ್ತ ಜಗತ್ಪರಿಪಾಲಕ! ನಿನ್ನ ಕಲ್ಯಾಣಗುಣಗಳನ್ನು ಸ್ತುತಿಸಲಿಕ್ಕೆ ನಮ್ಮಿಂದ ಸಾಧ್ಯವಾದೀತೇ ! ಜಗತ್ತನ್ನೆಲ್ಲ ನೀನು ನಿತ್ಯಾನಂದಾಂಬುಧಿಯಲ್ಲಿ ಮುಳುಗಿಸ

**ಕ ಉವಾಚ :—**

**ಏವಂ ಸ್ತುತ್ವಾ ಪುನಸ್ತೇಽಮುಂ ಪ್ರಾರ್ಥಯಾಮಾಸುರಾದರಾತ್ ।**

**ದೇವಾ ಊಚುಃ :—**

**ಯದುಕ್ತಂ ತೇ ಮಯೂರೇಶ ! ತತ್ಕೃತಂ ಪರಮಂ ವಚಃ ||೫೦||**

**ಸರ್ವೇಷಾಂ ಸುರಸಂಘಾನಾಮವಧ್ಯೋಽಯಂ ಹತೋಽಸುರಃ ।**

**ಕ ಉವಾಚ :—**

**ತತೋಽಗಾತ್ಪಾರ್ವತೀ ತತ್ರ ಜಹೃಷೇ ಚಾಲಿಲಿಂಗ ತಮ್ ||೫೧||**

**ಶಿವೋಽಪಿ ಪ್ರಯಯೌ ತತ್ರ ಸಮಾಲಿಂಗ್ಯ ತಮಬ್ರವೀತ್ ।**

ಬಲ್ಲೆ. ಇಂತಹ ನಿನ್ನನ್ನು ಸ್ತುತಿಸಿ ರಾಮಣೀಯಕ ಚರಿತನನ್ನಾಗಿ ಮಾಡಲು ಪಾಮರರಾದ ನಾವು ಅರ್ಹರಾದೇವೆಯೇ? ನಿನ್ನ ಗುಣಗಣವನ್ನು ವರ್ಣಿಸಲಿಕ್ಕೆ ನಾವು ಸ್ವತಂತ್ರರೂ ಅಲ್ಲ. ನಮ್ಮ ವಾಗಿಂದ್ರಿಯವೆಲ್ಲ ನಿನ್ನ ಅಧೀನದಲ್ಲಿದೆ. ನೀನು ಸೃಷ್ಟೀಶ್ವರ. ಅಸ್ವತಂತ್ರರಾದ ನಾವು ನಿನ್ನನ್ನು ವರ್ಣಿಸುವೆವೆಂದರೆ, ಇದು ಹಾಸ್ಯಾಸ್ಪದ ಸಂಗತಿಯೇ ಸರಿ. ||೪೯||

ಬ್ರಹ್ಮಾ:—

ಹೀಗೆಂದು ಅತ್ಯಾದರದಿಂದ ಸ್ತುತಿಸಿ, ಮತ್ತೆ ಅವನನ್ನು ಹೀಗೆ ಪ್ರಾರ್ಥಿಸಿದರು

ದೇವತೆಗಳು :—

ಭಗವನ್, ಮಯೂರೇಶ ! ನೀನು ನಮಗೆ ಯಾವ ಯಾವ ರೀತಿಯಿಂದ ಆಶ್ವಾಸನೆಯನ್ನು ಕೊಟ್ಟಿದ್ದೆಯೋ, ಅವನ್ನೆಲ್ಲ ಕಾರ್ಯರೂಪದಲ್ಲಿ ಮಾಡಿಯೇ ತೋರಿಸಿರುವೆ. ||೫೦||

ಈ ಸಿಂಧುದೈತ್ಯನೋ, ಯಾವ ದೇವತೆಗಳಿಗೂ ಸೋಲದೇ ಇದ್ದನು. ಯಾರಾರು ಎಷ್ಟೆಷ್ಟು ವಿಧಗಳಿಂದ ಪ್ರಯತ್ನಿಸಿದರೂ ಅವನನ್ನು ಕೊಲ್ಲುವುದಕ್ಕಾಗಿರಲಿಲ್ಲ. ಪರಮೇಶ್ವರ! ಇಂದು ಆ ಅಸುರನನ್ನು ನೀನು ಕೊಂದಿರುವೆ.

ಬ್ರಹ್ಮಾ:—

ಅಷ್ಟರಲ್ಲಿ ಪಾರ್ವತೀದೇವಿಯು ಅಲ್ಲಿಗೆ ಬಂದು, ತನ್ನ ಪ್ರಿಯಪುತ್ರನನ್ನು ಕಂಡು ಬಹಳ ಸಂತೋಷಪಟ್ಟಳು ಮತ್ತು ವಾತ್ಸಲ್ಯಾತಿಶಯದಿಂದ ಅವನನ್ನು ಬಿಗಿದಪ್ಪಿಕೊಂಡಳು. ||೫೧||

ಪಾರ್ವತಿಯ ಸಂಗಡಲೇ ಧಾವಿಸಿ ಬಂದ ಪರಶಿವನು ಸು-ಪುತ್ರ; ಮಯೂರೇಶ್ವರನನ್ನು ಅಪ್ಪಿಕೊಂಡು ಸಂತೋಷದಿಂದ ಹೀಗೆ ನುಡಿದನು.

**ಶಿವ ಉವಾಚ :—**
**ಸಮ್ಯಕ್ಕೃತಂ ತ್ವಯಾ ವತ್ಸ! ತ್ರೈಲೋಕ್ಯಂ ಹರ್ಷನಿರ್ಭರಮ್ ||೫೨||**
**ಸಿಂಧೋರ್ವಧಃ ಸರ್ವಸುರೈರಸಾಧ್ಯೋ ನ ಚ ತೇ ಶ್ರಮಃ |**
**ಪರಾಕ್ರಮವತಃ ಸರ್ವಲೋಕರಕ್ಷಾಕರಸ್ಯ ಚ ||೫೩||**
**ಚತುರ್ವೇದಾನಿರೂಪ್ಯಸ್ಯ ಸರ್ವವಿದ್ಯಾನಿಧೇರಪಿ |**
**ಕ ಉವಾಚ :—**
**ಏವಮುಕ್ತ್ವಾ ಗತಾಸ್ತೇ ತು ಸರ್ವೇ ಸ್ವಸ್ಥಾನಮಾದೃತಾಃ ||೫೪||**
**ಮಯೂರೇಶಂ ನಮಸ್ಕೃತ್ಯ ತತೋ ದೇವಾಬ್ರುವಂಶ್ಚ ತಮ್ |**
**ದೇವಾ ಊಚುಃ :—**
**ಇದಂ ಯಃ ಪಠತೇ ಸ್ತೋತ್ರಂ ಸ ಕಾಮಾರ್ಲಭತೇಽಖಿಲಾ ||೫೫||**

---

ಶಿವ :—

ಕುಮಾರ! ನೀನು ಬಹಳ ಒಳ್ಳೆಯ ಕೆಲಸವನ್ನು ಮಾಡಿದೆ. ಇದರಿಂದ ಮೂರು ಲೋಕದ ಜನರೂ ಹರ್ಷದಲ್ಲಿ ಮುಳುಗಿಹೋಗಿದ್ದಾರೆ. ||೫೨||

ಸಿಂಧುವನ್ನು ವಧಿಸುವ ಕಾರ್ಯವು ಇತರ ದೇವತೆಗಳಿಗೆ ಅಸಾಧ್ಯವಾಗಿದ್ದಿತೇ ಹೊರತು, ನಿನಗೆ ಇದರಿಂದೇನೂ ಶ್ರಮವಾಗಿಲ್ಲವೆಂಬುದನ್ನು ನಾನು ತಿಳಿದಿದ್ದೇನೆ. ನಿನ್ನಂತಹ ಪರಾಕ್ರಮಶಾಲಿಯಾದವನು ಬೇರಾರಿದ್ದಾರೆ? ನೀನು ಸಕಲ ಲೋಕಗಳನ್ನೂ ರಕ್ಷಿಸುವುದಕ್ಕೆ ಬದ್ಧಕಂಕಣನಾದವನು ||೫೩||

ಸಕಲ ವಿದ್ಯೆಗಳಿಗೂ ನಾಲ್ಕು ವೇದಗಳು ನಿಧಿಯಾದರೂ ನಿನ್ನ ಮಹಿಮೆಯನ್ನು "ಹೀಗೆಯೇ ಸರಿ" ಎಂದು ವರ್ಣಿಸಿ ನಿರೂಪಿಸಲಿಕ್ಕೆಮಾತ್ರ ಅವಕ್ಕೆ ಸಾಮರ್ಥ್ಯ ಸಾಲದು.

ಬ್ರಹ್ಮಾ :—

ಎಂದು ನುಡಿಯಲು, ಎಲ್ಲರೂ ಗಣೇಶನ ಅನುಜ್ಞೆಯನ್ನು ಪಡೆದು, ತಮ್ಮ ತಮ್ಮ ಆವಾಸ ಸ್ಥಾನಗಳಿಗೆ ತೆರಳಿದರು. || ೫೪ ||

ಹೊರಡುವ ಮುನ್ನ ದೇವತೆಗಳು ದೇವನಿಗೆ ನಮಸ್ಕಾರವನ್ನು ಮಾಡಿ, ಅವರು ಮಾಡಿದ ಸ್ತೋತ್ರಕ್ಕೆ ಮಹಿಮೆಯುಂಟಾಗುವಂತೆ ತಾವು ಅನುಗ್ರಹಿಸುವುದಾಗಿಯೂ, ಅದನ್ನು ಮಯೂರೇಶನು ನಡೆಸಿಕೊಡಬೇಕೆಂದೂ ಪ್ರಾರ್ಥಿಸಿದರು.

ದೇವತೆಗಳು :—

ನಾವು ರಚಿಸಿ ಹಾಡಿದ ಮಯೂರೇಶನ ಈ ಸ್ತೋತ್ರವನ್ನು ಯಾರು ಭಕ್ತಿ-ಶ್ರದ್ಧೆಗಳಿಂದ ಪಠಿಸುವರೋ, ಅವರು ಸಕಲೇಷ್ಟಗಳನ್ನೂ ಪಡೆಯುತ್ತಾರೆ. ||೫೫||

ಸಹಸ್ರಾವರ್ತನಾತ್ಕಾರಾಗೃಹಸ್ಥಂ ಮೋಚಯೇಜ್ಜನಮ್ ।
ಅಯುತಾವರ್ತನಾಽಸ್ಮೃತೋರ್ಽಸಾಧ್ಯಂ ಯತ್ಸಾಧಯೇತ್ಕ್ಷಣಾತ್ ॥೫೬॥
ಸರ್ವತ್ರ ಜಯಮಾಪ್ನೋತಿ ಶ್ರಿಯಂ ಪರಮದುರ್ಲಭಾಮ್ ।
ಪುತ್ರವಾರ್ಣ ಧನವಾಂಶ್ಚೈವ ವಶತಾಮಖಿಲಂ ನಯೇತ್ ॥೫೭॥

ಕ ಉವಾಚ :—

ಏವಮುಕ್ತ್ವಾ ಹ್ಯನುಜ್ಞಾತಾಃ 'ಸಾಧ್ವಿ'ತ್ಯುಕ್ತ್ವಾ ಯಯುಸ್ಸುರಾಃ ।
ಮಯೂರೇಶೋ ಗಣೈರ್ಯುಕ್ತಃ ಸ್ವ-ಧಾಮ ಪ್ರತ್ಯಪದ್ಯತ ॥೫೮॥

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸಿಂಧುವಧವರ್ಣನಂ'
ನಾಮ ತ್ರಯೋವಿಂಶದುತ್ತರ ಶತತಮೋಽಧ್ಯಾಯಸ್ಸಮಾಪ್ತಃ

---

ಒಂದು ಸಹಸ್ರ ಸಲ ಈ ಸ್ತೋತ್ರವನ್ನು ಪಠಿಸುವವನು ತನಗೆ ಬೇಕಾದವನಾರಾದರೂ ಕಾರಾಗೃಹದಲ್ಲಿ ಬದ್ಧನಾಗಿದ್ದರೆ, ಅವನನ್ನು ಬಿಡುಗಡೆ ಮಾಡಿಸುವ ಸಾಮರ್ಥ್ಯವನ್ನು ಪಡೆಯುವನು ಹತ್ತು ಸಾವಿರ ಸಲ ಇದನ್ನು ಪಠಿಸಿ ಸಾಧಿಸಿಕೊಂಡರೆ ಎಂತಹ ಅಸಾಧ್ಯವಾದ ಕೆಲಸವೇ ಇರಲಿ, ಅದನ್ನು ಸುಲಭವಾಗಿ ಸಾಧಿಸಿಬಿಡುವ ಸಾಮರ್ಥ್ಯ ತತ್‌ಕ್ಷಣವೇ ಬರುತ್ತದೆ. ॥೫೬॥

ಮತ್ತು ಅಂತಹ ಸಾಧಕನು ಸರ್ವತ್ರ ವಿಜಯವನ್ನೂ ಗಳಿಸುತ್ತಾನೆ ಯಾರಿಗೂ ದೊರೆಯದಂತಹ ಐಶ್ವರ್ಯವನ್ನು ಪಡೆಯುತ್ತಾನೆ. ಪುತ್ರಾಭಿಲಾಷಿಯಾಗಿದ್ದರೆ, ಅವನಿಗೆ ಸು-ಪುತ್ರರು ಜನಿಸುವರು. ಐಶ್ವರ್ಯವನ್ನು ಬಯಸುವವನು ಅದನ್ನು ಪಡೆಯುವುದಲ್ಲದೇ, ಎಲ್ಲರನ್ನೂ ಸ್ವಾಧೀನಪಡಿಸಿಕೊಳ್ಳುತ್ತಾನೆ. ॥೫೭॥

ಬ್ರಹ್ಮ:—

ಹೀಗೆ ಹೇಳಿ ಗಣಪತಿಯು "ಒಳ್ಳೆಯದು" ಎಂದು ನುಡಿದು, ಇದಕ್ಕೆಲ್ಲ ತನ್ನ ಸಮ್ಮತಿಯನ್ನೂ, ಸುರರಿಗೆ ತಮ್ಮತಮ್ಮ ಸ್ಥಳಗಳಿಗೆ ತೆರಳಲು ಅನುಮತಿಯನ್ನೂ ಸೂಚಿಸಲು, ಎಲ್ಲ ದೇವತೆಗಳೂ ಹೊರಟು ಹೋದರು. ಇತ್ತ ಮಯೂರೇಶ್ವರನೂ ತನ್ನ ಪರಿವಾರದವರಾದ ಪ್ರಮಥಗಳೊಂದಿಗೆ ತನ್ನ ಶಿಬಿರಕ್ಕೆ ಬಂದನು. ॥೫೮॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಾರ್ಧದಲ್ಲಿ "ಸಿಂಧುವಧ ವರ್ಣನೆ" ಎಂಬಲ್ಲಿಗೆ
ನೂರ ಇಪ್ಪತ್ತುಮೂರನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಚತುರ್ವಿಂಶತ್ಯುತ್ತರ ಶತತಮೋಽಧ್ಯಾಯಃ

**ಕ ಉವಾಚ —**

**ಪತಿತೇ ಸಿಂಧುದೈತ್ಯೇ ತು ಹತಶೇಷಾ ರಣೇ ಸ್ಥಿತಾಃ ।**
**ಆಯಯುರ್ಗಂಡಕೀಂ ಯಾವತ್ತಾವತ್ತೇ ಚಿಂತಯಾ ಯುತಾಃ ॥೧॥**
**ಉಗ್ರಾ ದುರ್ಗಾ ಚಕ್ರಪಾಣಿರತಿಷ್ಠನ್ ವಿಹ್ವಲಾ ಭೃಶಮ್ ।**
**ತಾವತ್ತೇಷಾಂ ದುಷ್ಟಚಿಹ್ನಂ ಬಭೂವ ವಿವಿಧಂ ತದಾ ॥೨॥**
**ಉದಕ್ಶಿರಾಃ ಪ್ರಸುಷ್ವಾಪ ಕಶ್ಚಿತ್ತತ್ರಾಶುಭಾವಹಃ ।**
**ಜಾನುನೋರ್ಮಸ್ತಕಂ ನ್ಯಸ್ಯ ತಸ್ಥೌ ತೂಷ್ಣೀಂ ಚಲನ್ನಿವ ॥೩॥**

ಶ್ರೀ ಮಂಗಲಮೂರ್ತಯೇ ನಮಃ

## ೧೨೪ ನೆಯ ಅಧ್ಯಾಯ

ಬ್ರಹ್ಮಾ:—

ಮಹಾ ಪ್ರಬಲನಾಗಿದ್ದ ಸಿಂಧುದೈತ್ಯನು ರಣಭೂಮಿಗೆ ಬಲಿಯಾಗಿ ಬಿದ್ದ ಕೂಡಲೆ, ಅವನೊಡನೆ ಯುದ್ಧಕ್ಕೆ ಒತ್ತಾಸೆಯಾಗಿ ಬಂದಿದ್ದ ಸೈನಿಕರ ಪೈಕಿ ಸತ್ತು ಉಳಿದ ಕೆಲವರು ಇತಿಕರ್ತವ್ಯತಾಜ್ಞಾನಶೂನ್ಯರಾಗಿ ಗಂಡಕೀನಗರಕ್ಕೆ ಓಡೋಡಿ ಹಿಂದಿರುಗಿ ಬಂದರು. ಅಷ್ಟರಲ್ಲಿ ॥೧॥

ಇತ್ತ ದೈತ್ಯನ ಮಾತಾಪಿತೃಗಳಾದ ಉಗ್ರಾ, ಚಕ್ರಪಾಣಿ ಹಾಗೂ ಅವನ ಹೆಂಡಿತಿಯಾದ ದುರ್ಗಾದೇವಿ ಇವರು ವಿಚಿತ್ರ ತರಹದ ಕಳವಳವನ್ನು ಅನುಭವಿಸುತ್ತ ಯುದ್ಧರಂಗದಿಂದ ಯಾವ ಕೆಟ್ಟ ಸುದ್ದಿ ಬರುವುದೋ ಎಂದು ಹೆದರಿ ಮನೆಯ ಬಾಗಿಲಲ್ಲೇ ನಿಂತಿದ್ದರು. ಆ ವೇಳೆಗೆ ಸರಿಯಾಗಿ ಅನೇಕ ವಿಧ ದುಷ್ಟ ಶಕುನಗಳು ಕಂಡುಬಂದು ಅವರನ್ನು ಮತ್ತಷ್ಟು ಹೆದರಿಸಿದವು. ॥೨॥

ಯಾರೋ ಒಬ್ಬನು ಉತ್ತರದಿಕ್ಕಿಗೆ ತಲೆಮಾಡಿಕೊಂಡು ಮಲಗಿದ್ದನು. ಇದು ಬಹಳ ಅಮಂಗಳವನ್ನು ಸೂಚಿಸತಕ್ಕದ್ದು. ಮತ್ತೊಬ್ಬನು ಕುಕ್ಕರಗಾಲಿನಲ್ಲಿ ಕುಳಿತು, ತನ್ನ ಎರಡೂ ಮಂಡಿಗಳ ನಡುವೆ ತಲೆಯನ್ನಿರಿಸಿ ಕುಳಿತು, ಸುಮ್ಮನೆ ತೂಕಡಿಸುತ್ತಿದ್ದನು. ಇದಂತೂ ಬಹಳ ಮಟ್ಟಿಗೆ ಅಶುಭವನ್ನು ತರತಕ್ಕದ್ದು. ॥೩॥

ಹನೌ ಪಾಣಿತಲಂ ನ್ಯಸ್ಯ ತಸ್ಥೌ ಕಾಚಿನ್ಮುದಂ ವಿನಾ ।
ಏತಸ್ಮಿನಂತರೇ ದೂತಾ ಯಮದೂತಾ ಇವಾಯಯುಃ ॥೪॥

ಅತಿಮ್ಲಾನಮುಖಾ ದೀನಾ ನಾಬ್ರುವನ್ ಮೂಕತಾಂ ಗತಾಃ ।
ಪೃಷ್ಟಾಸ್ತೇ ಪ್ರಾಹುರಪರೇ ವೃತ್ತಾಂತಂ ರಣಭೂಗತಮ್ ॥೫॥

ದೂತಾ ಊಚುಃ :—

ಅಸಂಖ್ಯಾತಾನ್ ಮಹಾವೀರಾನ್ ಹತ್ವಾ ಸಿಂಧುರ್ದಿವಂ ಗತಃ ।
ಬಾಲಾನಸ್ಮಾನ್ ಪರಿತ್ಯಜ್ಯ ತೇನ ಹೀನಾ ರುದಾಮಹೇ ॥೬॥

ನಿರೀಕ್ಷ್ಯ ದೇವಾನ್ನಿಹತಾನ್ ಕ್ರುದ್ಧೋಽಗಾದ್ಗಿರಿಜಾಸುತಃ ।
ಅಸ್ತ್ರೈರಸ್ತ್ರಾಣಿ ಸಂವಾರ್ಯ ಮುಮೋಚ ಪರಶುಂ ಶಿತಮ್ ॥೭॥

---

ಒಬ್ಬ ನಾರಿಯು ತನ್ನ ಗದ್ದದ ಮೇಲೆ ಕೈಯ್ಯನ್ನಿರಿಸಿಕೊಂಡು, ಸ್ವಲ್ಪವೂ ಹರ್ಷವಿಲ್ಲದವಳಾಗಿ ಬಾಗಿಲ ಬಳಿ ಚಿಂತಿಸುತ್ತ ನಿಂತಿದ್ದಳು. ಇದೆಲ್ಲವನ್ನೂ ನೋಡಿ ಇವರು ಹೆಚ್ಚು ಹೆಚ್ಚು ಹೆದರುತ್ತಿರುವಷ್ಟರಲ್ಲಿ ಯಮದೂತರಂತೆ ಸೈನಿಕರು ಇವರ ಸಮೀಪಕ್ಕೆ ಧಾವಿಸಿ ಬಂದರು. ॥೪॥

ಯಾರ ಮುಖದಮೇಲೂ ಜೀವಕಳೆಯೇ ಇರಲಿಲ್ಲವಾಗಿ, ಅವೆಲ್ಲ ಬಾಡಿಹೋಗಿದ್ದವು. ಚಾರರು ಬಹಳ ದೀನರಾಗಿದ್ದರು, ಏನನ್ನು ಮಾತನಾಡಬೇಕೆಂಬುದೇ ಅವರಿಗೆ ತೋರಲಿಲ್ಲವಾಗಿ, ಅವರು ಮೂಕರಂತೆ ಯಾವ ಮಾತನ್ನೂ ಆಡದೇ ಸುಮ್ಮನೆ ನಿಂತುಬಿಟ್ಟರು. ಸಿಂಧುವಿನ ಬಂಧುಗಳು ಆತ್ಯಾತುರದಿಂದ "ರಣಭೂಮಿಯಲ್ಲಿ ನಡೆಯುತ್ತಿರುವ ಯುದ್ಧದ ವೃತ್ತಾಂತವೇನು?" ಎಂದು ಒತ್ತಾಯ ಮಾಡಿ ಕೇಳಲು, ಆ ಪೈಕಿ ಕೆಲವು ದೂತರು ಬಿಕ್ಕಿ ಬಿಕ್ಕಿ ಅಳುತ್ತ ಹೀಗೆಂದು ದುಃಖದಿಂದ ನುಡಿದರು ॥೫॥

ದೂತರು :—

ನಮ್ಮ ಮಹಾರಾಜನಾದ ಸಿಂಧು ದೈತ್ಯನು ಅಸಂಖ್ಯಾತರಾದ ಮಹಾವೀರರನ್ನೆಲ್ಲ ಕೊಂದು ಕೊನೆಗೆ ತಾನೂ ಸ್ವರ್ಗಲೋಕಕ್ಕೆ ಹೊರಟುಹೋದನು, ನಾವೆಲ್ಲ ಹತಭಾಗಿಗಳಾದವರು. ಅರಸನಿಗೆ ಮಕ್ಕಳಂತಿದ್ದವರು. ಆಶ್ರಿತರು. ಆದರೂ ಅಸುರ ರಾಜನು ನಮ್ಮನ್ನೆಲ್ಲ ಇಲ್ಲಿಯೇ ತೊರೆದು ಅನಾಥರನ್ನಾಗಿ ಮಾಡಿ, ಹೊರಟುಹೋದನು. ಅಂಥವನನ್ನು ಕಳೆದುಕೊಂಡು ಈಗ ಅಳುತ್ತಲಿದ್ದೇವೆ. ॥೬॥

ನಮ್ಮ ಮಹಾರಾಜನು ಯುದ್ಧರಂಗದಲ್ಲಿ ದೇವವೀರರನ್ನೆಲ್ಲ ಕೊಂದು ಬಿಸುಟುದನ್ನು ಕಂಡಕೂಡಲೇ, ಗಿರಿಜಾಸುತ; ಮಯೂರೇಶ್ವರನಿಗೆ ಎಲ್ಲಿಲ್ಲದ ಕೋಪ ಬಂದಿತು. ಆಗ ಮುನ್ನುಗ್ಗಿ ಬಂದು, ರಾಕ್ಷಸನು ಪ್ರಯೋಗಿಸಿದ ಮಹಾಸ್ತ್ರಗಳನ್ನೆಲ್ಲ ಪ್ರತ್ಯಸ್ತ್ರಗಳಿಂದ

**ತೇನ ಸಿಂಧುರ್ಮೃತಸ್ತತ್ರ ಪತಿತೋ ಧರಣೀತಲೇ |**

**ಕ ಉವಾಚ :—**

**ಮುಮೂರ್ಛುಸ್ತತ್ರ ಸರ್ವೇऽಪಿ ತದೀಯಾ ನಾಗರಾಶ್ಚ ಹ ||೮||**
**ಶ್ರುತ್ವಾ ವಾರ್ತಾಂ ದೂತಮುಖಾದ್ರುರುದುಸ್ಸರ್ವ ಏವ ತೇ |**
**ವಿಲಲಾಪಾಥ ದುರ್ಗಾ ಸಾ ಜಘಾನ ಶಿರ ಉತ್ಕಟಮ್ ||೯||**
**ಮುಕ್ತಕೇಶಾ ಮುಹುರ್ವಕ್ತ್ರಂ ನಿಘ್ನತೀ ಗತಭೂಷಣಾ |**
**ಉಗ್ರಾ ಚ ಜನನೀ ಚಾಸ್ಯ ಚಕ್ರಪಾಣಿಃ ಪಿತಾ ತದಾ ||೧೦||**
**ಪೌರಾಶ್ಚ ರುರುದುಸ್ತತ್ರ ನಿಘ್ನಂತಃ ಪಾಣಿನಾ ಮುಖಮ್ |**
**ಅವನೌ ಶಿರ ಆಸ್ಫಾಲ್ಯ ಲುಲುಂಠುರ್ಘೋರನಿಃಸ್ವನಾಃ ||೧೧||**

---

ಉಪಸಂಹರಿಸಿ ಅತಿ ತೀಕ್ಷ್ಣವಾದ ತನ್ನ ಪರಶುವನ್ನು ರಾಕ್ಷಸರಾಜನ ಮೇಲೆ ಪ್ರಯೋಗಿಸಿದನು. ||೭||

ವಿಧಿವಿಲಾಸ, ಅದರ ಹೊಡೆತದಿಂದ ಸಿಂಧು ಅಲ್ಲೇ ನೆಲದ ಮೇಲೆ ಬಿದ್ದು ತಟಪಟ ಒದೆದಾಡಿ ಸತ್ತುಹೋದನು.

ಬ್ರಹ್ಮ :—

ತದೀಯರಿಗೆ ಮುಂದಿನ ಯಾವ ಮಾತನ್ನೂ ಕೇಳುವಷ್ಟು ಸಹನೆ ಉಳಿಯಲಿಲ್ಲ. ಕೂಡಲೇ ಎಲ್ಲರೂ, ನಾಗರಿಕರು ಸಹ ಮೂರ್ಛಿತರಾಗಿ ಬಿದ್ದರು. ||೮||

ದೂತರ ಮುಖದಿಂದ ಮತ್ತೆ ಮತ್ತೆ ಆ ಸುದ್ದಿಯನ್ನು ಕೇಳುತ್ತ ಎಲ್ಲರೂ ಘಟ್ಟಿಯಾಗಿ ಅತ್ತುಬಿಟ್ಟರು. ರಾಕ್ಷಸನ ರಾಣಿ; ದುರ್ಗೆಗುಂಟಾದ ದುಃಖವನ್ನು ವರ್ಣಿಸಲು ಸಾಧ್ಯವಿಲ್ಲ. ಬಹಳ ವಿಲಪಿಸಿದಳು. ಘಟ್ಟಿಯಾಗಿ ತಲೆಯನ್ನು ಚಚ್ಚಿಕೊಂಡಳು. ||೯||

ತಲೆ ಕೂದಲನ್ನೆಲ್ಲ ಕೆದರಿಕೊಂಡಳು. ಮತ್ತೆ ಮತ್ತೆ ಬಾಯಿಯನ್ನು ಬಡಿದುಕೊಂಡಳು. ಮೈಮೇಲಿದ್ದ ಭೂಷಣಗಳನ್ನೆಲ್ಲ ಕಿತ್ತು ಬಿಸುಟಳು. ರಾಕ್ಷಸನ ತಾಯಿ, ಉಗ್ರೆ, ತಂದೆ ಚಕ್ರಪಾಣಿ ಇವರ ಗೋಳು ಕೇಳುವವರ ಕರುಳನ್ನು ಕಿತ್ತುವಂತೆ ಇದ್ದಿತು. ||೧೦||

ರಾಕ್ಷಸನ ರಕ್ಷಣೆಗೊಳಗಾದ ಪೌರರು ಕೈಯಿಂದ ಬಾಯಿಯನ್ನು ಬಡಿದುಕೊಳ್ಳುತ್ತ ಅತಿಯಾಗಿ ಅತ್ತರು. ತಲೆಗಳನ್ನು ನೆಲಕ್ಕೆ ಅಪ್ಪಳಿಸುತ್ತ, ನೆಲದಲ್ಲಿ ಬಿದ್ದು ಹೊರಳಾಡಿದರು. ಅವರ ಅಳುವಿನ ಧ್ವನಿ ಹೃದಯವಿದ್ರಾವಕವಾಗಿಯೂ, ಬಹಳ ಕರ್ಕಶವಾಗಿಯೂ ಇದ್ದಿತು. ||೧೧||

ಕಶ್ಚಿದ್ಧೂಲಿಂ ನಿಚಿಕ್ಷೇಪ ಮುಖೇ ಶಿರಸಿ ದುಃಖಿತಃ ।
ಹಸ್ತಪೃಷ್ಠಂ ದದಂಶಾನ್ಯಸ್ತಾಭ್ಯಾಂ ಭೂಮಿಮುಥಾಹನತ್ ॥೧೨॥

ಅಶಪರ್ ಗಿರಿಜಾಪುತ್ರಂ ಸ್ತ್ರಿಯೋ ಭಂಕ್ತ್ವಾ ಕರಾಂಗುಲೀಃ ॥೧೩॥

ಉಗ್ರೋವಾಚ :—

ನಾನಾಯತ್ನೈಸ್ತಪಸಾ ಸೂರ್ಯತುಷ್ಟ್ಯೈ ನತ್ಯಾ ಸ್ತುತ್ಯಾ ಲಂಘನೈ-
ಸ್ಸರ್ವದಾನ್ಯೈಃ ।
ಸ್ಪ್ರಾಪ್ತಃ ಕಾಲಾನ್ಮಹತಸ್ತ್ವಂ ಕಥಂಚಿಚ್ಛೂರೋ ಮಾನೀ ಕೇನ
ನೀತೋಽಸಿ ರೇ । ತ್ವಮ್ ॥೧೪॥

ತ್ರಿಲೋಕನಾಯಕೇನಾಹಂ ಶ್ಲಾಘ್ಯಾ ತ್ರೈಲೋಕ್ಯಮಂಡಲೇ ।
ಶಪಿಷ್ಯಂತಿ ಚ ಮಾಂ ಲೋಕಾ "ಹತಭಾಗ್ಯಾಸಿ" ಸಾಂಪ್ರತಮ್ ॥೧೫॥

---

ರಾಕ್ಷಸನ ದಯೆಗೆ ಪಾತ್ರನಾದವನೊಬ್ಬನು ದುಃಖವನ್ನು ತಡೆದುಕೊಳ್ಳಲಾರದೆ, ನೆಲದ ಮಣ್ಣನ್ನು ತನ್ನ ಮುಖ, ತಲೆಗಳ ಮೇಲೆ ಎರಚಿಕೊಂಡನು. ತನ್ನ ಮುಂಗೈಗಳನ್ನು ಕಚ್ಚಿಕೊಂಡು ಎರಡೂ ಕೈ ಮುಷ್ಟಿಗಳಿಂದ ನೆಲವನ್ನು ಬಲವಾಗಿ ಗುದ್ದಿದನು. ॥೧೨॥

ಕೆಲವು ಅಂತಃಪುರದ ನಾರಿಯರು ಕೈ ಬೆರಳುಗಳಿಂದ ನೆಟ್ಟಿಗೆಯನ್ನು ಮುರಿದು ಗಿರಿಜಾಸುತನನ್ನು ಮನಸ್ವಿಯಾಗಿ ಶಪಿಸಿದರು. ॥೧೩॥

ಉಗ್ರೆ :—

ಪುತ್ರ ! ನಿನ್ನನ್ನು ಪುತ್ರನನ್ನಾಗಿ ಪಡೆಯುವುದಕ್ಕೆ ಎಷ್ಟೆಷ್ಟೋ ಪ್ರಯತ್ನಪಟ್ಟು ತಪವನ್ನಾಚರಿಸಿದೆವು. ಅನೇಕ ಕಾಲ ಸೂರ್ಯನಿಗೆ ವಿಧ್ಯುಕ್ತವಾಗಿ ನಮಸ್ಕಾರಗಳನ್ನು ಮಾಡಿದೆವು. ಅನೇಕ ದಿನ ಉಪವಾಸವನ್ನಾಚರಿಸಿದೆವು. ಎಷ್ಟೋ ವರ್ಷಗಳು ಕಳೆದ ಬಳಿಕ, ಕೊನೆಗೆ ಸೂರ್ಯನು ತುಷ್ಟನಾಗಿ ಶೂರನಾದ ನಿನ್ನನ್ನು ನಮಗೆ ಮಗನನ್ನಾಗಿ ಅನುಗ್ರಹಿಸಿದನು. ಬಹು ಕಾಲ ನೀನೂ ಬಾಳಿದೆ. ಇಂತಹ ಶೂರನೂ, ಮಾನಧನನೂ ಆದ ನೀನು ಯಾರಿಂದ ಹತನಾಗಿಹೋದೆ ? ನಿನ್ನನ್ನು ಕೊಂದ ಆ ಶೂರ ಯಾರು ? ॥೧೪॥

"ತ್ರಿಲೋಕಗಳಿಗೂ ನನ್ನ ಮಗ ನಾಯಕ" ಎಂಬ ಹೆಮ್ಮೆಯಿಂದ ನಾನು ಮೂರು ಲೋಕಗಳಲ್ಲೂ ಮೆರೆಯುತ್ತಲಿದ್ದೆ. ಇದೋ, ಈಗ ಆ ಲೋಕದವರೆಲ್ಲ ನನ್ನನ್ನು "ನಿನ್ನ ಸೊಕ್ಕು ಅಡಗಿತೇ ? ನೀನು ಎಂತಹ ಹತಭಾಗ್ಯಳು" ಎಂದು ಶಪಿಸುತ್ತಾರೆ. ॥೧೫॥

**ಜಿತಃ ಕೃತಾಂತಃ ಪೂರ್ವಂ ತೇ ಕಥಂ ತೇನ ಸಮಾಗಮಃ ।**
**ಪ್ರಾಪ್ತಸ್ತ್ವಯಾ ಕಥಂ ಪುತ್ರ ! ನ ಜಿತಃ ಪುನರೇವ ಸಃ ॥೧೬॥**
**ಸಕಾಮೋ ಗಿರಿಜಾಪುತ್ರಸ್ತ್ವಯಿ ಯಾತೇ ದಿವಂ ಸುತ ! ।**
**ಮಾಮಪೃಷ್ಟ್ವಾ ಕಥಂ ಯಾತಃ ? ಸ್ವರ್ಗಲೋಕಂ ಸುಖಾವಹಮ್ ॥೧೭॥**
**ದುಃಖಿತಾಯಾಂ ಮಯಿ ಸುತ ! ಕಥಂ ಸಂತೋಷಮೇಷ್ಯಸಿ ? ।**
**ಗರ್ಜಂತಿ ನೈವ ಜೀಮೂತಾಸ್ತ್ವಯಿ ಗರ್ಜತಿ ಪುತ್ರಕ ! ॥೧೮॥**
**ನಿಶ್ಶಬ್ದಃ ಸ ಕಥಂ ಪುತ್ರ ! ಪತಿತಸ್ತ್ವಂ ರಣಾಂಗಣೇ ।**
**ದುರ್ಗೋವಾಚ :—**
**ದೇಹೈಕ್ಯಂ ಕೃತವಾನ್ ಧಾತಾ ದಂಪತ್ಯೋರ್ವೇದದರ್ಶನಾತ್ ॥೧೯॥**

---

ಈ ಮೊದಲು ಒಮ್ಮೆ ದೇವತೆಗಳೊಡನೆ ನೀನು ಯುದ್ಧವಾಡಿದಾಗ ಆ ಯಮನನ್ನು ಸೋಲಿಸಿಬಿಟ್ಟಿರಲಿಲ್ಲವೇ ? ಒಮ್ಮೆ ಸೋಲಿಸಿದ ಬಳಿಕ ಮತ್ತೇಕೆ ಅವನ ಸಂಗಡ ಯುದ್ಧಕ್ಕೆ ಹೋದೆ? ಆಗಲಿ, ಯುದ್ಧದಲ್ಲಿ ಈ ಸಲವೂ ಏಕೆ ಅವನನ್ನು ಮೊದಲಿನಂತೆ ಸೋಲಿಸಲಿಲ್ಲ? ನೀನೇ ಅವನ ಕೈಗೆ ಸಿಕ್ಕುವಂತಹ ಪ್ರಸಂಗವನ್ನೇಕೆ ತಂದುಕೊಂಡೆ ? ॥೧೬॥

ಪುತ್ರ ! ನೀನು ಸ್ವರ್ಗಕ್ಕೆ ತೆರಳಿದ ಬಳಿಕ ಗಿರಿಜಾಪುತ್ರನು ತನ್ನ ಇಷ್ಟಾರ್ಥವನ್ನು ಗಳಿಸಿಕೊಂಡಂತಾಯಿತು. ಅದಿರಲಿ, ನನ್ನನ್ನು ಕೇಳದೆ, ಯಾವ ಮಾತನ್ನೂ ನನಗೆ ಹೇಳದೆ, ಸುಖದಾಯಕವಾದ ಸ್ವರ್ಗಲೋಕಕ್ಕೆ ನೀನು ಏಕೆ, ಹೇಗೆ ಹೋದೆ? ॥೧೭॥

ಇದೋ, ನೋಡು. ನಾನು ನಿನ್ನ ಜನನಿ, ಕರುಳಿನ ಕೊರೆತವನ್ನು ತಡೆದುಕೊಳ್ಳಲಾರದೆ ಅತಿಯಾಗಿ ದುಃಖಿಸುತ್ತಿರುವೆನು. ನಾನು ಇಲ್ಲಿ ದುಃಖದಿಂದ ನರಳುತ್ತಿರುವಾಗ. ಮಗನೆ! ನೀನು ಮಾತ್ರ ಅಲ್ಲಿ ಸುಖವನ್ನು ಹೇಗೆ ಅನುಭವಿಸುವೆ? ಪುತ್ರ! ನಿನ್ನ ದರ್ಪವೆಂತಹುದು ? ನೀನು ಗರ್ಜಿಸುತ್ತಿದ್ದರೆ, ಮೇಘಗಳು ಹೆದರಿ ತಾವು ಗರ್ಜಿಸುವುದನ್ನೂ ನಿಲ್ಲಿಸಿಬಿಡುತ್ತಿದ್ದವು ॥೧೮॥

ಇಂತಹ ವೀರಾಧಿವೀರನಾದ ನೀನು, ನಿಃಶಬ್ದನಾಗಿ ಈಗ ರಣಾಂಗಣದಲ್ಲಿ ಪುತ್ರ ! ಹೇಗೆ ಬಿದ್ದಿರುವೆಯಪ್ಪ !

ದುರ್ಗಾ :—

ಪತಿಯ ದೇಹದ ಅರ್ಧಭಾಗ ಪತ್ನಿಗೆ ಸಂಬಂಧಿಸಿದುದು ಎಂದು ವೇದ-ಶಾಸ್ತ್ರಗಳು ಸಾರುತ್ತಿವೆ. ಆದುದರಿಂದ ದಂಪತಿಗಳು ಏಕದೇಹಿ ಎಂದು ಲೋಕದಲ್ಲೂ ಆಡುವ ವಾಡಿಕೆ ಇದೆ. ॥೧೯॥

ಪ್ರಾಣೈಕ್ಯಂ ನ ಕೃತಂ ಕಸ್ಮಾತ್ ? ಬ್ರಹ್ಮಣಾ ಮೂಢಬುದ್ಧಿನಾ ।
ನಾಹಂ ಶಚೀಂ ಚ ಸಾವಿತ್ರೀಂ ಸೌಭಾಗ್ಯಮದಗರ್ವಿತಾ ॥೨೦॥

ಗಣಯಾಮಿ ನ ಚಾನ್ಯಾಶ್ಚ ಸಾ ಕಥಂ ವಿಧವಾಭವಮ್ ? ।
ಸ್ವಹಸ್ತೇನ ಚ ಕಸ್ತೂರೀಂ ಚಂದನಂ ಚ ಯದಾ ಭರ್ತಾ ॥೨೧॥

ಚರ್ಚತಿ ಸ್ಮ ತದಾಂಗಾನಿ ಶೀತಲಾನಿ ಮಮಾಭವನ್ ।
ಇದಾನೀಂ ದಹ್ಯಮಾನಾನಿ ತಾನಿ ಶೋಕೇನ ನಿರ್ವಪ ॥೨೨॥

ನ ಭಕ್ಷಯಸಿ ಪೂರ್ವಂ ತ್ವಂ ಮದ್ವಿನಾ ವಿಷಮಣ್ವಪಿ ।
ಸ ಕಥಂ ಮಾಂ ವಿನಾ ಸ್ವರ್ಗಸುಖಂ ಭೋಕ್ಷ್ಯಸಿ ತಾದೃಶಮ್? ॥೨೩॥
ಅಪರಾಧಂ ವಿನಾ ಭೃತ್ಯೇ ನೋದಾಸೀನಾ ಭವಂತಿ ಹಿ ।

---

ಈ ನಿಯಮವನ್ನುಸುರಿದ ಸೃಷ್ಟಿಕರ್ತೃ, ಬ್ರಹ್ಮನು ದಂಪತಿಗಳ ಪ್ರಾಣಗಳನ್ನೇಕೆ ಒಂದುಗೂಡಿಸಿರಲಿಕ್ಕಿಲ್ಲ? ಅವನ ಮೆದುಳಿಗೆ ಅಷ್ಟು ಹೊಳೆಯಲಿಲ್ಲವಲ್ಲ? ಅವನೆಂತಹ ಮೂಢ. "ನಾನು ಸೌಭಾಗ್ಯವತಿಯಾಗಿದ್ದೇನೆ, ನನಗೆ ಸಮಾನರಾರು" ಎಂದು ಸೊಕ್ಕಿನಿಂದ ಮೆರೆದು ಶಚೀದೇವಿಯನ್ನಾಗಲೀ, ಸಾವಿತ್ರೀದೇವಿಯನ್ನಾಗಲೀ ॥೨೦॥

ಮತ್ತಾವ ಮಾನಿನಿಯನ್ನೇ ಆಗಲಿ, ಅಪಮಾನಗೊಳಿಸಿರುವುದಿಲ್ಲ. ಹೀಗಿದ್ದರೂ ನಾನೇಕೆ ವಿಧವೆಯಾದೆ? ಪತಿದೇವ! ನೀನು ಪ್ರೇಮಭರಿತನಾಗಿ ಕಸ್ತೂರೀ, ಚಂದನ ಇತ್ಯಾದಿ ಸುಗಂಧ ದ್ರವ್ಯಗಳನ್ನು ಸ್ವತಃ ಕೈಯಿಂದ ತಂದು ॥೨೧॥

ನನ್ನ ಅಂಗಗಳಿಗೆ ಚರ್ಚಿಸಿದಾಗ ಅವೆಲ್ಲವೂ ಶೀತಲ ವಾತಾವರಣವನ್ನು ಅನುಭವಿಸಿದವು. ಅದು ಅಂದಿನ ಸು-ದಿನಗಳ ಮಾತಾಯಿತು. ಇಂದು ಅವೇ ನನ್ನ ಅಂಗಗಳು ನಿನ್ನ ವಿರಹದಿಂದುಂಟಾದ ಶೋಕಾಗ್ನಿಯಿಂದ ದಹಿಸಿಹೋಗುತ್ತಲಿವೆ. ಆರ್ಯ! ಅದನ್ನು ಶಮನಗೊಳಿಸು. ॥೨೨॥

ಪ್ರಿಯತಮ! ನನಗಿಂತಲೂ ಮೊದಲು ನೀನು ಯಾವುದನ್ನೂ, ಹೆಚ್ಚೇನು? ವಿಷವನ್ನೇ ಆಗಲಿ, ಒಂದು ತೃಣದಷ್ಟನ್ನು ಸಹ ನೀನು ನನ್ನನ್ನು ಬಿಟ್ಟು ತಿಂದವನಲ್ಲ. ಹೀಗಿದ್ದು, ಇಂದು ಮಾತ್ರ ಅದೇ ನೀನು ಅತ್ಯುತ್ತಮವಾದ ಸ್ವರ್ಗಸುಖವನ್ನು ಅನುಭವಿಸಲು ನನ್ನನ್ನು ತೊರೆದೇ ಹೊರಟುಬಿಟ್ಟೆಯಲ್ಲ? ॥೨೩॥

ಸಾಧು ಸಜ್ಜನರು, ಅಪರಾಧವಿಲ್ಲದಿದ್ದರೆ ತಮ್ಮ ಭೃತ್ಯರ ವಿಷಯದಲ್ಲಿ ಎಂದೂ ಉದಾಸೀನರಾಗಿ ವರ್ತಿಸುವುದಿಲ್ಲ. ಅವರ ಯೋಗಕ್ಷೇಮವನ್ನು ಗಮನಿಸುತ್ತಲೇ

**ಸಾಧವಃ ಸಮಶೀಲಾಶ್ಚ ತತ್ಕಥಂ ಮಾಮುಪೇಕ್ಷಸೇ ॥೨೪॥**
**ಉಪಾಧಿರಹಿತಂ ಪ್ರೇಮ ಕೃತಂ ನಾನಾವಿಧಂ ಪುರಾ ।**
**ಅನಿರ್ವಾಚ್ಯಂ ಕಥಂ ತ್ಯಕ್ತ್ವಾ ತದ್ಗತೋಽಸಿ ಸುರಾಂತಕ ! ॥೨೫॥**
**ಕ ಉವಾಚ :—**
**ತಪೋವೃದ್ಧಾ ಜ್ಞಾನವೃದ್ಧಾಃ ಪ್ರಾಬ್ರುರ್ವ ನಿಷ್ಠುರಂ ವಚಃ ।**
**ತ ಊಚುಃ :—**
**ನ ರೋದನಂ ಪ್ರಶಂಸಂತಿ ಧರ್ಮಶಾಸ್ತ್ರವಿದೋ ಜನಾಃ ॥೨೬॥**
**ಯದಶ್ರು ಸುಹೃದಾಮಾಸ್ಯೇ ಪ್ರೇತಸ್ಯ ತತ್ಪತೇದ್ಧ್ರುವಮ್ ।**
**ತಸ್ಮಾತ್ತಸ್ಯ ಹಿತಂ ಯತ್ಸ್ಯಾತ್ತತ್ಕರ್ತವ್ಯಂ ದಯಾವತಾ ॥೨೭॥**

ಇರುತ್ತಾರೆ. ನಾನು ನಿನ್ನ ಚರಣದಾಸಿ, ನಿರಪರಾಧಿನಿ, ನನ್ನನ್ನೇಕೆ ನೀನು ಹೀಗೆ ಉಪೇಕ್ಷಿಸಿದೆ? ॥೨೪॥

ನಾನು "ಸುಂದರಿ" ಎಂದಾಗಲಿ, 'ಪುತ್ರವತಿ" ಎಂದಾಗಲಿ, "ಪತಿಸೇವಾ ಪರಾಯಣೆ' ಎಂದಾಗಲಿ ಮತ್ತಾವ ವಿಧವಾದ ಉಪಾಧಿಯನ್ನು ಮುಂದಿರಿಸಿಕೊಂಡೇ ಆಗಲಿ ನೀನು ಪ್ರೀತಿಸಿದವನಲ್ಲ. ನಿನ್ನದು ಶುದ್ಧವಾದ, ಸರಳ ಪ್ರೇಮ. ಸುರಾಂತಕ! ಅಂತಹ ಅನಿರ್ವಾಚ್ಯವಾದ ಪ್ರೇಮಶೃಂಖಲೆಯನ್ನೂ ಕಡಿದೊಗೆದು, ಇಂದು ಕಣ್ಮರೆಯಾಗಿ ಹೊರಟುಹೋದೆಯಲ್ಲ. ॥೨೫॥

ಬ್ರಹ್ಮ:

ಆಗ ಲೋಕದ ನಿಯತಿಯನ್ನರಿತ ತಪೋವೃದ್ಧರೂ, ಜ್ಞಾನಿಗಳೂ ಅಳುವವರ ಬಳಿಗೆ ಬಂದು, ಕೆಲವು ನಿಷ್ಠುರ ವಚನಗಳನ್ನಾಡಿದರು.

ಹಿರಿಯರು :—

ಏಕೆ; ವ್ಯರ್ಥವಾಗಿ ಅಳುತ್ತಿರುವಿರಿ? ಧರ್ಮಶಾಸ್ತ್ರದ ಮರ್ಮವನ್ನರಿತ ಜನರು ಅಳುವುದನ್ನು ಎಂದೂ ಪ್ರಶಂಸಿಸುವುದಿಲ್ಲ. ॥೨೬॥

ಮೃತನ ಸ್ನೇಹಿಗಳು ಅವನಿಗಾಗಿ ಅತ್ತು ಕಣ್ಣೀರು ಸುರಿಸಿದರೆ, ಅದು ಪ್ರೇತ (ಮೃತ) ನ ಬಾಯಿಯಲ್ಲಿ ಬೀಳುವುದು. ಇದು ಬಾಯಿಮಾತಲ್ಲ, ಸತ್ಯವಾದುದು. ಆದುದರಿಂದಲೇ ಎಂದೂ ಅಳುತ್ತ ಕುಳ್ಳಿರಬಾರದು. ನಿಜವಾಗಿ ಮೃತನ ವಿಷಯದಲ್ಲಿ ದಯಾವಂತರಾಗಿದ್ದರೆ, ಅವನ ಪಾರಲೌಕಿಕ ಮಾರ್ಗ ಸುಗಮವಾಗುವಂತೆಯೂ, ಅಕ್ಷಯ್ಯ ಪುಣ್ಯಲೋಕ ಪ್ರಾಪ್ತಿಯಾಗುವಂತೆಯೂ ಮಾಡಲು ಪ್ರಯತ್ನಿಸಿದರೆ ಅವನಿಗೆ ಹಿತವನ್ನು ಸಾಧಿಸಿದಂತಾಗುವುದು. ॥೨೭॥

**ವಿಚಾರ್ಯಮಾಣೇ ತಸ್ಯಾಪಿ ಮೋಕ್ಷೋऽದಾಯಿ ಕೃಪಾವತಾ ।**
**ನಿರ್ಗುಣೇನ ಚಿದಾನಂದಘನೇನ ಬ್ರಹ್ಮರೂಪಿಣಾ ॥೩೮॥**

**ದಯಾಪರವಶಾಜ್ಜನ್ಮ ಬಿಭ್ರತಾ ಲೋಕಶಂಕೃತಾ ।**
**ಮಯೂರೇಶೇನ ಸಂಗ್ರಾಮೇ ನಿಘ್ನತಾ ಸಂಮುಖಂ ಚ ತಮ್ ॥೩೯॥**

**ಆತ್ಮನೋ ನೈವ ಮರಣಂ ನೋತ್ಪತ್ತಿಃ ಕ್ವಾಪಿ ವಿದ್ಯತೇ ।**
**ಅನಾದಿತ್ವಾನ್ನಿರ್ಗುಣತ್ವಾನ್ನಿತ್ಯತ್ವಾದ್ವೇದನಿಶ್ಚಯಾತ್ ॥೪೦॥**

**ಸ್ವಾರ್ಥಂ ಹಿ ರೋದತೇ ಜಂತುರ್ಹಿತಂ ಪ್ರೇತಸ್ಯ ನೇಹತೇ ।**
**ಅಸಂಖ್ಯಭಾರವಾಟ್‌ದೇವೀ ನ ಭಾರಂ ಸಹತೇ ಧರಾ ॥೪೧॥**

---

ಇದು ಸಾಮಾನ್ಯವಾದ ರೀತಿಯಲ್ಲಿ ಮೃತಿಹೊಂದಿದವರ ಸಂಗತಿಯಾಯಿತು. ಪ್ರಕೃತ ವಿಚಾರಮಾಡುವುದಾದರೆ, ದಯಾಮಯನಾದ ಮಯೂರೇಶ್ವರನು ಸಿಂಧು ದೈತ್ಯನಿಗೆ ಸಾಕ್ಷಾನ್ಮೋಕ್ಷಸಾಮ್ರಾಜ್ಯವನ್ನೇ ಅನುಗ್ರಹಿಸಿ ಕೊಟ್ಟಿದ್ದಾನೆ. ಹೀಗಿದ್ದರೂ,ಏಕೆ ಅಳುತ್ತಿರುವಿರಿ? ಪರಮಾತ್ಮನಾದ ಮಯೂರೇಶ್ವರನು ಸ್ವಯಂ ನಿರ್ಗುಣ, ಚಿದಾನಂದಘನ. ಹೆಚ್ಚೇನು ? ಪರಬ್ರಹ್ಮಸ್ವರೂಪಿ. ॥೩೮॥

[illegible] ಹೆಚ್ಚಿಸುವುದಕ್ಕೂ, ಜಗತ್ತಿನ ನೀತಿ-ನಿಯಮಗಳನ್ನು ನಿಬಂಧನೆಗೊಳಿಸಲಿಕ್ಕೂ ದಯಾಪರವಶನಾದ ದೇವನು ಅನೇಕ ರೂಪಗಳಿಂದ ಆಗಾಗ್ಗೆ ಅವತರಿಸುವನು. ಇಂತಹ ಮಯೂರೇಶನು ಯುದ್ಧದಲ್ಲಿ ಸಿಂಧುವನ್ನು ಕೊಲ್ಲುವಾಗ ತನ್ನ ವಿರಾಡ್ರೂಪವನ್ನು ಪ್ರತ್ಯಕ್ಷವಾಗಿ ಅವನಿಗೆ ತೋರಿಸಿ ಅನುಗ್ರಹಿಸಲಿಲ್ಲವೇ ? ಇದಕ್ಕೇಕೆ ಅಳುವಿರಿ?॥೩೯॥

ತತ್ತ್ವತಃ ವಿಚಾರಮಾಡಿ ನೋಡಿದರೆ, ಆತ್ಮನಿಗೆ ಜನನ-ಮರಣಗಳಾವೂ ಇರುವುದೇ ಇಲ್ಲ. ದೇಹವು ಹುಟ್ಟುತ್ತದೆ ಅಳಿಯುವುದೂ ಅದೇ ದೇಹ. ಆತ್ಮ ನಿತ್ಯನೂ, ನಿರ್ಗುಣನೂ ಅನಾದಿಯೂ ಆಗಿರುವನೆಂದು ವೇದವು ಹೇಳುತ್ತಿರುವುದರಿಂದ, ದೇಹವು ಹುಟ್ಟುವುದಕ್ಕೆ ಮೊದಲೂ, ಅದು ಸತ್ತ ಮೇಲೂ ಆತ್ಮನು ಇದ್ದೇ ಇರುವನು. ॥೪೦॥

ಸತ್ತವನಿಗಾಗಿ ಅಳುವೆವೆನ್ನುವರು ಎಂದೆಂದಿಗೂ ಮೃತನಿಗೆ ಹಿತೈಷಿಗಳಲ್ಲ. ಅವರು ಸ್ವಾರ್ಥಿಗಳು ಮೃತನಿಂದ ತಮಗಾಗುತ್ತಲಿದ್ದ ಯಾವುದಾದರೂ ಒಂದು ಬಗೆಯ ಪ್ರಯೋಜನಕ್ಕೆ ಕೊರತೆಯಾಯಿತಲ್ಲ, ಎಂಬುದಕ್ಕಾಗಿ ಅಳುವರೇ ಹೊರತು, ಅನ್ಯಥಾ ಇಲ್ಲ. ಆದುದರಿಂದ ನೀವು ಅಳಬಾರದು. ಅಲ್ಲದೆ, ಮತ್ತೊಂದು ವಿಶೇಷವೇನೆಂದರೆ, ಭೂಮಿಯು ಎಷ್ಟೇ ಭಾರವನ್ನು ಹೊರಬಲ್ಲವಳಾದರೂ, ಮೃತರಾದವರ ಭಾರವನ್ನು ಮಟ್ಟಿಗೆ ಎಂದಿಗೂ ಹೊರಲಾರಳು ॥೪೧॥

ಪ್ರೇತಸ್ಯ ಶೇಷಃ ಕಮಠೋ ವರಾಹೋऽಸೌ ಧರಾಧರಃ ।
ಕ ಉವಾಚ :—
ಇತ್ಯುಕ್ತ್ವಾ ತೇ ತದಾ ಶೋಕಂ ವಿಜಹುರ್ವೃದ್ಧವಾಕ್ಯತಃ ॥೩೨॥
ಉಗ್ರಾ ಚ ಚಕ್ರಪಾಣಿಶ್ಚ ದುರ್ಗಾ ಚ ಸಖಿಭಿಃ ಸಹ ।
ನಾಗರಾಶ್ಚಾಪಿ ಶೋಚಂತೋ ಯಯುಃ ಸಂಗ್ರಾಮಮಂಡಲಮ್ ॥೩೩॥
ದದೃಶುಃ ಸೇವಕೈಃ ಸಿಂಧುಂ ವೀಜ್ಯಮಾನಂ ರಣಾಂಗಣೇ ।
ಪತಿತಂ ವಕ್ತ್ರಕಮಲಂ ವ್ಯಾದಾಯ ಸಿತಲೋಚನಮ್ ॥೩೪॥
ಅಸೃಕ್ಸ್ರವಂತಂ ದುರ್ಗಂಧಂ ಪಕ್ಷಿ-ಶ್ವಾಪದಸಂಕುಲಮ್ ।
ಉಪವಿಷ್ಟಾಸ್ತು ಪರಿತಃ ಶೋಚಂತೋ ಭೃಶದುಃಖಿತಾಃ ॥೩೫॥

---

ಆದಿಶೇಷ ಆದಿವರಾಹ ಮತ್ತು ಆದಿಕಮಠ ಇವರಾರೂ ಪ್ರೇತದ ಭಾರವನ್ನು ಹೊರಲಾರರಾದುದರಿಂದ ಮೃತ ದೇಹಗಳನ್ನು ವ್ಯಾಮೋಹಗೊಂಡು ಅಸಂಸ್ಕೃತವನ್ನಾಗಿ ಹೆಚ್ಚುಕಾಲ ಇಟ್ಟುಕೊಳ್ಳಬಾರದು. ಆದಷ್ಟು ಬೇಗ ಅದನ್ನು ಸಂಸ್ಕರಿಸಬೇಕು.

ಬ್ರಹ್ಮಾ:—

ವೃದ್ಧರು ಹೀಗೆಂದು ಸಮಾಧಾನಕರ ಯುಕ್ತವಾದ ವಚನಗಳನ್ನು ಹೇಳಲು, ದೈತ್ಯನ ಬಂಧುಗಳೆಲ್ಲರೂ ತದ್ವಿರಹಜನಿತ ದುಃಖವನ್ನು ಕಡಿಮೆಮಾಡಿಕೊಂಡರು. ॥೩೨॥

ಅನಂತರ ಸಿಂಧುವಿನ ತಂದೆ-ತಾಯಿಗಳಾದ ಉಗ್ರೆ-ಚಕ್ರಪಾಣಿಗಳು, ತನ್ನ ಸಖೀಜನರಿಂದೊಡಗೂಡಿದ ದುರ್ಗೆ ಮತ್ತು ನಾಗರಿಕರು ಇವರೆಲ್ಲರೂ ಅತಿಯಾಗಿ ದುಃಖಿಸುತ್ತ, ಸಿಂಧುವಿನ ಮೃತದೇಹವನ್ನುಸಂಸ್ಕರಿಸಿ ಬರುವುದಕ್ಕಾಗಿ ರಣಭೂಮಿಯ ಕಡೆಗೆ ಹೊರಟರು. ॥೩೩॥

ಯುದ್ಧಭೂಮಿಯಲ್ಲಿ ಅಸುವಳಿದು ಹೆಣಗಳ ರಾಶಿಯ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ಸಿಂಧು-ದೈತ್ಯನ ಮೃತದೇಹವನ್ನು ಅವನ ಸೇವಕರು ಚಾಮರಗಳಿಂದ ಬೀಸುತ್ತಲಿದ್ದರು. ಕಮಲದಂತಿದ್ದ ರಾಕ್ಷಸರಾಜನ ಮುಖವು ಬಾಡಿ ಆಗ ಎತ್ತಲೋ ಬಿದ್ದಿದ್ದಿತು. ಬಾಯಿ ತೆರೆದು ಹೋಗಿದ್ದಿತು. ಕಣ್ಣುಗಳು ತೇಜೋಹೀನಗಳಾಗಿ, ಬಿಳುಪೇರಿ ಸ್ತಬ್ಧಗೊಂಡಿದ್ದವು. ॥೩೪॥

ಅವನ ದೇಹದ ನಾನಾಭಾಗಗಳಲ್ಲುಂಟಾದ ದೊಡ್ಡ ದೊಡ್ಡ ಗಾಯಗಳು ದುರ್ಗಂಧದ ರಕ್ತವನ್ನು ಕಾರುತ್ತಿದ್ದವು. ಮಾಂಸಾಹಾರಿಗಳಾದ ರಣಹದ್ದು, ಗರುಡ ಮೊದಲಾದ ಪಕ್ಷಿಗಳು, ಶ್ವಾಪದಗಳು ಆತನ ರಕ್ತ-ಮಾಂಸಾದಿಗಳಿಗೆ ಆಶೆಪಟ್ಟು ಸುತ್ತಲೂ ಕಾದು ನಿಂತಿದ್ದವು. ಆ ದೇಹವನ್ನು ನೋಡಿದಕೂಡಲೆ, ಸಂಬಂಧಿಗಳಿಗೆ

**ಅಂಕೇ ಕೃತ್ವಾ ಶಿರಸ್ತಸ್ಯ ದುರ್ಗಾಶೋಚತ್ಸ್ವರಸ್ವನಾ ।**

**ದುರ್ಗೋವಾಚ :—**

**ಪಾದಸಂವಾಹನಂ ನಾಥ ! ಹಸ್ತಾಭ್ಯಾಂ ಪೂರ್ವಮಾಚರಮ್ ॥೩೬॥**

**ಜನಮಧ್ಯೇ ನ ತಚ್ಛಕ್ಯಮುತ್ತಿಷ್ಠ, ಪ್ರಾಣನಾಯಕ ! ।**

**ಶತ್ರೌ ಜೀವತಿ, ನಿದ್ರಾಂ ತ್ವಂ ಕಥಂ ವೀರಾಧಿಗಚ್ಛಸಿ ? ॥೩೭॥**

**ಕ ಉವಾಚ :—**

**ತನ್ಮುಖೇ ಸ್ಥಾಪಯಿತ್ವಾಸ್ಯಂ ಹಾಹಾಕಾರಂ ಚ ಸಾಕರೋತ್ ।**

**ನ್ಯಷೇಧನ್ವೃದ್ಧವಿಜ್ಞಾಸ್ತಾಂ ತತ ಉಗ್ರಾಬ್ರವೀದ್ವಚಃ ॥೩೮॥**

**ಚಕ್ರಪಾಣಿಃ ಪಿತಾಚಾಸ್ಯಂ ಕ್ಷಾಲಯಂತೌ ಶುಶೋಚ ತಮ್ ।**

ಮಿತಿಮೀರಿ ದುಃಖ ಉಂಟಾಯಿತು. ಅವರೆಲ್ಲರೂ ಶವದ ಸುತ್ತಲೂ ಕುಳಿತು, ಶೋಕಿಸ ತೊಡಗಿದರು. ॥೩೫॥

ದುರ್ಗೆಗುಂಟಾದ ಶೋಕವನ್ನು ಬಣ್ಣಿಸುವುದು ಬಹಳ ಕಷ್ಟ. ಅವಳು ತನ್ನ ಪತಿಯ ಶಿರವನ್ನು ತೊಡೆಯಮೇಲಿರಿಸಿಕೊಂಡು ದುಃಖವನ್ನು ಸಹಿಸಲಾರದೆ ಸ್ತ್ರೀ ಸಹಜ ಮರ್ಯಾದೆ, ಲಜ್ಜೆಗಳನ್ನೂ ಮರೆತು, ಕರ್ಕಶ ಧ್ವನಿಯಿಂದ ಅರಚಿದಳು.

ದುರ್ಗೆ :—

ನಾಥ ! ಈ ಮೊದಲು, ನಾನು ನನ್ನ ಕೈಗಳಿಂದ ನಿನ್ನ ಪಾದಗಳನ್ನು ಸೇವಿಸುತ್ತಲಿದ್ದೆನು. ॥೩೬॥

ಪ್ರಾಣನಾಯಕ ! ಇಷ್ಟು ಜನರು ಇಲ್ಲಿ ನೆರೆದಿರುವಾಗ ಅವರೆದುರಿಗೆ ಏಕಾಂತ ಸೇವೆಯನ್ನು ಸಲ್ಲಿಸಲು ಸಾಧ್ಯವಾದೀತೇ ? ಮೇಲಕ್ಕೇಳು. ನೋಡು, ನಿನ್ನ ಶತ್ರು ಇನ್ನೂ ಬದುಕಿ ಇಲ್ಲಿಯೇ ಇರುವಾಗ, ವೀರಪುರುಷ! ನೀನು ಹೇಗೆ ನಿದ್ರೆಯನ್ನು ಮಾಡುತಲಿರುವೆ ? ॥೩೭॥

ಬ್ರಹ್ಮಾ :—

ಹಾಗೆ ನುಡಿದು, ಮುರಿದ ಅವನ ಮುಖದ ಮೇಲೆ, ತನ್ನ ಮುಖವನ್ನಿರಿಸಿ ಹಾಹಾಕಾರವನ್ನು ಮಾಡಿದಳು. ಆಗ ಅಲ್ಲಿದ್ದ ವಯೋವೃದ್ಧರು ಅವಳಿಗೆ ಅನೇಕ ಸಮಾಧಾನಕರ ವಚನಗಳನ್ನು ಹೇಳಿ, ಹೆಚ್ಚು ಅಳದಂತೆ ತಡೆಗಟ್ಟಿದರು. ಆಗ ಅಸುರನ ತಾಯಿ ಉಗ್ರೆಯು ಹೀಗೆ ಹೇಳಿದಳು. ॥೩೮॥

ವೃದ್ಧನಾದ ಚಕ್ರಪಾಣಿಯೂ ಅವಳೊಂದಿಗೆ ಒಂದಾಗಿ ಶೋಕಿಸಿದನು ಅವರಿಬ್ಬರೂ ಕಣ್ಣೀರಿನಿಂದ ಕೋಡಿಯನ್ನು ಹರಿಸಿ, ಮಗನ ಮುಖವನ್ನು ತೊಳೆದರು.

**ತಾವೂಚತುಃ :—**

**ಉತ್ತಿಷ್ಠ ವತ್ಸ ! ಕಿಂ ಶೇಷೇ ಶೇಷೇ ರಿಪುಗಣೇ ಸತಿ ||೩೯||**
**ವಜ್ರೀವಜ್ರಾಹತ ಇವ ಪತಿತೋ ಧರಣೀತಲೇ ।**
**ಇದಾನೀಂ ಬಾಲಯುದ್ಧೇ ತ್ವಂ ಕಥಂ ನಿಪತಿತೋ ಭುವಿ ||೪೦||**

**ಜಿತಃ ಕೃತಾಂತೋ ಭ್ರೂಕ್ಷೇಪಾತ್ತದ್ವಶಂ ಕಥಮಾಗತಃ ? ।**
**ಕಿಂಚಿದ್ವಾಕ್ಯಂ ವದ ವಿಭೋ ! ಹೃದಯಾನಂದಕಾರಕಮ್ ||೪೧||**

**ಯಸ್ಯ ಶಬ್ದೇನ ತ್ರೈಲೋಕ್ಯಂ ಕಂಪತೇ ಸ್ಮ ಪುರಾನಘ !**
**ಕಥಂ ಹಿ ವಚನಂ ನಾದ್ಯ ವದಸೇಽಮಂದವಿಕ್ರಮ ! ||೪೨||**

**ನಾವಾಭ್ಯಾಮಪರಾದ್ಧಂ ತೇ ಯೇನ ಮೌನಂ ತ್ವಮಾಶ್ರಿತಃ ।**
**ನ ಭಾಷಸೇ ರೋಷವಶಾತ್ ಸೇನಾಶೇಷಸಮನ್ವಿತಃ ||೪೩||**

ಉಗ್ರೆ, ಚಕ್ರಪಾಣಿಗಳು :—

ವತ್ಸ ! ಮೇಲಕ್ಕೇಳು. ರಿಪುಗಳ ಸಮುದಾಯ ಬದುಕಿ ಇನ್ನೂ ಇಲ್ಲಿಯೇ ಉಳಿದಿರುವಾಗ ನೀನು ಮಲಗಿ ನಿದ್ರಿಸೋಣವೆಂದರೇನು ? ||೩೯||

ದೇವೇಂದ್ರನ ವಜ್ರಾಘಾತಕ್ಕೆ ಸಿಕ್ಕಿದ ಪರ್ವತದಂತೆ ನೀನು ಈ ಧರಣೀತಲದಲ್ಲಿ ಬಿದ್ದುಬಿಟ್ಟಿರುವೆಯಲ್ಲ ? ಇದೇನೀ ವಿಪರೀತ ? ಈ ಬಾಲಕರ ಸಂಗಡ ಯುದ್ಧವನ್ನು ಮಾಡಿ ಸೋತು ನಿನ್ನಂತಹ ವೀರನು ಹೇಗೆ ನೆಲಕ್ಕೆ ಬಿದ್ದಿರಬಹುದು ? ||೪೦||

ಹುಬ್ಬನ್ನು ಕೊಂಕಿಸಿದ ಮಾತ್ರದಿಂದಲೇ ಯಮನನ್ನು ಸಹ ಸೋಲಿಸಿದ ನೀನು, ಈಗ ಅವನಿಗೆ ಹೇಗೆ ವಶನಾಗಿ ಹೋದೆಯೋ ಕಾಣೆವಲ್ಲ ? ನೀನು, ಒಂದೇ ಒಂದು ಮಾತನ್ನಾಡಿದರೂ ಸಾಕು, ನಮ್ಮ ಮನಸ್ಸಿಗೆ ಎಷ್ಟೋ ಹರ್ಷವಾಗುತ್ತದೆ. ಎಲ್ಲಿ, ರಾಕ್ಷಸರಾಜ ! ಒಂದು ಮಾತನ್ನಾಡು. ನೋಡೋಣ ? ||೪೧||

ನೀನು ಒಮ್ಮೆ ಸಿಂಹನಾದವನ್ನು ಮಾಡಿದೆ ಎಂದರೆ, ಮೂರು ಲೋಕಗಳಲ್ಲೂ ಆ ಶಬ್ದ ವ್ಯಾಪಿಸಿ. ಅಲ್ಲೆಲ್ಲ ಪ್ರತಿಧ್ವನಿಗೊಳ್ಳುತ್ತಲಿದ್ದಿತು. ಮತ್ತು ಆ ಲೋಕಗಳೆಲ್ಲ ಗಡಗಡ ನಡುಗಿ ಹೋಗುತ್ತಿದ್ದವು. ಅನಘ ! ಅದೆಲ್ಲ ,ಇಂದು ಹಿಂದಿನ ಮಾತಾಗಿ ಹೋಯಿತು. ಅನವಕುಂಠಿತ ಪರಾಕ್ರಮಿಯೇ! ಈಗೇಕೆ ನಿನ್ನ ಪರಾಕ್ರಮ ಮಂದವಾಗಿ ಹೋಯಿತು ? ಮೆಲ್ಲಗೆ ಸಹ ಒಂದು ಮಾತನ್ನಾಡಬೊಲ್ಲೆಯಲ್ಲ ? ||೪೨||

ನಾವೇನಾದರೂ ನಿನ್ನ ವಿಷಯದಲ್ಲಿ ಅಪರಾಧವನ್ನೆಸಗಿದ್ದೇವೆಯೇ ? ನಮಗೆ ನೆನಪಿದ್ದಂತೆ ನಿನ್ನ ಮನಸ್ಸಿಗೆ ವಿರೋಧವಾಗಿ ನಾವೇನೂ ನಡೆದಿಲ್ಲ. ಹೀಗಿದ್ದರೂ, ನೀನು ಈ ರೀತಿ ಮೌನವನ್ನಾಶ್ರಯಿಸಿದುದಕ್ಕೆ ಕಾರಣವೇನೋ, ತಿಳಿಯದಲ್ಲ? ನಿನಗೆ

**ಕಥಂ ವಿಹ್ವಲತಾಂ ಯಾತಃ ? ಕಾಮಂ ಯೋ ಜಿತವಾರ್ ರುಚಾ ।**

**ಕ ಉವಾಚ :—**

**ತತೋ ವಿಜ್ಞಾಶ್ಚ ವೃದ್ಧಾಶ್ಚ ನಾನಾದೃಷ್ಟಾಂತದರ್ಶನೈಃ ॥೪೪॥**
**ಸಮಾದಧ್ಯುಃ ಪ್ರರುದತೋ**

**ತ ಊಚುಃ :—**

**ಮೃತಾನುಮರಣಂ ನಹಿ ।**

**ರಾಮೋ ದಾಶರಥಿಃ ಕಿನ್ನು ? ಲೋಕಾಂತರಗತೋ ನಹಿ ? ॥೪೫॥**

**ವಿಕ್ರಮೇಣ ರಿಪೂರ್ ಜಿತ್ವಾ ಗತಃ ಕಿಂ ನ ರಘೂತ್ತಮಃ ? ।**

**ಅನ್ಯೇಽಪಿ ಶತಶೋ ಭೂಪಾಃ ತತ್ಕೃತೇ ಮರಣಂ ಗತಾಃ ॥೪೬॥**

---

ಮೇಲೆ ಕೋಪ ಬಂದಿದೆ ? ನೀನು ಯುದ್ಧಕ್ಕೆ ಹೋಗುವಾಗ ನಿನ್ನ ಸಮಸ್ತ ಸೇನೆ ಯಿಂದೊಡಗೂಡಿ ಹೋಗಿದ್ದೆಯಲ್ಲವೇ ? ॥೪೩॥

ಹೀಗಿದ್ದರೂ ನೀನೇಕೆ ಹೀಗೆ ವಿಹ್ವಲನಾದೆ ? ನೀನು ನಿನ್ನ ದೇಹ ಸೌಷ್ಠವ ದಿಂದ ಮದನನನ್ನು ಸಹ ಮೀರಿಸಿದ್ದವನು.

ಬ್ರಹ್ಮಾ :—

ಅವರ ಅಳುವನ್ನು ಕೇಳಿ, ತಿಳಿವಳಿಕೆಯುಳ್ಳ ವೃದ್ಧರು ಅನೇಕ ಬಗೆಯ ಉದಾ ಹರಣೆಗಳನ್ನು ಸೂಚಿಸುತ್ತ ॥೪೪॥

ಹೀಗೆಂದು ಸಮಾಧಾನಪಡಿಸಿದರು.

ವೃದ್ಧರು :—

ಏಕೆ ಹೀಗೆ ಅಜ್ಞರಂತೆ ಅಳುತ್ತಿರುವಿರಿ ? ಅತ್ತರೆ, ಸತ್ತವನು ಮರಳಿ ಜೀವಿಸಿ ಬಂದಾನೆಯೇ? ಅಥವಾ ಮೃತನೊಂದಿಗೆ ಅವನ ಅತ್ಯಾಪ್ತರು ತಾವೂ ಮೃತರಾಗಬಯ ಸುವರೇ ? ಹಾಗೆ ಮೃತರಾಗುವುದಕ್ಕಾದರೂ, ಅವರಿಗೆ ಸ್ವಾತಂತ್ರ್ಯವಿದೆಯೇ ? ಹಿಂದಿನ ಘಟನೆಗಳನ್ನು ಸ್ವಲ್ಪ ಗಮನಿಸಿ ನೋಡಿ. ದಾಶರಥಿ ರಾಮನು ಎಂತೆಂತಹ ಸಾಹಸ ಕೃತ್ಯಗಳನ್ನು ಮಾಡಿದನು ? ಅದರಲ್ಲೂ ಸಮುದ್ರದ ಸೊಕ್ಕನ್ನಡಗಿಸಿ, ಅದಕ್ಕೆ ಸೇತುವೆಯನ್ನೂ ಕಟ್ಟಲಿಲ್ಲವೇ ? ॥೪೫॥

ಅವನ ಪರಾಕ್ರಮಕ್ಕೆ ಎಣೆ ಇದ್ದಿತೇ ? ಎಂತೆಂತಹ ಪ್ರಬಲತರ ಶತ್ರುಗಳನ್ನು ಆ ರಘೂತ್ತಮನು ಜಯಿಸಲಿಲ್ಲ? ಅಂತಹ ಮಹಾತ್ಮನು ಹೊರಟೇ ಹೋಗಲಿಲ್ಲವೇ? ಇನ್ನೂ ನೂರಾರು ಗಟ್ಟಲೆ ಇತರ ಭೂಪರು ವೀರ್ಯಶಾಲಿಗಳಾದವರಿರಲಿಲ್ಲವೇ? ಕಾಲ

**ಕೀರ್ತಿಂ ನಾನಾವಿಧಾಂ ಕೃತ್ವಾ ಸ್ವರ್ಗಸ್ಥಃ ಸುಖಮುಶ್ನುತೇ ।**
**ಕ ಉವಾಚ —**
**ತತಸ್ತೇ ಸಂಸ್ಕೃತಂ ಚಕ್ರುಃ ಬಿಲ್ವ-ಚಂದನದಾರುಭಿಃ ॥೪೭॥**
**ದುರ್ಗಾ ಸಹೈವ ಸಂಯಾತಾ ಪಾತಿವ್ರತ್ಯಗುಣಾನ್ವಿತಾ ।**
**ತತೋ ಯಯೌ ಮಯೂರೇಶಂ ಚಕ್ರಪಾಣಿಃ ಸನಾಗರಃ ॥೪೮॥**

ಒದಗಿದ ಕೂಡಲೇ ಅವರೂ ಲೋಕಾಂತರಕ್ಕೆ ತೆರಳಲಿಲ್ಲವೇ? ಅಂತಹ ರಾಜರು ಎಷ್ಟೋ ಜನರು ಮೃತರಾಗಲಿಲ್ಲವೇ? ॥೪೬॥

ಬದುಕಿರುವವರೆಗೂ ಪ್ರಪಂಚೋಪಕಾರಕ ಅನೇಕ ಮಹತ್ಕಾರ್ಯಗಳನ್ನು ಮಾಡಿ ಸತ್ಕೀರ್ತಿಯನ್ನು ಸಂಪಾದಿಸಿದುದಲ್ಲದೆ, ಮರಣಾನಂತರ ಸ್ವರ್ಗಕ್ಕೆ ತೆರಳಿ ಸುಖವನ್ನು ಅನುಭವಿಸುತ್ತಲಿದ್ದಾನೆ. ಋಣ-ಋಣಿಭಾವವಿರುವ ವರೆಗೂ ತಂದೆ, ತಾಯಿ, ಮಕ್ಕಳು ಹೆಂಡತಿ, ಬಂಧುಗಳು, ಸ್ನೇಹಿತರು ಪಶುಗಳು, ಮನೆ, ರಾಜ್ಯ, ಇವೆಲ್ಲ ನಮಗೆ ಸಂಬಂಧಿಸಿದಂತಿರುವುವು. ಋಣವು ಮುಗಿದ ಬಳಿಕ ಯಾರಿಗೂ ಹೇಳದೆ ಕೇಳದೆ, ಒಮ್ಮಿಂದೊಮ್ಮೆಲೆ ತಮ್ಮ ಪಾಡಿಗೆ ತಾವು ಇವನನ್ನು ಬಿಟ್ಟು ಹೋಗಿ ಬಿಡುವುವು. ಇದಕ್ಕೇಕೆ ಅಳುವಿರಿ? ಬಿಟ್ಟುಬಿಡಿ.

ಬ್ರಹ್ಮಾ:—

ವ್ಯಾಸ! ಕೇಳು. ಇದು ಜಗತ್ತಿನ ಒಂದು ನಿಯಮು. ವಿಷಯ ಸುಖಕರ ವಾಗಿರಲಿ ಅಥವಾ ದುಃಖಕರವಿರಲಿ, ಮೊದಮೊದಲಿಗೆ ಮನುಷ್ಯನ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡುತ್ತದೆ. ಅದರ ಪರಿಚಯಾನುಭವಗಳು ಹೆಚ್ಚಿದಂತೆಲ್ಲ ಅದರ ಪರಿಣಾಮವೂ ಮಾಸುತ್ತಬರುವುದು. (Time is the Healing eliment) ಹೀಗಿರದೇ ಒಂದು ವಿಷಯವೇ ಕೊನೆಯವರೆಗೂ ಕರುಳನ್ನು ಕೊರೆಯ ಲಾರಂಭಿಸಿದರೆ, ಮನುಷ್ಯನು ಬದುಕಿ ಬಾಳುವುದೆಂತು? ಗಾದೆಯೂ ಹಾಗೆಯೇ ಇದೆ. "ಸದಾ ಸಾಯುವವರಿಗೆ ಅಳುವವರಾರು? ಇರಲಿ, ದುಃಖದ ಆವೇಗ ಸ್ವಲ್ಪ ಕುಗ್ಗಿದ ಬಳಿಕ ಅಸುರನ ಬಂಧುಗಳು ಬಿಲ್ವ, ಶ್ರೀಚಂದನ ಮೊದಲಾದ ಕಾಷ್ಠಗಳನ್ನು ಉಪಯೋಗಿಸಿ, ಮೃತನ ದೇಹವನ್ನು ಯಥಾವಿಧಿಯಾಗಿ ಸಂಸ್ಕರಿಸಿದರು. ॥೪೭॥

ಮಹಾಪತಿವ್ರತಾಶಿರೋಮಣಿಯಾದ ದುರ್ಗೆಯು ಪತಿಯೊಡನೆ ಸಹಗಮನ ವನ್ನು ಮಾಡಿದಳು. ಇಷ್ಟೆಲ್ಲ ಆದ ಬಳಿಕ, ರಾಕ್ಷಸರಾಜನ ತಂದೆಯಾದ ಚಕ್ರಪಾಣಿ ಮಹಾರಾಜನು ತನ್ನ ನಾಗರಿಕರಿಂದೊಡಗೂಡಿ, ಮಯೂರೇಶ್ವರನ ಚರಣ ಸನ್ನಿಧಿಗೆ ಬಂದನು. ॥೪೮॥

**ನಮಸ್ಕೃತ್ಯ ಪ್ರತುಷ್ಟಾವ ಬದ್ಧಾಂಜಲಿಪುಟಃ ಶನೈಃ ।**
**ರಾಜೋವಾಚ :—**
**ನಿರ್ಗುಣಸ್ತ್ವಂ ಪರಾತ್ಮಾಸಿ ಚರಾಚರಗತಿರ್ವಿಭೋ ! ॥೪೯॥**
**ತ್ರಯೀಗಮ್ಯೋ ಗುಣಾಧ್ಯಕ್ಷೋ ವಿರಜೋ ವಿಶ್ವನಾಯಕಃ ।**
**ತವೈವ ಮಾಯಯಾ ದೇವಾ ಮೋಹಿತಾಸ್ತ್ವಂ ನ ತೇ ವಿದುಃ ॥೫೦॥**
**ಅಹಂ ಧನ್ಯೋ ನಾಗರಿಕಾ ಧನ್ಯಾಸ್ತ್ವದ್ದರ್ಶನಾದ್ವಿಭೋ ! ।**
**ಕ ಉವಾಚ :—**
**ಏವಂ ತೇನ ಸ್ತುತೋ ದೇವಃ ಕರುಣಾಬ್ಧಿರ್ಮಯೂರರಾಟ್ ॥೫೧॥**
**ಉವಾಚ ಪರಮಪ್ರೀತಸ್ಸರ್ವಶಾಸ್ತ್ರಾರ್ಥತತ್ತ್ವವಿತ್ ।**

ಭಗವಂತನಿಗೆ ಭಕ್ತಿಯಿಂದ ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ವಿನೀತನಾಗಿ ನಿಂತು ಹೀಗೆಂದು ಸ್ತುತಿಸಿದನು.

ರಾಜಾ :—

ಭಗವನ್, ಗುಣೇಶ್ವರ ! ನೀನು ನಿರ್ಗುಣನು. ಎಲ್ಲರ ಹೃದಯಗಳಲ್ಲೂ ಪರಮಾತ್ಮನೆನಿಸಿ ನೆಲೆಸಿರುವೆ. ವಿಭೋ ! ಸಕಲ ಚರಾಚರಗಳಿಗೂ ಮುಖ್ಯ ಗತಿ ನೀನಾಗಿರುವೆ. ॥೪೯॥

ಶಬ್ದಪ್ರಮಾಣ (ವೇದ) ಮಾತ್ರದಿಂದ ವೇದ್ಯನಾಗತಕ್ಕವನು. ಸತ್ತ್ವರಜಸ್ತಮೋಗುಣಗಳಿಗೆ ಅಧ್ಯಕ್ಷನು. ಇಷ್ಟಾದರೂ ಆ ಗುಣಗಳ ಸಂಪರ್ಕ ನಿನಗಿರುವುದಿಲ್ಲ. ಈ ವಿಶ್ವಕ್ಕೆಲ್ಲ ನಾಯಕನಾಗಿರುವೆ. ನೀನು ಮಹಾಮಾಯಾವಿ. ದೇವತೆಗಳು ಸಹ ನಿನ್ನ ಮಾಯಾ ಪ್ರಭಾವಕ್ಕೆ ಪದೇ ಪದೇ ಮೋಹಿತರಾಗಿ ನಿನ್ನನ್ನು ತಿಳಿಯಲಾರದೇ ಹೋಗುವರು. ॥೫೦॥

ವಿಭೋ ! ನಿನ್ನ ದಿವ್ಯ ದರ್ಶನ ನಮಗೆ ಲಭಿಸಿದುದರಿಂದ ನಾನೂ, ಈ ನಾಗರಿಕರೂ ಇಂದಿಗೆ ಧನ್ಯರಾದೆವು.

ಬ್ರಹ್ಮಾ :—

ಚಕ್ರಪಾಣಿಯು ಅನನ್ಯಭಾವದಿಂದ ಹೀಗೆ ಸ್ತುತಿಸಲು, ಕರುಣಾಸಾಗರನಾದ ಮಯೂರೇಶ್ವರನು ॥೫೧॥

ಬಹಳ ಸಂತೋಷಗೊಂಡನು. ಸಕಲ ಶಾಸ್ತ್ರಾರ್ಥಗಳ ತತ್ತ್ವವನ್ನು ಸಂಪೂರ್ಣವಾಗಿ ಅರಿತ, ಮಯೂರರಾಜನು ಚಕ್ರಪಾಣಿಯನ್ನು ಕುರಿತು ತತ್ಕಾಲೋಚಿತವಾಗಿ ಹೀಗೆಂದು ಮಾತನಾಡಿದನು.

**ದೇವ ಉವಾಚ :—**

**ವರಂ ವರಯ ಮತ್ತಸ್ತ್ವಂ ಚಕ್ರಪಾಣೇ, ಹತಾರ್ಭಕ ! ॥೫೨॥**

**ರಾಜೋವಾಚ :—**

**ಯದಿ ತುಷ್ಟೋಽಸಿ ದೇವೇಶ, ಯದಿ ದೇಯೋ ವರೋ ಮಮ ।**
**ತದಾ ಗೃಹಾನುಪಾಗಚ್ಛ, ಪುನೀಹಿ ನಗರೀಮಿಮಾಮ್ ॥೫೩॥**

**ಈ ಉವಾಚ : –**

**ಏವಮಾಕರ್ಣ್ಯ ತದ್ವಾಕ್ಯಂ ಬರ್ಹಿಣಂ ಸ ಸಮಾರುಹತ್ ।**
**ಯಯೌ ಸ ನಗರಂ ಪಶ್ಚಾತ್ತ್ರ್ಯಂಬಕೋ ಗಿರಿಜಾಯುತಃ ॥೫೪॥**

**ಅಗ್ರತಸ್ತೇ ಗಣಾಸ್ಸರ್ವೇ ಮುನಯೋ ಹರ್ಷನಿರ್ಭರಾಃ ।**
**ವಾದ್ಯತ್ಸು ಸರ್ವವಾದ್ಯೇಷು ಯಯುಸ್ತೇ ಗಂಡಕೀಂ ಪುರೀಮ್ ॥೫೫॥**
**ನಾನಾಧ್ವಜಪತಾಕಾಭಿರ್ಯುತಾಂ ಸಂಸಿಕ್ತ ಪದ್ಧತಿಮ್ ॥೫೬॥**

---

ದೇವ :—

ಚಕ್ರಪಾಣೇ, ನೀನು ಪುತ್ರನನ್ನು ಕಳೆದುಕೊಂಡು ಬಹಳ ದುಃಖಿತನಾಗಿರುವೆ. ಅದಿರಲಿ, ಪ್ರಕೃತ ನನ್ನಿಂದ ಯಾವುದಾದರೂ ಸರಿ, ವರವನ್ನು ಬೇಡು. ॥೫೨॥

ರಾಜಾ :—

ದೇವೇಶ್ವರ, ನೀನು ನನ್ನ ವಿಷಯದಲ್ಲಿ ತುಷ್ಟನಾಗಿದ್ದರೆ, ನನಗೆ ವರವನ್ನನು ಗ್ರಹಿಸಬೇಕೆಂದು ನೀನು ಸಂಕಲ್ಪಿಸಿದ್ದರೆ, ನನ್ನ ಮನೆಯ ವರೆಗೆ ದಯೆಮಾಡಿ ನಿನ್ನ ಪಾದಸ್ಪರ್ಶದಿಂದ ನನ್ನ ಗೃಹವನ್ನೂ, ಈ ನಗರಿಯನ್ನೂ ಪಾವನಗೊಳಿಸು. ॥೫೩॥

ಬ್ರಹ್ಮಾ :—

ಚಕ್ರಪಾಣಿಯಾಡಿದ ಈ ಪ್ರಾರ್ಥನೆಯ ಮಾತುಗಳನ್ನು ಕೇಳಿ ದೇವನು ಅದಕ್ಕೆ ಒಪ್ಪಿ, ತನ್ನ ವಾಹನವಾದ ಮಯೂರವನ್ನೇರಿ ಗಂಡಕೀ ನಗರಕ್ಕೆ ಹೊರಟನು. ಅವನ ಹಿಂದುಗಡೆಯಿಂದ ತ್ರ್ಯಂಬಕ, ಗಿರಿಜೆ ಇವರೂ ಹೊರಟರು. ॥೫೪॥

ಸಕಲ ಪ್ರಮಥಗಣಗಳೂ ಮುಂದೆ ಮುಂದೆ ನಡೆದರು. ಈ ವಿಜಯಯಾತ್ರೆಯನ್ನು ಕಂಡು ಮುನಿಗಳು ಆನಂದತುಂದಿಲರಾದರು. ಸಕಲ ಮಂಗಲವಾದ್ಯಗಳೂ ಸು-ಸ್ವರದಿಂದ ಘೋರ್ಗರೆಯುತ್ತಿರಲು, ದೇವನು ಗಂಡಕೀ ನಗರವನ್ನು ಪ್ರವೇಶಿಸಿದನು. ॥೫೫॥

ಚಕ್ರಪಾಣಿ, ನಾಗರಿಕರು ಎಲ್ಲರೂ "ದೇವನು ನಗರವನ್ನು ಪ್ರವೇಶಿಸುವನೆಂದ-

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ಸಿಂಧುದೇಹ ಸಂಸ್ಕಾರಃ ಗಂಡಕೀಪುರಪ್ರವೇಶವರ್ಣನಂಚೇ" ತಿ ಚತುರ್ವಿಂಶತ್ಯುತ್ತರ ಶತತಮೋಽಧ್ಯಾಯಸ್ಸಮಾಪ್ತಃ**

---

ರಿತ ಕೂಡಲೇ, ಆನಂದದಿಂದ ಪುಲಕಿತರಾಗಿ ನಗರವನ್ನು ಧ್ವಜ-ಪತಾಕೆ, ತಳಿರು-ತೋರಣಗಳಿಂದ ಸುಂದರವಾಗಿ ಕಾಣುವಂತೆ ಅಲಂಕರಿಸಿದರು. ನೆಲದ ಧೂಳು ಮೇಲಕ್ಕೇಳದಿರಲು, ಪನ್ನೀರಿನಿಂದ ರಾಜಮಾರ್ಗಗಳನ್ನೆಲ್ಲ ಸೇಚನಮಾಡಿದರು. ॥೫೬॥

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ ' ಸಿಂಧು ದೇಹಸಂಸ್ಕಾರ, ಗಂಡಕೀಪುರ ಪ್ರವೇಶ ವರ್ಣನೆ" ಎಂಬಲ್ಲಿಗೆ ನೂರ ಇಪ್ಪತ್ತು ನಾಲ್ಕನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

# ಅಥ ಪಂಚವಿಂಶತ್ಯುತ್ತರ ಶತತಮೋಽಧ್ಯಾಯಃ

ಕ ಉವಾಚ :—

ಸಭಾಂ ಸಂವಾರಯಾಮಾಸ ಚಕ್ರಪಾಣಿಃ ಪುರೋಗತಃ ।
ಪರಾರ್ಧ್ಯಾಸ್ತರಣೈರ್ವಸ್ತ್ರೈಃ ಪತಾಕಾಧ್ವಜಚಾಮರೈಃ ॥೧॥
ನಾನಾರತ್ನೇಷು ದೀಪ್ತೇಷು ಭೂಮಿಸ್ತಂಭಗತೇಷು ಚ ।
ಅನಂತೋ ದೃಶ್ಯತೇ ಯತ್ರ ಸಂಕ್ರಾಂತಪ್ರತಿಮೋ ನರಃ ॥೨॥
ದದರ್ಶ ನಗರೀಂ ದೇವೋ ನಾನಾಧ್ವಜವಿರಾಜಿತಾಮ್ ।

---

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೨೫ ನೆಯ ಅಧ್ಯಾಯ

ಬ್ರಹ್ಮಾ :—

ಚಕ್ರಪಾಣಿಯು ಭಗವಂತನನ್ನು ತನ್ನ ಮನೆಗೆ ಬಂದು ಪಾವನಗೊಳಿಸ ಬೇಕೆಂದು ಆಹ್ವಾನಿಸಿ, ಪೂರ್ವಭಾವಿಯಾಗಿಯೇ ನಗರಕ್ಕೆ ಬಂದುಬಿಟ್ಟನು. ಮಯೂರೇಶ್ವರನು ಮನೆಗೆ ಬಂದರೆ, ಅವನ ಅಂತಸ್ತಿಗೆ ತಕ್ಕಂತೆ ಎಲ್ಲ ವಿಧವಾದ ಏರ್ಪಾಟುಗಳನ್ನೂ ಉತ್ತಮರೀತಿಯಿಂದ ಮಾಡಲೇರ್ಪಡಿಸಿದನು. ಸಭಾಮಂದಿರ ವನ್ನೆಲ್ಲ ಶುದ್ಧಿಗೊಳಿಸಿ, ಅತ್ಯಮೂಲ್ಯವಾದ ರತ್ನಗಂಬಳಿಗಳನ್ನು ನೆಲಕ್ಕೆ ಹಾಸಿಸಿದನು. ಬಗೆಬಗೆಯ ಬಣ್ಣದ ಬಟ್ಟೆಗಳನ್ನು ತರಿಸಿ ಧ್ವಜ-ಪತಾಕೆಗಳನ್ನು ಕಟ್ಟಿಸಿದನು. ದೇವನನ್ನೂ, ಅವನ ಸಂಗಡ ಬರಲಿರುವವರನ್ನೂ ಸೇವಿಸಲಿಕ್ಕೆ ಅಲ್ಲಲ್ಲಿ ಅನೇಕ ಮಂದಿ ಸೇವಕರನ್ನು ನಿಲ್ಲಿಸಿ, ಅವರು ಒಂದೇ ವಿಧವಾದ ಚಾಮರಗಳನ್ನು ಹಿಡಿದುಕೊಂಡಿರು ವಂತೆ ಮಾಡಿದನು. ॥೧॥

ಸಭಾಂಗಣದ ನೆಲ, ಕಂಭಗಳು ಎಲ್ಲವೂ ನಾನಾವಿಧ ರತ್ನಖಚಿತಗಳಾಗಿದ್ದುದ ರಿಂದ ಅವು ಥಳ ಥಳ ಹೊಳೆಯುತ್ತಿದ್ದವು. ಇದರಿಂದ ಅಲ್ಲಿ ಒಬ್ಬನೇ ಸಂಚರಿ ಸಿದರೂ, ಅವನ ಪ್ರತಿಬಿಂಬವು ನಾನಾರತ್ನಗಳಲ್ಲಿ ಪ್ರತಿಫಲಿಸುತ್ತಲಿದ್ದುವಾಗಿ ಅನೇ ಕರು ಸಂಚರಿಸುತ್ತಿದ್ದಂತೆ ಭಾಸವಾಗುತ್ತಲಿದ್ದಿತು. ॥೨॥

ನಗರದ ಅದ್ಭುತ ಸೌಂದರ್ಯವನ್ನು ನೋಡುತ್ತ ನೋಡುತ್ತ ದೇವನು

ಪ್ರಾಸಾದಶಿಖರಾರೂಢಾಃ ಪಶ್ಯಂತಿ ಸ್ಮಾಸುರಸ್ತ್ರಿಯಃ ||೩||
ತತೋ ಮುಕ್ತಾಃ ಸುರಾಸ್ತೇ ತಂ ಸಂಮುಖಂ ಚಕ್ರಪಾಣಿನಾ |
ಆಯಯೌ ಮಾಧವಃ ಶಕ್ರೋಽನಲ ಐಲವಿಲೋಽಪಿ ಚ ||೪||
ಮರುದ್ರವಿಃ ಶಶೀ ಚಾನ್ಯೇ ವಾದ್ಯಘೋಷೇಣ ಸತ್ವರಮ್ |
ಸ್ವ-ಸ್ವವಾಹಾತ್ಸಮುತ್ತೀರ್ಯ ಪ್ರಣೇಮುಃ ಸರ್ವ ಏವ ತಮ್ ||೫||
ಆಲಿಲಿಂಗುರ್ಮಯೂರೇಶಂ ದೇವಾಃ ಪೌರಾಶ್ಚ ಸಾದರಮ್ |
ಮಾಧವಶ್ಚ ಮಯೂರೇಶಂ ದೃಷ್ಟ್ವಾ ಹರ್ಷಸಮನ್ವಿತಃ ||೬||

---

ಪುರನ್ನು ಪ್ರವೇಶಿಸಿದನು. ನಗರದ ಯಾವ ವೀಥಿಯಲ್ಲಿ ನೋಡಿದರೂ ಧ್ವಜ-ಪತಾಕೆಗಳು ಹಾರಾಡುತ್ತಲಿದ್ದವು. ಅಲ್ಲಿದ್ದ ಪ್ರತಿಯೊಂದು ಮನೆಯೂ ನಾಲ್ಕೈದು ಅಂತಸ್ತುಗಳುಳ್ಳದ್ದು. ಅಸುರಸ್ತ್ರೀಯರು ಮೇಲುಪ್ಪರಿಗೆಗಳ ಮೇಲೆ ನಿಂತು, ಕಣ್ಣು ತುಂಬ ದೇವನನ್ನು ನೋಡುತ್ತಿದ್ದರು. ||೩||

ದೇವನು ಪುರವನ್ನು ಪ್ರವೇಶಿಸಿದೊಡನೆಯೇ ಚಕ್ರಪಾಣಿ ಮಹಾರಾಜನು ಅದುವರೆಗೂ ತನ್ನ ಮಗ; ಸಿಂಧುವಿನ ಬಂಧನಕ್ಕೊಳಗಾಗಿ ನರಳುತ್ತಿದ್ದ ದೇವತೆಗಳನ್ನೆಲ್ಲ ಮುಕ್ತಗೊಳಿಸಿದನು. ಆ ಕೂಡಲೇ ಶ್ರೀಮನ್ನಾರಾಯಣ, ಇಂದ್ರ, ಅಗ್ನಿ, ಐಲವಿಲ ("ಯಕ್ಷೈಕಪಿಂಗೈಲವಿಲ........" ಸ್ವರ್ಗವರ್ಗ ೭೩ ನೇ ಶ್ಲೋಕ ಕುಬೇರನ ಹದಿನೇಳು ಹೆಸರುಗಳಲ್ಲಿ ಇದೂ ಒಂದು. " ಐಲಬಿಲ, ಐಲಬಿಡ " ಎಂದೂ ಹೇಳುವುದುಂಟು. ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ " ವಿಶ್ರವಸ್ " ಎಂಬ ಮುನಿಗೆ ಅನೇಕಮಂದಿ ಪತ್ನಿಯರಿದ್ದರು. ಆ ಪೈಕಿ " ಇಲಬಿಲೆ" ಎಂಬುವಳ ಗರ್ಭದಲ್ಲಿ ಕುಬೇರನು ಜನಿಸಿದವನು. ಆದುದರಿಂದ ಮಾತೃನಾಮ ಪುರಸ್ಸರವಾಗಿ ಇವನಿಗೆ " ಐಲಬಿಲ " ನೆಂದೂ ತಂದೆಯಾದ " ವಿಶ್ರವಸ್ಸಿ "ನ ನಾಮಪೂರ್ವಕವಾಗಿ " ವೈಶ್ರವಣ " ಎಂದೂ ಹೆಸರು ಬಂದಿದೆ. ಇದರ ಬಗ್ಗೆ ವಿಶೇಷ ಸಂಗತಿಯನ್ನು ಭಾರತ ಸಭಾಪರ್ವ : ೧೦ ನೆಯ ಅಧ್ಯಾಯದಿಂದ ಅರಿಯಬಹುದಾಗಿದೆ.) ||೪||

ವಾಯು, ರವಿ, ಚಂದ್ರ ಮತ್ತು ಇತರ ದೇವತೆಗಳೆಲ್ಲ ಮಂಗಲವಾದ್ಯಘೋಷದೊಂದಿಗೆ ಬೇಗನೆ ದೇವನ ಬಳಿಗೆ ಬಂದರು. ದೇವನನ್ನು ಸಮೀಪಿಸಿದ ಕೂಡಲೇ ಎಲ್ಲರೂ ತಮ್ಮ ತಮ್ಮ ವಾಹನಗಳಿಂದ ಇಳಿದು, ದೇವನಿಗೆ ವಂದಿಸಿದರು. ||೫||

ದೇವನನ್ನು ಕಂಡಕೂಡಲೇ ಎಲ್ಲರಿಗೂ ಅಮಿತಾನಂದ ಉಂಟಾಯಿತು. ಆಗ ಅವರೂ, ಇತರ ನಾಗರಿಕರೂ ಒಬ್ಬೊಬ್ಬರಾಗಿ ಬಂದು, ಮಯೂರೇಶ್ವರನನ್ನು ಆಲಿಂಗಿಸಿಕೊಂಡು ತಮ್ಮ ಆದರ-ವಿಶ್ವಾಸಗಳನ್ನು ವ್ಯಕ್ತಗೊಳಿಸಿದರು. ಕಮಲನಾಭ; ಮಾಧವನು ಮಯೂರರಾಜನನ್ನು ನೋಡಿ ಬಹಳ ಹರ್ಷಗೊಂಡನು. ||೬||

ಪ್ರಶಶಂಸುಃ ಸಿಂಧುವಧಾತ್ಸರ್ವೇ ಹರ್ಯಾದಯಃ ಸುರಾಃ ।

ದೇವಾ ಊಚುಃ :—

ಆಕ್ರಾಂತಂ ವಿಷ್ಟಪಂ ಯೇನ ಸ ಹತಃ ಕ್ಷಣಮಾತ್ರತಃ ॥೭॥
ದತ್ತಾನಿ ಸ್ವಪದಾನ್ಯಾಶು ನೇದೃಗ್ದೃಷ್ಟೋ ನ ವಾ ಶ್ರುತಃ ।

ಕ ಉವಾಚ :—
ತತ್ರ ಯೇ ವೈಷ್ಣವಾಃ ಶೈವಾಃ ಶಾಕ್ತಾಃ ಸೌರಾಶ್ಚ ತೇಽಪ್ಯಮುಮ್ ॥೮॥
ತತ್ತದ್ರೂಪಂ ನಿರೀಕ್ಷ್ಯೈವ ಪ್ರಪೂಜುಃ ಪರಯಾ ಮುದಾ ।
"ಮಯೂರೇಶ, ಜಯಸ್ವೇ"ತಿ ಶ್ರುತ್ವಾ ವಾಚಃ ಸು-ವಿಸ್ಮಿತಾಃ ॥೯॥
ಬಾಲಕಾಶ್ಚ ಸು-ಸಂಪನ್ನಾ ಮುಗ್ಧಾಃ ಪ್ರೌಢಾಶ್ಚ ಯೋಷಿತಃ ।

---

ದುಷ್ಟನಾದ ಸಿಂಧುದೈತ್ಯನನ್ನು ವಧಿಸಿದುದಕ್ಕಾಗಿ ಹರಿ ಮೊದಲಾದ ದೇವತೆಗಳು ಮಹಾಗಣಪತಿಯನ್ನು ಬಾಯಿ ತುಂಬ ಹೀಗೆಂದು ಪ್ರಶಂಸಿಸಿದರು.

ದೇವತೆಗಳು :—

ಸಿಂಧುದೈತ್ಯನು ಲೋಕಗಳಲ್ಲೆಲ್ಲ ತನ್ನ ಅಧಿಕಾರವನ್ನು ರೂಢಮೂಲವನ್ನಾಗಿ ಮಾಡಿಬಿಟ್ಟಿದ್ದನು. ಅಜೇಯ್ಯನಾದ ಅಂತಹ ನೀಚ ಅಸುರನನ್ನು ಕ್ಷಣಮಾತ್ರದಲ್ಲಿ ನೀನು ಕೊಂದುಬಿಟ್ಟೆ. ॥೭॥

ಅನ್ಯಾಕ್ರಾಂತವಾಗಿದ್ದ ನಮ್ಮ ಸ್ಥಾನ-ಮಾನಗಳನ್ನೆಲ್ಲ ನಮಗೆ ಹಿಂದಿರುಗಿ ಕೊಟ್ಟು ಅನುಗ್ರಹಿಸಿದೆ. ನಿನ್ನಂತಹ ಮಹಾಮಹಿಮ ಬೇರೊಬ್ಬನಿರುವುದಿಲ್ಲ. ಇಂಥವನೊಬ್ಬನಿರಬಹುದೆಂಬುದನ್ನು ಸಹ ನಾವು ಕೇಳಿಲ್ಲ.

ಬ್ರಹ್ಮಾ: —

ಅನಂತರ ಅಲ್ಲಿ ನೆರೆದಿದ್ದ ವೈಷ್ಣವ (ವಿಷ್ಣುಭಕ್ತ) ರು, ಶೈವ (ಶಿವೋಪಾಸಕ) ರು, ಶಾಕ್ತ(ದೇವಿಯನ್ನೇ ಪರವಸ್ತು ಎಂದು ಭಾವಿಸಿದವ) ರು, ಸೌರ(ಸೂರ್ಯೋಪಾಸಕ) ರು, ಇವರೆಲ್ಲ ॥೮॥

ಅವರವರ ಭಾವನಾನುಗುಣವಾಗಿ ವಿಷ್ಣು, ಶಿವ, ಶಕ್ತಿ ಸೂರ್ಯರ ರೂಪಗಳಿಂದ ತೋರಿ ಬಂದ ಮಯೂರೇಶನನ್ನು ಪರಮ ಹರ್ಷದಿಂದ ಪೂಜಿಸಿದರು. ಮತ್ತು "ಮಯೂರೇಶ! ವಿಜಯಿಯಾಗು" ಎಂಬ ಜಯಘೋಷವನ್ನು ಕೇಳಿ ವಿಸ್ಮಿತರಾದರು. ॥೯॥

ಬಾಲಕರು ಸಮ್ಯಗಲಂಕೃತರಾಗಿದ್ದರು. ಮುಗ್ಧೆಯರು, ಪ್ರೌಢೆಯರು ಆದ

**ಪುಪೂಜುರ್ಮನಸಾ ದೇವಂ ವೃದ್ಧಾಶ್ಚ ತರುಣಾಸ್ತದಾ ||೧೦||**
**ಚಕ್ರಪಾಣಿಗೃಹೇ ದೇವೋ ಮಧ್ಯೇ ಸಿಂಹಾಸನೇ ಶುಭೇ |**
**ಉಪವಿಷ್ಟೋ ಮಯೂರೇಶೋ ವಿಬುಧಾಶ್ಚ ಸಮಂತತಃ ||೧೧||**
**ಮುನಯಶ್ಚ ಗಣಾಸ್ಸರ್ವೇ ಸಪ್ತಕೋಟಿಮಿತಾ ಮುನೇ ! |**
**ನುನುವುರ್ವಂದಿನಸ್ಸರ್ವೇ, ಧನ್ಯಾ ದೇವಾ ನೃಪಾಸ್ತಥಾ ||೧೨||**
**ನನೃತುಶ್ಚಾಪ್ಸರಃಸಂಘಾ ಜಗುಸ್ತೇ ನಾರದಾದಯಃ |**
**ಚಕ್ರಪಾಣಿಸ್ತತಸ್ಸರ್ವಾನ್ ಸಂಪೂಜ್ಯ ವಿಧಿವತ್ತದಾ ||೧೩||**
**ಉವಾಚ ಚ ಸಭಾಮಧ್ಯೇ**

**ಚಕ್ರಪಾಣಿರುವಾಚ :—**

**ಧನ್ಯಂ ಮೇ ಜನ್ಮ, ಕರ್ಮ ಚ |**
**ಇಂದ್ರಾದಯೋ ಲೋಕಪಾಲಾಃ ಸಮಿತಾ ಯಸ್ಯ ಮೇಽಧುನಾ ||೧೪||**

ಹೆಂಗಸರು, ತರುಣರು ಮತ್ತು ವೃದ್ಧರು ಎಲ್ಲರೂ ಮನಸ್ಸಿನಲ್ಲೇ ಸಕಲೋಪಚಾ ಸಾಮಗ್ರಿಗಳನ್ನೂ ಕಲ್ಪಿಸಿಕೊಂಡು ಪೂಜೆಮಾಡಿದರು. ||೧೦||

ಚಕ್ರಪಾಣಿಯು ಭವ್ಯವಾದ ಪ್ರಾಸಾದದ ನಡುವೆ ಅಲಂಕರಿಸಿ ಇರಿಸಿದ್ದ ರತ್ನ ಸಿಂಹಾಸನದ ಮೇಲೆ ಭಗವಾನ್ ಮಯೂರೇಶ್ವರನು ಕುಳಿತಿದ್ದನು. ಅವನ ಸುತ್ತಲೂ ಇತರ ದೇವತೆಗಳು ಯಥೋಚಿತ ಪೀಠಗಳಲ್ಲಿ ಮಂಡಿಸಿದ್ದರು. ||೧೧||

ವ್ಯಾಸ ! ಕೇಳು. ಋಷಿಗಳು, ಏಳು ಕೋಟಿ ಪ್ರಮಥ ಗಣದವರು, ದೇವತೆಗಳು, ನಾಗರಿಕರು, ರಾಜರು ಇವರೆಲ್ಲರೂ ಅಲ್ಲಿದ್ದ ವಂದಿ-ಮಾಗಧರೊಂದಿಗೆ ತಮ್ಮ ಧ್ವನಿಯನ್ನೂ ಸೇರಿಸಿ, ಜಯಕಾರಮಾಡಿ ದೇವನನ್ನು ಸ್ತುತಿಸಿದರು. ||೧೨||

ಅಪ್ಸರ ನಾರಿಯರ ಸಮುದಾಯ ಹಾವ-ಭಾವ-ವಿಲಾಸಗಳಿಂದ ನರ್ತಿಸಿತು. ನಾರದಾದಿ ದೇವರ್ಷಿಗಳು ವೇದ ಮಂತ್ರಗಳಿಂದ ಪರಮಾತ್ಮನ ದಿವ್ಯ ಕಲ್ಯಾಣ ಗುಣಗಳನ್ನು ಗಾನಮಾಡಿದರು. ಆಗ ಚಕ್ರಪಾಣಿ ಮಹಾರಾಜನು ಮುಂದೆ ಬಂದು ಸಭೆಯಲ್ಲಿ ನೆರೆದಿದ್ದ ಮಹನೀಯರನ್ನೆಲ್ಲ ವಿಧಿಪೂರ್ವಕವಾಗಿ ಪೂಜಿಸಿದನು. ||೧೩||

ಮತ್ತು ಸಭೆಯ ಮಧ್ಯದಲ್ಲಿ ವಿನಯದಿಂದ ನಿಂತುಕೊಂಡು ಹೀಗೆಂದು ಮಾತನಾಡಿದನು.

ಚಕ್ರಪಾಣಿ :—

ನನ್ನ ಜನ್ಮ, ಕರ್ಮ ಇವೆಲ್ಲ ಇಂದಿಗೆ ಧನ್ಯವೆನಿಸಿದವು ಸಾಮಾನ್ಯ ಮಾನವರ

**ಶತಜನ್ಮಾರ್ಜಿತೈಃ ಪುಣ್ಯೈರ್ಮಯೂರೇಶೋ ನಿರೀಕ್ಷಿತಃ ।**
**ಕ ಉವಾಚ :—**
**ಇಂದ್ರೋ ದೃಷ್ಟ್ವಾ ಮಯೂರೇಶಂ ಪ್ರಥಮಂ ಪೂಜಿತಂ ರುಷಾ ॥೧೫॥**
**ಅಬ್ರವೀತ್ಸಹಸಾ ಭ್ರಾಂತೋ ಮಾಯಯಾ ಜಗದೀಶಿತುಃ ।**
**ಇಂದ್ರ ಉವಾಚ :—**
**ಚತುರ್ಮುಖೋಽಪಿ ಲಕ್ಷ್ಮೀಶೋ ಜಗದುತ್ಪತ್ತಿಕಾರಕಃ ॥೧೬॥**
**ಮೂಢೋಽಸಿ ಚಕ್ರಪಾಣೇ ! ತ್ವಮರ್ಭಕಸ್ಯ ಪ್ರಪೂಜನಾತ್ ।**
**ಅಸ್ಮಾನ್ ಧಿಕ್ಕೃತ್ಯ ಯೋ ಮೋಹಾತ್ಪೂಜಿತೋ ಬಾಲಕಸ್ತ್ವಯಾ ॥೧೭॥**

ದೃಷ್ಟಿಗೆ ಗೋಚರರಾಗತಕ್ಕವರಲ್ಲದ ದೇವೇಂದ್ರಾದಿ ಲೋಕಪಾಲಕರು ಇಂದು ನನ್ನ ಈ ಸಭಾಂಗಣದಲ್ಲಿ ನೆರೆದು, ನನ್ನ ಈ ಚರ್ಮಚಕ್ಷುಗಳಿಗೆ ಗೋಚರಿಸಿರುವರು. ಎಂದ ಮೇಲೆ ನನಗಿಂತಲೂ ಭಾಗ್ಯಶಾಲಿಯಾದವನು ಬೇರಾರಿದ್ದಾರೆ? ॥೧೪॥

ನಾನು ನೂರಾರು ಜನ್ಮಗಳಲ್ಲಿ ಗಳಿಸಿದ ಪುಣ್ಯಪ್ರಭಾವವಿಶೇಷದಿಂದ ಇಂದು ನನಗೆ ಜಗದ್ಗುರು; ಮಯೂರೇಶ್ವರನ ಸಂದರ್ಶನ ದೊರೆತಿದೆ.

ಬ್ರಹ್ಮ:—

ಚಕ್ರಪಾಣಿಯು ಮಯೂರೇಶನಿಗೆ ಎಲ್ಲಕ್ಕೂ ಮೊದಲು ಪೂಜೆ ಸಲ್ಲಿಸಿದುದನ್ನು ಕಂಡು, ಇಂದ್ರನಿಗೆ ಬಹಳ ಕೋಪ-ಅಸಹನೆಗಳುಂಟಾದವು. ॥೧೫॥

ಸಿಂಧುದೈತ್ಯನ ಬಂಧನದಲ್ಲಿ ಸಿಕ್ಕು ಇದುವರೆಗೂ ಅನುಭವಿಸಿದ ನಾನಾವಿಧ ಕಷ್ಟಗಳೂ, ಮಯೂರೇಶ್ವರನ ಪರಮಾನುಗ್ರಹದಿಂದ ಪಾರಾಗಿ ಈಗಿನ್ನೂ ಸ್ವಾತಂತ್ರ್ಯ ವನ್ನು ಪಡೆದುದೂ ಇವೆಲ್ಲವನ್ನೂ ಮರೆಸಿಬಿಡುವಂತಹ ಪ್ರಬಲತರ ಅಜ್ಞಾನ ಶತಕ್ರತು ವನ್ನು ಆವರಿಸಿತು. ಜಗದೀಶ್ವರನ ಮಾಯಾಮುಸುಕನ್ನು ತೆಗೆದೊಗೆಯಲು ತತ್ತ್ವ ವನ್ನರಿತವನೊಬ್ಬನಿಗಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ. ಶತಾಶ್ವಮೇಧಗಳನ್ನು ಮಾಡಿ ಇಂದ್ರ ಪದವಿಗೇರಿದ್ದರೂ, ಅವನೂ ಕರ್ಮಬದ್ಧ ಜೀವಿಯಾದುದರಿಂದ ಪ್ರಕೃತ ಮೋಹಕ್ಕೆ ಒಳಗಾದನು. ಆಗ ಚಕ್ರಪಾಣಿಯನ್ನು ಕುರಿತು ಅಧಿಕ್ಷೇಪಿಸುತ್ತ ಹೀಗೆಂದು ನುಡಿದನು.

ಇಂದ್ರ :—

ಈ ಸಭೆಯಲ್ಲಿ ಚರಾಚರ ಜಗತ್ತಿನ ಸೃಷ್ಟೀಶನಾದ ಚತುರ್ಮುಖ ಬ್ರಹ್ಮನಿದ್ದಾನೆ. ಅದನ್ನು ಪರಿಪಾಲಿಸತಕ್ಕ ಸಾಕ್ಷಾಲ್ಲಕ್ಷ್ಮೀಪತಿ ನಿನ್ನೆದುರಿನಲ್ಲೇ ಕುಳಿತಿದ್ದಾನೆ. ॥೧೬॥

ಇಂತಹ ಮಹಾತ್ಮರನ್ನೆಲ್ಲ ಲಕ್ಷಿಸದೆ, ಯಾವುದನ್ನೂ ಅರಿಯದ ಈ ಬಾಲಕನನ್ನು

**ಜನಕಂ ಸರ್ವಲೋಕಾನಾಂ ತ್ಯಜ್ಯ ಸಂಹಾರಕಾರಕಮ್ ।**
**ತ್ರೈಲೋಕ್ಯಜನನೀಮಂಬಾಂ ಸೃಷ್ಟಿಸ್ಥಿತ್ಯಂತಕಾರಿಣೀಮ್ ॥೧೮॥**
**ರವಿಂ ತ್ರೈಲೋಕ್ಯನೇತಾರಂ ತ್ರಯೀಕರ್ಮಪ್ರವರ್ತಕಮ್ ।**
**ಹಿತ್ವಾ ಸಂಪೂಜಿತೋ ಬಾಲೋ ನೇದಂ ಸಮ್ಯಕ್ಕೃತಂ ತ್ವಯಾ ॥೧೯॥**
**ಕ ಉವಾಚ :—**
**ಏವಂ ವದತಿ ದೇವೇಂದ್ರೇ ಚಕ್ರಪಾಣಿಸ್ತದಾಬ್ರವೀತ್ ।**
**ಚಕ್ರಪಾಣಿರುವಾಚ :—**
**ರುದ್ರಾತ್ಸೂರ್ಯಾತ್ಕುಬೇರಾಚ್ಚ ಶಕ್ರಾಚ್ಚ ಮರುತೋಽನಲಾತ್ ॥೨೦॥**
**ದೃಷ್ಟಃ ಪರಾಕ್ರಮೋಽತೀವ ಸಿಂಧುದೈತ್ಯವಿನಾಶನಾತ್ ।**
**ಮೋಕ್ಷಾತ್ಸರ್ವಸುರಾಣಾಂ ಚ ಕಾರಾಗಾರಾದ್ಗಣೇಶ್ವರಃ**

ಅದೂ ನಮ್ಮ ಎದುರಿನಲ್ಲಿ ಅರ್ಚಿಸಿದುದರಿಂದ ನೀನು ಮಹಾಮೂಢನಿರುವೆ. ಅಷ್ಟ ದಿಕ್ಕುಗಳನ್ನೂ ಪಾಲನಮಾಡತಕ್ಕವರು ನಾವು. ನಾವೆಲ್ಲರೂ ಇಲ್ಲಿಯೇ ಇದ್ದೇವೆ. ನಮ್ಮನ್ನೆಲ್ಲ ಧಿಕ್ಕರಿಸಿ, ನೀನು ಈ ಬಾಲಕನನ್ನು ಪೂಜಿಸಿದೆಯಲ್ಲ? ॥೧೭॥

ನಮ್ಮ ವಿಷಯ ಹೇಗಾದರೂ ಇರಲಿ, ಸಕಲ ಲೋಕಗಳಿಗೂ ತಂದೆ ಎನಿಸಿದ ಲೋಕೋಪಸಂಹಾರಕ ಹರನನ್ನೂ ನೀನು ಮರೆಯಬಹುದೆ? ಇತ್ತ ತಿರುಗಿನೋಡು, ಜಗದಂಬೆ. ಸೃಷ್ಟಿಸ್ಥಿತ್ಯಂತಗಳನ್ನೂ ಮಾಡತಕ್ಕವಳು, ವಿಷ್ಣುಮಾಯೆ, ಗಿರಿಜೆ ಇದ್ದಾಳೆ. ಅವಳನ್ನು ಮರೆಯೋಣವೆಂದರೇನರ್ಥ? ಚಕ್ರಪಾಣೇ! ಇದೇಕೆ, ನಿನ್ನ ಬುದ್ಧಿ ಇಷ್ಟು ಮದಡಾಯಿತು? ॥೧೮॥

ನಿನ್ನ ಆರಾಧ್ಯ ದೈವ; ರವಿಯನ್ನು ಬಿಟ್ಟಿರುವೆ. ಇವನು ಜಗನ್ನೇತ್ರ. ಯಾರು ಯಾವಾಗ ಯಾವ ಕೆಲಸವನ್ನೇ ಮಾಡಲಿ, ಅದಕ್ಕೆಲ್ಲ ಸಾಕ್ಷಿಯಾದವನು. ಇವನಿಲ್ಲದಿದ್ದರೆ ವೇದವಿಹಿತ ಕರ್ಮಗಳೇ ನಡೆಯಲಾರವು. ಇಂಥವರನ್ನೆಲ್ಲ ನ್ಯಕ್ಕರಿಸಿ, ಈ ಬಾಲಕನನ್ನು ಪೂಜಿಸಿದುದೇನೂ ಒಳ್ಳೆಯ ಕೆಲಸವಾಗಲಿಲ್ಲ. ॥೧೯॥

ಬ್ರ

ಅರಿಷಡ್ವರ್ಗಗಳ ಆಡಳಿತಕ್ಕೆ ಸಿಕ್ಕು ದೇವೇಂದ್ರನು ಹೀಗೆ ನುಡಿಯಲು, ಚಕ್ರಪಾಣಿಗೆ ನಿರ್ದಾಕ್ಷಿಣ್ಯದಿಂದ ಮಾತನಾಡುವ ಪ್ರಸಂಗ ಒದಗಿತು. ಮತ್ತು ಮಾತನಾಡಿಯೇ ಬಿಟ್ಟನು.

ಚಕ್ರಪಾಣಿ :-

ರುದ್ರ, ಸೂರ್ಯ, ಕುಬೇರ, ಇಂದ್ರ, ವಾಯು ಅಗ್ನಿ. ॥೨೦॥

ಇವರೆಲ್ಲರಿಗಿಂತಲೂ ಮಯೂರೇಶ್ವರನು ಪರಾಕ್ರಮಶಾಲಿ. ಇವರಾರಿಗೂ ಮಣಿಯದೇ ಇದ್ದ ಸಿಂಧುದೈತ್ಯನನ್ನು ಮಯೂರೇಶ್ವರನು ವಿನಾಶಗೊಳಿಸಿದ್ದಾನೆ.

**ಯೋಽವತೀರ್ಣೋ ಭುವೋ ಭಾರಂ ಹರ್ತುಂ ಶಿವನಿವೇಶನೇ ।**
**ಪರಮಾತ್ಮಾಽನಂತಶಕ್ತಿರ್ನಾನಾದೈತ್ಯವಿಭಂಜನಃ ||೨೨||**
**ಕ ಉವಾಚ :—**
**ಏವಂ ವದತಿ ತಸ್ಮಿಂಸ್ತು ಶ್ರುತಃ ಶಬ್ದಃ ಸುರೈರ್ಮಹಾನ್ ।**
**ಮೂರ್ಛಿತಾಃ ಪತಿತಾಃ ಕೇಚಿದ್ಬ್ರಹ್ಮಾಂಡಾಸ್ಫೋಟಶಂಕಯಾ ||೨೩||**
**ಚಕಂಪೇ ಧರಣೀ ಸರ್ವಾ ನ ಪ್ರಾಜ್ಞಾಯತ ಕಿಂಚನ ।**
**ಕೋಟಿಸೂರ್ಯಪ್ರಕಾಶೇನ ಸಹಸಾಚ್ಛಾದಿತಂ ಜಗತ್ ||೨೪||**
**ತತಸ್ತೈಸ್ತ್ರಿದಶೈಸ್ತತ್ರ ದೃಷ್ಟೋ ದೇವೋಽತಿಸುಂದರಃ ।**
**ನಾನಾಲಂಕಾರಸಂಯುಕ್ತೋ ದಶಬಾಹುರ್ಗಜಾನನಃ ||೨೫||**

ಸಿಂಧುವಿನೊಡನೆ ಹೋರಾಡಲು ಬಂದ ನಿಮ್ಮನ್ನೆಲ್ಲ ನೋಲಿಸಿ, ಸಿಂಧು ತನ್ನ ಬಂಧನದಲ್ಲಿರಿಸಿಕೊಂಡದ್ದನ್ನು ಅರಿತ ದೇವನು ನಿಮ್ಮ ವಿಷಯದಲ್ಲಿ ಮರುಕಗೊಂಡು ಕೆಲವೇ ಕ್ಷಣಗಳಿಗೆ ಮೊದಲು ನಿಮ್ಮನ್ನು ಬಿಡುಗಡೆ ಮಾಡಿದ್ದಾನೆ. ||೨೧||

ಭೂಮಿಯ ಭಾರವನ್ನು ಇಳುಹಲಿಕ್ಕಾಗಿ ಪರಮೇಶ್ವರನ ಮನೆಯಲ್ಲಿ ಅವತರಿಸಿದ, ಗಣೇಶ್ವರನೆನಿಸಿದ ಈ ಮಹಾ ವಿಭೂತಿಪುರುಷನು ಸಾಕ್ಷಾತ್ಪರಮಾತ್ಮನಲ್ಲದೆ ಬೇರಾರೂ ಅಲ್ಲ. ಇವನು ಅನಂತ ಶಕ್ತಿಯುಳ್ಳವನು. ದೈತ್ಯ-ದಾನವರನ್ನೆಲ್ಲ ಭಂಗಗೊಳಿಸತಕ್ಕವನು. ||೨೨||

ಬ್ರಹ್ಮಾ:—

ಚಕ್ರಪಾಣಿ ಹೀಗೆ ಪ್ರತ್ಯುತ್ತರಿಸುವಷ್ಟರಲ್ಲಿ ಬರಸಿಡಿಲು ಬಿದ್ದಂತೆ ಬಹಳ ಭಯಂಕರವಾದ ಶಬ್ದ ದೇವತೆಗಳಿಗೆ ಕೇಳಿಸಿತು. ಎಲ್ಲರೂ ಬೆಚ್ಚಿಬಿದ್ದರು. "ಇದೇನು, ಬ್ರಹ್ಮಾಂಡವೇ ಆಸ್ಫೋಟಿಸಿತೋ ?" ಎಂಬ ಶಂಕೆಯುಂಟಾಗಲು ಭಯದಿಂದ ಮೈ ನಡುಗಿದವರಾಗಿ ಒಡನೆಯೇ ಮೂರ್ಛಿತರಾದರು. ||೨೩||

ಇಡೀ ಭೂಮಂಡಲವು ಗಡಗಡ ನಡುಗಲಾರಂಭಿಸಿತು. ಯಾವುದೊಂದೂ ಅರಿವಾಗಲೊಲ್ಲದು ಕೋಟಿಗಟ್ಟಲೆ ಸೂರ್ಯರು ಒಮ್ಮೆಲೇ ಉದಯಿಸಿದರೆ ಎಷ್ಟು ಪ್ರಕಾಶವಾಗುವುದೋ, ಅಂತಹ ಪ್ರಕಾಶವು ಜಗವನ್ನೆಲ್ಲ ಒಮ್ಮೆಲೇ ಆವರಿಸಿತು. ||೨೪||

ಆಗ "ಇದೇನದ್ಭುತ" ಎಂದು ಎಲ್ಲರೂ ಕಣ್ಣುಗಳನ್ನರಳಿಸಿ ಆ ಬೆಳಕಿನ ಕಡೆಗೆ ನೋಡಲು, ದೇವನ ಅತಿ ಸುಂದರ ರೂಪವು ಎಲ್ಲ ದೇವತೆಗಳಿಗೂ ಸ್ಪಷ್ಟವಾಗಿ ಕಾಣಿಸಿತು. ದೇವನು ಅನೇಕ ಬಗೆಯ ಅಲಂಕರಣವಸ್ತುಗಳಿಂದ ಅಲಂಕೃತನಾಗಿದ್ದನು. ಆನೆಯಂತೆ ಮುಖ, ಹತ್ತು ಬಾಹುಗಳು ವಿರಾಜಮಾನವಾಗಿದ್ದವು. ||೨೫||

**ಏವಂ ದೃಷ್ಟ್ವಾ ಸ್ವರೂಪಂ ತೇ ವಿಸ್ಮಿತಾಸ್ತ್ರಿದಶಾಸ್ತದಾ ।**
**ಪುನಸ್ತಮೇವ ದದೃಶುಃ ಪಂಚರೂಪಿಣಮೀಶ್ವರಮ್ ॥೨೬॥**
**ಪದ್ಮಾಸನಗತಂ ಮಧ್ಯೇ ವಕ್ರತುಂಡಂ ಶಿವಂ ಪುನಃ ।**
**ಆಗ್ನೇಯ್ಯಾಂ ನೈಋುತೇ ಸೂರ್ಯಂ ಪಾರ್ವತೀಂ ಮಾರುತೇಽಪಿ ಚ ॥೨೭॥**

**ನಾರಾಯಣಂ ತಥೇಶಾನೇ ತತೋ ಭ್ರಮಮಿತಾಃ ಸುರಾಃ ।**
**ತತಸ್ತೇ ಶುಶ್ರುವುರ್ವ್ಯೋಮವಾಣೀಂ ಭ್ರಮನಿವಾರಿಕಾಮ್ ॥೨೮॥**

**"ಆರಾಧ್ಯೋಽಯಂ ಸರ್ವಜನೈರೇಕೋ ಜಾತಃ ಸ ಪಂಚಧಾ ।**
**ಅನಾದಿನಿಧನೋ ದೇವೋ ಜಗದ್ವ್ಯಾಪೀ ಗಜಾನನಃ ॥೨೯॥**

ದೇವನ ಪರಮಾದ್ಭುತವಾದ ಆ ಸುಂದರ ರೂಪವನ್ನು ಕಂಡು ದೇವತೆಗಳು ಆಶ್ಚರ್ಯಚಕಿತರಾದರು. ಮತ್ತನ್ನೂ ದೃಷ್ಟಿಸಿ ನೋಡಲು, ಗಣಪತಿ, ಶಿವ, ಸೂರ್ಯ, ಪಾರ್ವತೀ, ಶ್ರೀಮನ್ನಾರಾಯಣ ಈರೀತಿಯಾಗಿ ಪಂಚಾಯತನ ರೂಪದಿಂದ ಅದೇ ಗಣಪತಿ ಕಾಣ ತೊಡಗಿದನು. ॥೨೬॥

ಅವರಿಗೆ ತೋರಿ ಬಂದ ಸ್ಥಿತಿ ಈ ರೀತಿ ಇದ್ದಿತು. ನಡುವೆ ಮಹಾಗಣಪತಿ ಪದ್ಮಾಸನದಲ್ಲಿ ಭವ್ಯವಾಗಿ ಮಂಡಿತನಾಗಿದ್ದನು. ಅವನಿಗೆ ಆಗ್ನೇಯ (East-South) ದಲ್ಲಿ ಪವಶಿವನು ಕುಳಿತಿದ್ದನು. ನೈಋುತ್ಯ(South-West) ದಿಗ್ಭಾಗದಲ್ಲಿ ಸೂರ್ಯನಿದ್ದನು. ಮಾರುತ ಅರ್ಥಾತ್ ವಾಯವ್ಯ (West-North) ದ ಮೂಲೆಯಲ್ಲಿ ನಾಕ್ಷಾದಂಬಿಕೆ ಕುಳಿತಿದ್ದಳು. ॥೨೭॥

ಕೊನೆಯ ಕೋನವಾದ ಈಶಾನ್ಯ (North-East) ದಿಕ್ಕಿನಲ್ಲಿ ಶ್ರೀಮನ್ನಾರಾಯಣನು ಅಧಿಷ್ಠಿಸಿದ್ದನು. ಆ ದೃಶ್ಯವನ್ನು ನೋಡಿದ ಕೂಡಲೇ ದೇವತೆಗಳಿಗೆ ಹುಚ್ಚೇ ಹಿಡಿದಂತಾಯಿತು. ಅವರಿಗುಂಟಾದ ಆ ಬಗೆಯ ಭ್ರಮೆಯನ್ನು ನಿವಾರಿಸಿ, ಸತ್ಯಾಂಶವನ್ನು ತಿಳಿಸಲಿಕ್ಕಾಗಿ ಅಂತರಿಕ್ಷದಿಂದ ಕೆಲವು ಮಾತುಗಳು ಕೇಳಿಬಂದವು. ॥೨೮॥

"ಈ ದೇವನು ಸರ್ವಜನರಿಂದಲೂ ಆರಾಧ್ಯನಾದವನು. 'ಏಕೋ ದೇವೋ ಬಹುಧಾ ಜಾಯಮಾನಃ' ಎಂಬ ಶ್ರೌತಪ್ರಮಾಣಾನುಸಾರವಾಗಿ ಸ್ವಯಂ ಇರತಕ್ಕವನು ಒಬ್ಬನೇ ಆದರೂ, ಐದು ವಿಧ ರೂಪಗಳಿಂದ ನಿಮಗೆ ಪ್ರಕೃತ ತೋರುತ್ತಿರುವನು. ಇವನಿಗೆ ಆದ್ಯಂತಗಳಿರುವುದಿಲ್ಲ. ಇವನು ಚೈತನ್ಯ ಘನ. ಆಕಾಶದಂತೆ ಜಗತ್ತನ್ನೆಲ್ಲ ವ್ಯಾಪಿಸಿರುವನು. ಅವನೇ ಈ ಗಜಾನನ. ॥೨೯॥

**ಅಯಮೇವ ಸದಾ ಪೂಜ್ಯಃ ಸರ್ವವಿಘ್ನವಿನಾಶನಃ !**
**ದೇವೈರ್ಮನುಷ್ಯೈರ್ಯಕ್ಷೈಶ್ಚ ನಾಗೈ ರಕ್ಷೋಭಿರೇವ ಚ ॥೩೦॥**

**ಏತಸ್ಮಿನ್ ಪೂಜಿತೇ ಪಂಚ ಪೂಜನಂ ಚ ಭವಿಷ್ಯತಿ ।**
**ನ ಬುದ್ಧಿಭೇದಂ ತನುಯಾದೇತಸ್ಮಿನ್ ನರಕಾಯ ಸಾ ” ॥೩೧॥**

**ಕ ಉವಾಚ :—**

**ಶ್ರುತ್ವೈವಂ ತೇ ಮಯೂರೇಶಂ ಶುಂಡಾದಂಡವಿರಾಜಿತಮ್ ।**
**ದದೃಶುರ್ವಜ್ರಿಮುಖ್ಯಾಸ್ತೇ ಆದ್ಯಮೋಂಕಾರರೂಪಿಣಮ್ ॥೩೨॥**

**ತತಃ ಪ್ರಬುದ್ಧಾಸ್ತೇ ದೇವಾಸ್ತ್ಯಕ್ತ್ವಾ ಭ್ರಾಂತಿಂ ಸ್ಮಯಂ ಚ ತಮ್ ।**
**ಪ್ರಪೂಜುರ್ಜಯಶಬ್ದೈಸ್ತಂ ಸರ್ವಾಂತರ್ಯಾಮಿಣಂ ವಿಭುಮ್ ॥೩೩॥**

---

ಇವನನ್ನು ನೀವೇನೋ ಸಾಮಾನ್ಯನಾದ ಬಾಲಕ ಎಂದು ತಿಳಿದಿರುವಂತಿದೆ. ಹಾಗೆ ತಿಳಿಯಬೇಡಿ. ಸರ್ವರಿಂದಲೂ ಸದಾ ಇವನು ಪೂಜನೀಯನಾದವನು. ಸಕಲ ವಿಘ್ನಗಳನ್ನೂ ನಿವಾರಿಸತಕ್ಕವನು. ದೇವತೆಗಳು, ಮಾನವರು, ಯಕ್ಷರು, ಪನ್ನಗಜಾತಿಯವರು, ರಾಕ್ಷಸರು ಇವರೆಲ್ಲರಿಂದಲೂ ಪೂಜೆಯನ್ನು ಪಡೆಯತಕ್ಕವನು. ॥೩೦॥

ನಾಮರೂಪಗಳಲ್ಲಿ ಭೇದವನ್ನೆಣಿಸಿ ಪ್ರಯೋಜನವಿಲ್ಲ. ಇವನೊಬ್ಬನನ್ನು ಭಕ್ತಿಯಿಂದ ಪೂಜಿಸಿದರೆ ಸಾಕು, ಪಂಚಾಯತನಗಳೆನಿಸುವವರನ್ನೆಲ್ಲ ಪೂಜಿಸಿದಂತಾಗುವುದು. ‘ಈ ದೇವನು ಬೇರೆ, ಆ ದೇವನು ಬೇರೆ’ ಎಂಬ ಭೇದ ಬುದ್ಧಿಯನ್ನು ಸರ್ವಥಾ ಬೆಳೆಯಗೊಡಬಾರದು. ವಿಭೇದ ಭ್ರಮೆಯು ನರಕಕ್ಕೆ (ಜನನ–ಮರಣ ಪ್ರವಾಹರೂಪವಾದ ಸಂಸಾರಕ್ಕೆ)ಎಳೆದೊಯ್ಯುವುದು. ॥೩೧॥

ಬ್ರಹ್ಮಾ:—

ಈ ಮಾತುಗಳನ್ನಾಲಿಸುತ್ತಿದ್ದ ವಜ್ರೀ ಮೊದಲಾದ ದೇವತೆಗಳು ಆಕಾಶವಾಣಿ ತನ್ನ ಮಾತುಗಳನ್ನುನಿಲ್ಲಿಸಿದ ಕೂಡಲೇ, ಮಯೂರೇಶನ ಕಡೆಗೆ ತಿರುಗಿ ನೋಡಿದರು. ದೇವನು ಸುಂದರವಾದ ಸೊಂಡಿಲಿನಿಂದ ವಿರಾಜಿತನಾಗಿ ಕುಳಿತುದು ಕಂಡುಬಂದಿತು. ಎಲ್ಲಕ್ಕೂ ಮೂಲಾಧಾರವಾದ “ಪ್ರಣವ” (ಓಂ) ಸ್ವರೂಪನನ್ನು ಪ್ರತ್ಯಕ್ಷವಾಗಿ ಕಂಡರು ॥೩೨॥

ಆಗ ಅವರ ತಿಳಿವು ತಿಳಿಯಾಯಿತು. ಜ್ಞಾನೋದಯವಾದ ಕೂಡಲೇ ಭ್ರಾಂತಿಯನ್ನೂ. ಆಶ್ಚರ್ಯವನ್ನೂ ತೊರೆದುಬಿಟ್ಟರು. ಜಯ ಶಬ್ದಗಳನ್ನು ಉದ್ಘೋಷಿಸುತ್ತ ಸರ್ವಾಂತರ್ಯಾಮಿಯಾದ ವಿಭುವನ್ನು ಎಲ್ಲರೂ ಪೂಜಿಸಿದರು. ॥೩೩॥

ತತಃ ಪುಪೂಜೇ ಹರ್ಷೇಣ ಚಕ್ರಪಾಣಿರ್ಗಣೇಶ್ವರಮ್ ।
ಪಂಚಾಮೃತೈಶ್ಶುದ್ಧಜಲೈರ್ದಿವ್ಯವಸ್ತ್ರೈಶ್ಚ ಭೂಷಣೈಃ ॥೩೪॥
ಪುಷ್ಪೈರ್ಧೂಪೈಶ್ಚ ದೀಪೈಶ್ಚ ನೈವೇದ್ಯೈರ್ವಿವಿಧೈರಪಿ ।
ಫಲ-ತಾಂಬೂಲನಿಚಯೈರ್ದಕ್ಷಿಣಾಭಿರನೇಕಶಃ
ನೀರಾಜನೈರ್ಮಂತ್ರಪುಷ್ಪೈರ್ನತಿಭಿಃ ಸ್ತುತಿಭಿಸ್ತದಾ ।
ತಥೈವ ಪೂಜಯಾಮಾಸ ಭಕ್ತ್ಯಾ ಸರ್ವಸುರಾನಪಿ ॥೩೬॥
ಉವಾಚ ತಾನ್ನೃಪವರೋ

ಚಕ್ರಪಾಣಿರುವಾಚ :—

ಧನ್ಯೋಽಹಂ ಚ ಪ್ರಪೂಜನಾತ್ ।
ಯತೋ ನೈತಾದೃಶಃ ಕ್ವಾಪಿ ಜಾತಃ ಸರ್ವಸಮಾಗಮಃ ॥೩೭॥

ಅತ್ಯಪೂರ್ವವೂ, ಅತ್ಯದ್ಭುತವೂ ಆದ ಆ ಸನ್ನಿವೇಶವನ್ನು ಕಂಡು ಚಕ್ರಪಾಣಿಯು ಬಹಳ ಹರ್ಷಿತನಾದನು. ದೇವತೆಗಳಿಗುಂಟಾದ ಭ್ರಾಂತಿಯಿಂದ ತನಗೆ ದೇವನ ನಿಜರೂಪ ತೋರುವಂತಾಯಿತಾಗಿ ಮನಸ್ಸಿನಲ್ಲೇ ಎಲ್ಲರನ್ನೂ ವಂದಿಸಿ, ಪಂಚಾಮೃತ, ಶುದ್ಧೋದಕ, ದಿವ್ಯವಸ್ತ್ರ ಚಂದನಾದಿಗಳು ಅನೇಕವಿಧ ಭೂಷಣಗಳು ಇವನ್ನೆಲ್ಲ ಸಮರ್ಪಿಸಿ, ದೇವನನ್ನು ಏಕಾಗ್ರ ಭಕ್ತಿಯಿಂದ ಪೂಜಿಸಿದನು. ॥೩೪॥

ದಿವ್ಯ ಪುಷ್ಪಗಳು, ಸುಗಂಧ ಧೂಪ, ಕರ್ಪೂರದೀಪ, ಇವನ್ನು ಸಮರ್ಪಿಸಿದ ನಂತರ, ವಿವಿಧ ಭಕ್ಷ್ಯಗಳನ್ನು ಮುಂದಿರಿಸಿ ನಿವೇದಿಸಿದನು. ಅನಂತರ ಅನೇಕ ಜಾತಿಯ ಪರಿಪಕ್ವ ಫಲಗಳನ್ನು ದೇವನಿಗೆ ಸಮರ್ಪಿಸಿ, ಕರ್ಪೂರವೀಳ್ಯವನ್ನೂ ಸುವರ್ಣಪುಷ್ಪ ದಕ್ಷಿಣೆಯನ್ನೂ ಕೊಟ್ಟನು. ಚಕ್ರಪಾಣಿ ಆ ಕಾಲದಲ್ಲಿ ದೇವನಿಗೆ ಒಪ್ಪಿಸಿದ ವಸ್ತುಗಳು ನಾನಾಬಗೆಯಾಗಿದ್ದವು. ॥೩೫॥

ಆರತಿಯನ್ನೆತ್ತಿದನು. ಮಂತ್ರಗಳಿಂದ ಸ್ತುತಿಸುತ್ತ ಪುಷ್ಪಾಕ್ಷತೆಗಳನ್ನು ದೇವನ ಮೇಲೆ ಎರಚಿದನು. ಸಾಷ್ಟಾಂಗವೆರಗಿದನು. ಅನೇಕಬಗೆಯಿಂದ ಸ್ತುತಿಸಿದನು. ದೇವನನ್ನು ಅರ್ಚಿಸಿದ ಬಳಿಕ, ಇತರ ದೇವತೆಗಳನ್ನೂ ಸಕಲೋಪಚಾರಗಳಿಂದಲೂ, ಭಕ್ತಿಯಿಂದಲೂ ಪೂಜಿಸಿದನು. ॥೩೬॥

ಅನಂತರ ಚಕ್ರಪಾಣಿ ಮಹಾರಾಜನು ಅವರೆಲ್ಲರನ್ನೂ ಕುರಿತು

ಚಕ್ರಪಾಣಿ ;—

ತಮ್ಮನ್ನೆಲ್ಲ ಪೂಜಿಸುವಂತಹ ಸು-ಯೋಗ ನನಗೆ ಇಂದು ದೊರೆತುದರಿಂದ ನಾನು ಧನ್ಯನಾಗಿದ್ದೇನೆ. ಎಲ್ಲ ದೇವತೆಗಳೂ, ದೇವೋತ್ತಮರೂ, ಋಷಿವರ್ಯರೂ

ಕ ಉವಾಚ :—

ತತಸ್ತತ್ರಾಬ್ರವೀದ್ದೃಷ್ಟೋ ನಾರದಶ್ಚತುರಾನನಮ್ ।

ನಾರದ ಉವಾಚ :—

ಸಿದ್ಧಿ-ಬುದ್ಧಿವಿವಾಹಾರ್ಥಮಾಜ್ಞಯಾ ತೇಽಬ್ಜಸಂಭವ ! ॥೩೮॥
ಶಿವಂ ಶಿವಾಂ ಚ ವಿಜ್ಞಾಪ್ಯ ನಿಶ್ಚಯಃ ಪ್ರಾಙ್ಮಯಾ ಕೃತಃ ।
ಮಯೂರೇಶಾಯ ಸಮ್ಯಕ್ತೇ ದಾತವ್ಯೇ ಬಹುಲಕ್ಷಣೇ ॥೩೯॥

ಕ ಉವಾಚ :—

ತತಸ್ಸರ್ವೇ ಸುರಾ ದೇವಂ ಬ್ರಹ್ಮಾಣಂ ಮನ್ಮಥಾತುರಾಃ ।
ಪ್ರತ್ಯೇಕಂ ತೇ ಅಯಾಚಂತ "ಮಮ ದೇಹೀ"ತಿ ಸಾದರಮ್ ॥೪೦॥

---

ಒಂದೆಡೆ ಒಂದೇ ಕಾಲದಲ್ಲಿ ಮಿಲಿತರಾಗಿರುವ ಸಭೆ ಎಂದರೆ ಇದೊಂದೇ ಆಗಿದೆ. ಈ ತರಹದ ಸಮ್ಮೇಲನ ಎಲ್ಲಿಲ್ಲೂ ನಡೆದಿಲ್ಲ. ॥೩೭॥

ಬ್ರಹ್ಮಾ :—

ಅನಂತರ ನಾರದನಿಗೆ ಪ್ರಕೃತ ಪ್ರಸ್ತಾಪಕ್ಕೆ ಇದೇ ಸರಿಯಾದ ಸಮಯವೆಂದೆನಿಸಲು, ಅತಿಹರ್ಷದಿಂದ ತನ್ನ ತಂದೆ ; ಚತುರಾನನನ ಬಳಿಗೆ ಬಂದು ಹೀಗೆಂದು ನುಡಿದನು.

ನಾರದ :—

ತಂದೆ ; ಕಮಲಸಂಭವ ! ಸಿದ್ಧಿ-ಬುದ್ಧಿಯರ ವಿವಾಹದ ವಿಷಯವನ್ನು ಪ್ರಸ್ತಾಪಿಸಿ ನಿಶ್ಚಯಿಸಲು, ನನ್ನನ್ನು ನೀನು ಆಜ್ಞಾಪಿಸಿದ್ದೆ. ॥೩೮॥

ತದನುಸಾರವಾಗಿ ನಾನು ಅಲ್ಲಿಗೆ ಹೋಗಿ ಪರಶಿವ-ಶಿವೆಯರ ದಿವ್ಯ ಸನ್ನಿಧಿಯಲ್ಲಿ ಈ ಮೊದಲೇ ಪ್ರಸ್ತಾಪಿಸಿದ್ದೇನೆ. ಅವರ ಒಪ್ಪಿಗೆಯೂ ದೊರೆತಿದೆ. ಆದುದರಿಂದ ನೀನು ಒಪ್ಪಿ, ಸರ್ವ ಶುಭಲಕ್ಷಣ ಮಂಡಿತೆಯರಾದ ಸಿದ್ಧಿ-ಬುದ್ಧಿಯರಿಬ್ಬರನ್ನೂ ಮಯೂರೇಶ್ವರನಿಗೆ ಕೊಟ್ಟು ವಿವಾಹವನ್ನು ಮಾಡತಕ್ಕದ್ದು ಸಮಂಜಸವೆನಿಸುತ್ತದೆ. ॥೩೯॥

ಬ್ರಹ್ಮಾ :—

ನಾರದನ ಈ ಸಲಹೆಯನ್ನು ಕೇಳಿದ ಕೂಡಲೇ ಅಲ್ಲಿ ಕುಳಿತಿದ್ದ ಇತರ ದೇವತೆಗಳಿಗೆ ಸಿದ್ಧಿ-ಬುದ್ಧಿಯರ ಮೇಲೆ ದೃಷ್ಟಿ ಪಸರಿಸಿತು. ಅವರ ಮೋಹಕ ರೂಪವು ಎಲ್ಲರನ್ನೂ ಮೋಹಾವಿಷ್ಟರನ್ನಾಗಿ ಮಾಡಿತು. ಕಾಮನ ಕಾಟವನ್ನು ಅವರು ತಾಳದಾದರು. ಅವರಲ್ಲಿ ಒಬ್ಬೊಬ್ಬರಾಗಿ ಬ್ರಹ್ಮನ ಬಳಿಗೆ ಬಂದು, "ಸಿದ್ಧಿ-ಬುದ್ಧಿ"ಯರನ್ನು ನನಗೆ ಕೊಟ್ಟು ಲಗ್ನಮಾಡಬೇಕೆಂದು ಅತ್ಯಾದರದಿಂದ ಯಾಚಿಸಿದರು. ॥೪೦॥

ತತೋ ಬ್ರಹ್ಮಾ ತಯೋರ್ಹಸ್ತೇ ಮಾಲಾಂ ದತ್ವಾಬ್ರವೀದಿದಮ್ ।

ಬ್ರಹ್ಮಾ :—

ತ್ರಯಸ್ತ್ರಿಂಶತ್ಕೋಟಿದೇವೇಷ್ವೇಕೋ ಯೋ ಭಾಸತೇ ಹೃದಿ ॥೪೧॥
ತಮೇವ ವೃಣುತಂ ದೇವ್ಯೌ ಮಾಲಾಭ್ಯಾಂ ಮತ್ಸಮಕ್ಷತಃ ।

ಕ ಉವಾಚ:—

ತ್ಯಕ್ತ್ವಾ ಸರ್ವಾನ್ ಸುರಾಂಸ್ತೇ ತು ಸಿದ್ಧಿ-ಬುದ್ಧೀ ಉಭೇ ಅಪಿ ॥೪೨॥
ಮಯೂರೇಶಗಲೇ ಮಾಲೇ ನಿಕ್ಷಿಪೇತಾಂ ಮುದಾ ತದಾ ।
ವಿಮನಸ್ಕಾಸ್ತತೋ ದೇವಾ ವ್ಯಸೃಜನ್ ಶ್ವಾಸಮುತ್ಕಟಮ್ ॥೪೩॥

---

ಬ್ರಹ್ಮದೇವನಿಗೆ ಧರ್ಮಸಂಕಟಕ್ಕಿಟ್ಟುಕೊಂಡಿತು. ಆಗ ಒಂದು ಯುಕ್ತಿಯನ್ನು ಹೂಡಿ. ಅವರಿಬ್ಬರ ಕೈಗಳಲ್ಲೂ ಒಂದೊಂದು ರತ್ನಮಾಲಿಕೆಯನ್ನು ಕೊಟ್ಟು ಅವರಿಗೆ ಹೀಗೆಂದು ಹೇಳಿದನು.

ಬ್ರಹ್ಮಾ:—

ಇದೋ, ಇಲ್ಲಿ ಮೂವತ್ತುಮೂರು ಕೋಟಿ ಮಂದಿ ದೇವತೆಗಳಿದ್ದಾರೆ. ಇವರ ಪೈಕಿ ಯಾರನ್ನು ವರಿಸಬೇಕೆಂದು ನಿಮಗೆನಿಸುವುದೋ, ॥೪೧॥

ಅಂಥವನೊಬ್ಬನ ಕೊರಳಿಗೆ ಈ ಮಾಲೆಯನ್ನು ಹಾಕುವುದರ ಮೂಲಕ ನೀವು ವರಿಸಬಹುದು. ಇದೆಲ್ಲವೂ ನನ್ನ ಸಮಕ್ಷದಲ್ಲೇ ನಡೆಯಲಿ.

ಕಃ :—

ಇದನ್ನು ಕೇಳಿದ ಕೂಡಲೇ, ಸಿದ್ಧಿ-ಬುದ್ಧಿಯರು ಅಲ್ಲಿ ಕುಳಿತಿದ್ದ ದೇವತೆಗಳನ್ನೆಲ್ಲ ಒಬ್ಬೊಬ್ಬರನ್ನಾಗಿ ನೋಡುತ್ತ ದಾಟಿ ಮುಂದಕ್ಕೆ ಬಂದುಬಿಟ್ಟರು. ಯಾರೊಬ್ಬರಿಗೂ ಮಾಲೆಯನ್ನು ಹಾಕಲಿಲ್ಲ. ॥೪೨॥

ದೇವಿಯರು ಮುಂದೆ ಬರುತ್ತ ಮಯೂರೇಶನನ್ನು ಸಮೀಪಿಸಿದ ಕೂಡಲೇ ಇಬ್ಬರೂ ಅಲ್ಲಿಯೇ ನಿಂತು, ತಮ್ಮ ಕೈಗಳಲ್ಲಿದ್ದ ರತ್ನಮಾಲಿಕೆಗಳನ್ನು ಗಣಪತಿಯ ಕೊರಳಿಗೆ ಸಂತೋಷದಿಂದ ಒಮ್ಮೆಲೆ ಹಾಕಿದರು. "ಇವಳು ನನ್ನನ್ನೇ ವರಿಸುವಳು" ಎಂದು ಮನಸ್ಸಿನಲ್ಲೇ ಮಂಡಿಗೆಯನ್ನು ತಿನ್ನುತ್ತ, ಕಲ್ಪನಾ ಸಾಮ್ರಾಜ್ಯಪೀಠದಲ್ಲಿ ಕುಳಿತಿದ್ದ ದೇವತೆಗಳಿಗೆ ಅವರಿಬ್ಬರ ಚುನಾವಣೆಯನ್ನು ಕಂಡು ಮನಸ್ಸು ಹುಳಿ ಹುಳಿಯಾಯಿತು. ಗತ್ಯಂತರವಿಲ್ಲದೇ ಸುಮ್ಮನಿರಬೇಕಾಗಿ ಬಂದರೂ, ನಿಟ್ಟುಸಿರನ್ನು ಮೇಲ್ಮೇಲೆ ಬಿಡುತ್ತ, ತಮ್ಮ ಅಂತಸ್ತಾಪವನ್ನು ವ್ಯಕ್ತಪಡಿಸಿದರು. ॥೪೩॥

ತಾಭ್ಯಾಂ ಜಾನುಗತಾಭ್ಯಾಂ ತು ಶುಶುಭೇ ಸ ಮಯೂರರಾಟ್ ।
ಬ್ರಹ್ಮಾ ಯಥಾವಿಧಿ ತಯೋರ್ವಿವಾಹಮಕರೋತ್ತದಾ ||೪೪||
ಉವಾಚ ಚ ಸಭಾಮಧ್ಯೇ "ಮಯಾ ಲಬ್ಧಂ ಹೃದಿ ಸ್ಥಿತಮ್' ।
ನ್ಯವೇದಯತ್ತಂ ದೇವೇಶಂ ಮಯೂರೇಶಂ ವಿಧಾನತಃ ||೪೫||

ಬ್ರಹ್ಮಾ :—

"ಅದ್ಯ ಯಾವನ್ಮಯೈವೈತೇ ಪಾಲಿತೇ ಬಹುಯತ್ನತಃ ।
ಇದಾನೀಂ ತೇ ಮಯಾ ದತ್ತೇ ರಕ್ಷಸ್ವ ಬಹುಯತ್ನತಃ ||೪೬||

ಕ ಉವಾಚ :—

ತತ ಇಂದ್ರಾದಯೋ ದೇವಾ ಮಯೂರೇಶಂ ವ್ಯಜಿಜ್ಞಪುಃ ।

ದೇವಾ ಊಚುಃ :—

ತವ ಪ್ರಸಾದಾದ್ದೇವೇಶ ! ಮುಕ್ತಾಃ ಕಾರಾಗೃಹಾತ್ತತಃ ||೪೭||

ಅತ್ತ ಮಯೂರರಾಜನು ಹೆಂಡಿತಿಯರಿಬ್ಬರನ್ನು ತನ್ನ ಎರಡು ತೊಡೆಗಳ ಮೇಲೂ ಕುಳ್ಳಿರಿಸಿಕೊಂಡು ವಿರಾಜಿಸಿದನು. ಆಗ ಬ್ರಹ್ಮನು ಮುಂದೆ ಬಂದು. ಅವರಿಬ್ಬರನ್ನೂ ಮಹಾ ಗಣಪತಿಗೆ ಸಮರ್ಪಿಸಿ, ವಿಧಿಪೂರ್ವಕವಾಗಿ ವಿವಾಹವನ್ನು ಮಾಡಿದನು. ||೪೪||

ಅವನಿಗೆ ಆಗ ಬಹಳ ಹಗುರೆನಿಸಿತು. ಸಭಾಮಧ್ಯೆ ಎದ್ದು ನಿಂತು "ಇಂದು ನನ್ನ ಮಾನಸಿಕ ಕೋರಿಕೆ ನೆರವೇರಿತು" ಎಂದು ಎಲ್ಲರಿಗೂ ಕೇಳುವಂತೆ ನುಡಿದನು. ಮತ್ತು ದೇವೇಶ್ವರ, ಗಣೇಶನ ಕಡೆ ತಿರುಗಿ ಅವನನ್ನು ಕುರಿತು ಅವನು ಅಂತಸ್ತಿಗನುಗುಣವಾಗಿ ಮಾತನಾಡಿದನು. ||೪೫||

ಬ್ರಹ್ಮಾ:—

ದೇವ ! ಇಂದಿನ ದಿನದ ವರೆಗೂ ಇವರಿಬ್ಬರನ್ನು ನಾನು ಬಹಳ ಪ್ರಯತ್ನದಿಂದ ಸಂರಕ್ಷಿಸಿಕೊಂಡು ಬಂದಿದ್ದೇನೆ. ಈಗ ಇವರನ್ನುನಿನಗೆ ಸಮರ್ಪಿಸುತ್ತಿದ್ದೇನೆ. ನೀನು ಸಹ ಇವರನ್ನು ಬಹು ಪ್ರಯತ್ನದಿಂದ ಸಂರಕ್ಷಿಸು. ||೪೬||

ಕ ಉವಾಚ :—

ಅನಂತರ ದೇವತೆಗಳು ಮುಂದೆ ಬಂದು. ದೇವನು ತಮ್ಮನ್ನು ಬಂಧನದಿಂದ ಮುಕ್ತಗೊಳಿಸಿದ್ದಕ್ಕಾಗಿ ಕೃತಜ್ಞತೆಯನ್ನು ಸಲ್ಲಿಸಲುಜ್ಜುಗಿಸಿದರು.

ದೇವತೆಗಳು :—

ದೇವೇಶ್ವರ ! ಕಾರಾಗೃಹದಲ್ಲಿ ಬಹು ಕಾಲದಿಂದ ಬದ್ಧರಾಗಿದ್ದ ನಾವೆಲ್ಲ ನಿನ್ನ

ತತಸ್ಸಿಂಧುರ್ಗತೋ ಮೋಕ್ಷಂ ಸ್ವ-ಸ್ಥಾನಂ ಕೃಪಯಾ ತವ ।
ಯಾಸ್ಯಾಮೋದೇಹ್ಯನುಜ್ಞಾಂ ನೋ ಮುನಿಭಿರ್ಗೌತಮಾದಿಭಿಃ ॥೪೮॥

ಕ ಉವಾಚ :—

ದದಾವಾಜ್ಞಾಂ ಮಯೂರೇಶೋ ಯಾತುಕಾಮಾರ್ನ್ ಮುದಾ ತದಾ ।
ಪಾರ್ವತೀ ಚ ಸ್ನುಷೇ ಚೋಭೇ ಸ್ವಾಂಕಮಾರೋಪ್ಯ ಸಾದರಮ್ ॥೪೯॥

ಮಯೂರೇಶಂ ಚ ಪರಮಂ ಹರ್ಷಮಾಪ ಶಿವಾನ್ವಿತಾ ।
ದದೌ ದಾನಾನ್ಯನೇಕಾನಿ ವಾಸಾಂಸ್ಯಾಭರಣಾನಿ ಚ ॥೫೦॥

ಯ ಇದಂ ಶೃಣುಯಾನ್ಮರ್ತ್ಯೋ ವಿವಾಹಂ ಚ ವಧಂ ಶುಭಮ್ ।
ಸಿಂಧೋರ್ಜಯಂ ಗಣೇಶಸ್ಯ ಸರ್ವಕಾಮಾರ್ನ್ ಲಭೇನ್ನರಃ ॥೫೧॥

---

ಪ್ರಸಾದವಿಶೇಷದಿಂದ ಇಂದು ಮುಕ್ತರಾಗಿದ್ದೇವೆ. ॥೪೭॥

ನಿನ್ನ ಕೃಪಾಮಹಿಮೆಯಿಂದ ದುಷ್ಟನಾದ ಸಿಂಧುದೈತ್ಯ ಸಾಂಸಾರಿಕ ವ್ಯವಹಾರಗಳಿಂದ ಮುಕ್ತನಾಗಿ ನಿನ್ನ ಸ್ಥಾನವಾದ ಆನಂದಧಾಮಕ್ಕೆ ತೆರಳಿದನು. ಇಂತಹ ಆನಂದಸಂದರ್ಭದಲ್ಲಿ ನಮಗೆ ಹೊರಡಲು ಅನುಜ್ಞೆಯನ್ನು ಕೊಡು. ಗೌತಮಾದಿ ಮಹಾಮುನಿಗಳೂ ಸಹ ಹಾಗೆಯೇ ಬೇಡುವರು. ॥೪೮॥

ಕಃ :—

ಅನಂತರ ಮಯೂರೇಶ್ವರನು ಯಾರಾರು ಪ್ರಯಾಣ ಸನ್ನದ್ಧರಾಗಿದ್ದರೋ, ಅವರೆಲ್ಲರಿಗೂ ಸಂತೋಷದಿಂದ ಅನುಮತಿಯನ್ನಿತ್ತನು. ಆಗ ಪಾರ್ವತೀದೇವಿಯು ತನ್ನ ಮುದ್ದು ಸೊಸೆಯರಿಬ್ಬರನ್ನೂ ತೊಡೆಯ ಮೇಲೆ ಆದರದಿಂದ ಕುಳ್ಳಿರಿಸಿಕೊಂಡು ॥೪೯॥

ಅವರಿಬ್ಬರ ನಡುವೆ ಪ್ರಿಯಪುತ್ರ ; ಗಣಪತಿಯನ್ನೂ ಕುಳ್ಳಿರಿಸಿಕೊಂಡು ವರ ಶಿವನೊಂದಿಗೆ ಆನಂದಸಾಗರದಲ್ಲಿ ಮುಳುಗಿದಳು. ಅನೇಕ ಆಭರಣಗಳು ಮಹಾರ್ಹ ವಸ್ತ್ರಗಳು ಇವನ್ನೆಲ್ಲ ದಾನಮಾಡಿದಳು. ॥೫೦॥

ಸಿಂದೂರವದನನು ಸಿಂಧುದೈತ್ಯನನ್ನು ಸೋಲಿಸಿ ಕೊನೆಗೆ ಸಂಹರಿಸಿದ್ದು, ಸಿದ್ಧಿ-ಬುದ್ಧಿಯರನ್ನು ಲಗ್ನವಾದದ್ದು ಇತ್ಯಾದಿ ಸಂಗತಿಗಳನ್ನೊಳಗೊಂಡ ಶುಭವಾದ ಈ ಕಥಾನಕವನ್ನು ಯಾವ ನರನು ಭಕ್ತಿ-ಶ್ರದ್ಧೆಗಳಿಂದ ಶ್ರವಣಮಾಡುವನೋ, ಅವನು ಸಕಲ ಕಾಮಗಳನ್ನೂ ಪಡೆಯುವನು. ॥೫೧॥

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ಮಯೂರೇಶ್ವರ ವಿವಾಹ ವರ್ಣನಂ" ನಾಮ ಪಂಚವಿಂಶತ್ಯುತ್ತರಶತತಮೋಽಧ್ಯಾಯಃ ಸಮಾಪ್ತಃ**

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ "ಮಯೂರೇಶ್ವರನ ವಿವಾಹ ವರ್ಣನೆ" ಎಂಬಲ್ಲಿಗೆ ನೂರ ಇಪ್ಪತ್ತೈದನೆಯ ಅಧ್ಯಾಯಾನುವಾದವು ಮುಕ್ತಾಯವಾಯಿತು.

ಶ್ರೀ ಗಣೇಶಾಯ ನಮಃ

# ಅಥ ಷಡ್ವಿಂಶೋತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಸಿದ್ಧೇ ವಿವಾಹೇ ಚ ತತೋ ಮಯೂರೇಶಃ ಶಿಖಂಡಿನಮ್ ।**
**ಆರುಹ್ಯ ಸಹಸಾ ಗಂತುಂ ನಗರೀಂ ಸ್ವಾಮಿಯೇಷ ಸಃ ॥೧॥**

**ಸ್ವಂ ಸ್ವಂ ವಾಹನಮಾರೂಢಾ ಗೀರ್ವಾಣಾಸ್ತತ್ಕ್ಷಣೇನ ಚ ।**
**ಯಾಂತಿ ಸ್ಮ ಪುರತಸ್ತಸ್ಯ ಮುನಯಃ ಪೃಷ್ಠತೋ ಯಯುಃ ॥೨॥**

**ಅನ್ವಯುರ್ನಾಗರಾಸ್ಸರ್ವೇ ಸ್ತ್ರಿಯಶ್ಚ ಬಾಲಕಾ ಅಪಿ ।**
**ಆನಂದಯುಕ್ತಾ ನಗರಾತ್ಸಹಸಾ ಚಕ್ರಪಾಣಿನಾ ॥೩॥**

---

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೨೬ ನೆಯ ಅಧ್ಯಾಯ

ಬ್ರ

ವಿವಾಹ ಮಂಗಲಕಾರ್ಯವು ಸಾಂಗವಾಗಿ ಮುಗಿದ ಬಳಿಕ, ದೇವನು ಒಂದು ದಿವಸ ತನ್ನ ವಾಹನವಾದ ಶಿಖಂಡಿಯ (ಮಯೂರವ) ನ್ನೇರಿ ತನ್ನ ನಗರಕ್ಕೆ ಹೊರಡಬೇಕೆಂದು ಒಮ್ಮೆಲೇ ಸಂಕಲ್ಪಿಸಿದನು. ॥೧॥

ಪ್ರಧಾನ ಪುರುಷನು ಪ್ರಯಾಣಸನ್ನದ್ಧನಾದುದನ್ನು ಕಂಡು, ಪರಿವಾರದವರಾದ ದೇವತೆಗಳೆಲ್ಲ ಕೂಡಲೇ ತಮ್ಮ ತಮ್ಮ ವಾಹನಗಳನ್ನೇರಿ, ಮಯೂರೇಶನಿಗಿಂತಲೂ ಮುಂದೆ ಹೊರಟು ನಿಂತರು. ಮುನಿಗಳು ದೇವನ ಹಿಂದಿನಿಂದ ಪ್ರಯಾಣ ಹೊರಟರು. ॥೨॥

ಪರಮಾತ್ಮನು ಪ್ರಯಾಣ ಹೊರಟುದನ್ನು ನೋಡಿ ಬಾಲಕರು ಸ್ತ್ರೀಯರಾದಿಯಾಗಿ ಗಂಡಕೀನಗರವಾಸಿಗಳೆಲ್ಲರೂ ಅವನನ್ನು ಅನುಸರಿಸಿ ನಡೆದರು. ಮನೆ, ಬಾಗಿಲು, ಹೊಲ, ಗದ್ದೆ ಮೊದಲಾದ ಸ್ವತ್ತು ಇವನ್ನು ಬಿಟ್ಟು ಹೋಗಬೇಕಲ್ಲ ಎಂಬ ಚಿಂತೆ ಯಾರಿಗೂ ಉಂಟಾಗಲಿಲ್ಲ. ಅದಕ್ಕೆ ಬದಲಾಗಿ ತಾವು ದೇವನೊಡನೆ ಪ್ರಯಾಣ

**ವಾದ್ಯತ್ಸು ಸರ್ವವಾದ್ಯೇಷು ನನ್ನತುಶ್ಚಾಪ್ಸರೋ ಗಣಾಃ ।**
**ರಣಭೂಮಿಂ ಗತೋ ಯಾವನ್ಮಯೂರೇಶೋಽಖಿಲೈರ್ವೃತಃ ॥೪॥**
**ತಾವತ್ಸ್ಕಂದಾದಯೋ ವೀರಾಃ ಪ್ರಾರ್ಥಯಾಂಚಕ್ರಿರೇ ವಿಭುಮ್ ।**
**ವೀರಾ ಊಚುಃ :—**
**ಸೇನಾಚರಾ ದೈತ್ಯಗಣೈರ್ನಿಹತಾ ಯುದ್ಧಸಂಭ್ರಮಾತ್ ॥೫॥**
**ಉತ್ತಸ್ಥುಸ್ಸರ್ವ ಏವೈತೇ ತ್ವತ್ಕಟಾಕ್ಷಾಮೃತೇಕ್ಷಿತಾಃ ।**
**ಕ ಉವಾಚ :—**
**ತಾನ್ ದೃಷ್ಟ್ವಾ ಜೀವಿತಾಂಸ್ತೇನ ಸರ್ವೇ ದೇವಾಶ್ಚ ನಾಗರಾಃ ॥೬॥**
**ವಿಸ್ಮಯಂ ಪರಮಂ ಪ್ರಾಪ್ತಾಃ "ಸಾಧು ಸಾಧ್ವ"ಬ್ರುವಂಸ್ತದಾ ।**

---

ಮಾಡುತ್ತಿರುವುದರಿಂದ ಆನಂದವೇ ಜಾಸ್ತಿಯಾಗಿದ್ದಿತು. ಸ್ವತಃ ಚಕ್ರಪಾಣಿ ಮಹಾರಾಜನು ಸಹ ತನ್ನ ರಾಜ್ಯ ಕೋಶಗಳ ಮೇಲಿನ ಮಮತೆಯನ್ನು ಸರ್ವಾತ್ಮನಾ ತೊರೆದು, ಎಲ್ಲರಿಗಿಂತಲೂ ಮುಂದೆ ಮುಂದೆ ಹೋಗುತ್ತಿದ್ದನು. ॥೩॥

ನಾನಾವಿಧ ಮಂಗಲವಾದ್ಯಗಳು ಘೋರ್ಗರೆಯುತ್ತಿದ್ದವು. ಅಪ್ಸರಸ್ತ್ರೀಯರು ತಮ್ಮ ಗುಂಪಿನೊಂದಿಗೆ ನರ್ತಿಸುತ್ತಲೇ ನಡೆಯುತ್ತಿದ್ದರು. ಇಷ್ಟೆಲ್ಲ ವೈಭವದಿಂದ ಪ್ರಯಾಣ ಹೊರಟ ದೇವನು, ರಣಭೂಮಿಯನ್ನು ತಲುಪುವಷ್ಟರಲ್ಲಿ ॥೪॥

ಸ್ಕಂದ ಮೊದಲಾದ ವೀರರು ದೇವನ ಸಮೀಪಕ್ಕೆ ಬಂದು, ಆಗ ಅಲ್ಲಿ ನಡೆದ ಒಂದು ಅತ್ಯದ್ಭುತ ಸನ್ನಿವೇಶವನ್ನು ಅರಿಕೆಮಾಡಿಕೊಂಡರು.

ಸ್ಕಂದಾದಿ ವೀರರು :—

ಯುದ್ಧ ಸಂದರ್ಭದಲ್ಲಿ ದೈತ್ಯನ ಕಡೆಯ ಸೈನಿಕರು ನಮ್ಮ ಸೈನಿಕರನ್ನೆಲ್ಲ ತುಂಡರಿಸಿ ಚಲ್ಲಿದ್ದರಷ್ಟೆ? ನಿನ್ನ ಕೃಪಾಕಟಾಕ್ಷ ಆ ಅಲ್ಪಾಯುಷಿಗಳ ಮೇಲೆ ಬಿದ್ದ ಕೂಡಲೇ ಎಲ್ಲರೂ ಪುನರುಜ್ಜೀವನಗೊಂಡು ಈಗ ಎದ್ದು ಕುಳಿತಿದ್ದಾರೆ. ಯಾರೊಬ್ಬರ ಮೇಲೂ ಯಾವ ಗಾಯದ ಕುರುಹೂ ಕಾಣುವುದಿಲ್ಲ. ಇದು ನಿನ್ನ ಅಮೃತಮಯ ಕಟಾಕ್ಷ ವೀಕ್ಷಣದ ಅನುಗ್ರಹ.

ಬ್ರಹ್ಮಾ :—

ಯುದ್ಧದಲ್ಲಿ ಮಡಿದವರೆಲ್ಲ ದೇವನ ಕೃಪೆಯಿಂದ ಮತ್ತೆ ಬದುಕಿದ್ದನ್ನು ನೋಡಿ ದೇವತೆಗಳು, ನಾಗರಿಕರು ಎಲ್ಲರೂ ಆಶ್ಚರ್ಯಪಟ್ಟರು. ॥೬॥

ಅವರೆಲ್ಲರೂ ವಿಸ್ಮಿತರಾಗಿ "ಸಾಧು, ಸಾಧು" ಎಂದು ತಮ್ಮ ಮೆಚ್ಚುಗೆಯನ್ನು

**ತತೋ ಯೋಜನಮಾತ್ರಂ ಚ ಗತ್ವಾ ಮಾರ್ಗಮವಸ್ಥಿತಃ ||೭||**
**ದೇವೋಽಬ್ರವೀಚ್ಚಕ್ರಪಾಣಿಂ ಮೂರ್ಧ್ನಿ ದತ್ವಾ ಕರಂ ಶುಭಮ್ ।**
**ಆಲಿಂಗ್ಯ ದಶದೋರ್ದಂಡೈಃ ಶತ್ರುಪಕ್ಷಭಯಂಕರೈಃ ||೮||**

**ದೇವ ಉವಾಚ :—**

**ತ್ವಂ ಯಾಹಿ, ಗಂಡಕೀಂ ಶೀಘ್ರಂ ನಾಗರೈರ್ಮನು ವಾಕ್ಯತಃ ।**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ಮುಮೋಚಾಶ್ರೂಣಿ ಸತ್ವರಮ್ ||೯||**
**ನಾಗರಾಶ್ಚ ಪ್ರಣಮ್ಯೋಚ್ಚೈರೂಚುರ್ವಾಕ್ಯಂ ಶುಚಾನ್ವಿತಾಃ ।**

---

ವ್ಯಕ್ತಪಡಿಸಿದರು. ಅನಂತರ ಪಯಣ ಮುಂದೆ ಸಾಗಿತು. ಒಂದು ಯೋಜನ ದಷ್ಟು ದೂರ ಮಾರ್ಗವನ್ನು ಕ್ರಮಿಸಿದ ಬಳಿಕ, ಇದ್ದಕ್ಕಿದ್ದಂತೆಯೇ ದೇವನು ಒಂದು ಕಡೆ ತಟಸ್ಥನಾಗಿ ನಿಂತನು. ||೭||

ಚಕ್ರಪಾಣಿ ಮಹಾರಾಜನನ್ನು ಸಮೀಪಕ್ಕೆ ಬರಮಾಡಿಕೊಂಡು. ಅವನ ಉತ್ತಮಾಂಗದ ಮೇಲೆ ತನ್ನ ವರದ ಹಸ್ತವನ್ನಿರಿಸಿ, ಶತ್ರುಪಕ್ಷವನ್ನು ಗದಗುಟ್ಟಿ ನಡುಗಿಸುವಂತಹ ತನ್ನ ಹತ್ತು ತೋಳುಗಳನ್ನೂ ಮುಂದಕ್ಕೆ ಚಾಚಿ, ರಾಜನನ್ನು ದೃಢವಾಗಿ ಆಲಿಂಗಿಸಿದನು. ಮತ್ತು ಅವನನ್ನು ಕುರಿತು ಪ್ರೀತಿಯಿಂದ ಹೀಗೆ ಮಾತನಾಡಿದನು. ||೮||

ದೇವ :—

ರಾಜ್ಞ, ಚಕ್ರಪಾಣೇ! ಬಹು ದೂರದ ವರೆಗೂ ನಡೆದು ಬಂದಿರುವೆ. ನಾನು ಹೇಳುವೆನು. ಪ್ರಕೃತ ಈ ನಾಗರಿಕರನ್ನೆಲ್ಲ ಕರೆದುಕೊಂಡು ನೀನು ಗಂಡಕೀನಗರಕ್ಕೆ ಬೇಗನೆ ಹಿಂದಿರುಗು.

ಬ್ರಹ್ಮಾ:—

ದೇವನಾಡಿದ ಈ ಮಾತುಗಳನ್ನು ಕೇಳಿದ ಕೂಡಲೇ, ಚಕ್ರಪಾಣಿಯು ಯಾವ ರೀತಿಯಾಗಿ ಪ್ರತ್ಯುತ್ತರಿಸಬೇಕೆಂಬುದನ್ನು ತಿಳಿಯದೇ, ಏಕಪ್ರಕಾರವಾಗಿ ಕಣ್ಣೀರು ಸುರಿಸಿದನು. ||೯||

ದೇವನ ನಿರ್ಧಾರವಾಣಿ, ಚಕ್ರಪಾಣಿಯ ದೀನದಶೆ, ದೇವನು ತಮ್ಮನ್ನು ತೊರೆದು ಹೋಗುವನು ಎಂಬ ಅಭಿಪ್ರಾಯ ಇವನ್ನರಿತಕೂಡಲೇ ನಾಗರಿಕರಿಗೂ ಮಿತಿ ಮೀರಿದ ದುಃಖ ಉಂಟಾಯಿತು. ಎಲ್ಲರೂ ದೇವನನ್ನು ನಮಸ್ಕರಿಸಿದರು ಮತ್ತು ಘಟ್ಟಿಯಾಗಿ ಕೂಗುತ್ತ ಹೀಗೆಂದು ನುಡಿದರು.

**ನಾಗರಾ ಊಚುಃ :—**

**ಯತ್ರ ಯಾಸಿ ನಯಾಸ್ಮಾಂಸ್ತ್ವಮತ್ರ ತ್ಯಕ್ತುಂ ನಚಾರ್ಹಸಿ ||೧೦||**
**ನಾಗತಃ ಸ್ಯಾತ್ಪೂರ್ವಮೇವ ತದಾ ದುಃಖಂ ನ ನೋ ಭವೇತ್ ।**

**ಕ ಉವಾಚ :—**

**ಏವಮುಕ್ತ್ವಾ ನಮಸ್ಕೃತ್ಯ ಯಯುಸ್ಸರ್ವೇ ತದಾಜ್ಞಯಾ ||೧೧||**
**ಚಕ್ರಪಾಣಿರಪಿ ತದಾ ನಮಸ್ಕೃತ್ಯ ಯಯೌ ಪುರಃ ।**
**ವರ್ಣಯಂತೋ ಗುಣಗಣಾಂಸ್ತದೀಯಾನದ್ಭುತಾನ್ ಬಹು ||೧೨||**
**ಕ್ಷಣೇನ ನಗರೀಂ ಪ್ರಾಪ್ಯ ಚಕ್ರಪಾಣ್ಯನುಮೋದಿತಾಃ ।**
**ನಾಗರಾಃ ಸ್ವ-ಗೃಹಂ ಪ್ರಾಪ್ತಾಶ್ಚಕ್ರಪಾಣಿರ್ನಿಜಾಲಯಮ್ ||೧೩||**
**ಪಂಚಾನಾಮಪಿ ದೇವಾನಾಂ ಪ್ರಾಸಾದಾನಪ್ಯಕಾರಯತ್ ।**

---

ನಾಗರಿಕರು :—

ನಂಬಿದವರಾದ ನಮ್ಮನ್ನು ನೀನು ಹೀಗೆ ಇಲ್ಲಿಯೇ ತ್ಯಜಿಸಿ ಹೋಗುವುದು ಉಚಿತವಲ್ಲ. ನೀನು ಎಲ್ಲಿಗೆ ಹೋಗುವೆಯೋ, ನಮ್ಮನ್ನೂ ಅಲ್ಲಿಗೇ ಕರೆದುಕೊಂಡು ಹೋಗು. ||೧೦||

ನೀನು ಇಲ್ಲಿಗೆ ಬಾರದೇ ಇದ್ದಿದ್ದರೆ, ಆಗ ನಮಗೆ ನಿನ್ನ ವಿಯೋಗದ ಈ ದುಃಖವೇ ಉಂಟಾಗುತ್ತಿರಲಿಲ್ಲ.

ಬ್ರಹ್ಮ:

ಹೀಗೆ ನುಡಿದರು. ವಿಚಾರಾಂತ್ಯದಲ್ಲಿ ದೇವನ ಆಜ್ಞೆಯನ್ನು ಮೀರುವುದು ಮಹಾಪಾತಕಕರ ಎಂಬುದು ಅವರಿಗೆ ಅರಿವಾಗಲು, ದೇವನನ್ನು ನಮಸ್ಕರಿಸಿ ಅಳುತ್ತಲೇ ಹಿಂದಿರುಗಿ ನಗರಕ್ಕೆ ತೆರಳಿದರು. ||೧೧||

ಚಕ್ರಪಾಣಿಯು ಸಹ ದೇವನಿಗೆ ವಂದಿಸಿ ಮನಸ್ಸಿಲ್ಲದೆ ಹಿಂದಿರುಗಿ ತನ್ನ ನಗರಕ್ಕೆ ತೆರಳಿದನು. ಹೋಗುವಾಗ ದಾರಿಯುದ್ದಕ್ಕೂ ಗಣಪತಿಯ ಗುಣಗಣಗಳನ್ನೂ, ಅವನ ಅದ್ಭುತ ಶಕ್ತಿ-ಸಾಹಸಗಳನ್ನೂ ವರ್ಣಿಸುತ್ತಲೇ ನಡೆದನು. ||೧೨||

ಸ್ವಲ್ಪ ಹೊತ್ತಿನಲ್ಲೇ ನಗರವನ್ನು ಎಲ್ಲರೂ ಹೊಂದಿದರು. ಎಲ್ಲರೂ ಅರಸನ ಅನುಮತಿಯನ್ನು ಪಡೆದು, ತಮ್ಮ ತಮ್ಮ ಆವಾಸಗಳಿಗೆ ಹೊರಟು ಹೋದರು. ಚಕ್ರಪಾಣಿ ಮಹಾರಾಜನು ಸಹ ತನ್ನ ಅರಮನೆಗೆ ತೆರಳಿದನು. ||೧೩||

ಚಕ್ರಪಾಣಿಗೆ ಮಯೂರೇಶನ ಗೀಳೇ ಹತ್ತಿಬಿಟ್ಟಿದ್ದಿತಾದುದರಿಂದ ಹಿಂದೆ ಸಭೆಯಲ್ಲಿ ದೇವನು ಇಂದ್ರಾದಿ ಸಕಲ ದೇವತೆಗಳಿಗೂ ತೋರಿಸಿದ ಪಂಚಾಯತನ

**ಪಂಚಾಯತನಮೂರ್ತೀಶ್ಚ ಸ್ಥಾಪಯಾಮಾಸ ತೇಷು ಚ ॥೧೪॥**
**ಪ್ರತ್ಯಹಂ ಪೂಜಯಾಮಾಸ ಭಕ್ತಿಭಾವಸಮನ್ವಿತಃ ।**
**ಮಯೂರೇಶಪುರಂ ಪ್ರಾಪ್ತೋ ಮಯೂರೇಶೋಽಪಿ ತತ್ಕ್ಷಣಾತ್ ॥೧೫॥**

**ಆಶ್ಚರ್ಯಂ ಪರಮಂ ಪ್ರಾಪ್ತಾ ಗಣಾಸ್ಸರ್ವೇ ನಿರೀಕ್ಷ್ಯ ತಾಮ್ ।**
**ಯಸ್ಯಾಂ ರತ್ನಮಯಾ ಸ್ತಂಭಾ ಭಿತ್ತಯೋಽಷ್ಟಾಪದಾನ್ವಿತಾಃ ॥೧೬॥**
**ಏಕೋ ನ ದೃಶ್ಯತೇ ತತ್ರಾಸಂಖ್ಯಾತಜನಸಂಯುತಃ ।**
**ಪ್ರವಿಶ್ಯ ಸ ಸಭಾಂ ರಮ್ಯಾಂ ಬ್ರಹ್ಮಾದೀನುಪವೇಶ್ಯ ಚ ॥೧೭॥**
**ಮಧ್ಯೇ ವಿವೇಶ ಚ ತತೋಽಽಲೋಕಯರ್ಯ ಸರ್ವತಸ್ತ್ವಯಮ್ ।**

ಮೂರ್ತಿಗಳನ್ನು ಸ್ಥಾಪಿಸಲು, ಸುಂದರವಾಗಿ ಕಾಣುವಂತೆ ಭವ್ಯ ಪ್ರಾಸಾದಗಳನ್ನು ನಿರ್ಮಿಸಿದನು. ಪ್ರತಿಯೊಂದು ಆಲಯದಲ್ಲೂ ಆಯಾ ಮೂರ್ತಿಗಳನ್ನು ವಿಧ್ಯುಕ್ತ ರೀತಿಯಲ್ಲಿ ಪ್ರತಿಷ್ಠಿಸಿದನು. ॥೧೪॥

ಆ ಮೂರ್ತಿಗಳಿಗೆ ಭಕ್ತಿ-ಭಾವಗಳಿಂದೊಡಗೂಡಿ ಸ್ವಲ್ಪವೂ ಬೇಸರಪಡದೆ, ಪ್ರತಿ ದಿನ ಪೂಜೆಯನ್ನು ನಡೆಸಲಾರಂಭಿಸಿದನು. ರಾಜ, ನಾಗರಿಕರು ಎಲ್ಲರೂ ಗಂಡಕೀ ನಗರಕ್ಕೆ ಹಿಂದಿರುಗಿದ ಕೂಡಲೇ ಮಯೂರೇಶನು ಶೀಘ್ರ ಗತಿಯಿಂದ ಪ್ರಯಾಣವನ್ನು ಬೆಳೆಸಿ ಮಯೂರೇಶ ಪುರಿಯನ್ನು ಪ್ರವೇಶಿಸಿದನು. ॥೧೫॥

ಹೊಸ ಬಗೆಯಾಗಿ ರೂಪಗೊಂಡ ಮಯೂರೇಶಪುರಿಯನ್ನು ಪ್ರವೇಶಿಸಿದ ಕೂಡಲೇ, ಪ್ರಮಥಗಣಗಳು ಕಕ್ಕಾವಿಕ್ಕಿಯಾಗಿ ಸುತ್ತಲೂ ನೋಡತೊಡಗಿದರು. ಎಲ್ಲಿ ನೋಡಿದರೂ ಹೊಸ ರೀತಿಯ ದೃಶ್ಯಗಳೇ ಕಂಡುಬಂದುದರಿಂದ ಬಹಳ ಆಶ್ಚರ್ಯವನ್ನು ಹೊಂದಿದರು. ಪ್ರತಿಯೊಂದು ಮನೆಯಲ್ಲೂ ಎಂಟುಮೂಲೆಯ ರತ್ನಸ್ತಂಭಗಳು ಶೋಭಿಸುತ್ತಲಿದ್ದು, ಹಗಲು-ರಾತ್ರಿಗಳಿಗೆ ಭೇದವೇ ಇಲ್ಲದಂತೆ ಮಾಡಿದ್ದವು. ಫಳಫಳ ಹೊಳೆಯುವ ರತ್ನಖಚಿತ ಗೋಡೆಗಳು ಅಲ್ಲೆಲ್ಲ ತುಂಬಿದ್ದವು. ॥೧೬॥

ಯಾರೊಬ್ಬರು ಮನೆಗಳನ್ನು ಪ್ರವೇಶಿಸಿದರೂ ಕಂಭ, ಗೋಡೆಗಳಲ್ಲಿದ್ದ ಹಲಗೆ ವಜ್ರಗಳಲ್ಲಿ ಅವರ ರೂಪ ಪ್ರತಿಫಲಗೊಂಡು ತಾವೇ ಅನೇಕರಂತೆ ಕಾಣಿಸುತ್ತಿದ್ದರು. ದೇವನು ತನ್ನ ಮಂದಿರದ ರಮಣೀಯವಾದ ಸಭಾಮಂಡಪವನ್ನು ಪ್ರವೇಶಿಸಿ, ಬ್ರಹ್ಮಾದಿ ದೇವತೆಗಳನ್ನು ಅವರವರಿಗುಚಿತವಾದ ಆಸನಗಳಲ್ಲಿ ಕುಳ್ಳಿರಿಸಿದನು. ॥೧೭॥

ಸಭಾ ಮಧ್ಯಭಾಗಕ್ಕೆ ಬಂದು ಅಲ್ಲಿ ಸುತ್ತಲೂ ರಚಿಸಿದ ಆಶ್ಚರ್ಯಕರ ಸನ್ನಿವೇಶಗಳನ್ನೆಲ್ಲ ಆಸಕ್ತಿಯಿಂದ ನೋಡತೊಡಗಿದನು. ಸಭಾಂಗಣದ ಪೂರ್ವದಿಗ್ಭಾಗಕ್ಕೆ

**ದದರ್ಶ ಪೂರ್ವಭಾಗೇ ಸ ಮನ್ಮಥಂ ರತಿಸಂಯುತಮ್ ||೧೮||**

**ದೇವೀಂ ಮಾರ್ಜಾರನಾಮ್ನೀಂ ತಾಂ ಲೋಕೇ ಖ್ಯಾತಾಂ ಸುಖಪ್ರದಾಮ್ ।**

**ದಕ್ಷಿಣಸ್ಯಾಂ ದಿಶಿ ತದಾಲೋಕಯತ್ಪಾರ್ವತೀ-ಶಿವೌ ||೧೯||**

**ತತ್ಪುರೋ ವಿರಜಾಂ ದೇವೀಂ ಭಕ್ತಕಾಮಪ್ರಪೂರಿಕಾಮ್ ।**

**ಪಶ್ಚಿಮಾಯಾಂ ದಿಶಿ ತತೋ ವಾರಾಹಂ ಧರಣೀಯುತಮ್ ||೨೦||**

**ಆಶ್ರಯಾಂ ನಾಮ ದೇವೀಂ ಚ ಸರ್ವವಿಘ್ನಹರಾಂ ಶುಭಾಮ್ ।**

**ಉತ್ತರಸ್ಯಾಂ ದಿಶಿ ತದಾ ಶ್ರೀ ಹರಿಂ ಸಮಲೋಕಯತ್ ||೨೧||**

**ಮುಕ್ತಾದೇವೀಂ ಚ ವಿಖ್ಯಾತಾಂ ಸರ್ವಮುಕ್ತಿಪ್ರದಾಂ ತತಃ !**

**ತ್ರಯಸ್ತ್ರಿಂಶತ್ಕೋಟಿಸುರಾಃ ಸ್ಥಿತಾಸ್ತದ್ದರ್ಶನೇಚ್ಛಯಾ ||೨೨||**

---

ತಿರುಗಿ ನೋಡಿದನು. ಸೌಂದರ್ಯಾಧಿದೇವತೆಗಳಾದ ರತಿ-ಮನ್ಮಥರು ಮಂಡಿಸಿರುವುದು ಗೋಚರಿಸಿತು. ||೧೮||

ಅವರು ಮಂಡಿಸಿದ್ದ ಸ್ಥಳದ ಸಮೀಪದಲ್ಲೇ ಸುಖಪ್ರದಳೆಂದು ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದ ಮಾರ್ಜಾರ ಎಂಬ ಶುಭನಾಮ ಮಂಡಿತೆ; ದೇವಿಯನ್ನು ನೋಡಿದನು. ಹಾಗೆಯೇ ದಕ್ಷಿಣದಿಕ್ಕಿಗೆ ತಿರುಗಿ ನೋಡಿದನು. ಅಲ್ಲಿ ಸ್ವಯಂ ತನ್ನ ಮಾತಾ-ಪಿತೃಗಳಾದ ಶಿವ-ಪಾರ್ವತಿಯರು ಇದ್ದರು. ||೧೯||

ಶಿವ-ಶಿವೆಯರ ಎದುರು ಭಾಗದಲ್ಲಿ ಭಕ್ತರ ಅಭಿಲಷಿತಗಳನ್ನು ಪೂರಯಿಸುವ ಶೀಲವುಳ್ಳ ವಿರಜಾದೇವಿಯು ಕುಳಿತಿದ್ದಳು. ಪಶ್ಚಿಮ ದಿಕ್ಕಿಗೆ ತಿರುಗಿ ನೋಡಿದನು. ಅಲ್ಲಿ ಆದಿ ವರಾಹನು ತನ್ನ ರಮಣಿಯಾದ ಧರಣೀದೇವಿಯೊಂದಿಗೆ ವಿರಾಜಮಾನನಾಗಿ ಕುಳಿತಿದ್ದನು. ||೨೦||

ಅವರ ಸಮೀಪದಲ್ಲಿ ಸರ್ವವಿಘ್ನಹರಳೂ, ಶುಭಪ್ರದಳೂ ಆದ "ಆಶ್ರಯೆ" ಎಂಬ ಹೆಸರಿನಿಂದ ಪ್ರಖ್ಯಾತಳಾದ ದೇವಿಯು ಕುಳಿತಿದ್ದಳು. ಉತ್ತರ ದಿಕ್ಕಿಗಭಿಮುಖನಾಗಿ ಭಗವಾನ್ ಮಯೂರೇಶ್ವರನು ತಿರುಗಿದಾಗ, ಸಾಕ್ಷಾಲ್ಲಕ್ಷ್ಮೀನಾರಾಯಣನನ್ನು ಕಂಡನು. ||೨೧||

ಸರ್ವರಿಗೂ ಮುಕ್ತಿಯನ್ನು ಅನುಗ್ರಹಿಸತಕ್ಕವಳು ಎಂಬ ಕೀರ್ತಿಯನ್ನು ಪಡೆದಿದ್ದ ಮುಕ್ತಾದೇವಿಯು ಶ್ರೀ ಹರಿಯ ಬಳಿ ಇರುವುದು ಕಂಡಿತು. ಮೂವತ್ತುಮೂರು ಕೋಟಿ ದೇವತೆಗಳು ದೇವನನ್ನು ಸಂದರ್ಶಿಸುವ ಇಚ್ಛೆಯಿಂದ ಅಲ್ಲಿಯೇ ನಿಂತರು. ||೨೨||

ಭಾದ್ರಶುದ್ಧ ಪ್ರತಿಪದಿ ಸ್ನಾತ್ವಾಭ್ಯರ್ಚ್ಯ ಗಜಾನನಮ್ ।
ಗತ್ವಾ ತು ಪೂರ್ವದಿಗ್ಭಾಗೇ ಮಾರ್ಜಾರೀಂ ಪೂಜಯೇತ್ತತಃ ॥೨೩॥

ದತ್ವಾ ದಾನಾನಿ ವಿಪ್ರೇಭ್ಯಃ ಸ್ಮೃತ್ವಾ ಧ್ಯಾತ್ವಾ ಗಜಾನನಮ್ ।
ಮೌನಂ ವ್ರತಂ ಸಮಾಸ್ಥಾಯ ನ ಶ್ರುತ್ವಾ ಪಾದಜಧ್ವನಿಮ್ ॥೨೪॥

ಕೃಮಿಕೀಟಪತಂಗಾದೀನ್ನ ಹಿಂಸೇತ್ಪ್ರಯತಃ ಶುಚಿಃ ।
ಪುನಃ ಸ್ನಾತ್ವಾ ಸಮಭ್ಯರ್ಚೇದ್ದೇವದೇವಂ ಗಜಾನನಮ್ ॥೨೫॥

ಪೂರ್ವವತ್ತು ದ್ವಿತೀಯೇಽನ್ಹಿ ತೃತೀಯೇ ಚ ತತಃ ಕ್ರಮಾತ್ ।
ತಥೈವ ದಕ್ಷಿಣದ್ವಾರಿ ವಿರಜಾಂ ದ್ವಿತಯೇಽಹನಿ ॥೨೬॥

---

ವತ್ಸ, ವ್ಯಾಸ! ಈ ಸಂದರ್ಭದಲ್ಲಿ ಮಹಾ ಗಣಪತಿಯನ್ನು ಉಪಾಸಿಸುವ ಕ್ರಮವನ್ನು ನಿನಗೆ ವಿವರವಾಗಿ ತಿಳಿಸಬೇಕೆಂದು ಮನಸ್ಸಾಗಿದೆ. ಗಮನವಿಟ್ಟು ಕೇಳು. ಉಪಾಸಕನು ಪ್ರತಿ ಭಾದ್ರಪದ ಶುಕ್ಲ ಪ್ರತಿಪತ್ತಿಥಿಯ ದಿವಸ ಪ್ರಭಾತದಲ್ಲೆದ್ದು ಸ್ನಾನಾನಂತರ ಮೊದಲು ಗಣಪತಿಯನ್ನು ಆರಾಧಿಸಬೇಕು. ಅನಂತರ ಪೂರ್ವ ದಿಗ್ಭಾಗಕ್ಕೆ ಹೋಗಿ ದೇವೀ ಮಾರ್ಜಾರಿಯನ್ನು ಅರ್ಚಿಸಬೇಕು. ॥೨೩॥

ಅನಂತರ ವಿಪ್ರೋತ್ತಮರಿಗೆ ವಿತ್ತಶಾಠ್ಯವಿಲ್ಲದೇ ಅನೇಕ ಧನ-ಧಾನ್ಯಗಳನ್ನು ದಾನ ಮಾಡಬೇಕು. ದಾನವನ್ನು ಮಾಡುವಾಗ ವಿನಾಯಕನನ್ನು ಸ್ಮರಿಸುತ್ತಲೂ ತದೇಕಾಸಕ್ತ ಚಿತ್ತನಾಗಿಯೂ ಇರಬೇಕು. ಯಾರೊಡನೆಯೂ ಯಾವ ವಿಧವಾದ ವ್ಯಾವಹಾರಿಕ ಮಾತುಗಳನ್ನಾಡದೇ, ಮೌನವ್ರತವನ್ನುಆಚರಿಸಬೇಕು. ಶೂದ್ರರ ಧ್ವನಿಯನ್ನು ಕೇಳಬಾರದು. ॥೨೪॥

ಕೃಮಿ, ಕೀಟ, ಪತಂಗ ಮೊದಲಾದ ಪ್ರಾಣಿಗಳನ್ನು ಸರ್ವಥಾ ಹಿಂಸಿಸಬಾರದು. ದೇಹ ಮತ್ತು ಮನಸ್ಸು ಇವು ಕಲುಷಿತವಾಗದಂತೆ ಸರ್ವದಾ ಶುಚಿಯಾಗಿರಬೇಕು. ಬೆಳಿಗ್ಗೆ ಮತ್ತೆ ಸ್ನಾನವನ್ನು ಮಾಡಿ ದೇವದೇವನಾದ ಗಜಾನನನನ್ನು ಭಕ್ತಿಯಿಂದ ಅರ್ಚಿಸಬೇಕು. ॥೨೫॥

ಮೊದಲನೆಯ ದಿವಸದಂತೆ ಬಿದಿಗೆಯ ದಿನವೂ ಮತ್ತು ತದಿಗೆಯ ದಿವಸವೂ ಸ್ನಾನಾನಂತರ ಮಹಾಗಣಪತಿಯನ್ನುಅರ್ಚಿಸತಕ್ಕದ್ದು. ಭಾದ್ರಪದ ಶುದ್ಧ ಬಿದಿಗೆಯ ದಿವಸ ಗಣೇಶ ಪೂಜಾನಂತರ ದಕ್ಷಿಣ ದಿಗಭಿಮುಖವಾಗಿ ಹೊರಟು, ಅಲ್ಲಿ ,ವಿರಜಾ ದೇವಿಯನ್ನು ಅರ್ಚಿಸಿ, ಮೊದಲಿನ ದಿನದಂತೆ ಮೌನವನ್ನಾಚರಿಸಿ ಸರ್ವದಾ ದೇವನ ಧ್ಯಾನದಲ್ಲೇ ಆಸಕ್ತನಾಗಿರಬೇಕು. ॥೨೬॥

ತೃತೀಯೋ ಪಶ್ಚಿಮದ್ವಾರಿ ತಥೈವಾಶ್ರಯಸಂಜ್ಞಿಕಾಮ್ ।
ನತ್ವಾರ್ಚಯೇಚ್ಚತುರ್ಥ್ಯಾಂ ತು ತದ್ವದುತ್ತರತೋ ನರಃ ॥೨೭॥
ಮುಕ್ತಾಂ ದೇವೀಂ ಸಮಭ್ಯರ್ಚ್ಯ ಮಯೂರೇಶಂ ಚ ತದ್ದಿನೇ ।
ಪೂಜಾಮಹೋತ್ಸವಂ ಕುರ್ಯಾದ್ರಾತ್ರೌ ಜಾಗರಣಂ ಚರೇತ್ ॥೨೮॥
ಏವಂ ಯಃ ಕುರುತೇ ಭಕ್ತ್ಯಾ ದ್ವಾರಾಣಿ ಚೋಪವಾಸತಃ ।
ಸ ಸರ್ವಾನ್ ಲಭತೇ ಕಾಮಾನ್ ಮಯೂರೇಶಪ್ರಸಾದತಃ ॥೨೯॥
ಚತುರ್ಥ್ಯಾಮೇವ ಚತ್ವಾರಿ ಶಕ್ತೋ ದ್ವಾರಾಣಿ ಪೂರ್ವವತ್ ।
ಆದ್ಯಂತಮಜ್ಜನಾದೇವ ದರ್ಶನಂ ಚ ಕರೋತಿ ಯಃ ॥೩೦॥

ಭಾದ್ರಪದ ಶುಕ್ಲ ತೃತೀಯೆಯ ದಿವಸ ಹಿಂದಿನ ದಿನಗಳಂತೆ ಗಣಪತಿಯ ಪೂಜಾನಂತರ ಪಶ್ಚಿಮ ದ್ವಾರದ ಬಳಿ ಇರುವ ಆಶ್ರಯಾದೇವಿಯನ್ನು ಪೂಜಿಸಬೇಕು. ಚತುರ್ಥಿಯ ದಿವಸ ದಿನದಂತೆ ಗಣಪತಿಯನ್ನು ಪೂಜಿಸಿದ ಬಳಿಕ ಉತ್ತರ ದಿಕ್ಕಿಗೆ ಹೋಗತಕ್ಕದ್ದು. ॥೨೭॥

ಅಲ್ಲಿ ಮುಕ್ತಾದೇವಿಯನ್ನು ಅರ್ಚಿಸಿ, ಆ ದಿವಸವೇ ಮಯೂರೇಶ್ವರನನ್ನೂ ಅತಿ ವೈಭವದಿಂದ ಪೂಜಿಸಿ, ಮಹೋತ್ಸವವನ್ನು ಮಾಡಬೇಕು. ಆ ದಿವಸ ರಾತ್ರಿ ದೇವತಾ ನಾಮಸಂಕೀರ್ತನ, ಸತ್ಕಥಾಶ್ರವಣ ಮೊದಲಾದ ಸತ್ಕಾರ್ಯಗಳಿಂದ ಕಳೆಯಲು ಜಾಗರಣವನ್ನು ಮಾಡತಕ್ಕದ್ದು. ॥೨೮॥

ಈ ರೀತಿಯಾಗಿ ಭಕ್ತ್ಯತಿಶಯದಿಂದಲೂ, ಉಪವಾಸಾಚರಣೆಯಿಂದಲೂ ಯಾರು ಆಯಾ ದ್ವಾರಸ್ಥ ದೇವತೆಗಳನ್ನು ಅರ್ಚಿಸುವರೋ, ಅವರಿಗೆ ಮಯೂರೇಶ್ವರನು ಪ್ರಸನ್ನನಾಗುವನು. ತನ್ಮೂಲಕ ಸಾಧಕನು ಸಕಲಾಭಿಲಾಷೆಗಳನ್ನೂ ಪಡೆಯುವನು. ॥೨೯॥

ದೇಹಸಾಮರ್ಥ್ಯ, ಸೌಕರ್ಯಗಳುಳ್ಳ ಉಪಾಸಕನು ಚತುರ್ಥಿಯ ದಿವಸವೇ ತನ್ನ ನಿತ್ಯಾನುಷ್ಠಾನಗಳನ್ನೆಲ್ಲ ಮುಗಿಸಿ, ಗಜಾನನನನ್ನಾರಾಧಿಸಿದ ಬಳಿಕ, ಪೂರ್ವಾದಿ ದಿಕ್ಕುಗಳಲ್ಲಿರತಕ್ಕ ಮಾರ್ಜಾರಿ, ವಿರಜೆ, ಆಶ್ರಯೆ ಮತ್ತು ಮುಕ್ತಾದೇವಿ ಇವರನ್ನು ವಿಧಿವತ್ತಾಗಿ ಪೂಜಿಸಿ, ವಿಪ್ರೋತ್ತಮರಿಗೆ ಉಚಿತವಾದ ದಾನಗಳನ್ನು ಸಲ್ಲಿಸಿ, ಅನಂತರ ಮಯೂರೇಶ್ವರನ ಪೂಜೆ, ಉತ್ಸವ ಇತ್ಯಾದಿಗಳನ್ನೆಲ್ಲ ಮಾಡಬೇಕು. ಪ್ರತಿಯೊಂದು ದಿಗ್ದೇವತೆಗೆ ಪೂಜೆಯನ್ನು ಸಲ್ಲಿಸಿದನಂತರವೂ ಮತ್ತೆ ಸ್ನಾನವನ್ನು ಮಾಡಬೇಕು. ಹೀಗೆ ಮಾಡಿದನಂತರ ಯಾರು ಭಗವಾನ್ ಭವಾನೀನಂದನನನ್ನು ಸಂದರ್ಶಿಸುವರೋ, ॥೩೦॥

**ತಸ್ಯ ಸದ್ಯಃ ಫಲಂ ದದ್ಯಾತ್ಪರಿತುಷ್ಟೋ ಗಜಾನನಃ ।**
**ತಸ್ಮಾಚ್ಛುದ್ಧಪ್ರತಿಪದಮಾರಭ್ಯ ಬ್ರಹ್ಮಚರ್ಯವಾನ್ ॥೩೧॥**

**ತತಶ್ಚತುರ್ಥ್ಯಾಮುಷಸಿ ಸ್ನಾನಂ ಕೃತ್ವಾ ವಿಧಾನತಃ ।**
**ನಿತ್ಯಂ ಸಂಪಾದ್ಯ ವಿಧಿವನ್ಮಯೂರೇಶಂ ಸಮರ್ಚಯೇತ್ ॥೩೨॥**

**ಪ್ರದಕ್ಷಿಣಾನಮಸ್ಕಾರಾನ್ ಕುರ್ಯಾದ್ದೇವೈಕವಿಂಶತಿಮ್ ।**
**ಪೂರ್ವದ್ವಾರೇ ನಮಸ್ಕೃತ್ಯ ಮಾರ್ಜಾರೀಂ ತ್ವರಯಾನ್ವಿತಃ ॥೩೩॥**

**ಏವಂ ಶಿವಾವಾಶ್ರಯಾಂ ಚ ಮುಕ್ತಾದೇವೀಂ ನಮೇತ್ಪರಾಮ್ ।**
**ಪ್ರಾರಭೇದ್ದಿನಶೇಷೇ ತು ಮಯೂರೇಶ್ವರಪೂಜನಮ್ ॥೩೪॥**

---

ಅಂತಹ ಸಾಧಕನಿಗೆ ಗಜಾನನನು ಪರಿತುಷ್ಟನಾಗಿ ಒಡನೆಯೇ ಅಭೀಷ್ಟ ಫಲಗಳನ್ನು ಅನುಗ್ರಹಿಸಿ ಕೊಡುವನು. ಆದುದರಿಂದ ಭಾದ್ರಪದ ಶುದ್ಧ ಪ್ರತಿಪದಾರಭ್ಯ ಶುದ್ಧ ಬ್ರಹ್ಮಚರ್ಯ ವ್ರತವನ್ನು ಪರಿಪಾಲಿಸುತ್ತಿದ್ದು ॥೩೧॥

ಅನಂತರ ಚತುರ್ಥಿಯ ದಿವಸ ಉಷಃಕಾಲದಲ್ಲೆದ್ದು ವಿಧಿಪೂರ್ವಕವಾಗಿ ಸ್ನಾನಾದಿಗಳನ್ನು ಮಾಡಬೇಕು. ತನ್ನ ನಿತ್ಯಾನುಷ್ಠಾನಗಳನ್ನು ವಿಧಿವತ್ತಾಗಿ ಆಚರಿಸಬೇಕು. ವಿಶೇಷರೀತಿಯ ವ್ರತವನ್ನನುಷ್ಠಿಸುವೆನೆಂಬ ಉತ್ಸಾಹದಲ್ಲಿ ನಿತ್ಯಕರ್ಮಗಳನ್ನು-ಉದಾಸೀನ ದೃಷ್ಟಿಯಿಂದ ಸಂಕೋಚ ಮಾಡಬಾರದು. ತನ್ನ ಜಾತಿ ಮತ್ತು ಧರ್ಮಗಳಿಗೆ ವಿಹಿತವಾದ ನಿತ್ಯಾನ್ಹಿಕಗಳನ್ನು ಮಾಡದೇ ಮತ್ತಾವ ಹೆಚ್ಚಿನ ಅನುಷ್ಠಾನಗಳನ್ನು ಮಾಡಿದರೂ, ಹೆಗ್ಗಣವನ್ನು ಒಳಗಿರಿಸಿ ಗೋಡೆಯನ್ನು ಕಟ್ಟಿದಂತೆ ಅವು ನಿಷ್ಫಲವಾಗುವುವು. ಮತ್ತು ನಿತ್ಯಕರ್ಮಗಳನ್ನು ಆಚರಿಸದವನಿಗೆ ಯಾವ ವ್ರತಾನುಷ್ಠಾನಗಳನ್ನು ಮಾಡಲೂ ಅರ್ಹತೆ ಬರುವುದಿಲ್ಲ. ಇರಲಿ, ಅನಂತರ ಮಯೂರೇಶನನ್ನು ಸಮರ್ಚಿಸಬೇಕು. ॥೩೨॥

ಪೂಜೆಯನ್ನು ಸಲ್ಲಿಸಿದ ಬಳಿಕ ದೇವನ ಮೂರ್ತಿಗೆ ಇಪ್ಪತ್ತೊಂದು ಸಲ ಪ್ರದಕ್ಷಿಣೆ ಬರಬೇಕು, ಹಾಗೂ ನಮಸ್ಕಾರಗಳನ್ನು ಸಲ್ಲಿಸಬೇಕು. ಒಡನೆಯೇ ಪೂರ್ವದ್ವಾರಸ್ಥ ಮಾರ್ಜಾರಿಯನ್ನು ಅರ್ಚಿಸಿ ನಮಸ್ಕರಿಸಿ ಬರಬೇಕು. ಈ ಐದು ಪೂಜೆಗಳೂ ಸೇರಿ ಒಂದು ವ್ರತವೆನಿಸಿಸುವುದಾದುದರಿಂದ ಒಂದೊಂದರ್ಚನೆಗೂ ಮಧ್ಯೇ ಹೆಚ್ಚು ಅಂತರವಿರಬಾರದು. ॥೩೩॥

ಇದೇ ರೀತಿಯಾಗಿ ದಕ್ಷಿಣ ದಿಕ್ಕಿನಲ್ಲಿರುವ ಶಿವ-ಪಾರ್ವತಿಯರು ಹಾಗೂ ಆಶ್ರಯೆ ಇವರನ್ನೂ, ಆಯಾ ದಿಕ್ಕುಗಳಲ್ಲಿರುವ ವರಾಹ-ಧರಣಿಯರು, ಆಶ್ರಯೆ, ಲಕ್ಷ್ಮೀನಾರಾಯಣ, ಮುಕ್ತೆ ಈ ದೇವತೆಗಳನ್ನೂ ಅರ್ಚಿಸಿ, ನಮಸ್ಕರಿಸಬೇಕು.

ಷೋಡಶೈರುಪಚಾರೈಸ್ತು ಪೂಜಯೇತ್ಸು-ಸಮಾಹಿತಃ ।
ರಾತ್ರೌ ಜಾಗರಣಂ ಕುರ್ಯಾದ್ಗೀತ-ವಾದಿತ್ರನಿಃಸ್ವನೈಃ ॥೩೫॥
ಪ್ರಭಾತೇ ವಿಮಲೇ ಸ್ನಾತ್ವಾ ಪುನರ್ದೇವಂ ಸಮರ್ಚಯೇತ್ ।
ಬ್ರಾಹ್ಮಣೈಃ ಸಹ ಕುರ್ವೀತ ಪಾರಣಂ ಸ್ವಸ್ವ ಶಕ್ತಿತಃ ॥೩೬॥
ತೇಭ್ಯೋ ದದ್ಯಾದ್ಧಿರಣ್ಯಂ ಚ ವಾಸೋ ಧಾನ್ಯಂ ಗವಾದಿಕಮ್ ।
ಏವಂ ಯಃ ಕುರುತೇ ಮರ್ತ್ಯೋ ದುಸ್ಸಾಧ್ಯಮಪಿ ಸಾಧಯೇತ್ ॥೩೭॥
ಪುತ್ರ-ಪೌತ್ರಯುತೋ ಭೋಗಾನ್ ಭುಕ್ತ್ವಾ ಚಾಂತೇ ವ್ರಜೇದ್ದಿವಮ್ ।
ಇಂದ್ರಾದಯೋ ಲೋಕಪಾಲಾಃ ಪೂಜಯಿಷ್ಯಂತಿ ತಂ ನರಮ್ ॥೩೮॥

ಇಷ್ಟೆಲ್ಲವನ್ನೂ ನಡೆಸಿದ ಬಳಿಕ ಸಾಯಾಹ್ನ ಸಮಯದಲ್ಲಿ ಮಯೂರೇಶ್ವರನನ್ನು ಪೂಜಿಸಬೇಕು. ॥೩೪॥

ಉಪಾಸಕನು ದೇವನನ್ನು ಅರ್ಚಿಸುವಾಗ ತನ್ನ ಮನಸ್ಸು ಸು-ಪ್ರಸನ್ನವಾಗಿರುವಂತೆ ಏಕಾಗ್ರಗೊಳಿಸಿರಬೇಕು. ಧ್ಯಾನಾವಾಹನಾದಿ ಷೋಡಶೋಪಚಾರಗಳನ್ನು ಭಕ್ತಿ-ಶ್ರದ್ಧೆಗಳಿಂದ ಸಮರ್ಪಿಸಬೇಕು. ಆ ರಾತ್ರಿ ದೇವತಾಸ್ತೋತ್ರಾತ್ಮಕ ಗೀತೆಗಳನ್ನು ತಕ್ಕ ವಾದ್ಯಗಳೊಡನೆ ಪಠಿಸುತ್ತ ಜಾಗರಣೆಯನ್ನಾಚರಿಸಬೇಕು. ॥೩೫॥

ಮೂರನೆಯ ದಿನ ಎಂದರೆ ಭಾದ್ರಪದ ಶುಕ್ಲ ಪಂಚಮಿಯ ಬೆಳಿಗ್ಗೆ ಸ್ನಾನಾನುಷ್ಠಾನಗಳನ್ನು ಮುಗಿಸಿಕೊಂಡು, ದೇವನಿಗೆ ಉತ್ತರಪೂಜೆಯನ್ನು ವಿಧಿವಿಹಿತವಾಗಿರುವಂತೆ ಸಮರ್ಪಿಸಬೇಕು. ಅನಂತರ ತನ್ನ ಶಕ್ತಿಗನುಸರಿಸಿ ಸದ್ಬ್ರಾಹ್ಮಣರನ್ನು ಬರಮಾಡಿಕೊಂಡು ಅವರೊಂದಿಗೆ ಪಾರಣೆಯನ್ನು ಮಾಡಬೇಕು. ॥೩೬॥

ಅವರಿಗೆ ಭೋಜನಾನಂತರ ಯಾವಚ್ಛಕ್ತ್ಯ ಹಿರಣ್ಯ, ವಸ್ತ್ರ ಹಾಗೂ ಗೋಗಳನ್ನು ದಕ್ಷಿಣಾರೂಪವಾಗಿ ಕೊಟ್ಟು ತೃಪ್ತಿಪಡಿಸಬೇಕು. ಈ ರೀತಿಯಾಗಿ ಶ್ರದ್ಧೆಯಿಂದ ಗಣಪತಿಯ ವ್ರತವನ್ನು ಯಾರು ಆಚರಿಸುತ್ತಾರೋ, ಅಂತಹ ಮನುಷ್ಯನು ಎಂತಹ ಕಠಿಣವಾದ ಕೆಲಸವನ್ನಾದರೂ ಬಹಳ ಸುಲಭವಾಗಿ ಸಾಧಿಸುತ್ತಾನೆ ॥೩೭॥

ಪುತ್ರ, ಪೌತ್ರಾದಿಗಳಿಂದೊಡಗೂಡಿ ಸಕಲ ಐಹಿಕ ಭೋಗಭಾಗ್ಯಗಳನ್ನೂ ಯಥೇಷ್ಟವಾಗಿ ಬಹು ದೀರ್ಘಕಾಲ ಅನುಭವಿಸಿ, ಆಯುರ್ದಾಯ ಮುಗಿದ ಬಳಿಕ ದೇವಲೋಕವನ್ನು ಹೊಂದುತ್ತಾನೆ. ಇಂದ್ರಾದಿ ಲೋಕಪಾಲಕರೆಲ್ಲ ಇಂತಹ ಸಾಧಕನನ್ನು ಆದರ-ಗೌರವ ವಿಶ್ವಾಸಗಳಿಂದ ಪೂಜಿಸುತ್ತಾರೆ. ॥೩೮॥

ಸೇವಂತೇ ಪಾದಕಮಲಂ ತಸ್ಯ ಯಾ ಅಷ್ಟನಾಯಿಕಾಃ ।
ಅಂಧಸ್ತು ಲಭತೇ ದೃಷ್ಟಿಂ ಮೂಕೋ ವಾಚಂ ಲಭೇದ್ಧ್ರುವಮ್ ॥೩೯॥
ಬಧಿರಃ ಶ್ರುತಿಮಾಪ್ನೋತಿ ಪಂಗುಶ್ಚ ಚರಣಾವಪಿ ।
ಭಾರ್ಯಾರ್ಥೀ ಲಭತೇ ಭಾರ್ಯಾಂ ವಿದ್ಯಾರ್ಥೀ ಲಭತೇ ಮತಿಮ್ ॥೪೦॥
ಏತದೇವ ಫಲಂ ಪ್ರೋಕ್ತಂ ದ್ವಾರೇಷು ಚೋಪವಾಸತಃ ।
ತತಃ ಕದಾಚಿದ್ದೇವೇಶೋ ಮಯೂರೇಶೋಽಖಿಲಾನ್ ಸುರಾನ್ ॥೪೧॥
ಉವಾಚ ಶ್ಲಕ್ಷ್ಣಯಾ ವಾಚಾ ಹರಿಬ್ರಹ್ಮಶಿವಾದಿಕಾನ್ ।
ಮಯೂರೇಶ ಉವಾಚ :—
ಯದರ್ಥಮವತೀರ್ಣೋಽಹಂ ತತ್ಕಾರ್ಯಂ ವಃ ಕೃತಂ ಸುರಾಃ ॥೪೨॥

---

ಲೋಕದಲ್ಲಿ ಅಷ್ಟನಾಯಿಕೆಯರೆಂದು ಪ್ರಸಿದ್ಧರಾದ ಸುರಸುಂದರಿಯರು ಅಂತಹ ಸಾಧಕನ ಚರಣಕಮಲಗಳನ್ನು ಸರ್ವದಾ ಪ್ರೀತ್ಯತಿಶಯದಿಂದ ಸೇವಿಸುತ್ತಾರೆ. ಸಾಧಕನು ಕುರುಡನಾಗಿದ್ದರೆ, ಅವನಿಗೆ ತೇಜಃಪುಂಜವಾದ ಕಣ್ಣುಗಳು ಲಭಿಸುವುವು. ಮೂಕನಾದವನು ವಾಕ್ಶಕ್ತಿಯನ್ನು ಪಡೆಯುತ್ತಾನೆ. ಇದು ಸತ್ಯವಾದ ಅಂಶ. ॥೩೯॥

ಕಿವುಡನು ಶ್ರೋತ್ರೇಂದ್ರಿಯವುಳ್ಳವನಾಗುತ್ತಾನೆ. ಕಾಲುಗಳಿಲ್ಲದವನು ಚರಣಗಳನ್ನು ಹೊಂದುತ್ತಾನೆ. ಹೆಂಡತಿಯನ್ನಪೇಕ್ಷಿಸಿ ವ್ರತವನ್ನಾಚರಿಸುವವನು ಸದ್ಗುಣಶೀಲಳಾದ ಹೆಂಡಿತಿಯನ್ನು ಪಡೆಯುತ್ತಾನೆ. ವಿದ್ಯಾಭಿಲಾಷಿಯು ಸಕಲ ವಿದ್ಯಾಪಾರಂಗತನಾಗುವುದಲ್ಲದೆ, ಸನ್ಮತಿವಂತನಾಗುತ್ತಾನೆ. ॥೪೦॥

ಮಯೂರೇಶ್ವರನ ಅರ್ಚನೆಯಿಂದ ಯಾವ ಯಾವ ಫಲಗಳು ಲಭಿಸುವುವೋ, ದ್ವಾರಸ್ಥ ದೇವತೆಗಳನ್ನು ಪೂಜಿಸುವುದರಿಂದಲೂ ಅದೇ ಫಲಗಳು ದೊರೆಯುವುವು. ಇಷ್ಟೆಲ್ಲ ಹೇಳಿದ್ದಾಯಿತಷ್ಟೆ? ಇನ್ನು ಮುಂದಿನ ಕಥಾನಕವನ್ನು ಹೇಳುವೆನು, :ಅವಧರಿಸು. ಅನಂತರ ಒಂದು ದಿವಸ ದೇವರ ದೇವನಾದ ಮಯೂರೇಶ್ವರನು ದೇವತೆಗಳು, ದೇವೋತ್ತಮರಾದ ಹರಿಹರಬ್ರಹ್ಮರು ಇವರನ್ನೆಲ್ಲ ತನ್ನ ಸಮೀಪಕ್ಕೆ ಬರಮಾಡಿಕೊಂಡು ಕುಶಲ ಪ್ರಶ್ನೆಯ ಸರಳ ಮಾತುಗಳೆಲ್ಲ ಮುಗಿದ ಬಳಿಕ, ಗಂಭೀರ ವಾಣಿಯಿಂದ ಹೀಗೆಂದು ನುಡಿದನು.

ಮಯೂರೇಶ್ವರ : -

ದೇವತೆಗಳೇ! ಯಾವ ಕಾರ್ಯವನ್ನು ಸಾಧಿಸಲೋಸುಗ ಭೂಲೋಕದಲ್ಲಿ ನಾನು ಅವತರಿಸಿದ್ದೆನೋ, ಆ ಕಾರ್ಯವನ್ನು ಸಾಧಿಸಿಯಾಯಿತು. ॥೪೧-೪೨॥

**ನಿಹತಾ ಬಹವೋ ದೈತ್ಯಾಃ ಭೂ-ಭಾರಶ್ಚ ಕೃತೋ ಲಘುಃ ।**
**ಸಿಂಧೋಃ ಕಾರಾಗೃಹಾತ್ಸರ್ವೇ ಮೋಚಿತಾ ಅಮೃತಾಂಧಸಃ ॥೪೩॥**

**ಸ್ವಾಹಾ ಸ್ವಧಾ ವಷಟ್ಕಾರಾ ಭವಿಷ್ಯಂತಿ ಯಥಾ ಪುರಾ ।**
**ಭವತಾಮಾಜ್ಞಯಾ ದೇವಾ ! ಯಾಸ್ಯೇ ಸ್ವಂ ಧಾಮ ಸಾಂಪ್ರತಮ್ ॥೪೪॥**

**ಕ ಉವಾಚ :—**

**ಏವಮಾಕರ್ಣ್ಯ ತದ್ವಾಕ್ಯಂ ದೇವಾಸ್ಸರ್ವೇ ಶುಚಾನ್ವಿತಾಃ ।**
**ತ್ಯಜಂತೋಽಶ್ರೂಣಿ ಸಂಪ್ರೋಚುಃ ಪರಸ್ಪರಮುಖೇಕ್ಷಣಾಃ ॥೪೫॥**

**ದೇವಾ ಊಚುಃ :—**

**ಅಸ್ಮಾಂಸ್ತ್ಯಕ್ತ್ವಾ ಮಯೂರೇಶ ! ಕ್ವ ವಾ ಗಂತುಂ ಸಮೀಹಸೇ ।**
**ಕಥಂ ಸ್ನೇಹಂ ಪರಿತ್ಯಜ್ಯ ನೈಷ್ಠುರ್ಯಂ ಪರಮಂ ಗತಃ ? ॥೪೬॥**

ದುಷ್ಟರಾದ ಬಹು ಮಂದಿ ದೈತ್ಯರನ್ನು ಕೊಂದುದಾಯಿತು. ಅಂತೆಯೇ ಭೂದೇವಿಗುಂಟಾಗಿದ್ದ ಭಾರವನ್ನೂ ಇಳಿಸಿಯಾಯಿತು. ಸಿಂಧುದೈತ್ಯನ ಕಾರಾಗೃಹದಲ್ಲಿ ಬಂಧನಕ್ಕೆ ಒಳಪಟ್ಟು ಚಿರಕಾಲದಿಂದ ಕೊಳೆಯುತ್ತಲಿದ್ದ ಸಮಸ್ತ ದೇವತೆಗಳನ್ನೂ ಬಂಧಮುಕ್ತರನ್ನಾಗಿ ಮಾಡಿಯಾಯಿತು. ॥೪೩॥

ಇನ್ನು ಮೇಲೆ ಯಾವ ಅಡ್ಡಿ-ಆತಂಕಗಳೂ ಇಲ್ಲದೆ ಹವ್ಯ-ಕವ್ಯಾತ್ಮಕ ಕರ್ಮಗಳು, ವ್ರತೋಪವಾಸ ಮೊದಲಾದ ನಿಯಮಗಳು ಎಂದಿನಂತೆ ನಡೆದುಕೊಂಡು ಬರುವುದಕ್ಕೆ ಯಾವ ಅಭ್ಯಂತರವೂ ಇರುವುದಿಲ್ಲ. ದೇವತೆಗಳೇ ! ನೀವೆಲ್ಲ ಅನುಮತಿಯನ್ನು ಕೊಡಿ. ಪ್ರಕೃತ ನಾನು ಸ್ವ-ಸ್ಥಾನವಾದ ಆನಂದಧಾಮಕ್ಕೆ ತೆರಳುವೆನು. ॥೪೪॥

ಬ್ರಹ್ಮ :—

ದೇವನಾಡಿದ ಅನಿರೀಕ್ಷಿತವಾದ ಈ ಮಾತುಗಳನ್ನು ಕೇಳಿದ ಕೂಡಲೇ, ಎಲ್ಲ ದೇವತೆಗಳಿಗೂ ಸಹಿಸಲಾರದ ಶೋಕ ಆವರಿಸಿಬಿಟ್ಟಿತು. ಕಣ್ಣುಗಳಿಂದ ಧಾರಾಕಾರವಾಗಿ ದುಃಖಾಶ್ರುವನ್ನು ಸುರಿಸಿದರು. ದೇವನ ಮುಖವನ್ನು ನೋಡುವುದಕ್ಕೆ ಸಹ ಬಹಳ ಸಂಕೋಚವೆನಿಸಿತು. ಪರಸ್ಪರರು ಮುಖವನ್ನು ನೋಡಿಕೊಳ್ಳುತ್ತ ಪರ್ಯಾಯವಾಗಿ ದೇವನನ್ನು ಕುರಿತು ಹೀಗೆಂದು ಮಾತನಾಡಿದರು. ॥೪೫॥

ದೇವತೆಗಳು :—

ದೇವ, ಮಯೂರೇಶ್ವರ ! ಇದೇನು ? ನಮ್ಮನ್ನೆಲ್ಲ ಪರಿತ್ಯಜಿಸಿ ಎಲ್ಲಿಗೆ ಹೊರಟುಹೋಗಬೇಕೆಂದು ಸಂಕಲ್ಪಿಸಿ, ಹವಣಿಸುತ್ತಿರುವೆ ? ಇದುವರೆಗೂ ನಮ್ಮೆಲ್ಲರ

**ಕ ಉವಾಚ :—**
**ತತಸ್ತತ್ಪಾರ್ವತೀ ಶ್ರುತ್ವಾ ಸಹಸಾ ಶೋಕಕರ್ಶಿತಾ ।**
**ಪಪಾತ ಮೂರ್ಚ್ಛಿತಾ ಭೂಮೌ ಮುಹೂರ್ತಾದವದಚ್ಚ ಸಾ ॥೪೭॥**
**ಪಾರ್ವತ್ಯುವಾಚ :—**
**ದೀನನಾಥ, ದಯಾಸಿಂಧೋ, ಸಿಂಧುದೈತ್ಯವಿಮರ್ದನ ! ।**
**ಕ್ವ ಯಾಸ್ಯಸಿ ಜಗನ್ನಾಥ ! ಹಿತ್ವಾ ಮಾಂ ಜನನೀಂ ತವ ॥೪೮॥**
**ನ ಸ್ಥಾಸ್ಯಂತಿ ಮಮ ಪ್ರಾಣಾಸ್ತ್ವಯಿ ಯಾತೇ ಸುರೇಶ್ವರ ! ।**
**ದೇವ ಉವಾಚ:—**
**ದ್ವಾಪರೇ ಪುನರೇವಾಹಂ ಯಾಸ್ಯೇ ತ್ವತ್ಪುತ್ರತಾಂ ಶುಭೇ ! ॥೪೯॥**
**ನ ಮಿಥ್ಯಾ ವಚನಂ ಮೇ ಸ್ಯಾನ್ನ ಚಿಂತಾಂ ಕರ್ತುಮರ್ಹಸಿ ।**

---

ವಿಷಯದಲ್ಲಿ ಎಂತಹ ವಾತ್ಸಲ್ಯವನ್ನಿರಿಸಿದವನು ನೀನು, ಈಗ ಅದನ್ನೆಲ್ಲ ಒಮ್ಮೆಲೆ ತೊರೆದು ಇದೇಕೆ, ನಮ್ಮ ವಿಷಯದಲ್ಲಿ ಮಿತಿಮೀರಿ ನೈಷ್ಠುರ್ಯವನ್ನು ತೋರಿಸುತ್ತಿರುವೆ ? ॥೪೬॥

ಬ್ರಹ್ಮಾ:—

ಒಂದು ನಿಮೇಷಮಾತ್ರದೊಳಗೆ ಈ ಸುದ್ದಿ ಪಾರ್ವತೀದೇವಿಗೆ ತಲುಪಿತು. ಇದನ್ನು ಕೇಳಿದುದೇ ತಡ, ಅಗಜೆಯು ಶೋಕಸಾಗರದಲ್ಲಿ ಮುಳುಗಿಬಿಟ್ಟಳು. ಮೂರ್ಚ್ಛಿತಳಾಗಿ ಭೂಮಿಯ ಮೇಲೆ ಬಿದ್ದು ಹೊರಳಿದಳು. ಒಂದು ಮುಹೂರ್ತ ಕಾಲ ಕಳೆದ ಬಳಿಕ ಹೇಗೋ ಚೇತನಗೊಂಡು ಮಯೂರೇಶ್ವರನನ್ನು ಕುರಿತು ಹೀಗೆ ನುಡಿದಳು. ॥೪೭॥

ಪಾರ್ವತೀ :—

ದೀನ-ದಳಿತರೊಡೆಯ, ಅವ್ಯಾಜಕರುಣಾಸಾಗರ, ಸಿಂಧುದೈತ್ಯವಿಮರ್ದನ, ಜಗನ್ನಾಥ! ನಿನ್ನ ಜನನಿಯಾದ ನನ್ನನ್ನು ತೊರೆದು ಎಲ್ಲಿಗೆ ಹೊರಟು ನಿಂತಿರುವೆ ? ॥೪೮॥

ಸುರೇಶ್ವರ ! ನೀನು ಹೊರಟು ಹೋಗುವೆಯಾದರೆ, ನನ್ನ ಪ್ರಾಣಗಳು ಈ ದೇಹದಲ್ಲಿ ಸರ್ವಥಾ ನಿಲ್ಲಲಾರವು.

ಮಯೂರೇಶ್ವರ :—

ತಾಯೇ, ಸರ್ವಮಂಗಳೇ ! ಚಿಂತಿಸದಿರು. ದ್ವಾಪರಯುಗದಲ್ಲಿ ನಾನು ಮತ್ತೆ ನಿನಗೆ ಮಗನಾಗಿ ಜನಿಸುವೆನು. ॥೪೯॥

ನನ್ನ ವಚನ ಎಂದೆಂದಿಗೂ ಸುಳ್ಳಾಗುವುದಿಲ್ಲ. ಆದುದರಿಂದ ನೀನು ಚಿಂತಿಸಬಾರದು. ಸ್ನೇಹಮಯಿಯಾದ ನಿನ್ನಂತಹ ಜನನಿಯನ್ನು ತೊರೆದು ಹೋಗಲು

ಮಮಾಪಿ ದುಃಖಮತುಲಂ ವಿಯೋಗಾತ್ತವ ಜಾಯತೇ ||೫೦||
ನೈಕತ್ರ ಸರ್ವದಾ ಮಾತಃ ! ಸುಹೃದಾಂ ವಸತಿರ್ಭವೇತ್ |
ಸಿಂದೂರೋ ನಾಮ ದೈತ್ಯೋಽಪಿ ಭವಿಷ್ಯತಿ ಸು-ದಾರುಣಃ ||೫೧||
ಅವಧ್ಯಃ ಸರ್ವದೇವಾನಾಂ ತದಾಹಂ ಸ್ಯಾಂ ತವಾರ್ಭಕಃ |
ಸ್ಮೃತಮಾತ್ರಸ್ತವಾಗ್ರೇಽಹಂ ಸ್ಥಾಸ್ಯಾಮಿ ಗಿರಿನಂದಿನಿ ! ||೫೨||
ಕ ಉವಾಚ :—
ತತಃ ಷಡಾನನಃ ಪ್ರಾಹ
ಕುಮಾರ ಉವಾಚ :—
ನಯ ಮಾಂ ಯತ್ರ ಯಾಸ್ಯಸಿ |
ಬಾಲಕೇ ಕೃಪಣೇ ದೀನೇ ನೋದಾಸೀನ್ಯಂ ಹಿ ಯುಜ್ಯತೇ ||೫೩||

---

ನನಗಾದರೂ ಪರಮಾವಧಿ ದುಃಖವಾಗುತ್ತಲಿದೆ. ನಿನ್ನ ವಿಯೋಗವನ್ನು ನಾನೂ ಸಹಿಸಲಾರೆ. ||೫೦||

ಆದರೆ, ಮಾಡತಕ್ಕದ್ದೇನು ? ತಾಯೇ! ಸ್ನೇಹಪಾಶಬದ್ಧರಾದ ಮಾತ್ರಕ್ಕೆ ಅವರು ಒಂದೇ ಸ್ಥಳದಲ್ಲಿ ಚಿರಕಾಲ ವಾಸಿಸಲಿಕ್ಕೆ ಬರುವಂತಿಲ್ಲವಮ್ಮ, ಇದೇ ಲೋಕ ನಿಯಮ. ಇರಲಿ, ದ್ವಾಪರಯುಗದಲ್ಲಿ ಮಹಾಬಲಿಷ್ಠನಾದ ದೈತ್ಯನೊಬ್ಬನು ಉದಿಸುವನು. ಅವನ ಹೆಸರು "ಸಿಂದೂರ" ಎಂದಿರುವುದು. ಅವನು ಬಹಳ ಭಯಂಕರಾಕಾರನಾಗಿರುವನು. ||೫೧||

ಅವನಿಗೆ ವರಬಲವಿರುವುದಾದುದರಿಂದ ಯಾವ ದೇವತೆಗೂ ಆ ಅಸುರನನ್ನು ಕೊಲ್ಲುವುದಕ್ಕಾಗುವುದಿಲ್ಲ. ಅಂತಹ ಆ ದಾನವನನ್ನು ನಿಗ್ರಹಿಸುವುದಕ್ಕಾಗಿ ನಾನು ಅವತರಿಸಲೇಬೇಕಾಗಿ ಬರುತ್ತದೆ. ಆಗ ನಾನು ನಿನಗೆ ಪುತ್ರನಾಗಿ ಅವತರಿಸುತ್ತೇನೆ. ಅಷ್ಟರೊಳಗಾಗಿಯೇ ನೀನು ನನ್ನನ್ನು ನೋಡಬೇಕೆಂದು ಬಯಸಿ ಸ್ಮರಿಸುವೆಯಾದರೆ, ಗಿರಿನಂದಿನಿ ! ಆ ಕೂಡಲೇ ನಿನ್ನೆದುರಿಗೆ ಬಂದು ನಿಲ್ಲುವೆನು. ||೫೨||

ಬ್ರಹ್ಮಾ:—

ಆಗ ಷಡಾನನನು ಮುಂದೆ ಬಂದು, ಅಗ್ರಜನನ್ನು ಕುರಿತು ಹೀಗೆಂದು ನುಡಿದನು.

ಅಗ್ರಜ ! ನೀನು ಎಲ್ಲಿಗೆ ಹೊರಟಿರುವೆಯೋ, ನನ್ನನ್ನು ಸಹ ಅಲ್ಲಿಗೇ ಕರೆದುಕೊಂಡು ಹೋಗು. ಕೃಪಣನೂ, ದೀನನೂ ಆದ ಈ ಬಾಲಕನ ವಿಷಯದಲ್ಲಿ ಔದಾಸೀನ್ಯವನ್ನು ತೋರುವುದು ನಿನಗೆ ಉಚಿತವಲ್ಲ. ||೫೩||

**ದೇವ ಉವಾಚ :—**

**ನ ಚಿಂತಾಂ ಕುರು ಬಂಧೋ! ತ್ವಮುತ್ರಾಯಾಸ್ಯಾಮ್ಯಹಂ ಪುನಃ।**
**ಭವತೋ ನ ವಿಯೋಗೋ ಮೇ ಸರ್ವಾಂತರ್ಯಾಮಿಣಃ ಖಲು ॥೫೪॥**

**ಕ ಉವಾಚ :—**

**ತಸ್ಮೈ ದದೌ ಮಯೂರಂ ತಂ ಮಯೂರೇಶಃ ಸ್ವಬಂಧವೇ।**
**"ಮಯೂರಧ್ವಜ" ಇತ್ಯೇವ ನಾಮ ಚಕ್ರೇಽಸ್ಯ ತತ್ಕ್ಷಣಾತ್ ॥೫೫॥**
**ಆರುರೋಹ ಮಯೂರಂ ತಂ ಸ್ಕಂದೋ ಬಂಧೋರಥಾಜ್ಞಯಾ।**
**ತಸ್ಮಿನ್ನೇವ ಕ್ಷಣೇ ದೇವೋಽಂತರ್ದಧೇ ಸ ಮಯೂರರಾಟ್ ॥೫೬॥**
**ತಸ್ಮಿನ್ನಂತರ್ಹಿತೇ ಕೇಶಾ ಅಪಶ್ಯನ್ ಹೃದಿ ತಂ ಸದಾ।**
**ತತೋ ಬ್ರಹ್ಮಾ ವಾಲುಕಾಭಿಃ ಕೃತ್ವಾ ಮೂರ್ತಿಂ ಗಜಾನನೀಮ್ ॥೫೭॥**

---

ದೇವ :—

ಪ್ರಿಯಬಂಧೋ! ನೀನು ಚಿಂತೆಯನ್ನು ಮಾಡಬೇಡ. ನಾನು ತಿರುಗಿ ಇಲ್ಲಿಗೇ ಬರುತ್ತೇನೆ. ನಾನು ಎಲ್ಲರ ಹೃದಯಗಳಲ್ಲೂ ಅಂತರ್ಯಾಮಿಯಾಗಿರ ತಕ್ಕವನು. ಅಂತೆಯೇ ನಿನ್ನ ಹೃದಯದಲ್ಲೂ ಇದ್ದೇ ಇದ್ದೇನೆ. ಆದುದರಿಂದ ನಿನಗೆ ನನ್ನ ವಿಯೋಗ ಎಂದೆಂದಿಗೂ ಉಂಟಾಗುವುದಿಲ್ಲ. ॥೫೪॥

ಬ್ರಹ್ಮಾ :—

ಹೀಗೆಂದು ನುಡಿದು ಸಮಾಧಾನಪಡಿಸಿ, ತನ್ನ ಮೆಚ್ಚಿನ ವಾಹನವಾದ ಮಯೂರವನ್ನು ತನ್ನ ಬಂಧುವಿಗೆ ಬಹುಮಾನವಾಗಿ ಕೊಟ್ಟು ಅನುಗ್ರಹಿಸಿದನು. ಮತ್ತು ಅವನಿಗೆ 'ಮಯೂರಧ್ವಜ' ಎಂಬುದಾಗಿ ಹೊಸ ಹೆಸರನ್ನೂ ಇಟ್ಟು ಕರೆದನು ಮಯೂರವು ತನಗೆ ವಾಹನವಾಗಿ ದೊರೆತಕೂಡಲೇ ಸ್ಕಂದನು ಬಹಳ ಉತ್ಸಾಹಗೊಂಡು ಒಡನೆಯೇ ॥೫೫॥

ಅಣ್ಣನ ಆಜ್ಞಾನುಸಾರವಾಗಿ ಅದರ ಮೇಲೆ ಏರಿ ಕುಳಿತನು. ಷಡಾನನನು. ಮಯೂರವನ್ನೇರಿದ ಸಂದರ್ಭವನ್ನು ನೋಡುವುದರಲ್ಲಿ ಎಲ್ಲರೂ ಅತ್ಯಾಸಕ್ತಚಿತ್ತರಾದುದನ್ನು ಕಂಡು, ಮಹಾಗಣಪತಿಯು ಆ ಕ್ಷಣದಲ್ಲೇ ಅಂತರ್ಧಾನವನ್ನು ಹೊಂದಿದನು. ॥೫೬॥

ಅಂದಿನಿಂದ ಅವನನ್ನು ಚರ್ಮಚಕ್ಷುಗಳಿಂದ ನೋಡಲು ಯಾರಿಗೂ ಸಾಧ್ಯವಾಗಲಿಲ್ಲ. ಅವನನ್ನು ಏಕಾಗ್ರತೆಯಿಂದ ಧ್ಯಾನಿಸುತ್ತ ತಮ್ಮ ಹೃದಯದಲ್ಲೇ ಸರ್ವದಾ ನೋಡತೊಡಗಿದರು. ಆಗ ಬ್ರಹ್ಮದೇವನು ಕೈಗೆ ಮರಳನ್ನು ತೆಗೆದುಕೊಂಡು ಅದರಿಂದ ಗಜಾನನನ ಸುಂದರವಾದ ಮೂರ್ತಿಯೊಂದನ್ನು ನಿರ್ಮಿಸಿದನು. ॥೫೭॥

ಸ್ಥಾಪಯಾಮಾಸ ವಿಧಿವತ್ಪ್ರಾಸಾದೇ ಸು-ಮನೋಹರೇ ।
ಪುಪೂಜುಃ ಸರ್ವಲೋಕಾಸ್ತಮುಪಚಾರೈರ್ಯಥಾವಿಧಿ ॥೫೮॥
ವಸಿಷ್ಠಾದ್ಯಾ ಮುನಿಗಣಾಃ ಸಸ್ನುರ್ಬ್ರಹ್ಮಕಮಂಡಲೌ ।
ಸರ್ವಂ ನಿತ್ಯವಿಧಿಂ ಕೃತ್ವಾ ಯಯುರ್ಮೂರ್ತಿಂ ಸು-ಶೋಭನೀಮ್ ॥೫೯॥
ಉಪೋಷ್ಯ ಕೇಚಿದ್ವಿದಧುರ್ದ್ವಾರಾಣಿ ಧಾಮಲಬ್ಧಯೇ ।
ಸ್ನಾತ್ವಾ ನತ್ವಾ ಮಯೂರೇಶಂ ಧಾವಮಾನಾಸ್ತಥಾಪರೇ ॥೬೦॥
ಊಚುಃ ಪರಸ್ಪರಂ ದೇವಾ ಮುನಯೋಽಪಿ ಮುದಾ ತದಾ ।

---

ಪವಿತ್ರಸ್ಥಳದಲ್ಲಿ ಸುಮನೋಹರವಾದ ಒಂದು ಮಂದಿರವನ್ನು ನಿರ್ಮಿಸಿ ಅದರಲ್ಲಿ ದೇವನ ಆ ಮೂರ್ತಿಯನ್ನು ವಿಧಿಪುರಸ್ಸರವಾಗಿ ಪ್ರತಿಷ್ಠಿಸಿದನು. ಲೋಕದ ಜನರೆಲ್ಲ ಆ ಆಲಯಕ್ಕೆ ಬಂದು ಅನೇಕ ಬಗೆಯ ಉಪಚಾರಗಳನ್ನು ಸಲ್ಲಿಸಿ ಭಕ್ತಿಯಿಂದ ಅರ್ಚಿಸಿದರು. ॥೫೮॥

ವಸಿಷ್ಠಾದಿ ಮಹರ್ಷಿಗಳು ದೇವನನ್ನು ಅರ್ಚಿಸಬೇಕೆಂದು ಬಯಸಿ ಮೊದಲು ಬ್ರಹ್ಮಕಮಂಡಲು ಎಂಬ ನದಿಯಲ್ಲಿ ಸ್ನಾನವನ್ನು ಮಾಡಿದರು. ಸಂಧ್ಯಾವಂದನೆ, ಅಗ್ನಿಹೋತ್ರಾದಿ ಸಕಲ ನಿತ್ಯಾನುಷ್ಠಾನಗಳನ್ನು ಮುಗಿಸಿದನಂತರ ಸುಂದರವಾದ ಗಣಪತಿಯ ಮೂರ್ತಿಯನ್ನು ಬ್ರಹ್ಮದೇವನು ಸ್ಥಾಪಿಸಿದ ಸ್ಥಳಕ್ಕೆ ಬಂದರು. ॥೫೯॥

ಅವರ ಪೈಕಿ ಕೆಲವರು ಆನಂದಧಾಮ ಪ್ರಾಪ್ತಿಗೋಸ್ಕರ ವಿಧಿವಿಹಿತವಾದ ರೀತಿಯಲ್ಲಿ ಒಂದೇ ದಿವಸ ಎಂದರೆ ಭಾದ್ರಪದ ಶುದ್ಧ ಚತುರ್ಥಿಯ ದಿವನ ಚತುರ್ದ್ವಾರಗಳ ಪೂಜೆಯನ್ನೂ ಮಾಡಿ ಮುಗಿಸುವ ಸಂಕಲ್ಪವನ್ನುಹೊಂದಿ, ಉಪೋಷ್ಯವ್ರತವನ್ನು ನಿಷ್ಠೆಯಿಂದಾಚರಿಸುತ್ತ ಸ್ನಾನಮಾಡುವುದು, ಮಯೂರೇಶ್ವರನನ್ನು ನಮಿಸುವುದು, ಆಯಾ ದ್ವಾರಗಳಿಗೆ ಧಾವಿಸಿ ಹೋಗಿ ಆಯಾ ದೇವತೆಗಳನ್ನು ಪೂಜಿಸುವುದು, ಮತ್ತೆ ಸ್ನಾನವನ್ನು ಮಾಡಿ ದೇವನನ್ನು ವಂದಿಸುವುದು ಹೀಗೆಯೇ ದ್ವಾರದೇವತೆಗಳನ್ನು ಅರ್ಚಿಸಿದರು. ಒಬ್ಬರಾದ ಮೇಲೊಬ್ಬರಂತೆ ಅರ್ಚನೆಗೆ ಸಂಭ್ರಮದಿಂದ ಆರಂಭಿಸಿದರು. ॥೬೦॥

ಭವ್ಯವಾದ ದೇವಾಲಯ, ಅದರಲ್ಲಿ ಪ್ರತಿಷ್ಠಿತವಾದ ಮಹಾಗಣಪತಿಯ ವರದ ಮೂರ್ತಿ, ಜನರು ಭಕ್ತಿಯಿಂದ ಆರಂಭಿಸಿದ ವ್ರತ ಇತ್ಯಾದಿಗಳನ್ನು ನೋಡಿ ಇತರ ದೇವತೆಗಳೂ ಮುನಿಗಳೂ ಅತಿ ಸಂತುಷ್ಟರಾದರು ಮತ್ತು ಪರಸ್ಪರ ಹೀಗೆಂದು ಮಾತನಾಡಿಕೊಂಡರು.

ದೇವಾಃ ಮುನಯಶ್ಚ :—

ನೈತಾದೃಶಂ ಪುಣ್ಯಕ್ಷೇತ್ರಂ ಯತ್ರ ದೇವಃ ಸ್ಥಿತಃ ಸ್ವಯಮ್ ||೬೧||
ಮಯೂರೇಶೋ ವಿಘ್ನಹರೋ ಭಕ್ತಾನಾಂ ಕಾಮಪೂರಕಃ ।

ಕ ಉವಾಚ :—

ಪೂಜಯಿತ್ವೈವಮುಕ್ತ್ವಾ ತು ಜಗ್ಮುಸ್ತೇ ಸ್ವಂ ಸ್ವಮಾಶ್ರಮಮ್ ||೬೨||
ಬ್ರಹ್ಮಾದಯಃ ಸುರಾಃ ಸ್ವಂ ಸ್ವಂ ಪದಮಭ್ಯಾಗಮಂಸ್ತದಾ ।
ಶಂಕರಸ್ಸಪರೀವಾರಃ ಕೈಲಾಸಮಗಮನ್ಮುದಾ ||೬೩||
ಸ್ವಧಾಸ್ವಾಹಾ ವಷಟ್ಕಾರೈರಿಂದ್ರಾದ್ಯಾ ಮುಮುದುಸ್ತದಾ ।
ಏವಂ ತೇ ಸರ್ವಮಾಖ್ಯಾತಂ ತ್ರೇತಾಯುಗಕೃತಂ ಮುನೇ ! ||೬೪||

---

ದೇವತೆಗಳು , ಮುನಿಗಳು :—

ಇಂತಹ ಪವಿತ್ರ ಕ್ಷೇತ್ರವು ಇದೊಂದೇ ಹೊರತು, ಮತ್ತಾವುದೂ ಇರುವುದಿಲ್ಲ. ಇಲ್ಲಿ ದೇವರ ದೇವನು ಸಾಕ್ಷಾತ್ತಾಗಿ ನೆಲೆಸಿ ನಿಂತಿದ್ದಾನೆ. ||೬೧||

ಮಯೂರೇಶನು ಭಕ್ತರಿಗೊದಗುವ ವಿಘ್ನಗಳನ್ನೆಲ್ಲ ದೂರೀಕರಿಸತಕ್ಕವನು. ಅಂತೆಯೇ ಅವರ ಅಭಿಲಷಿತಗಳನ್ನೆಲ್ಲ ಪೂರ್ಣಗೊಳಿಸಿ ಅನುಗ್ರಹಿಸತಕ್ಕವನು.

ಬ್ರಹ್ಮಾ:—

ಹೀಗೆ ನುಡಿದು, ಅನೇಕೋಪಚಾರಗಳನ್ನು ಸಮರ್ಪಿಸುವುದರ ಮೂಲಕ ದೇವನನ್ನು ಭಕ್ತಿಯಿಂದ ಸಮರ್ಚಿಸಿ, ತಮ್ಮ ತಮ್ಮ ಆಶ್ರಮಗಳಿಗೆ ಮುನಿಗಳು ತೆರಳಿದರು. ||೬೨||

ಚತುರ್ಮುಖ ಬ್ರಹ್ಮನೇ ಮೊದಲಾದ ಮೂವತ್ತು ಮೂರು ಕೋಟಿ ದೇವತೆಗಳೂ ಭಗವಂತನನ್ನು ಭಕ್ತಿಯಿಂದ ಅರ್ಚಿಸಿ, ತಮ್ಮ ತಮ್ಮ ದಿವ್ಯ ಸ್ಥಾನಗಳನ್ನು ಕುರಿತು ಪ್ರಯಾಣಮಾಡಿದರು. ಲೋಕಶಂಕರನಾದ ಭಗವಾನ್ ಶಂಕರನು ತನ್ನ ಪರಿವಾರದವರನ್ನೆಲ್ಲ ಕರೆದುಕೊಂಡು ಸಂತೋಷದಿಂದ ಕೈಲಾಸಗಿರಿಗೆ ಹೊರಟು ಹೋದನು. ||೬೩||

ದೇವ, ಪಿತೃಕಾರ್ಯಗಳೂ, ಅಗ್ನಿಹೋತ್ರಾದಿ ಶ್ರೌತಾನುಷ್ಠಾನಗಳೂ ನಿರ್ಬಾಧಕವಾಗಿ ಮೊದಲಿನಂತೆ ನಡೆಯಲಾರಂಭವಾಗಲು, ಸಕಾಲದಲ್ಲಿ ಹವಿಸ್ಸು ತಮಗೆ ಲಭಿಸುತ್ತಲಿದ್ದುದರಿಂದ ದೇವತೆಗಳು ಬಹಳ ಸಂತೋಷಿಸಿದರು. ವತ್ಸ, ವ್ಯಾಸ ! ತ್ರೇತಾಯುಗದಲ್ಲಿ ಭಗವಾನ್ ಮಯೂರೇಶ್ವರನು ತಳೆದ ಅವತಾರ, ತತ್ಸಂಬಂಧಿಯಾದ ಅತ್ಯದ್ಭುತ ಚರಿತ್ರೆ ಇವನ್ನೆಲ್ಲ ವಿಸ್ತರಿಸಿ ಹೇಳಿದ್ದೇನೆ. ||೬೪||

ಮಯೂರೇಶಸ್ಯ ಚರಿತಂ ಶ್ರವಣಾತ್ಸರ್ವಕಾಮದಮ್ ।
ಧನ್ಯಂ ಯಶಸ್ಯಮಾಯುಷ್ಯಂ ಸರ್ವಪಾಪಹರಂ ನೃಣಾಮ್ ॥೬೫॥
ಪುತ್ರದಂ ಧನದಂ ವಿದ್ಯಾಪ್ರದಂ ದುಃಖನಿವಾರಣಮ್ ।
ಆಧಿ-ವ್ಯಾಧಿಹರಂ ದುಷ್ಟಕುಷ್ಠರೋಗಾದಿನಾಶನಮ್ ॥೬೬॥
ಪಠತಾಂ ಶೃಣ್ವತಾಂ ಪುಂಸಾಂ ಭುಕ್ತಿ-ಮುಕ್ತಿಪ್ರದಂ ಶುಭಮ್ ।
ವಿಜಯ-ಶ್ರೀಪದಂ ನೃಣಾಂ ಕ್ಷತ್ರಿಯಾಣಾಂ ವಿಶಾಮಪಿ ॥೬೭॥
ಶೂದ್ರಾಣಾಮಪಿ ಸರ್ವೇಷಾಂ ಶ್ರೀಪ್ರದಂ ಪುಷ್ಟಿವರ್ಧನಮ್ ।
ಯದ್ಯತ್ತೇ ಪರಿಪೃಷ್ಟಂ ಮೇ ತತ್ತತ್ತೇ ಕಥಿತಂ ಮುನೇ ! ॥೬೮॥

ಮಯೂರೇಶ್ವರನ ದಿವ್ಯ ಚರಿತ್ರೆ ಬಹಳ ಮಹಿಮಾಯುತವಾದುದು. ಇದನ್ನು ಭಕ್ತಿ-ವಿಶ್ವಾಸಗಳಿಂದ ಶ್ರವಣಮಾಡಿದರೆ, ಸಕಲಾಭಿಲಷಿತಗಳೂ ಸಿದ್ಧಿಸುವುವು. ಇದನ್ನು ಕೇಳಿದ ನರನ ಜನ್ಮ ಧನ್ಯವಾಗುವುದು. ಅವನು ಬಹಳ ಯಶಸ್ವಿಯಾಗುವನು. ಆಯುಸ್ಸ್ಯವು ಅಭಿವೃದ್ಧಿಯಾಗುವುದು. ಶ್ರವಣ ಮಾಡುವವರ ಸಮಸ್ತ ಪಾತಕಗಳೂ ಪರಿಹೃತವಾಗುವುವು. ॥೬೫॥

ಅಪುತ್ರಿಗಳಿಗೆ ಸತ್ಪುತ್ರರನ್ನೂ, ದರಿದ್ರರಿಗೆ ವಿಪುಲ ಧನವನ್ನೂ, ವಿದ್ಯಾಭಿಲಾಷಿಗಳಿಗೆ ಸದ್ವಿದ್ಯೆಯನ್ನೂ ಅನುಗ್ರಹಿಸುವುದು. ಈ ಚರಿತ್ರೆಯ ಶ್ರವಣ ಸಕಲ ದುಃಖಗಳನ್ನೂ ನಿವಾರಿಸುವುದು. ದೈಹಿಕ, ಮಾನಸಿಕ, ಕ್ಲೇಶಗಳನ್ನು ಕಳೆಯುವುದು. ಕುಷ್ಠ, ಕ್ಷಯ, ಅಪಸ್ಮಾರಾದಿ ದುಷ್ಟರೋಗಗಳನ್ನು ನಿಶ್ಶೇಷವಾಗಿ ನಾಶಗೊಳಿಸುವುದು. ॥೬೬॥

ಯಾವ ಪುರುಷನು ಭಕ್ತಿ-ಶ್ರದ್ಧೆಗಳಿಂದ ಮಯೂರೇಶ್ವರನ ದಿವ್ಯ ಚರಿತವನ್ನು ಪಠಿಸುವನೋ, ಅದನ್ನು ಯಾವ ಮನುಷ್ಯನು ಅಷ್ಟೇ ಭಕ್ತಿಭಾವದಿಂದ ಶ್ರವಣ ಮಾಡುವನೋ ಅವರಿಗೆ ಐಹಿಕಾಮುಷ್ಮಿಕ ಶುಭಫಲಗಳಾದ ಭುಕ್ತಿ-ಮುಕ್ತಿಗಳು ಲಭಿಸುವುವು. ಎಲ್ಲೆಡೆಯಲ್ಲೂ ಅವನಿಗೆ ವಿಜಯವನ್ನು ಗಳಿಸಿಕೊಡುತ್ತವೆ. ಸ್ಥಿರವಾದ ಲಕ್ಷ್ಮಿಯನ್ನು ಅನುಗ್ರಹಿಸುತ್ತದೆ. ಪಠಿಸುವವರು ಬ್ರಾಹ್ಮಣರಾಗಲಿ, ಕ್ಷತ್ರಿಯರಾಗಲಿ ಅಥವಾ ವೈಶ್ಯರಾಗಲಿ ಎಲ್ಲರಿಗೂ ಮೇಲ್ಕಂಡ ಫಲಗಳು ಸಮಾನವಾಗಿ ದೊರೆಯುವುವು. ॥೬೭॥

ಶೂದ್ರರು ಸಹ ಈ ಕಥಾನಕವನ್ನು ಓದಿಸಿ ಭಕ್ತಿ-ಶ್ರದ್ಧೆಗಳಿಂದ ಶ್ರವಣ ಮಾಡಿದರೆ, ಕಾಯಪುಷ್ಟಿ, ಸಂಪತ್ತು ಇವನ್ನು ಕೊಡುತ್ತದೆ. ವ್ಯಾಸಮುನೇ! ನೀನು ಯಾವ ಯಾವ ಚರಿತ್ರೆ, ಮಹಿಮೆಗಳನ್ನು ಕೇಳಬೇಕೆಂದು ನನ್ನನ್ನು ಕುರಿತು ಪ್ರಶ್ನಿಸಿದ್ದೆಯೋ, ಅವನ್ನೆಲ್ಲ ವಿಸ್ತರಿಸಿ ನಿನಗೆ ಹೇಳಿದ್ದೇನೆ. ॥೬೮॥

**ಗಜಾನನಸ್ಯ ಚರಿತಂ ಪುನಃ ಶ್ರೋಷ್ಯಸಿ ಮನ್ಮುಖಾತ್ ॥೬೯॥**

**ಇತಿ ಶ್ರೀ ಗಣೇಶ ಪುರಾಣೇ ಉತ್ತರಖಂಡೇ " ಮಯೂರೇಶಾಂತರ್ಧಾನಂ, ತದೀಯ ಮಹಿಮಾವರ್ಣನಂ, ಫಲಶ್ರುತಿಶ್ಚೇತಿ " ಷಡ್ವಿಂಶತ್ಯುತ್ತರ ಶತತಮೋಽಧ್ಯಾಯಃ ಸಮಾಪ್ತಃ**

ಇಷ್ಟಕ್ಕೇ ಮುಗಿಸಿಬಿಟ್ಟೆನೆಂದು ಬೇಸರಪಡಬೇಡ. ಗಜಾನನನಿಗೆ ಸಂಬಂಧಿಸಿದ ಚರಿತ್ರೆಗಳನ್ನು ಮತ್ತೊಮ್ಮೆ ನನ್ನ ಮುಖದಿಂದ ನೀನು ಕೇಳುವೆ. ॥೬೯॥

ಇಲ್ಲಿಗೆ ಶ್ರೀ ಗಣೇಶ ಪುರಾಣದ ಉತ್ತರಖಂಡದಲ್ಲಿ "ಮಯೂರೇಶ್ವರನ ಅಂತರ್ಧಾನ, ಅವನ ಮಹಿಮಾವರ್ಣನೆ ಹಾಗೂ ಅಧ್ಯಾಯದ ಫಲಶ್ರುತಿ" ಎಂಬಲ್ಲಿಗೆ ನೂರ ಇಪ್ಪತ್ತಾರನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ ॥

## ಅಥ ಸಪ್ತವಿಂಶತ್ಯುತ್ತರ ಶತತಮೋಽಧ್ಯಾಯಃ

**ವ್ಯಾಸ ಉವಾಚ :—**

**ಚತುರಾನನ, ದೇವೇಶ ! ಗುಣೇಶಚರಿತಂ ಶುಭಮ್ ।**
**ಕಥಿತಂ ವಿಸ್ತರಾದ್ದೇವ ! ನಾಹಂ ತೃಪ್ತೋಽಸ್ಮಿ ತಚ್ಛ್ರವಾತ್ ॥೧॥**
**ಸುಧಯಾ ತು ವಿರಕ್ತಃ ಸ್ಯಾನ್ನ ಕಥಾಶ್ರವಣಾನ್ನರಃ ।**
**ತ್ರೇತಾಯುಗಕಥಾಸ್ಸರ್ವಾ ಗುಣೇಶಸ್ಯ ಶ್ರುತಾ ಮಯಾ ॥೨॥**
**"ಗಜಾನನೇ"ತಿ ನಾಮಾಸ್ಯ ದ್ವಾಪರೇ ತು ಕುತೋಽಭವತ್ ।**
**ಮೂಷಕೋ ವಾಹನಂ ಚಾಸ್ಯ ಕಥಂ ಯಾತೋ ಮಹಾವಿಭೋಃ ॥೩॥**

---

ಶ್ರೀ ಮಂಗಲಮೂರ್ತಯೇ ನಮಃ ॥

### ೧೨೭ ನೆಯ ಅಧ್ಯಾಯ

ವ್ಯಾಸ :—

ದೇವೇಶ, ಚತುರಾನನ ! ಮಹಾತ್ಮನಾದ ಮಹಾಗಣಪತಿಗೆ ಸಂಬಂಧಿಸಿದ ಸಚ್ಚರಿತ್ರೆ, ಆತನು ಪರಮೇಶ್ವರನ ಗೃಹದಲ್ಲಿ ಮಯೂರೇಶ್ವರನಾಗಿ ಅವತರಿಸಿದಾಗ ನಡೆಸಿದ ಅದ್ಭುತ ಸಾಹಸ ಕೃತ್ಯಗಳು, ಪ್ರಚಂಡ ದೈತ್ಯರನ್ನು ನಿಗ್ರಹಿಸಿ ಭೂ-ಭಾರವನ್ನಿಳುಹಿದುದು ಇತ್ಯಾದಿ ಕಥೆಗಳನ್ನೆಲ್ಲ ದೇವ ! ನೀನು ವಿಸ್ತರಿಸಿ ಹೇಳಿರುವೆ. ಆದರೆ ನಾನು ಮಟ್ಟಿಗೆ ಆ ಕಥಾ ಶ್ರವಣದಿಂದ ತೃಪ್ತನಾಗಿರುವುದಿಲ್ಲ. ॥೧॥

ಅಮೃತಪಾನದಿಂದ ಬೇಕಾದರೂ ಜನರು ವಿರಕ್ತರಾಗಬಹುದು. ಆದರೆ, ಇಂತಹ ಕಥಾ ಶ್ರವಣದಿಂದ ಯಾವ ನರನೂ, ಎಂದಿಗೂ ವಿರಕ್ತನಾಗುವುದಿಲ್ಲ. ಗಣಪತಿಗೆ ಸಂಬಂಧಿಸಿದ ತ್ರೇತಾಯುಗದ ಕಥೆಗಳನ್ನೆಲ್ಲ ಕೇಳಿದ್ದೇನೆ. ॥೨॥

ದ್ವಾಪರ ಯುಗದಲ್ಲಿ ಅವತರಿಸುವ ಜಗದೀಶ್ವರ; ಗುಣೇಶ್ವರನಿಗೆ 'ಗಜಾನನ' ಎಂಬ ಹೆಸರು ಬರಲಿಕ್ಕೆ ಕಾರಣವೇನು ? ಮಹಾ ವಿಭುವಾದ ಮಯೂರೇಶ್ವರನಿಗೆ ಇಲಿಯಂತಹ ಅತ್ಯಂತ ಚಿಕ್ಕ ಪ್ರಾಣಿ ವಾಹನವಾಗಿರಲಿಕ್ಕೆ ಏನು ಹಿನ್ನೆಲೆ ? ॥೩॥

**ಕೃಪಯಾ ಸಂಶಯಮಮುಂ ಛಿಂಧಿ ತ್ವಂ ಕಮಲಾಸನ ! ।**
**ಕ ಉವಾಚ :—**
**ಸಮ್ಯಕ್ಪೃಷ್ಟಂ ತ್ವಯಾ ವತ್ಸ ! ಮಮ ಚಿತ್ತಗತಂ ಮುನೇ !** ॥೪॥
**ಯತಃ ಶ್ರೋತಾ ಚ ವಕ್ತಾ ಚ ಪೃಚ್ಛಕಸ್ಸಿದ್ಧಿಮಾಪ್ನುಯಾತ್ !**
**ತಾಂ ಕಥಾಂ ಕಥಯಿಷ್ಯಾಮಿ ವಿನಾಯಕಕೃತಾಂ ಮುನೇ !** ॥೫॥
**ದ್ವಾಪರೇ ಯತ್ಕೃತಂ ತೇನ ಚರಿತಂ ಶ್ರುಣು ಸಾಂಪ್ರತಮ್ ।**
**ಯಥಾ ಗಜಾನನೋ ದೇವೋ ರಕ್ತವರ್ಣಶ್ಚತುರ್ಭುಜಃ** ॥೬॥
**ಗಜಾನನಶ್ಚಾಖುವಾಹಸ್ತತ್ಸರ್ವಂ ಕಥಯಾಮಿ ತೇ ।**

ಈ ವಿಷಯಗಳಲ್ಲಿ ನನಗೆ ಬಹಳ ಸಂದೇಹ ಉಂಟಾಗಿದೆ. ಅದನ್ನು ಕಮಲೋ-ದ್ಭವ! ನೀನು ಕೃಪೆ ಇಟ್ಟು ಪರಿಹರಿಸು.

ಬ್ರಹ್ಮ:—

ವತ್ಸ, ವ್ಯಾಸ! ನಿನ್ನ ಸಂಶಯ ಬಹಳ ಸಮಂಜಸವಾಗಿದೆ. ಈ ವಿಷಯ ಗಳನ್ನು ವಿಸ್ತರಿಸಿ ನಿನಗೆ ಹೇಳಬೇಕೆಂಬ ಸಂಕಲ್ಪ ನನ್ನ ಮನಸ್ಸಿನಲ್ಲೂ ಉದ್ಭವಿಸಿದ್ದಿತು. ॥೪॥

ನೋಡು, ವ್ಯಾಸಮುನೇ! ಈ ದಿವ್ಯ ಚರಿತ್ರೆಗಳನ್ನು ಕುರಿತು ಪ್ರಶ್ನಿಸುವವರೂ, ಉತ್ತರಿಸುವವರೂ ಸಕಲ ಸಿದ್ಧಿಗಳನ್ನೂ ಪಡೆಯುವರು. ಆದುದರಿಂದ ಆ ಕಥೆ ಗಳನ್ನೂ ಮತ್ತು ಪರಮಾತ್ಮಾ ವಿನಾಯಕನು ಮಾಡಿದ ಅದ್ಭುತ ಲೀಲಾ-ವಿನೋದ ಗಳನ್ನೂ ನಿನಗೆ ಮುನೇ! ವಿಸ್ತರಿಸಿ ಹೇಳುವೆನು. ॥೫॥

ದ್ವಾಪರ ಯುಗದಲ್ಲಿ ದೇವನು ಯಾವ ಚರಿತ್ರೆಯುಳ್ಳವನಾಗಿದ್ದನೋ, ಅದನ್ನು ಪ್ರಕೃತ ಹೇಳುವೆನು. ಅದರಲ್ಲಿ ದೇವನು ರಕ್ತವರ್ಣನಾಗಿದ್ದುದು, ಚತುರ್ಭುಜ ಗಳನ್ನು ಹೊಂದಿದ್ದು ಇವಕ್ಕೆಲ್ಲ ಕಾರಣ ತಿಳಿದು ಬರುವುದು. ॥೬॥

ಗಜಾನನ ಎಂದು ಹೆಸರು ಬರಲು ಮತ್ತು ಆಖುವ(ಇಲಿಯ)ನ್ನು ವಾಹನವನ್ನಾಗಿ ಮಾಡಿಕೊಳ್ಳಲು ಕಾರಣಗಳನ್ನೂ ಸಹ ಮರೆಯದೇ ನಿನಗೆ ಹೇಳುವೆನು. ಒಮ್ಮೆ ಒಂದು ಚಮತ್ಕಾರ ಸನ್ನಿವೇಶ ಹೀಗೆ ನಡೆಯಿತು. ಆಗ ದೈನಂದಿನ ಪ್ರಳಯಕಾಲ ನಡೆ ಯುತ್ತಿತ್ತು. ಎಂದರೆ ಬ್ರಹ್ಮದೇವನ ಹಗಲು (ನಾಲ್ಕು ಯುಗಗಳು ಸಹಸ್ರ ಸಲ ತಿರುಗು ವಷ್ಟು ಕಾಲ) ಕಳೆದು ರಾತ್ರಿಯಾಗಿದ್ದಿತು. (ಅವನ ರಾತ್ರಿಯ ಅವಧಿಯೂ ಮೇಲಿ ನಷ್ಟೇ ಇರುವುದು.) ಈ ರಾತ್ರಿ ಕಾಲದಲ್ಲಿ ಸಕಲ ಚರಾಚರ ವಸ್ತುಗಳೂ ಲಯ ಹೊಂದಿ, ಬ್ರಹ್ಮನು ಅವನ ಮಾರನೆಯ ದಿನ ಬೆಳಿಗ್ಗೆ ಎದ್ದು ಪ್ರಪಂಚವನ್ನು

**ಕದಾಚಿದ್ಬ್ರಹ್ಮಭುವನಂ ಯಾತಶ್ಶಂಭುರ್ಯದೃಚ್ಛಯಾ ||೭||**
**ಉತ್ಥಾಪಯಾಮಾಸ ತದಾ ಪ್ರಸುಪ್ತಂ ಕಮಲಾಸನಮ್ ।**
**ಸ ಉತ್ಥಿತೋ ಮಹಾಜೃಂಭಾಂ ಚಕಾರ ಕ್ರೋಧಸಂಯುತಃ ||೮||**
**ತತ ಏಕೋ ಮಹಾಘೋರಃ ಪುರುಷಸ್ಸಮುಪದ್ಯತ ।**
**ಸ ಚ ಚಕ್ರೇ ಮಹಾಘೋರಂ ಶಬ್ದಂ ಸರ್ವಭಯಂಕರಮ್ ||೯||**
**ಚಕಂಪೇ ಪೃಥಿವೀ ತೇನ ಸಾಬ್ಧಿದ್ವೀಪಾ ಸ ಪರ್ವತಾ ।**
**ದಿಕ್ಪಾಲಾಶ್ಚಕಿತಾಸ್ಸರ್ವೇ ಶೇಷಃ ಕ್ಷುಬ್ಧೋಽಸೃಜದ್ವಿಷಮ್ ||೧೦||**

ಸೃಜಿಸಲಾರಂಭಿಸಿದಾಗ ಪ್ರಕೃತಿಯಲ್ಲಿ ಲಯ ಹೊಂದಿದ ಚರಾಚರಾತ್ಮಕ ಜೀವರಾಶಿ ಎಲ್ಲ ತಮ್ಮ ಪ್ರಾಕ್ತನ ಕರ್ಮ ಹಾಗೂ ತಪಸ್ಸು ಇವಕ್ಕನುಸರಿಸಿ ಆಯಾ ಫಲಭೋಗ ಕ್ಕಾಗಿ ಜನಿಸುತ್ತವೆ. ಆ ಅವಧಿಯನ್ನು 'ಪ್ರಾಕೃತಿಕ ಪ್ರಳಯ' ಎಂದೂ ಕರೆಯುತ್ತಾರೆ. ಆಗ ಬ್ರಹ್ಮನು ನಿದ್ರಿಸುತ್ತಿರುವನು ಎಂದು ಪ್ರತೀತಿ ಇದೆ. ಇರಲಿ, ಹೀಗೊಮ್ಮೆ ಬ್ರಹ್ಮದೇವನು ಮಲಗಿ ಯೋಗ ನಿದ್ರಾಸಕ್ತನಾಗಿರುವಾಗ ಮಹೇಶ್ವರನಿಗೆ ಇದ್ದಕ್ಕಿ ದ್ದಂತೆ ಬ್ರಹ್ಮನನ್ನು ನೋಡಬೇಕೆಂದು ಸಂಕಲ್ಪ ಉಂಟಾಯಿತು. ಕೂಡಲೇ ಬ್ರಹ್ಮನ ಲೋಕಕ್ಕೆ ಬಂದು ಬಿಟ್ಟನು. ||೭||

ಆಗ ಕಮಲಾಸನನಿಗೆ ಗಾಢವಾದ ನಿದ್ರೆ ಹತ್ತಿದ್ದಿತು. ಮಹೇಶ್ವರನು ಅಲ್ಲಿಗೆ ಬಂದಕೂಡಲೇ ಬ್ರಹ್ಮನನ್ನು ಎಚ್ಚರಗೊಳಿಸಿದನು. ಅರ್ಧನಿದ್ರೆಯಲ್ಲಿ ಎಚ್ಚರಗೊಂಡ ನಾದುದರಿಂದ ಬ್ರಹ್ಮದೇವನಿಗೆ ನಿದ್ರಾಭಂಗ ಉಂಟಾದಂತಾಗಿ ಸ್ವಲ್ಪಮಟ್ಟಿಗೆ ಕ್ರೋಧವೂ ಬಂದಿತು. ಹಾಗೆಯೇ ಒಮ್ಮೆ ದೊಡ್ಡದಾಗಿ ಆಕಳಿಸಿದನು. ||೮||

ಬ್ರಹ್ಮನು ನಿದ್ರೆಯಲ್ಲಿದ್ದಾಗ ಮಾತ್ರ ಸೃಷ್ಟಿ ಕ್ರಮವು ಉಪರತವಾಗಿರುತ್ತದೆ. ಅವನು ಎಚ್ಚರಗೊಂಡನೆಂದರೆ ಅವನು ಸಂಕಲ್ಪಿಸಲಿ, ಅಥವಾ ಸಂಕಲ್ಪಿಸದಿರಲಿ, ಅಂತೂ ಅವನ ಶ್ವಾಸೋಚ್ಛ್ವಾಸಗಳು ಸಹ ಯಂತ್ರದಂತೆ ಸೃಷ್ಟಿಗೆ ಕಾರಣವಾಗು ವುವು. ಇದೇ ಸೃಷ್ಟಿಯ ನಿಯಮ. ಅದರಂತೆ ಅವನು ಆಕಳಿಸಿದುದೇ ತಡ, ಅತಿ ಘೋರವಾದ ಆಕಾರ ಉಳ್ಳ ಒಬ್ಬ ಪುರುಷನು ಹುಟ್ಟಿದನು. ಆ ಪುರುಷನು ಹುಟ್ಟಿದ ಕೂಡಲೇ ಕರ್ಕಶ ಸ್ವರದಿಂದ ಒಮ್ಮೆ ಗರ್ಜಿಸಿದನು. ಆ ಧ್ವನಿ ಎಲ್ಲರನ್ನೂ ಭಯ ಪಡಿಸುವಂತಹುದು. ||೯||

ಕುಲಪರ್ವತಗಳು ಸಪ್ತ ಸಮುದ್ರ ಇತ್ಯಾದಿ ಸಕಲ ಸ್ಥಾವರ-ಜಂಗಮ ಜೀವ ಗಳಿಂದೊಡಗೂಡಿದ ಸಪ್ತ ದ್ವೀಪಾತ್ಮಕ ಇಡೀ ಪೃಥಿವಿ ಇವನ ಗರ್ಜನೆಗೆ ಗಡ ಗಡ ನಡುಗಿಹೋಯಿತು. ದಿಕ್ಪಾಲಕರಾದ ಇಂದ್ರಾಗ್ನಿ ಯಮ ಮೊದಲಾದವರು ಬೆಚ್ಚಿ ಬಿದ್ದರು. ಭೂಭಾರವನ್ನು ಹೊತ್ತು ನಿಂತಿರುವ ಆದಿಶೇಷನು ಬಹಳ ಕಳವಳಗೊಂಡು ಧಾರಾಕಾರವಾಗಿ ಹಾಲಾಹಲವನ್ನು ಕಾರಿದನು. ||೧೦||

ವಿಶೀರ್ಣಾ ಗಿರಯಸ್ಸರ್ವೇ ಭೂತಾನ್ಯಾಕುಲತಾಂ ಯಯುಃ ।
ಕಲ್ಪಾಂತ ಇವ ತತ್ರಾಸೀತ್ತ್ರೈಲೋಕ್ಯವಾಸಿನಾಂ ನೃಣಾಮ್ ॥೧೧॥
ಬ್ರಹ್ಮಾಂಡಂ ಮಸ್ತಕೇನಾಸೌ ಸ್ಫೋಟಯನ್ನಿವ ತಸ್ಥಿವಾನ್ ।
ಯದ್ದೇಹತಶ್ಚಾರುಗಂಧೋ ವ್ಯಾನಶೇ ಭುವನತ್ರಯಮ್ ॥೧೨॥
ಜಪಾಕುಸುಮದೇಹಸ್ಯ ಪ್ರಭಯಾರುಣಿತಾ ದಿಶಃ ।
" ಅಯಂ ಕಿಂ ಮದನೋ ಜಾತೋ ದ್ವಿತೀಯೋ ಬ್ರಹ್ಮಸಂಭವಃ ?" ॥೧೩
ಕಾಮಸ್ತು ಲಜ್ಜಿತಸ್ತಸ್ಯ ಸದ್ಯೋ ರೂಪನಿರೀಕ್ಷಣಾತ್ ।
ಪುರಸ್ತಂ ಸನ್ನಿರೀಕ್ಷ್ಯೈನಂ ವಿಸ್ಮಿತಃ ಕಮಲಾಸನಃ ॥೧೪॥

---

ಪರ್ವತಗಳು ಸಡಲಿಹೋದವು. ಪಂಚಭೂತಗಳಿಗೆ ಎದೆನಡಿಕೆ ಹತ್ತಿತು. ಇತರ ಭೂತ ಪ್ರೇತಗಳು ಗದಗುಟ್ಟಿ ನಡುಗಿದವು. ಸ್ವರ್ಗ, ಮರ್ತ್ಯ, ಪಾತಾಳ ಲೋಕಗಳಲ್ಲಿ ವಾಸಮಾಡುವ ನರರೆಲ್ಲರೂ "ಇದು ಪ್ರಳಯಕಾಲವೇ ಸರಿ." ಎಂದು ದೃಢವಾಗಿ ನಂಬಿದರು. ॥೧೧॥

ಆ ಘೋರ ಪುರುಷನು ತನ್ನ ತಲೆಯನ್ನು ಬ್ರಹ್ಮಾಂಡಕ್ಕೆ ಘಟ್ಟಿಸಿ, ಅದನ್ನು ಒಡೆದೇ ಬಿಡುವನೋ ಎಂಬಷ್ಟು ಸೆಡವಿನಿಂದ ಬ್ರಹ್ಮನ ಎದುರು ನಿಂತನು. ಅವನ ದೇಹದಿಂದ ಹೊರ ಹೊರಟ ಸು-ಗಂಧ ತ್ರಿಭುವನಗಳಲ್ಲೂ ವ್ಯಾಪಿಸಿದ್ದಿತು. ॥೧೨॥

ಕೆಂಪು ದಾಸವಾಳದ ಹೂವಿನಂತೆ ಅವನ ದೇಹ ರಕ್ತವರ್ಣವುಳ್ಳುದ್ದಾಗಿದ್ದಿತು. ತನ್ನ ದೇಹದ ಕಾಂತಿಯಿಂದ ದಿಗ್ವಿದಿಕ್ಕುಗಳನ್ನೆಲ್ಲ ಅವನು ಕೆಂಪಾಗಿ ಮಾಡಿದ್ದನು. "ಇದೇನು, ಬಹುಹಿಂದೆ ದಗ್ಧನಾಗಿ ಹೋಗಿದ್ದ ಮದನ ಎರಡನೆಯ ಸಲ ಈಗ ಬ್ರಹ್ಮದೇವನ ಬಾಯಿಯಿಂದ ಹುಟ್ಟಿ ಬಂದನೇ ?" ಎಂದು ಭ್ರಮೆಯುಂಟಾಗುವಷ್ಟು ಅವನು ಸುಂದರಾಕಾರನಾಗಿದ್ದನು. ॥೧೩॥

ಇವನ ಸುಂದರ ರೂಪವನ್ನು ನಿರೀಕ್ಷಿಸಿ ಲೋಕಮನೋಹರಾಕಾರನಾದ ಮದನನು ಸಹ ಲಜ್ಜಿತನಾಗಿ ಹೋದನು. ಇಂತಹ ಪುರುಷನೊಬ್ಬನು ತಾನು ಎಚ್ಚರಗೊಳ್ಳುವ ವೇಳೆಗೆ ತನ್ನೆದುರು ಬಂದು ಭವ್ಯವಾಗಿ ನಿಂದಿರುವುದನ್ನು ಕಮಲಾಸನನು ಕಂಡು ಬಹಳ ಆಶ್ಚರ್ಯಪಟ್ಟನು. ॥೧೪॥

**ಬ್ರಹ್ಮೋವಾಚ :—**

**ಕಸ್ಯ ತ್ವಂ ? ಕುತ ಉತ್ಪನ್ನಃ, ಕಿಂ ಚಿಕೀರ್ಷಸಿ ? ತದ್ವದ ।**

**ಪುರುಷ ಉವಾಚ :—**

**ಅನೇಕಾನಿ ಸುರೇಶ : ತ್ವಂ ಬ್ರಹ್ಮಾಂಡಾನಿ ಸೃಜಸ್ಯಪಿ ||೧೫||**

**ವಿಭ್ರಾಂತ ಇವ ಕಸ್ಮಾನ್ಮಾಂ ಸರ್ವಜ್ಞಃ ಸನ್ ಹಿ ಪೃಚ್ಛಸಿ ? ।**
**ಜೃಂಭಯಾ ತೇ ಸಮುತ್ಪನ್ನಂ ಕಥಂ ಮಾಂ ನಾವಬುಧ್ಯಸೇ ? ||೧೬||**

**ಅನುಗೃಹ್ಣೀಷ್ವ ಪುತ್ರಂ ಮಾಂ ದೇಹಿ ನಾಮ ಯಥಾಮತಿ ।**
**ಸ್ಥಾನಂ ಚ ದೇಹಿ ಮೇ ನಾಥ ! ಭಕ್ಷ್ಯಂ ಕಾರ್ಯಂ ಚ ಮೇ ವದ ||೧೭||**

---

ಬ್ರಹ್ಮ:—

ನೀನು ಯಾರಿಗೆ ಸಂಬಂಧಿಸಿದವನು ? ಎಲ್ಲಿ ಉತ್ಪನ್ನನಾದೆ ? ಯಾವ ಮಹತ್ಕಾರ್ಯವನ್ನು ಮಾಡಬೇಕೆಂದೆಣಿಸಿ ಪ್ರಕೃತ ಇಲ್ಲಿಗೆ ಬಂದಿರುವೆ ? ಅದನ್ನೆಲ್ಲ ನನಗೆ ಹೇಳು.

ಪುರುಷ :—

ಸುರೇಶ್ವರ ! ನೀನು ಅನೇಕ ಬ್ರಹ್ಮಾಂಡಗಳನ್ನು ಸೃಜಿಸಿದವನಲ್ಲವೇ ? ||೧೫||

ಇದೇಕೆ, ನಿನಗೆ ಹೀಗೆ ವಿಭ್ರಮ ಉಂಟಾಗಿದೆ ? ನೀನು ಸರ್ವಜ್ಞನಲ್ಲವೇ ? ಹೀಗಿದ್ದರೂ " ನೀನು ಯಾರು " ಎಂಬಿವೇ ಮೊದಲಾಗಿ ಪ್ರಶ್ನಿಸುತ್ತಿರುವೆಯಲ್ಲ ? ಏನೇ ಇರಲಿ, ನಾನೇ ಹೇಳುವೆನು, ಕೇಳು. ನೀನು ಆಕಳಿಸಿದಾಗ ಅದರಿಂದ ನಾನು ಹುಟ್ಟಿ ಬಂದವನು. ನೀನು ನನ್ನನ್ನು ಗುರುತಿಸದಿರುವುದಕ್ಕೆ ಕಾರಣವೇನೋ ಗೊತ್ತಾಗಲೊಲ್ಲದು. ||೧೬||

ದೇವ ! ನನ್ನನ್ನು ನೀನು ಪುತ್ರನೆಂದು ಅನುಗ್ರಹವಿಟ್ಟು ಸ್ವೀಕರಿಸು. ನಿನಗೆ " ಸರಿ " ಎನಿಸುವ ಯಾವ ಹೆಸರನ್ನು ಬೇಕಾದರೂ ನನಗೆ ಇಡು, ನಾಥ ! ನನಗೆ ಸ್ಥಾನ ಯಾವುದು ? ಯಾವುದನ್ನು ಆಹಾರವನ್ನಾಗಿ ಸ್ವೀಕರಿಸಲಿ ? ನಾನು ಯಾವ ಕೆಲಸವನ್ನು ಮಾಡಲಿ ? ಇದನ್ನೆಲ್ಲ ನನಗೆ ವಿಸ್ತರಿಸಿ ಹೇಳು. ||೧೭||

**ಕ ಉವಾಚ :—**

**ಇತ್ಯಾಕರ್ಣ್ಯ ವಚಸ್ತಸ್ಯ ಪ್ರೋವಾಚ ಚತುರಾನನಃ ।**

**ಬ್ರಹ್ಮಾ :—**

**ರಕ್ತಂ ವಪುರ್ಯತಸ್ತೇಽಸ್ತಿ "ಸಿಂದೂರಾಖ್ಯೋ" ಭವಿಷ್ಯಸಿ ॥೧೮॥**

**ಸಾಮರ್ಥ್ಯಂ ಚ ಮಹತ್ತೇ ಸ್ಯಾತ್ತ್ರೈಲೋಕ್ಯಾಕರ್ಷಣಕ್ಷಮಮ್ ।**
**ಕ್ರೋಧಾದಾಲಿಂಗಸೇ ಯಂ ತ್ವಂ ಶತಧಾ ಸ ಭವಿಷ್ಯತಿ ॥೧೯॥**

**ಪಂಚಭ್ಯೋಽಪಿ ಚ ಭೂತೇಭ್ಯೋ ನ ಭಯಂ ತೇ ಕದಾಚನ ।**
**ದೇವ-ದಾನವ-ಯಕ್ಷೇಭ್ಯೋ ಮಾನುಷೇಭ್ಯೋ ಭಯಂ ನ ತೇ ॥೨೦॥**

**ಇಂದ್ರಾದಿಲೋಕಪಾಲೇಭ್ಯಃ ಕಾಲಾದಪಿ ಭಯಂ ನ ತೇ ।**
**ನ ನಾಗೇಭ್ಯೋ ನ ರಕ್ಷೋಭ್ಯೋ ನಾಹೋರಾತ್ರೇ ಭಯಂ ನ ತೇ ॥೨೧॥**

---

ಬ್ರಹ್ಮಾ:—

ಪುರುಷನಾಡಿದ ಈ ಮಾತುಗಳನ್ನು ಕೇಳಿ ದೇವನು ಅವನನ್ನು ಕುರಿತು ಹೀಗೆಂದನು.

ಚತುರಾನನ :—

ನಿನ್ನ ದೇಹ ಸಿಂದೂರದಂತೆ ಬಹಳ ಕೆಂಪಾಗಿರುವುದರಿಂದ ನೀನು 'ಸಿಂದೂರ' ಎಂಬ ಹೆಸರುಳ್ಳವನಾಗು. ॥೧೮॥

ಭೂಮ್ಯಂತರಿಕ್ಷ ಪಾತಾಳ ಲೋಕಗಳನ್ನೂ ಆಕರ್ಷಿಸುವಂತಹ ಅಸಾಧಾರಣವಾದ ಸಾಮರ್ಥ್ಯ ನಿನಗೆ ಉಂಟಾಗುತ್ತದೆ. ನೀನು ಕೋಪಗೊಂಡು ಯಾರನ್ನಾದರೂ ಆಲಿಂಗಿಸಿದೆಯಾದರೆ, ಅಂಥವನ ಶರೀರವು ನೂರಾರು ಚೂರುಗಳಾಗಿ ಸೀಳಿ ಹೋಗುವುದು. ॥೧೯॥

ಪಂಚಭೂತಗಳೆನಿಸುವ ಪೃಥಿವ್ಯಪ್ತೇಜೋವಾಯ್ವಾಕಾಶಗಳಿಂದ ನಿನಗೆ ಎಂದೆಂದಿಗೂ ಭೀತಿಯುಂಟಾಗುವುದಿಲ್ಲ. ತತ್ಕಾರ್ಯಗಳಾದ ದೇವತೆಗಳು, ದಾನವರು, ಯಕ್ಷರು, ಮನುಷ್ಯರು ಮುಂತಾದವರಾರಿಗೂ ನೀನು ಸ್ವಲ್ಪ ಕೂಡ ಹೆದರಬೇಕಾಗಿರುವುದಿಲ್ಲ. ॥೨೦॥

ಇಂದ್ರಾದ್ಯಷ್ಟದಿಕ್ಪಾಲಕರಿಂದಾಗಲಿ ಹೆಚ್ಚೇನು, ಎಲ್ಲ ಪ್ರಾಣಿವರ್ಗವನ್ನೂ ಅಂತಗೊಳಿಸುವ ಅಂತಕನಿಂದಾಗಲಿ ನೀನು ಭಯಪಡಬೇಕಾಗಿಲ್ಲ. ವಿಷಜಂತು

**ಸಜೀವಾನ್ನ ಚ ನಿರ್ಜೀವಾದ್ಭಯಂ ಸಿಂದೂರ! ತೇ ಭವೇತ್ ।**
**ವಸ ಯತ್ರ ಮನಸ್ತೇ ಸ್ಯಾತ್ಸ್ಥಾತುಂ ತ್ರಿ-ಭುವನೇಷ್ವಪಿ ॥೨೨॥**

**ಕ ಉವಾಚ :—**

**ತತಸ್ಸ ವರದಾನೇನ ತುತೋಷ ಚತುರಾಸ್ಯಜಃ ।**
**ಚಕ್ರಂದ ಕಂಪಯನ್ ಶಬ್ದೈಃ ತ್ರೈಲೋಕ್ಯಂ ಸ-ಚರಾಚರಮ್ ॥೨೩॥**

**ಚುಕ್ಷುಭುಸ್ಸಾಗರಾಸ್ಸರ್ವೇ ಲೋಕಪಾಲಾಶ್ಚ ದುದ್ರುವುಃ**
**ಉವಾಚ ಸ ತದಾ ದೇವಂ ನಮಸ್ಕೃತ್ಯ ಪಿತಾಮಹಮ್ ॥೨೪॥**

ಗಳಾದ ಸರ್ಪಾದಿಗಳು ನಿನ್ನ ಗೊಡವೆಗೆ ಬರಲಾರವು. ರಾಕ್ಷಸರು ನಿನ್ನನ್ನು ಕಂಡರೆ ಅಂಜಿ ನಡುಗುವಂತಾಗುವರು. ಅಹೋರಾತ್ರಿಗಳು ಕಳೆದಂತೆಲ್ಲ ಆಯುಷ್ಯ ಮುಗಿಯುತ್ತ ಬಂದೀತೆಂಬ ಭೀತಿ ಸಹ ನಿನಗೆ ಇರುವುದಿಲ್ಲ. ॥೨೧॥

ಸಿಂದೂರ! ಒಟ್ಟಿನ ಮೇಲೆ ಹೇಳುವುದಾದರೆ, ಬದುಕಿರುವ ಪ್ರಾಣಿಯಿಂದಾಗಲಿ, ಅಥವಾ ನಿರ್ಜೀವ (ಜೀವಾಭಿವ್ಯಕ್ತಿ ಇಲ್ಲದ ಕಲ್ಲು, ಲೋಹ ಮುಂತಾದ)ವಸ್ತುಗಳಿಂದಾಗಲಿ ನಿನಗೆ ಭಯ ಬರುವುದಿಲ್ಲ. ವಾಸಕ್ಕಾಗಿ ಯಾವುದಾದರೂ ಒಂದು ಸ್ಥಾನವನ್ನು ಸೂಚಿಸಬೇಕೆಂದು ನೀನು ಪ್ರಾರ್ಥಿಸಿದೆಯಲ್ಲವೇ? ಲೋಕೈಕವೀರನಾದ ನಿನಗೆ ಸ್ಥಳಕ್ಕೆ ಕೊರತೆಯೇ? ಮೂರು ಲೋಕಗಳ ಪೈಕಿ ಎಲ್ಲಿ ವಾಸಮಾಡಬೇಕೆಂದು ನಿನಗಿಚ್ಛೆ ಉಂಟಾಗುವುದೋ, ಅಲ್ಲಿ ಯಥೇಷ್ಟವಾಗಿ ವಾಸಿಸು. ॥೨೨॥

ಬ್ರಹ್ಮಾ:—

ಈ ರೀತಿ ಚತುರಾನನನು ಅಮೋಘ ವರಗಳನ್ನನುಗ್ರಹಿಸಿದ್ದರಿಂದ ಬ್ರಹ್ಮಜ್ಯಂಜನಾದ ಸಿಂದೂರನು ಬಹಳ ಸಂತುಷ್ಟನಾದನು. ಹರ್ಷಾತಿರೇಕ ಉಂಟಾಗಲು, ಅವನು ಕರ್ಕಶ ಸ್ವರದಿಂದ ಗರ್ಜಿಸಿದನು. ಅವನ ಆಕ್ರಂದನ ಧ್ವನಿಗೆ ಚರಾಚರ ವಸ್ತುಗಳನ್ನೊಳಗೊಂಡ ಮೂರು ಲೋಕಗಳೂ ನಡುಗಿ ಹೋದವು. ॥೨೩॥

ಸಮುದ್ರಗಳು ಕ್ಷೋಭೆಗೊಂಡು ಮೇರೆಯನ್ನು ಮೀರಿ ಉಕ್ಕಿದವು. ಲೋಕಪಾಲಕರು ಹೇಳದೇ ಕೇಳದೇ ದಿಕ್ಕು ಕೆಟ್ಟು ಓಡಿ ಹೋದರು. ಆಗ ಸಿಂದೂರನು ಪಿತಾಮಹನಿಗೆ ನಮಸ್ಕಾರವನ್ನು ಮಾಡಿ, ದೇವನನ್ನು ಕುರಿತು ಹೀಗೆ ನುಡಿದನು. ॥೨೪॥

**ಸಿಂದೂರ ಉವಾಚ :—**

**ತವ ವಾಕ್ಯಾಮೃತೇನಾಹಂ ಪ್ರೀತೋ ಬ್ರಹ್ಮಾಂಡನಾಯಕ ! ।**
**ತ್ವಮೇವ ವಿಶ್ವಂ ಸೃಜಸಿ, ಪಾಸಿ, ಹಂಸಿ ಗುಣೈಸ್ತ್ರಿಧಾ ॥೨೫॥**

**ತ್ವಯಿ ಸುಪ್ತೇ ಜಗತ್ಸುಪ್ತಮಂಧಕಾರಶ್ಚ ಜಾಯತೇ ।**
**ಮಹದ್ಭಾಗ್ಯಂ ಮಮ ವಿಭೋ ! ತಪೋದಾನವ್ರತೈರ್ವಿನಾ ॥೨೬॥**

**ಪುತ್ರಸ್ನೇಹಾತ್ಪ್ರಸನ್ನಸ್ತ್ವಂ ನಾನ್ಯಥಾ ತೇ ಪ್ರಸನ್ನತಾ ।**
**ಕಲ್ಪಕೋಟಿತಪೋಭಿಸ್ತ್ವಂ ಪ್ರಸನ್ನೋ ಜಾಯಸೇ ವಿಭೋ ! ॥೨೭॥**

---

ಸಿಂದೂರ :—

ಬ್ರಹ್ಮಾಂಡನಾಯಕ ! ಅಮೃತಧಾರೆಯಂತಿರುವ ನಿನ್ನ ಈ ಮಾತುಗಳಿಂದ ನಾನು ಬಹಳ ಸಂತುಷ್ಟನಾಗಿದ್ದೇನೆ. ನೀನು ಸತ್ತ್ವ ರಜಸ್ತಮೋಗುಣಗಳನ್ನು ಅಧೀನಕ್ಕೆ ತೆಗೆದುಕೊಂಡು ಬ್ರಹ್ಮಾ, ಮಹೇಶ್ವರ ನಾರಾಯಣರಾಗಿ ರೂಪಗೊಂಡು ಈ ವಿಶ್ವವನ್ನು ಸೃಜಿಸುವೆ, ಪಾಲಿಸುವೆ ಹಾಗೂ ಕಾಲ ಒದಗಿದ ಕೂಡಲೇ ಸಂಹರಿಸಿಬಿಡುವೆ. ॥೨೫॥

ನಿನ್ನ ಮಹಿಮೆಯಿಂದಲೇ ಚರಾಚರಾತ್ಮಕವಾದ ಈ ಜಗವೆಲ್ಲ ಸಚೇತನವಾಗಿವೆ. ನಿನ್ನ ರಾತ್ರಿಯ ಕಾಲದಲ್ಲಿ ನೀನು ನಿದ್ರಿಸಿದೆ ಎಂದರೆ, ಎಲ್ಲವೂ ಲಯಹೊಂದಿದಂತೆಯೇ ಸರಿ. ಎಲ್ಲೆಲ್ಲೂ ಅಂಧಕಾರವು ಕವಿದು ಬಿಡುವುದು. ವಿಭೋ ! ನನ್ನಂತಹ ಭಾಗ್ಯಶಾಲಿ ನಾನೊಬ್ಬನೇ ಎಂಬ ನಂಬುಗೆ ನನಗೆ ಉಂಟಾಗಿದೆ. ನೀನು ಪ್ರಕೃತ ನನಗೆ ದಯೆ ಪಾಲಿಸಿರುವಂತಹ ವರಗಳನ್ನು ಇತರರಾರಾದರೂ ಪಡೆಯಬೇಕಾದರೆ, ಎಷ್ಟು ಜನ್ಮಗಳ ಪುಣ್ಯವು ವ್ಯಯವಾಗಬೇಕಿತ್ತೋ, ಅದನ್ನು ನಾನರಿಯೆ. ಏನೇ ಇರಲಿ, ಯಾವ ವಿಧವಾದ ತಪೋನುಷ್ಠಾನಗಳನ್ನೂ ನಾನು ಮಾಡಿದವನಲ್ಲ. ಹೀಗಿದ್ದರೂ ನನ್ನ ಮೇಲೆ ನಿನ್ನ ಕರುಣೆ ಪೂರ್ಣವಾಗಿದ್ದುದರಿಂದ ಇಂತಹ ಅತ್ಯಮೋಘ ವರಗಳು ನನಗೆ ದೊರೆತಿವೆ. ॥೨೬॥

ನಾನು ನಿನಗೆ ಪುತ್ರನಾಗಿ ಬಂದುದರಿಂದ ನೀನು ನನ್ನ ವಿಷಯದಲ್ಲಿ ಇಷ್ಟರ ಮಟ್ಟಿಗೆ ಪ್ರಸನ್ನತೆಯನ್ನು ತೋರಿದೆ. ಇಲ್ಲವಾಗಿದ್ದರೆ, ನಿನ್ನ ಪ್ರಸನ್ನತೆ ಯಾರಿಗೆ ತಾನೆ ಸಿಕ್ಕೀತು? ವಿಭೋ ! ಕೋಟ್ಯವಧಿ ಕಲ್ಪಗಳ ವರೆಗೆ ತಪಸ್ಸನ್ನು ಮಾಡಿದಂಥವರಿಗೆ ಮಾತ್ರ ನೀನು ಪ್ರಸನ್ನನಾಗುವೆ. ॥೨೭॥

**ಕ ಉವಾಚ :—**

**ಇತ್ಯುಕ್ತ್ವಾ ತಂ ಪ್ರಣಮ್ಯಾಸೌ ಕೃತ್ವಾಪಿ ಚ ಪ್ರದಕ್ಷಿಣಾಮ್ ।**
**ಜಗಾಮ ಮನಸಾ ಭೂಮಿಂ ಮಾರ್ಗೇ ತರ್ಕಮಥಾಕರೋತ್ ॥೨೮॥**

**ಸಿಂದೂರ ಉವಾಚ :—**

**ನ ಮೇ ತಪೋ ವಾ ಧ್ಯಾನಂ ವಾ ಜಪಃ ಸ್ವಾಧ್ಯಾಯ ಏವ ಚ ।**
**ಕಥಂ ತೇನ ವರಾ ದತ್ತಾಃ ಸತ್ಯಾ, ಉತ ವೃಥಾನು ತೇ ? ॥೨೯॥**

**ಗತ್ವಾ ದ್ರಕ್ಷ್ಯಾಮಿ ಪಿತರ—**

**ಕ ಉವಾಚ :—**

**ಮಿತ್ಯುಕ್ತ್ವಾಗಾತ್ಪಿತಾಮಹಮ್ ।**
**ತುಲಯಿತ್ವಾ ತು ದೋರ್ದಂಡೌ ಜಗರ್ಜ ಸ ಭಯಾನಕಃ ॥೩೦॥**

ಬ್ರ :—

ಹೀಗೆ ನುಡಿದು ಚತುರಾನನನಿಗೆ ವಂದಿಸಿ ಪ್ರದಕ್ಷಿಣೆ ಬಂದು, ಭೂಲೋಕಕ್ಕೆ ಹೋಗಿ ನೋಡೋಣವೆಂದು ಹೊರಟು ಬಿಟ್ಟನು. ದಾರಿಯಲ್ಲಿ ಬರುವಾಗ ಅವನ ಮನಸ್ಸಿಗೆ ಏನೋ ಒಂದು ಬಗೆಯಿಂದ ಸಂಶಯ ಉಂಟಾಗಲು, "ಇದೇನಿರಬಹುದೆ"ಂದು ಮನಸ್ಸಿನಲ್ಲೇ ಯೋಚಿಸಿದನು. ॥೨೮॥

ಸಿಂದೂರ :—

ಇದೇನೀ ಸೋಜಿಗ? ನಾನು ಈಗಿನ್ನೂ ಜನಿಸಿ ಬಂದಿದ್ದೇನೆ. ನಾನು ಯಾವ ವಿಧವಾದ ತಪಸ್ಸನ್ನೂ ಆಚರಿಸಿಲ್ಲ. ಯಾವ ದೈವವನ್ನೂ ಧ್ಯಾನಿಸಿಲ್ಲ. ಯಾವ ಮಂತ್ರವನ್ನೂ ಜಪಿಸಿಲ್ಲ. ವೇದಾಧ್ಯಯನದ ಸಂಗತಿಯೇ ನನಗೆ ತಿಳಿಯದು. ಹೀಗಿದ್ದರೂ ಬ್ರಹ್ಮದೇವನು ನನಗೆ ಇಂತಹ ವರಗಳನ್ನು ಕೊಟ್ಟಿರುವನಲ್ಲ ? ಇವು ನಿಜವಾದ ವರಗಳೇ ? ಅಥವಾ ನನ್ನನ್ನು ಮೋಸಮಾಡಲಿಕ್ಕಾಗಿ ಸುಮ್ಮನೆ ಹೀಗೆ ನುಡಿದನೋ ? ಯಾರಿಗೆ ಗೊತ್ತು ? ॥೨೯॥

ಆಗಲಿ. ತಂದೆಯ ಬಳಿಗೇ ಹೋಗಿ, ಇದರ ಸತ್ಯಾಂಶವನ್ನು ತಿಳಿಯುವೆನು.

ಬ್ರಹ್ಮ:—

ಎಂದು ನುಡಿದು ನೆಟ್ಟಗೆ ಮತ್ತೆ ಪಿತಾಮಹನ ಬಳಿಗೆ ಬಂದನು. ಬಂದವನು ತನ್ನ ಸಂಶಯವನ್ನು ಕಳೆದುಕೊಳ್ಳುವುದಕ್ಕಾಗಿ ಅವನನ್ನು ಸರಳ ರೀತಿಯಿಂದ ಪ್ರಶ್ನಿಸಬಹುದಾಗಿತ್ತು. ಆದರೆ, ದುರಾತ್ಮನಾದ ಸಿಂದೂರನು ಅವನನ್ನು ಪ್ರಶ್ನಿಸುವ ಗೋಜಿಗೆ

ತಮೇವಾಲಿಂಗಿತುಂ ಚೈಚ್ಛತ್ತತ ಊಚೇ ಪಿತಾಮಹಃ ।
ಬ್ರಹ್ಮಾ :—
ಪುತ್ರಸ್ನೇಹಾನ್ಮಯಾ ದತ್ತಾ ವರಾ ಅನ್ಯಸ್ಯ ದುರ್ಲಭಾಃ ॥೩೧॥
ದುಷ್ಟಭಾವಾನ್ಮಮೈವ ತ್ವಮುಪಕರ್ತುಮಿಹಾಗತಃ ।
ನಾಜ್ಞಾಸಿಷಮಹಂ ದುಷ್ಟಭಾವಂ ತೇ ಖಲನಾಯಕ ! ॥೩೨॥
ಭುಜಗಸ್ಯ ಪಯೋ ದತ್ತಂ ವಿಷಮೇವ ಹಿ ಜಾಯತೇ ।
ದುಷ್ಟಭಾವಂ ಗತೋ ಯಸ್ಮಾತ್ತಸ್ಮಾದ್ದೈತ್ಯೋ ಭವಿಷ್ಯಸಿ ॥೩೩॥
ಪರಮಾತ್ಮಾವತೀರ್ಯಾಶು ಹನಿಷ್ಯತಿ ಗಜಾನನಃ ।
ತವಾಂತಂ ಸುರಭಿಜ್ಞಾತ್ವಾ ಸ್ವಾಂಗೇ ತನ್ಮರ್ದಯಿಷ್ಯತಿ ॥೩೪॥

ಹೋಗದೆ, ತನ್ನ ಭುಜದಂಡಗಳನ್ನು ವೇಗಗತಿಯಿಂದ ಬೀಸುತ್ತ ಚತುರ್ವದನನನ್ನು ಅಪ್ಪಿಕೊಳ್ಳಲಿಕ್ಕೆ ಮುಂದುವರೆದು ಬಂದು ಗಟ್ಟಿಯಾಗೊಮ್ಮೆ ಗರ್ಜಿಸಿ ಎಲ್ಲರನ್ನೂ ಭಯಪಡಿಸಿದನು. ॥೩೦॥

ಸಿಂದೂರನು ಮತ್ತೆ ತನ್ನ ಬಳಿಗೆ ಬಂದುದೇಕೆ? ಎಂಬುದನ್ನು ತಿಳಿಯಲು ಪಿತಾಮಹನು ಅವನ ಕಡೆ ತಿರುಗಿ ನೋಡುವಷ್ಟರಲ್ಲಿ ಅವನು ತನ್ನನ್ನೇ ಆಲಿಂಗಿಸಲು ಬರುತ್ತಿರುವ ಸನ್ನಿವೇಶ ತಿಳಿಯಿತು. ಆಗ ಪಿತಾಮಹನು ಸಿಂದೂರನನ್ನು ಕುರಿತು ಹೀಗೆಂದು ಮಾತನಾಡಿದನು.

ಚತುರಾನನ :—

ಎಲವೋ, ಸಿಂದೂರ! ನೀನು ನನಗೆ ಮಗನಾಗಿ ಬಂದೆಯಲ್ಲ ಎಂಬ ಆ ವ್ಯಾಮೋಹಕ್ಕೆ ನಾನು ಒಳಗಾಗಿ, ಯಾರಾರಿಗೂ ದೊರೆಯಲಾರದಂತಹ ಅಮೋಘ ವರಗಳನ್ನೆಲ್ಲ ನಿನಗೆ ಕೊಟ್ಟು ಅನುಗ್ರಹಿಸಿದೆನು. ॥೩೧॥

ಆದರೆ, ನೀನು ಮಹಾ ದುಷ್ಟ. ದುರುಳತನದಿಂದ ನನಗೇ ಅಪಕಾರವನ್ನು ಮಾಡುವುದಕ್ಕಾಗಿ ಈಗ ಇಲ್ಲಿಗೆ ಬಂದಿರುವೆಯಲ್ಲವೇ? ಖಲನಾಯಕ! ವಿಷಮಯವಾದ ನಿನ್ನ ಹೃದಯವನ್ನು ನಾನು ಮೊದಲೇ ಅರಿಯಲು ಪ್ರಯತ್ನಿಸಲಿಲ್ಲ. ಹೀಗಾಗಿ ಮೋಸಹೋದೆನು. ॥೩೨॥

ವಿಷಜಂತುವಾದ ಹಾವಿಗೆ ಅಮೃತೋಪಮ ಹಾಲನ್ನು ಕುಡಿಸಿದರೂ, ಅದು ಹಾಲಾಹಲವನ್ನಲ್ಲವೇ ಸೃಜಿಸುವುದು? ನೀನು ಅಕಾರಣವಾಗಿ ನನ್ನಲ್ಲಿ ದುಷ್ಟ ಭಾವನೆಯುಳ್ಳವನಾಗಿರುವೆಯಾದಕಾರಣ ದೈತ್ಯನಾಗಿ ಜೀವಿಸು. ॥೩೩॥

ಪರಮಾತ್ಮನಾದ ಮಹಾಗಣಪತಿಯು ಭೂಲೋಕದಲ್ಲಿ ಅವತರಿಸಿ, ನಿನ್ನನ್ನು

**ಸಿಂದೂರಾರುಣದೇಹಶ್ಚ ಸಿಂದೂರಪ್ರಿಯ ಏವ ಚ ।**
**ಭವಿಷ್ಯತಿ ಸ ದೇವೋಽಪಿ ಸಿಂದೂರವಧ ಏವ ಚ ॥೩೫॥**
**ಕ ಉವಾಚ :—**
**ಏವಮುಕ್ತ್ವಾ ಪಪಾಲಾಶು ಭಯೇನ ಕಮಲಾಸನಃ ।**
**ಮನೋ ವಾಯುಮಹಾವೇಗೋ ನಿಃಶ್ವಾಸ-ಶ್ವಾಸ ಸಂಕುಲಃ ॥೩೬॥**
**ದೈತ್ಯೋಽಪಿ ಪೃಷ್ಠತೋ ಯಾತಿ ಶಾಪಮಾಕರ್ಣ್ಯ ಮನ್ಯುಮಾನ್ ।**
**ಸ್ವೇದೇನಾರ್ದ್ರತನುರ್ದುಷ್ಟೋ ದೃಷ್ಟ್ವಾ ದೃಷ್ಟ್ವಾ ಪುರೋ ವ್ರಜನ್ ॥೩೭॥**
**" ಧರಿಷ್ಯಾಮಿ ಪದೇಽನ್ಯಸ್ಮಿನ್ನಿ"ತಿ ದೈತ್ಯೋಽಭ್ಯಧಾವತ ।**

---

ಆದಷ್ಟು ಬೇಗನೆ ಕೊಲ್ಲುವನು. ನಿನ್ನ ಅಂತವನ್ನು ಅರಿತು ಭಗವಂತನು ನಿನ್ನ ದೇಹವನ್ನು ತನ್ನ ದೇಹದಲ್ಲಿ ಸೇರಿಸಿ ಹಿಸುಕಿಬಿಡುವನು. ॥೩೪॥

ನಿನ್ನ ದೇಹವನ್ನು ಮರ್ದಿಸಿದ್ದರಿಂದ ದೇವನ ದೇಹವೆಲ್ಲ ಕೆಂಪಾಗುವುದು. ದೇವನು ಸ್ವಯಂ ಸಿಂದೂರಪ್ರಿಯನು. ಸಿಂದೂರನೆಂದು ಪ್ರಖ್ಯಾತನಾದ ನಿನ್ನನ್ನು ವಧಿಸತಕ್ಕವನು, ಆದುದರಿಂದ ದೇವನಿಗೆ " ಸಿಂದೂರ ಗಣಪತಿ " ಎಂದೇ ಹೆಸರು ಉಂಟಾಗುವುದು ॥೩೫॥

ಬ್ರಹ್ಮಾ:—

ಹೀಗೆ ಶಾಪವನ್ನು ಉಸುರಿ, ಒಂದು ಕ್ಷಣವೂ ಅವನ ಬಳಿ ನಿಲ್ಲಲಾರದೇ ಕಮಲಾಸನನು ಭಯಾತುರನಾಗಿ ಓಡಿ ನಡೆದನು. ಅವನ ಓಟದ ವೇಗ ಮನಸ್ಸು, ವಾಯುಗಳ ಶೀಘ್ರ ಗತಿಯನ್ನೂ ಮೀರಿಸಿದ್ದಿತು. ಓಡುವ ಆಯಾಸದಿಂದ ಚತುರಾನನನ ಶ್ವಾಸಗತಿಯು ಅಳತೆ ಮೀರಿ ಚಲಿಸಲಾರಂಭಿಸಿತು. ಇದರಿಂದ ಕಮಲಾಸನನಿಗೆ ದಮ್ಮು, ಕೆಮ್ಮುಗಳೂ ಬಂದವು. ॥೩೬॥

" ತಾನೇನೋ ಹಂಸವಾಹನನ ಮಾತುಗಳನ್ನು ಪರೀಕ್ಷಿಸೋಣವೆಂದು ಬಂದರೆ, ಇವನು ಸುಮ್ಮನಿರದೇ ತನಗೆ ಕಟುತರವಾಗಿ ಶಾಪವನ್ನು ಕೊಟ್ಟನಲ್ಲ " ಎಂಬುದು ರಾಕ್ಷಸನ ಮನಸ್ಸಿನಲ್ಲಿ ಕಟೆಯುತೊಡಗಿತಾದ್ದರಿಂದ ಅವನ ಮೇಲೆ ಬಹಳ ಮಟ್ಟಿಗೆ ಕೋಪ, ಬಂದಿತು. ವೇಗವಾಗಿ ಓಡುತ್ತಿದ್ದ ಬ್ರಹ್ಮನನ್ನು ಬೆನ್ನಟ್ಟಿ ಓಡಿದನು. ಅವನ ದೇಹದಿಂದ ಧಾರಾಕಾರವಾಗಿ ಬೆವರು ಸುರಿಯಿತು. ಇದರಿಂದ ಅವನ ದೇಹ ಒದ್ದೆ ಮುದ್ದೆಯಾಯಿತು. ಎಷ್ಟು ದೂರ ಓಡಿದನೆಂದು ಕಮಲಾಸನನನ್ನು ಒಮ್ಮೆ ನೋಡುವುದು, ಮತ್ತೆ ಬೆನ್ನಟ್ಟಿ ಮುಂದೆ ಓಡುವುದು ಹೀಗೆ ಮಾಡತೊಡಗಿದನು. ॥೩೭॥

" ಇದೋ, ಮುಂದಿನ ಹೆಜ್ಜೆಯಲ್ಲೇ ಹಿರಣ್ಯಗರ್ಭನನ್ನು ಹಿಡಿದು ಬಿಡುವೆನು " ಎಂದು ಉಸುರುತ್ತ ದೈತ್ಯನು ಮತ್ತಷ್ಟು ವೇಗದಿಂದ ಓಡಿದನು. ಪಿತಾಮಹನ ಸ್ಥಿತಿ

**ವೈಕುಂಠಮಗಮದ್ಬ್ರಹ್ಮಾ ಕಂಪಮಾನಸ್ತ್ವರಾನ್ವಿತಃ ||೩೮||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಸಿಂದೂರೋತ್ಪತ್ತಿಃ ತದ್ದೌಷ್ಟ್ಯಾದಿವರ್ಣನಂ' ನಾಮ ಸಪ್ತವಿಂಶತ್ಯುತ್ತರ ಶತತಮೋಽಧ್ಯಾಯಃ ಸಮಾಪ್ತಃ**

ಬಹಳ ಕಷ್ಟಕ್ಕಿಟ್ಟುಕೊಂಡಿತು. ಅವನ ದೇಹ ನಡುಗುತ್ತಲಿದ್ದಿತು. ಬಹಳ ಅವಸರದಿಂದ ಬ್ರಹ್ಮದೇವನು ವೈಕುಂಠ ಲೋಕವನ್ನು ಹೊಕ್ಕುಬಿಟ್ಟನು. ||೩೮||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ " ಸಿಂದೂರನ ಉತ್ಪತ್ತಿ, ಮತ್ತು ಅವನ ದೌಷ್ಟ್ಯ ಪ್ರದರ್ಶನ " ಎಂಬಲ್ಲಿಗೆ ನೂರ ಇಪ್ಪತ್ತೇಳನೆಯ ಅಧ್ಯಾಯಾನುವಾದವು ಮುಗಿದುದು.

ಶ್ರೀ ಗಣೇಶಾಯ ನಮಃ ।

# ಅಷ್ಟಾವಿಂಶತ್ಯುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ಸ ದದರ್ಶ ಸಮಾಸೀನಂ ನಾರಾಯಣಮನಾಮಯಮ್ ।**
**ರತ್ನ-ಕಾಂಚನವಿಲಸತ್ಪದ್ಮಾಸನಗತಂ ವಿಭುಮ್ ॥೧॥**

**ಸೋಽಪಿ ತಂ ಪುರತೋ ವೀಕ್ಷ್ಯ ವಿವರ್ಣವದನಂ ತದಾ ।**
**ತತ್ಪೃಷ್ಠತೋ ಮಹಾದೈತ್ಯಂ ಗಗನಸ್ಪರ್ಧಿಮಸ್ತಕಮ್ ॥೨॥**
**ಉದತಿಷ್ಠತ ವೇಗೇನ ದಯಾಲುಃ ಕಮಲಾಪತಿಃ ।**
**ಧೃತ್ವಾ ಕರಂ ಸಮಾಲಿಂಗ್ಯ ಸ್ವಾಸನೇ ಕಂ ನ್ಯವೇಶಯತ್ ॥೩॥**

---

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೨೮ ನೆಯ ಅಧ್ಯಾಯ

ಬ್ರಹ್ಮ:—

ವತ್ಸ! ವೈಕುಂಠವನ್ನು ಪ್ರವೇಶಿಸಿದ ಕಮಲಾಸನನು ನಾನಾ ರತ್ನಖಚಿತವಾದ ಸ್ವರ್ಣ ಸಿಂಹಾಸನದಲ್ಲಿ ಪದ್ಮಾಸನದಿಂದ ಕುಳಿತು ವಿರಾಜಮಾನನಾಗಿದ್ದ, ಸಕಲ ಕ್ಲೇಶಗಳಿಗೂ ದೂರನಾದ ವಿಭು ; ಶ್ರೀಮನ್ನಾರಾಯಣನನ್ನು ಸಂದರ್ಶಿಸಿದನು. ॥೧॥

ಪರಮಾತ್ಮನು ತನ್ನ ಎದುರಿಗೆ ವಿವರ್ಣವದನನಾಗಿ ಓಡೋಡಿ ಬರುತ್ತಿರುವ ಚತುರಾನನನನ್ನೂ, ಅವನನ್ನು ಹಿಂದುಗಡೆಯಿಂದ ಅಟ್ಟಿಸಿಕೊಂಡು ಧಾವಿಸಿ ಬರುತ್ತಿದ್ದ, ಅಂತರಿಕ್ಷವನ್ನೂ ದಾಟಿ ನಿಂತಿರುವ ತಲೆಯುಳ್ಳ ಎಂದರೆ ಅಷ್ಟು ದೀರ್ಘಾಕಾರನಾದ ಮಹಾದೈತ್ಯನನ್ನೂ ಕಂಡನು ॥೨॥

ಪರಮ ದಯಾಳುವಾದ ಕಮಲಾಪತಿ "ಕಮಲಾಸನನಿಗಾವುದೋ ಪ್ರಬಲವಾದ ವಿಪತ್ತು ಬಂದಿದೆ" ಎಂದು ಊಹಿಸಿ, ತನ್ನ ಆಸನದಿಂದ ಥಟ್ಟನೆ ಮೇಲಕ್ಕೆದ್ದನು. ಮತ್ತು ತನ್ನ ಸಮೀಪಕ್ಕೆ ಬಂದು ನಿಂತ ಪರಮೇಷ್ಠಿಯನ್ನು ಕೈಹಿಡಿದು ಪ್ರೀತಿಯಿಂದ ಆಲಿಂಗಿಸಿಕೊಂಡು ಕರೆದೊಯ್ದು ತನ್ನ ಸಿಂಹಾಸನದ ಮೇಲೆ ಕುಳ್ಳಿರಿಸಿದನು. ॥೩॥

ಸಂಪೂಜ್ಯ ಪರಿಪಪ್ರಚ್ಛ
ದೇವ ಉವಾಚ :—
ಕಿಂ ತೇ ಕಾರ್ಯಮುಪಸ್ಥಿತಮ್ ?
ಕಥಂ ಚ ಮ್ಲಾನವದನಃ ಶ್ವಾಸವಾಂಶ್ಚ ಹತಪ್ರಭಃ ॥೪॥
ಮಮ ಖೇದಸ್ಸಮುತ್ಪನ್ನೋ ದೃಷ್ಟ್ವೈವ ತ್ವಾಂ ಪಿತಾಮಹ ! ।
ಕ ಉವಾಚ :—
ಇತಿ ತದ್ವಚನಂ ಶ್ರುತ್ವಾ ಜಗಾದ ಕಮಲಾಸನಃ ॥೫॥
ಬ್ರಹ್ಮಾ :—
ಪ್ರಬೋಧಿತಃ ಶಿವೇನಾಹಂ ಪ್ರತಿಸುಪ್ತೋ ನಿಜಾಲಯೇ ।
ತತೋ ಮೇ ಜೃಂಭತೋ ವಕ್ತ್ರಾನ್ನಿರ್ಗತಃ ಪುರುಷೋ ಮಹಾನ್ ॥೬॥

ಗೃಹಸ್ಥ ಧರ್ಮಕ್ಕನುಸರಿಸಿ ಅವನನ್ನು ಅರ್ಘ್ಯ-ಪಾದ್ಯಾದಿಗಳಿಂದ ಅರ್ಚಿಸಿದ ಬಳಿಕ ಹೀಗೆಂದು ಪ್ರಶ್ನಿಸಿದನು.

ಶ್ರೀ ಹರಿ :—

ಪರಮೇಷ್ಠಿ! ಈಗ ಮತ್ತಾವ ಮಹತ್ಕಾರ್ಯ ಒದಗಿ ಬಂದಿದೆ? ನಿನ್ನ ಮುಖವೆಲ್ಲ ಏಕೆ ಹೀಗೆ ಬಾಡಿ ಹೋಗಿದೆ. ಮುಖದ ಮೇಲೆ ಕಾಂತಿಯೇ ಇಲ್ಲವಲ್ಲ? ಮೇಲುಸಿರನ್ನು ಹೀಗೇಕೆ ಬಿಡುತ್ತಿರುವೆ ? ॥೪॥

ಲೋಕಪಿತಾಮಹ ! ಈ ದುರವಸ್ಥೆಯ ಸ್ಥಿತಿಯಲ್ಲಿರುವ ನಿನ್ನನ್ನು ನೋಡಿ ನನಗೆ ಬಹಳ ಖೇದ ಉಂಟಾಗಿದೆ.

ಬ್ರಹ್ಮಾ :—

ದೇವನಾಡಿದ ವಾತ್ಸಲ್ಯಪರಿಪೂರ್ಣವಾದ ಆ ಮಾತುಗಳನ್ನು ಕೇಳಿ ಚತುರಾನನನಿಗೆ ಬಹಳ ಮಟ್ಟಿಗೆ ನೆಮ್ಮದಿ ಎನಿಸಿತು. ಆಗ ದೇವನೆದುರು ನಡೆದ ವೃತ್ತಾಂತವನ್ನೆಲ್ಲ ಹೇಳತೊಡಗಿದನು. ॥೫॥

ಚತುರಾನನ :—

ದೇವ ! ನನ್ನ ಪಾಡಿಗೆ ನಾನು ನನ್ನ ಮನೆಯಲ್ಲಿ ಮಲಗಿ ನಿದ್ರಿಸುತ್ತಲಿದ್ದೆ. ಪರಶಿವನು ಅಲ್ಲಿಗೆ ಅಕಸ್ಮಾತ್ತಾಗಿ ಬಂದು ನನ್ನನ್ನು ಎಚ್ಚರಗೊಳಿಸಿದನು. ನಿದ್ರೆಯ ಜಾಡ್ಯ ಇನ್ನೂ ಹೋಗಿರಲಿಲ್ಲವಾದ್ದರಿಂದ ಒಮ್ಮೆ ಆಕಳಿಸಿದೆ. ಒಡನೆಯೇ ಒಬ್ಬ ಮಹಾಪುರುಷನು ನನ್ನ ಬಾಯಿಯಿಂದ ಹುಟ್ಟಿ ಈಚೆಗೆ ಬಂದನು. ॥೬॥

**ಪತಂತಿ ಭೂತಲೇ ಭಾನಿ ಯನ್ಮಸ್ತಕವಿಘಾತತಃ ।**
**ತಸ್ಯ ಸೌರಭಗಂಧೇನ ಸರ್ವೇ ದೇವಾ ವಿಸಿಸ್ಮಿರೇ ॥೭॥**
**ಯಸ್ಯ ಲಾವಣ್ಯಮಾಕ್ಷ್ಯೈವ ಲಜ್ಜಿತೋ ಮದನೋಽಭವತ್ ।**
**ಯಸ್ಯ ಕ್ರಂದಿತಶಬ್ದೇನ ಚಕಂಪೇ ಭುವನತ್ರಯಮ್ ॥೮॥**
**ಸ ನಮಸ್ಕೃತ್ಯ ಮಾಂ ದೇವ ! ವಿನೀತಃ ಪುರತಃ ಸ್ಥಿತಃ ।**
**ತತಸ್ತಸ್ಮೈ ವರಾ ದತ್ತಾಃ ಪುತ್ರಸ್ನೇಹೇನ ಮಾಧವ ! ॥೯॥**
**" ಯಂ ಯಂ ತ್ವಮಾಲಿಂಗಯಸಿ, ಸ ಸ ಮೃತ್ಯುಮುಪೈಷ್ಯತಿ ।**
**ಕಾಲೋಽಪಿ ನ ರಣೇ ಸ್ಥಾತುಂ ತವ ಶಕ್ತೋ ಭವಿಷ್ಯತಿ " ॥೧೦॥**
**ಸ್ಥಾನಂ ಚ ಸ್ವೇಚ್ಛಯಾ ತಸ್ಯ ದತ್ತಂ ದೇವ! ಮಯಾ ತತಃ ।**
**ನಮಸ್ಕೃತ್ಯ ಗತೋ ದೂರಂ ವಿತರ್ಕಾತ್ಪುನರಾಗತಃ ॥೧೧॥**

---

ಅವನು ಉದಿಸಿ ಬಂದುದೇ ತಡ, ನೆಟ್ಟಗೆ ಎದ್ದು ನಿಂತನು. ಅತಿ ದೀರ್ಘಾಕಾರನಾದ ಆ ಪುರುಷನ ತಲೆ ಅಂತರಿಕ್ಷಕ್ಕೆ ತಗುಲಿ ಅಲ್ಲಿದ್ದ ನಕ್ಷತ್ರಗಳೆಲ್ಲ ತುಪು ತುಪು ಉದುರಿ ನೆಲಕ್ಕುರುಳಿದವು. ಅವನ ದೇಹದ ಸುರಭಿ ಗಂಧವನ್ನು ಆಘ್ರಾಣಿಸಿ ದೇವತೆಗಳೆಲ್ಲ ಬಹಳ ಆಶ್ಚರ್ಯವನ್ನು ಹೊಂದಿದರು. ॥೭॥

ಅವನ ರೂಪರಾಶಿಯೂ ಬಹಳ ವ್ಯಾಮೋಹಕವಾದುದು. ಲೋಕೈಕಸುಂದರನಾದ ಸಾಕ್ಷಾನ್ಮದನನು ಸಹ ಆ ಪುರುಷನನ್ನು ಕಂಡು ನಾಚಿ ಹೋದನು. ಅವನು ಒಮ್ಮೆ ಅತ್ತುದರ ಪರಿಣಾಮವಾಗಿ ಭುವನತ್ರಯವೂ ನಡುಗಿ ಹೋಯಿತು. ॥೮॥

ದೇವ! ಮೊದಲು ಆ ಪುರುಷನು ನನ್ನ ಸಮೀಪಕ್ಕೆ ಬಂದು ನಮಸ್ಕರಿಸಿ, ಎದುರಿಗೆ ಅತಿ ವಿನಯದಿಂದ ನಿಂತನು. ಮಾಧವ! ಅವನ ದುರ್ಭಾವವನ್ನರಿಯದ ನಾನು ಅವನನ್ನು ಪುತ್ರ ಸ್ನೇಹದಿಂದ ಆದರಿಸಿ, ಅವನಿಗೆ ಅನೇಕ ವರಗಳನ್ನಿತ್ತು ಅನುಗ್ರಹಿಸಿದೆನು. ॥೯॥

" ನೀನು ಯಾರು ಯಾರನ್ನು ಕ್ರೋಧದಿಂದ ಆಲಿಂಗಿಸುವೆಯೋ, ಅವನು ಕೂಡಲೇ ಮೃತ್ಯುವನ್ನೈದುವನು. ವೈವಸ್ವತ (ಯಮ) ನು ಸಹ ರಣದಲ್ಲಿ ನಿನ್ನೆದುರು ನಿಂತು ಯುದ್ಧ ಮಾಡಲು ಸಮರ್ಥನಾಗುವುದಿಲ್ಲ." ಎಂದು ಹೇಳಿಬಿಟ್ಟೆನು. ॥೧೦॥

" ತ್ರಿಭುವನಗಳ ಪೈಕಿ ನಿನಗೆ ಮನಸ್ಸು ಸೊಗಸೆನಿಸಿದ ಸ್ಥಳದಲ್ಲಿ ನೀನು ಸ್ವೇಚ್ಛೆಯಿಂದ ವಾಸಮಾಡಬಹುದು" ಎಂದೂ ದೇವ! ಕೊನೆಗೆ ಹೇಳಿದೆನು. ಅದರಿಂದ ತುಷ್ಟನಾದ ಆ ಪುರುಷನು ನನ್ನನ್ನು ನಮಸ್ಕರಿಸಿ ಆಗೇನೋ ಹೊರಟುಹೋದನಾದರೂ, ಬಹುದೂರ ಹೋದ ಬಳಿಕ, ದುರಾತ್ಮನಾದ ಅವನ ಮನಸ್ಸಿನಲ್ಲಿ ಸಂಶಯ-ವಿತರ್ಕಗಳು

ಮಾಮೇವಾಲಿಂಗಿತುಂ ಯಾತೋಽಪಲಮುಸ್ಮಾದ್ಭಯಾದಹಮ್ ।
ಹಂಸಮಾರುಹ್ಯ ಸಹಸಾ ವೇಗೇನ ತ್ವಾಮುಪಾಗತಃ ॥೧೨॥
ದೃಷ್ಟ್ವಾ ದೃಷ್ಟ್ವಾ ಪೃಷ್ಠಗತಂ ಕಂಪಃ, ಶ್ವಾಸಶ್ಚ ಮೇಽಭವತ್ ।
ವಿನಾ ತ್ವಾಂ ಶರಣಂ ಕಂ ವಾ ಯಾಮಿ ಸರ್ವೇಶ್ವರೇಶ್ವರ । ॥೧೩॥

ಕ ಉವಾಚ :—

ತತೋಽಬ್ರವೀನ್ಮಹಾವಿಷ್ಣುರ್ಬ್ರಹ್ಮಾಣಂ ಶರಣಾಗತಮ್ ।

ದೇವ ಉವಾಚ :—

ಪೂರ್ವಂ ದತ್ವಾ ವರಾ ದೇವ ! ಸಂಕಟಂ ಪ್ರಾಪ್ಯ ಬುದ್ಧಿತಃ ॥೧೪॥

---

ಅಕಸ್ಮಾತ್ ಹುಟ್ಟಿದ್ದರಿಂದ ನನ್ನನ್ನು ಹುಡುಕಿಕೊಂಡು ಮತ್ತೆ ಹಿಂದಿರುಗಿ ನನ್ನ ಬಳಿಗೆ ಬಂದು ಬಿಟ್ಟನು. ॥೧೧॥

ಏತಕ್ಕೆ ಬಂದನೋ, ಏನೋ ಎಂದು ನಾನು ಮೊದಲು ಸುಮ್ಮನೆ ಇದ್ದೆ ಆದರೆ ಆ ಪಾತಕಿಯು ನನ್ನನ್ನೇ ಆಲಿಂಗಿಸಲು ಬಾಹುಗಳನ್ನು ಮುಂದಕ್ಕೆ ಚಾಚಿ ಕೊಂಡು ಬಂದುಬಿಟ್ಟನು. ಅದನ್ನು ತಿಳಿದು ನನಗೆ ಬಹಳ ಭಯ ಉಂಟಾಯಿತು. ಆಗ ನಾನು ಸ್ವಲ್ಪವೂ ವಿಲಂಬ ಮಾಡದೆ, ಹಂಸವನ್ನೇರಿ ವೇಗದಿಂದ ಹಾರಿ ಬಂದು ನಿನ್ನನ್ನು ಶರಣು ಹೊಕ್ಕಿದ್ದೇನೆ. ॥೧೨॥

ಆ ಪಾತಕಿಯೂ ಬೆನ್ನು ಹಿಂದಿನಿಂದ ನನ್ನನ್ನು ಅಟ್ಟಿಸಿಕೊಂಡು ಬಂದೇಬಿಟ್ಟನು. ಅವನ ಕಡೆಗೆ ತಿರುಗಿ ನೋಡಿ, ನೋಡಿದಂತೆಲ್ಲ ನನಗೆ ನಡುಕು ಮತ್ತು ಮೇಲುಸಿರು ಇವು ಹೆಚ್ಚಾದವು. ಸರ್ವೇಶ್ವರೇಶ್ವರ! ನಿನ್ನನ್ನಲ್ಲದೆ ನಾನು ಮತ್ತೆ ಯಾರನು ಶರಣು ಹೊಂದಲಿ ? ॥೧೩॥

ಬ್ರಹ್ಮಾ :—

ಆಗ ಮಹಾವಿಷ್ಣು ತನ್ನನ್ನು ಶರಣುಹೊಂದಿದ ಹಿರಣ್ಯಗಭನನ್ನು ಕುರಿತು ಹೀಗೆ ನುಡಿದನು.

ಶ್ರೀ ಹರಿ :—

ಚತುರಾನನ! ಇಂತಹ ಸಂಕಟವನ್ನು ನೀನು ಬುದ್ಧ್ಯಾ ತಂದುಕೊಂಡಿರುವೆ ವರಗಳನ್ನು ಕೊಡುವುದಕ್ಕೆ ಮೊದಲು ಅದರ ಪರಿಣಾಮವೇನಾಗಬಹುದು ಎಂದ್ನ ಚಿಂತಿಸಬೇಕಾಗಿದ್ದಿತು. ಮೊದಲು ವರಗಳನ್ನು ಕೊಟ್ಟುಬಿಡುವುದು, ಅನಂತರ ಸಂಕಟಪಡುವುದು, ಇದೇತರ ಕೆಲಸ ? ॥೧೪॥

ಇದಾನೀಂ ಚಿಂತಯಾ ಕಿಂ ಸ್ಯಾದ್ಯದ್ಭಾವ್ಯಂ ತದ್ಭವಿಷ್ಯತಿ ।
ಸ ಪೀಡಾಂ ತ್ರಿಷು-ಲೋಕೇಷು ವಿಧಾತುಮುದ್ಯತೋಽಭವತ್ ॥೧೫॥

ಕ ಉವಾಚ :—

ಯಾವತ್ತೌ ಚಿಂತಯಾವಿಷ್ಟೌ ಸ್ಥಿತಾ ಬ್ರಹ್ಮ-ಹರೀ ತದಾ ।
ತಾವತ್ಸ ಪುರತೋಽತಿಷ್ಠದ್ದೃಷ್ಟಸ್ತಾಭ್ಯಾಂ ಮಹಾಸುರಃ ॥೧೬॥

ಜಗರ್ಜ ಗರ್ಜಯಾಮಾಸ ತ್ರೈಲೋಕ್ಯಂ ಬಲವತ್ತರಮ್ ।
ಬ್ರಹ್ಮಾಂಡಂ ಕಂಪಯಾಮಾಸ ಬ್ರಹ್ಮಾಣಂ ಚ ತದಾ ಖಲಃ ॥೧೭॥

ಸೋಽವದ "ದ್ರಕ್ಷ, ರಕ್ಷೇ"ತಿ ವಿಷ್ಣುಂ ತ್ರೈಲೋಕ್ಯರಕ್ಷಕಮ್ !
ತತೋ ವಿಷ್ಣುರ್ಜಗೌ ದೈತ್ಯಂ ವಾಚಾ ಮಧುರಯಾ ತದಾ ॥೧೮॥

---

ಈಗ ಸುಮ್ಮನೆ ಚಿಂತಿಸುತ್ತ ದುಃಖಿಸುವುದರಿಂದ ಪ್ರಯೋಜನವಾದರೂ ಏನಿದೆ? ಏನೇನೆಲ್ಲ ನಡೆಯಬೇಕೆಂದಿದೆಯೋ, ಅದು ನಡದೇ ತೀರುತ್ತದೆ. ಇದೋ, ನೀನು ಕೊಟ್ಟ ವರಗಳ ಪ್ರಭಾವದಿಂದ ಆ ದುಷ್ಟನು ತ್ರಿಲೋಕಗಳಲ್ಲಿರತಕ್ಕವರನ್ನೆಲ್ಲ ಪೀಡಿಸಲು ಆರಂಭಿಸಿಬಿಡುತ್ತಾನೆ. ಮುಂದೇನನ್ನು ಮಾಡುವುದು? ॥೧೫॥

ಬ್ರಹ್ಮಾ:—

ಕಮಲಾಪತಿ, ಕಮಲಾಸನರು ಈ ಪರಿಯಾಗಿ ಚಿಂತಿಸುತ್ತ ನಿಂದಿರುವಷ್ಟರಲ್ಲಿ ಸಿಂದೂರ ದೈತ್ಯನು ಇವರಿಬ್ಬರ ಮುಂದೂ ಬಂದು ನಿಂತು ಬಿಟ್ಟನು. ಇವನು ಇದ್ದಕ್ಕಿದ್ದಂತೆ ಬಂದು ನಿಂತುದನ್ನು ಅವರಿಬ್ಬರೂ ನೋಡಿದರು. ॥೧೬॥

"ತಪ್ಪಿಸಿಕೊಂಡು ಓಡಿಹೋದ ಪಿತಾಮಹನು ಮತ್ತೊಬ್ಬನೊಂದಿಗೆ ದೊರೆತನಲ್ಲ" ಎಂದರಿವಾಗಲು ಸಿಂದೂರನಿಗೆ ಬಹಳ ಹುರುಪಾಯಿತು ಬಹಳ ಬಲವಾಗಿ ಒಮ್ಮೆ ಗರ್ಜಿಸಿ, ತ್ರಿಲೋಕಗಳೂ ಪ್ರತಿಯಾಗಿ ಗರ್ಜಿಸುವಂತೆ ಮಾಡಿದನು. ಮತ್ತು ಆ ಖಲನು ತನ್ನ ಗರ್ಜನೆಯಿಂದ ಇಡೀ ಬ್ರಹ್ಮಾಂಡವನ್ನೂ, ಹಾಗೂ ಕಮಲಾಸನನನ್ನೂ ನಡುಗಿಸಿದನು. ॥೧೭॥

ಆ ಶಬ್ದವನ್ನು ಕೇಳಿದಕೂಡಲೇ ಪರಮೇಷ್ಠಿಗೆ ನಿಲ್ಲಲಿಕ್ಕೆ ಸಹ ಕೈಲಾಗದಂತಾಯಿತು. "ರಕ್ಷಿಸು, ನನ್ನನ್ನು ರಕ್ಷಿಸು" ಎಂದು ಹಲುಬುತ್ತ ತ್ರೈಲೋಕ್ಯ ಸಂರಕ್ಷಕನಾದ ಶ್ರೀಮನ್ನಾರಾಯಣನನ್ನು ಮೊರೆ ಹೊಕ್ಕನು. ಆಗ ಮಹಾವಿಷ್ಣು ಸಿಂದೂರ ದೈತ್ಯನನ್ನು ಸಂಬೋಧಿಸಿ ಮಧುರ ಧ್ವನಿಯಿಂದ ಹೀಗೆಂದು ನುಡಿದನು. ॥೧೮॥

ಶ್ರೀ ಹರಿರುವಾಚ :—

ನ ತ್ವಯಾ ವರದಾನೇನ ಮತ್ತೇನ ಯೋದ್ಧುಮುತ್ಸಹೇ ।

ಅಹಂ ಸತ್ತ್ವಗುಣೋಪೇತಃ ಪಾಲನೇ ನಿರತಃ ಸದಾ ॥೧೯॥

ಅಯಂ ಚ ಬ್ರಾಹ್ಮಣೋ ಬ್ರಹ್ಮಾ ತೇನ ಯೋದ್ಧುಂ ನ ಚಾರ್ಹಸಿ ।

ತವ ಯುದ್ಧಪ್ರದೋ ದೇವಃ ಖ್ಯಾತೋಽಸೌ ಮದನಾಂತಕಃ ॥೨೦॥

ತೇನ ಯುದ್ಧೇ ಕೃತೇ ತೇ ಕೀರ್ತಿರ್ಮಹತೀ ಸ್ಯಾತ್ತ್ರಿಲೋಕಗಾ ।

ಕ ಉವಾಚ :—

ಇತ್ಯಾಕರ್ಣ್ಯ ವಚಸ್ತಸ್ಯ ಜಹೃಷೇ ದೈತ್ಯಪುಂಗವಃ ॥೨೧॥

ಉಡ್ಡೀಯ ಪ್ರಯಯೌ ಸದ್ಯಃ ಕಂಪಯನ್ ಭುವನತ್ರಯಮ್ ।

ಪಾತಯನ್ ಪರ್ವತಾನ್ ವೃಕ್ಷಾಂಶ್ಚೂರ್ಣಯನ್ ಸಹಸಾ ಬಹೂನ್ ॥೨೨॥

---

ಶ್ರೀ ಹರಿ :—

ದೈತ್ಯ! ನೀನು ವರದಾನವನ್ನು ಪಡೆದು ಬಹಳ ಉನ್ಮತ್ತನಾಗಿರುವೆ. ನಿನ್ನಂಥವನೊಂದಿಗೆ ಯುದ್ಧವನ್ನು ಮಾಡಲಿಕ್ಕೆ ನಾನು ಉತ್ಸಾಹ ಪಡಲಾರೆ. ಅದೂ ಅಲ್ಲದೆ, ನಾನು ಸ್ವತಃ ಸತ್ತ್ವಗುಣ ಪೂರ್ಣನು. ಸರ್ವದಾ ಜಗತ್ತನ್ನು ಸಂರಕ್ಷಿಸಿಕೊಂಡಿರುವುದೇ ನನ್ನ ಕರ್ತವ್ಯ. ಇದರಲ್ಲೇ ನಾನು ನಿರತನಾದವನು. ॥೧೯॥

ಇವನೋ, ಜಾತ್ಯಾ ಬ್ರಾಹ್ಮಣ. ಪ್ರಪಂಚವನ್ನು ಸೃಜಿಸುವುದೆಷ್ಟೋ ಅಷ್ಟೆ ಇವನ ಕೆಲಸ. ಇಂಥವನೊಂದಿಗೆ ನಿನ್ನಂತಹ ವೀರನು ಯುದ್ಧವನ್ನು ಮಾಡಬಾರದು. ನಿನ್ನೊಂದಿಗೆ ಯುದ್ಧವನ್ನು ಮಾಡಲು ತಕ್ಕವನಾರೆಂದರೆ ಮದನಾಂತಕ; ಮಹೇಶ್ವರ ನಿದ್ದಾನೆ. ಅವನು ಯುದ್ಧದಲ್ಲಿ ಬಹಳ ಪ್ರಖ್ಯಾತನಾದವನು. ಅವನು ನಿನಗೆ ತೃಪ್ತಿಯಾಗುವಂತೆ ನಿನ್ನೊಡನೆ ಯುದ್ಧವನ್ನು ಮಾಡುವನು. ॥೨೦॥

ಅಂತಹ ವೀರನೊಂದಿಗೆ ನೀನು ಯುದ್ಧವನ್ನು ಮಾಡಿದೆಯಾದರೆ, ನಿನ್ನ ಮಹತ್ತರವಾದ ಕೀರ್ತಿಯು ಮೂರು ಲೋಕಗಳಿಗೂ ಹರಡುವುದು.

ಬ್ರಹ್ಮಾ :—

ಮುರಹರನ ಈ ಮಾತುಗಳನ್ನು ಕೇಳಿ ದೈತ್ಯಶ್ರೇಷ್ಠನಾದ ಸಿಂದೂರನು ಬಹಳ ಹರ್ಷಿಸಿದನು. ॥೨೧॥

ಅಲ್ಲಿ ಒಂದು ಕ್ಷಣದಷ್ಟು ಸಹ ಕಾಲವನ್ನು ಕಳೆಯದೇ, ಅಂತರಿಕ್ಷಕ್ಕೆ ನೆಗೆಯುತ್ತ ಹಾರುತ್ತಲೇ ಪರಶಿವನಿದ್ದಲ್ಲಿಗೆ ನಡೆದನು. ಇವನು ಹಾರಿದ ವೇಗಕ್ಕೆ ತ್ರಿಭುವನಗಳೂ

ದಿಗ್ಗಜಾಶ್ಚಲಿತಾಸ್ಸರ್ವೇ ಸಂಜಗ್ಮುರ್ವಿದಿಶೋ ದಿಶಃ ।
ಏವಮುಪತ್ಯಕಾಂ ಯಾತಃ ಕೈಲಾಸಸ್ಯ ಮಹಾಗಿರೇಃ ॥೨೩॥
ದದರ್ಶಾಧಿತ್ಯಕಾಯಾಂ ಸ ಧ್ಯಾನಸ್ಥಂ ಗಿರಿಶಂ ಖಲಃ ।
ನಂದಿ-ಭೃಂಗಿಗಣಾಕೀರ್ಣಂ ಪಾರ್ವತ್ಯಾ ಸೇವಿತಂ ವಿಭುಮ್ ॥೨೪॥
ವ್ಯಾಘ್ರಚರ್ಮಪರೀಧಾನಮರ್ಧಚಂದ್ರವಿಭೂಷಣಮ್ ।
ಭಸ್ಮಾಂಗರಾಗಶೋಭಾಢ್ಯಂ ಕರಿಚರ್ಮೋತ್ತರೀಯಕಮ್ ॥೨೫॥
ದೃಷ್ಟ್ವಾ ದೇವಂ ತದಾ ದೈತ್ಯೋ ನಿನಿಂದ ಸಹಸಾ ಹರಮ್ ।

---

ಕಂಪಿಸಿದವು. ಇವನು ಹಾರುವಾಗ ಅನೇಕಾನೇಕ ಪರ್ವತಗಳನ್ನೂ ಮಹಾ ಮಹಾ ವೃಕ್ಷಗಳನ್ನೂ ಒಮ್ಮೆಲೇ ಪುಡಿ ಪುಡಿ ಮಾಡಿದನು. ॥೨೨॥

ಅಷ್ಟ ದಿಗ್ಗಜಗಳೆಲ್ಲ ಚಲಿಸಿಹೋಗಿ ದಿಗ್ವಿದಿಕ್ಕುಗಳಿಗೆ ಓಡಿ ನಡೆದವು. ಸಿಂದೂರನು ಈರೀತಿಯಾಗಿ ಹಾರಾಡುತ್ತ ಕೈಲಾಸ ಮಹಾಗಿರಿಯ ಉಪತ್ಯಕೆ ("ಉಪತ್ಯಕಾದ್ರೇರಾಸನ್ನಾ........" ಎಂದರೆ ಪರ್ವತದ ಅಡಿಯಲ್ಲಿರುವ ಸನ್ನಿಹಿತ ಭೂಭಾಗ) ಗೆ ಬಂದನು. ॥೨೩॥

ತಲೆಯನ್ನುಮೇಲಕ್ಕೆತ್ತಿ ನೋಡಿದನು. ಪರ್ವತದ ಅಧಿತ್ಯಕೆ ("........ಭೂಮಿರೂರ್ಧ್ವಮಧಿತ್ಯಕಾ" ಎಂದರೆ ಪರ್ವತದ ಮೇಲ್ಭಾಗದಲ್ಲಿರುವ ಸಮಭೂಮಿ) ಯಲ್ಲಿ ಪರಶಿವನು ಧ್ಯಾನಾಸಕ್ತನಾಗಿ ಕುಳಿತಿರುವುದು ರಕ್ಕಸನಿಗೆ ಕಂಡಿತು, ನಂದಿ, ಭೃಂಗಿ ಮೊದಲಾದ ಪ್ರಮಥಗಣದವರೆಲ್ಲ ದೇವನಿಗೆ ಪಹರೆಯನ್ನು ಕೊಡುತ್ತ ಸುತ್ತಲೂ ನೆರೆದಿದ್ದರು. ಪಾರ್ವತೀದೇವಿಯು ವಿಭುವಾದ ಪರಮೇಶ್ವರನನ್ನು ಭಕ್ತಿಯಿಂದ ಸೇವಿಸುತ್ತಲಿದ್ದಳು. ॥೨೪॥

ದೇವನು ವ್ಯಾಘ್ರಚರ್ಮವನ್ನು ಉಟ್ಟಿದ್ದನು. ಅರ್ಧಚಂದ್ರನನ್ನು ಜಟಾಜೂಟದಲ್ಲಿ ವಿಭೂಷಣಾರ್ಥವಾಗಿ ಧರಿಸಿದ್ದನು. ಭಸ್ಮವನ್ನು ದೇಹಕ್ಕೆಲ್ಲ ಲೇಪಿಸಿಕೊಂಡು ಬಹಳ ಶೋಭಾವಂತನಾಗಿ ತೋರುತ್ತಲಿದ್ದನು. ಆನೆಯ ಚರ್ಮವನ್ನು ಉತ್ತರೀಯವನ್ನಾಗಿ ಮಾಡಿಕೊಂಡಿದ್ದನು. ॥೨೫॥

ಇಂತಹ ದೇವನ ಭವ್ಯ ಮೂರ್ತಿಯನ್ನು ಪ್ರತ್ಯಕ್ಷವಾಗಿ ಸಂದರ್ಶಿಸಿದಾಗ್ಯೂ, ಪಾಪೋಪಹತಚೇತನನಾದ ಸಿಂದುರದೈತ್ಯನಿಗೆ ದೇವನ ವಿಷಯದಲ್ಲಿ ಭಕ್ತಿ ಹುಟ್ಟುವುದಕ್ಕೆ ಬದಲಾಗಿ ದ್ವೇಷ, ಅಸಹನೆಗಳು ಉತ್ಪನ್ನವಾದವು. ಆಗ ಲೋಕಹರ; ಹರನನ್ನು ಮನಸ್ವಿಯಾಗಿ ನಿಂದಿಸಿ ಹೀಗೆಂದು ನುಡಿದನು.

**ಸಿಂದೂರ ಉವಾಚ :—**

**ಅನೇನ ಕಿಂ ಮಯಾ ಯುದ್ಧಂ ಕರ್ತವ್ಯಂ ತಾಪಸೇನ ಹ ॥೨೬॥**
**ಏತಸ್ಯ ಸುಂದರೀಂ ಭಾರ್ಯಾಂ ನೀತ್ವಾ ಯಾಮಿ ಯದೃಚ್ಛಯಾ ।**

**ಕ ಉವಾಚ :—**

**ಏವಂ ನಿಶ್ಚಿತ್ಯ ಮನಸಾ ಗೌರೀಮಂತಿಕಮಾಯಯೌ ॥೨೭॥**
**ತದಾ ಚಕಂಪೇ ಗಿರಿಜಾ ಕಲ್ಪಾಂತೇ ಜಗತೀ ಯಥಾ ।**
**ನಿಮೀಲ್ಯ ನಯನೇ ಮೂರ್ಚ್ಛಾಮಾಪಾಶು ಭಯವಿಹ್ವಲಾ ॥೨೮॥**
**ದಧಾರ ತಾಂ ಕೇಶಪಾಶೇ ಸ ದೈತ್ಯೋ ದುಷ್ಟಮಾನಸಃ ।**
**ಉಡ್ಡೀಯ ಚಲಿತೋ ವೇಗಾಚ್ಛುಶೋಚ ಗಿರಿಜಾ ತದಾ ॥೨೯॥**

ಸಿಂದೂರ :—

ಛೇ, ಇವನೆಂತಹವೀರ ? ಎಲ್ಲೋ ಗೊಡ್ಡು ಜೋಗಿ, ಮೂಗನ್ನು ಹಿಡಿದು ಕೊಂಡು ಕೂತಿದ್ದಾನೆ. ಇವನೊಂದಿಗೆ ಯುದ್ಧವೆಂದರೇನು ? ನನಗೆ ನಾಟಿಯೇ ? ॥೨೬॥

ಸುಂದರಿಯಾದ ಇವನ ಹೆಂಡತಿಯನ್ನು ಕರೆದುಕೊಂಡು ನನ್ನ ಪಾಡಿಗೆ ಎಲ್ಲಿಗೆ ಹೋಗಬೇಕೆಂದು ತೋರುವುದೋ ಅಲ್ಲಿಗೆ ಹೋಗಿಬಿಡುವೆನು. ಪ್ರಕೃತಕ್ಕೆ ಅದೇ ಸಮಂಜಸವಾದ ಕೆಲಸ.

ಬ್ರಹ್ಮಾ :—

ಈ ರೀತಿಯಾಗಿ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಗೌರಿಯ ಸಮೀಪಕ್ಕೆ ನುಗ್ಗಿ ಬಂದು ನಿಂತನು. ॥೨೭॥

ಉನ್ಮತ್ತನೂ, ವಿಕಾರಾಕಾರನೂ ಆದ ದೈತ್ಯನೊಬ್ಬನು ಇದ್ದಕ್ಕಿದ್ದಂತೆ ತನ್ನ ಸಮೀಪಕ್ಕೆ ಅಸಭ್ಯತನದಿಂದ ಬಂದು ನಿಂತುದನ್ನು ನೋಡಿ, ಗಿರಿಜೆಯು ಪ್ರಳಯ ಕಾಲದಲ್ಲಿ ಭೂದೇವಿ ನಡುಗುವಂತೆ ಕಂಪಿಸಿದಳು. ಅವನನ್ನು ಮತ್ತೊಮ್ಮೆ ಕಣ್ಣೆತ್ತಿ ನೋಡುವುದು ಸಹ ಅವಳಿಗೆ ಬೇಕೆನಿಸಲಿಲ್ಲ. ಘಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿ ಬಿಟ್ಟಳು. ಆದರೂ ಅಸುರನ ಭಯಂಕರ ಮೂರ್ತಿ ಅವಳ ಮನಸ್ಸಿನಿಂದ ಮಾಯ ವಾಗಲಿಲ್ಲ. ಭಯವು ಮೀತಿ ಮೀರಿ ಬರಲು, ಕೂಡಲೇ ಮೂರ್ಛೆಯನ್ನೈದಿದಳು. ॥೨೮॥

ಆಗ ದುಷ್ಟಮನಸ್ಕನಾದ ದೈತ್ಯನು ಮುನ್ನುಗ್ಗಿ ಅವಳ ಮುಡಿಯನ್ನು ಹಿಡಿದು ಎತ್ತಿಕೊಂಡು ಅಂತರಿಕ್ಷಕ್ಕೆ ನೆಗೆದು ಪಕ್ಷಿಗಳಂತೆ ವೇಗವಾಗಿ ಹಾರುತ್ತ ನಡೆದು ಬಿಟ್ಟನು. ಅವನ ಹಿಡಿತಕ್ಕೆ ಸಿಕ್ಕಿಬಿದ್ದ ಗಿರಿಜೆಯು ಅತಿಯಾಗಿ ಶೋಕಿಸಿದಳು. ॥೨೯॥

ರಾವಣೇನ ನೀಯಮಾನಾ ಯಥಾ ಸಾ ಧರಣೀಸುತಾ ।
ಗಿರಿಜೋವಾಚ :—
ಔದಾಸೀನ್ಯಂ ಕಥಂ ಯಾತೋ ಮಯಿ ದೇವೋಽಖಿಲಾರ್ಥವಿತ್ ॥೩೦॥
ಧ್ಯಾನಂ ಕಥಂ ಗತೋಽಸ್ಯರ್ಧೇ ಹ್ರಿಯಮಾಣೇ ತ್ವದಂಗಕೇ ।
ನಾಕಾರಿ ದಾಸ್ಯಂ ನ್ಯೂನಂ ತೇ ಯೇನ ಕಾಠಿಣ್ಯಮಾಗತಃ ॥೩೧॥
ಕಃ ಸಖಾ ಮೋಚಯೇನ್ಮಾಂ ಹಿ ಪ್ರಾಣದಾತಾ ಭವೇಚ್ಚ ಕಃ ? ।
ಪುನರ್ಮೇ ಶಂಕರಂ ಕೋ ನು ದರ್ಶಯೇದ್ಬಲವತ್ತರಃ ? ॥೩೨॥
ಕ ಉವಾಚ :—
ತತಃ ಶೋಕಾಕುಲಾಂ ವೀಕ್ಷ್ಯ ತಾಂ ಗಣಾಃ ಪ್ರಾಬ್ರುವಂಸ್ತದಾ ।

---

ಶ್ರೀರಾಮನು ದಂಡಕಾರಣ್ಯದಲ್ಲಿ ವಾಸಮಾಡುತ್ತಿದ್ದಾಗ ದಶಗ್ರೀವ; ರಾವಣನು ಬಂದು ಲೋಕಮಾತೆ, ಜಾನಕಿಯನ್ನು ಅಪಹರಿಸಿಕೊಂಡು ಒಯ್ವಾಗ ಅವಳು ಹೇಗೆ ಶೋಕಿಸಿದಳೋ, ಅದರಂತೆಯೇ ಅವಳ ಶೋಕವಿದ್ದಿತು

ನನ್ನ ಪತಿದೇವ ಭೂತ ಭವಿಷ್ಯದ್ವರ್ತಮಾನ ಸಂಗತಿಗಳನ್ನೆಲ್ಲ ಸ್ಪಷ್ಟವಾಗಿ ತಿಳಿದವನು. ಹೀಗಿದ್ದರೂ ಈಗ ನನಗೊದಗಿರುವ ಈ ವಿಪತ್ಸಮಯದಲ್ಲಿ ಏತಕ್ಕೆ ಉದಾಸೀನನಾಗಿದ್ದಾನೋ, ತಿಳಿಯದಲ್ಲ ? ॥೩೦॥

ದೇವನ ಅರ್ಧಾಂಗಿಯಾದವಳು ನಾನು. ದೇಹದ ಅರ್ಧಾಂಗವನ್ನು ಮತ್ತಾರಾದರೂ ಕೊಂಡೊಯ್ಯುತ್ತಿದ್ದರೂ ಉಳಿದ ಅರ್ಧ ದೇಹವೆನಿಸಿದ ಪರಮೇಶ್ವರನು ಹೇಗೆ ನಿಶ್ಚಿಂತೆಯಿಂದ ಧ್ಯಾನಾಸಕ್ತನಾಗಿ ಕುಳಿತಿರಬಹುದು ? ನಾನು ನಿನಗೆ ನಿರ್ವಂಚನೆಯಿಂದ :ದಾಸ್ಯವನ್ನು ಮಾಡಿಲ್ಲವೇ ದೇವ ! ಅದರಲ್ಲೇನಾದರೂ ಕೊರತೆಯಾಗಿದೆಯೇ ? ಮತ್ತೇಕೆ, ನನ್ನ ವಿಷಯದಲ್ಲಿ ನೀನು ಹೀಗೆ ಕಠಿಣನಾಗಿರುವೆ ? ॥೩೧॥

ನನ್ನನ್ನು ಈ ವಿಪತ್ತಿನಿಂದ ಬಿಡುಗಡೆ ಮಾಡತಕ್ಕ ಮಿತ್ರನಾರಿದ್ದಾರೆ ? ನನ್ನ ಪ್ರಾಣಗಳನ್ನು ಉಳಿಸಿಕೊಡತಕ್ಕವರಾರಿದ್ದಾರೆ ? ನನಗೆ ಈ ಜನ್ಮದಲ್ಲಿ ಪುನಃ ಶಂಕರನ ಸಂದರ್ಶನವು ಲಭಿಸೀತೇ ? ಅಂತಹ ಬಲಿಷ್ಠನಾದವನಾರಿದ್ದಾರೆ ? ॥೩೨॥

ಬ್ರಹ್ಮಾ :—
ಎಂದು ಶೋಕವಿಹ್ವಲಳಾಗಿ ಏಕಪ್ರಕಾರ ಹಲುಬಲಾರಂಭಿಸಿದಳು. ದುಃಖಾರ್ತಳಾದ ದೇವಿಯನ್ನು ನೋಡಿ, ಪ್ರಮಥಗಣದವರು ತಮ್ಮ ದೌರ್ಬಲ್ಯವನ್ನು ಹೀಗೆಂದು ಹೇಳಿಕೊಂಡರು.

ಗಣಾ ಊಚುಃ :—
ಅನೇನ ಯೋದ್ಧುಂ ಶಕ್ತಿರ್ನೋ ತ್ರೈಲೋಕ್ಯನಾಶಿನಾಧುನಾ ||೩೩||
ಶಿವಶ್ಚ ಧ್ಯಾನನಿಷ್ಠೋಽಭೂದ್ದೈವಾದಸ್ಯಾನುಕೂಲತಾ ।
ನೀತಾ ನೋ ಜನನೀ ವಿಶ್ವಸೃಷ್ಟಿ-ಸ್ಥಿತ್ಯಂತಕಾರಿಣೀ ||೩೪||
ಮೋಹಿನೀ ಸರ್ವದೇವಾನಾಂ ಸರ್ವದುಃಖವಿನಾಶಿನೀ ।
ಲಾವಣ್ಯಲಹರೀ ನೀತಾ ಸರ್ವಯೋಷಿದ್ವರಾ ಶುಭಾ ||೩೫||
ರತ್ನಭೂತಾ ಕಥಂ ನೀತಾ, ಕಥಂ ಸಾ ಪುನರೇಷ್ಯತಿ ? ।
ಧ್ಯಾನಸ್ಥೇ ಶಂಕರೇ ಸರ್ವನಾಶನೇ ನೇತ್ರವಹ್ನಿತಃ ||೩೬||

---

ಗಣದವರು:—

ತಾಯೇ! ವರಲಾಭದಿಂದ ಮದೋನ್ಮತ್ತನಾದ ಈ ದೈತ್ಯನು ಮೂರು ಲೋಕಗಳನ್ನೂ ಒಮ್ಮೆಲೇ ನಾಶಗೊಳಿಸುವಷ್ಟು ಸಾಮರ್ಥ್ಯವನ್ನು ಪಡೆದಿರುತ್ತಾನೆ. ಇವನೊಂದಿಗೆ ಯುದ್ಧವನ್ನು ಮಾಡುವ ಶಕ್ತಿ ನಮಗಿರುವುದಿಲ್ಲ. ||೩೩||

ಪರಶಿವನೋ, ಧ್ಯಾನನಿಷ್ಠನಾಗಿ ಕುಳಿತುಬಿಟ್ಟಿದ್ದಾನೆ. ದೈವಯೋಗದಿಂದ ಅಸುರನಿಗೆ ಈ ಎಲ್ಲ ಅನುಕೂಲ ಸನ್ನಿವೇಶಗಳೂ ಒದಗಿವೆ. ಹೋ, ಮಾಡುವುದೇನು ? ನಮ್ಮ ಜನನಿಯನ್ನು ಈ ದುಷ್ಟನು ಎತ್ತಿಕೊಂಡು ಓಡಿ ಹೋದನಲ್ಲ? ನಮ್ಮ ತಾಯಿಯೋ, ಸಾಮಾನ್ಯಳಾದವಳಲ್ಲ. ವಿಶ್ವದ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡತಕ್ಕವಳು. ||೩೪||

ಸಕಲ ದೇವತೆಗಳಿಗೂ ವ್ಯಾಮೋಹವನ್ನುಂಟುಮಾಡತಕ್ಕವಳು. ಸರ್ವವಿಧ ದುಃಖಗಳನ್ನೂ ಪರಿಹರಿಸತಕ್ಕವಳು. ಲಾವಣ್ಯಮಯಿಯಾದವಳು. ಸ್ತ್ರೀ ಜನಾಂಗದಲ್ಲೆಲ್ಲ ಸಕಲ ಶುಭಲಕ್ಷಣಗಳಿಂದ ಕೂಡಿದವಳೆಂದು ಖ್ಯಾತಿಯನ್ನು ಪಡೆದವಳು. ಇಂಥವಳನ್ನು ಆ ನೀಚನು ಕೊಂಡೊಯ್ದನಲ್ಲ. ||೩೫||

ಅಮೂಲ್ಯ ರತ್ನದಂತಿದ್ದಳಲ್ಲವೇ, ನಮ್ಮ ತಾಯಿ. ಅವಳನ್ನು ಪಾತಕಿ ಹೇಗೆ ಕರೆದುಕೊಂಡು ಹೋಗಿದ್ದಾನು ? ಅವಳು ಪುನಃ ಇಲ್ಲಿಗೆ ಹೇಗೆ ಬರುವಂತಾದಾಳು ? ಧ್ಯಾನಸ್ಥನಾದ ಶಂಕರನು ಧ್ಯಾನದಿಂದ ಎದ್ದನೆಂದರೆ, ತನ್ನ ನೇತ್ರ ಪಾವಕನಿಂದ ಎಲ್ಲವನ್ನೂ ಸುಟ್ಟು ಬಿಡುವನಲ್ಲ? ಮುಂದೇನು ಗತಿ ? ||೩೬||

ತಸ್ಮಿನ್ ಯಾಸ್ಯತಿ ಲೋಭೇನ ಪುತ್ರಾನಿವ ಜನಸ್ಯಥ ।

ಕ ಉವಾಚ :—

ಏವಂ ಶೋಕಂ ಪ್ರಕುರ್ವತ್ಸು ಹಾಹಾಕಾರೈರುದತ್ಸು ಚ ॥೩೭॥

ಗಣೇಷು ವಿಸಸರ್ಜಾಶು ಧ್ಯಾನಂ ಕ್ರೋಧಾನ್ಮಹೇಶ್ವರಃ ।

ಕ್ರೋಧಾನಲೇನ ಬ್ರಹ್ಮಾಂಡಂ ದಹನ್ನಿವ ದಿಶೋ ದಶ ॥೩೮॥

ಪಪ್ರಚ್ಛ ತಾನ್ ಗಣಾನ್ ಶಂಭುಃ

ಹರ ಉವಾಚ :—

ಸಂಕಟಂ ಕಿಮುಪಸ್ಥಿತಮ್ ? ।

ಭಸ್ಮಸಾತ್ತಂ ಕರಿಷ್ಯಾಮಿ ಯೇನ ವಃ ಕದನಂ ಕೃತಮ್ ? ॥೩೯॥

ಕ ಉವಾಚ :—

ಇತಿ ತದ್ವಚನಂ ಶ್ರುತ್ವಾ ಪ್ರೋಚುಸ್ತಂ ತೇ ಗಣಾಸ್ತದಾ ।

---

ರಾಕ್ಷಸನು ದೂರ ಹಾರಿಹೋಗುವಷ್ಟರಲ್ಲೇ ಇಷ್ಟೆಲ್ಲ ನಡೆಯಬೇಕಲ್ಲವೇ? ದೇವನು ಬಹಿರ್ಮುಖನಾಗುವುದೇ ತಡ, ಮಕ್ಕಳ ವಿಪತ್ತನ್ನು ಪರಿಹರಿಸಲು ತವಕ ಪಡುವ ತಾಯಿಯಂತೆ ದೇವನು ಎಲ್ಲರನ್ನೂ ರಕ್ಷಿಸುವನು.

ಬ್ರಹ್ಮಾ :—

ಗಡುಸು ಧ್ವನಿಯ ಗಣಗಳು ಅತಿಯಾಗಿ ಶೋಕಿಸಿದವು. "ಹಾ ಹಾ" ಎಂದು ಘಟ್ಟಿಯಾಗಿ ಅತ್ತವು. ॥೩೭॥

ಗಣಗಳು ಕರ್ಣ ಕರ್ಕಶ ಧ್ವನಿಯಿಂದ ಅಳಲಾರಂಭಿಸಿದ ಕೂಡಲೇ ಶರ್ವನ ಸಮಾಧಿ ಭಂಗವಾಯಿತು. ಕೂಡಲೇ ಅವನಿಗೆ ಮಿತಿಮೀರಿದ ಕೋಪ ಉಂಟಾಯಿತು. ತನ್ನ ಕ್ರೋಧಾನಲದಿಂದ ಇಡೀ ಬ್ರಹ್ಮಾಂಡವನ್ನೂ, ಹತ್ತು ದಿಕ್ಕುಗಳನ್ನೂ ದಹಿಸಿಬಿಡುವನೋ, ಎಂಬಂತಿದ್ದಿತು ಮಹೇಶ್ವರನ ಆಗಿನ ರೌದ್ರ ರೂಪ. ॥೩೮॥

ಅತಿ ಸಿಟ್ಟಿನಿಂದಲೇ ಗಣಗಳನ್ನು ಕುರಿತು ಶಂಭು ಹೀಗೆ ಪ್ರಶ್ನಿಸಿದನು.

ಹರ :—

ನಿಮಗೆ ಈಗ ಬಂದಿರುವ ಸಂಕಟವಾದರೂ ಯಾವುದು? ಅದೇಕಿಷ್ಟು ಘಟ್ಟಿಯಾಗಿ ಅರಚುತ್ತಿರುವಿರಿ? ನಿಮ್ಮೊಡನೆ ಯಾರಾದರೂ ಕದನ ಮಾಡುವುದಕ್ಕೆ ಬಂದಿದ್ದರೇನು? ಹೇಳಿ, ಅವರನ್ನು ಕೂಡಲೇ ಭಸ್ಮ ಮಾಡಿಬಿಡುವೆನು. ॥೩೯॥

ಗಣಾ ಊಚುಃ :—

ತ್ವಯಿ ಧ್ಯಾನಸ್ಥಿತೇ ದೇವ ! ಮಂದರಾಚಲಸನ್ನಿಭೇ ||೪೦||
ಕೃತಾಂತಸಮರೂಪಃ ಸನ್ನಾಗತೋ ದೈತ್ಯಪುಂಗವಃ ।
ಯಸ್ಯ ಶ್ವಾಸಾನಿಲಹತಾ ಅಚಲಾಶ್ಚಲತಾಂಗತಾಃ ||೪೧||
ಸಂಮೋಹಂ ಪ್ರಾಪಿತಾ ದೇವಾ ದರ್ಶನಾದೇವ ಶಂಕರ !
ತತಃ ಸ ಗಿರಿಜಾಂ ಧೃತ್ವಾ ಕೇಶಪಾಶೇ ಮಹಾಬಲಃ ||೪೨||
ನಿನಾಯ ಸತ್ವರಂ ವ್ಯೋಮಮಾರ್ಗೇಣ ಜನನೀಂ ಹಿ ನಃ ।
ನೀಯಮಾನಾ ಶಿವಾ ಪ್ರಾಹ "ಧಾವ, ಧಾವೇ"ತಿ ಸತ್ವರಮ್ ||೪೩||
ಮೂರ್ಛಿತಾ ಪತಿತಾ ಭೂಮೌ ವಯಂ ಸರ್ವೇ ವಿಮೂರ್ಛಿತಾಃ ।

---

ಬ್ರಹ್ಮಾ :—

ದೇವನಾಡಿದ ಈ ಮಾತುಗಳನ್ನು ಕೇಳಿದ ಕೂಡಲೇ "ಸದ್ಯಃ ನಮ್ಮಾರ ಮೇಲೂ ಕೋಪಗೊಳ್ಳಲಿಲ್ಲವಲ್ಲ" ಎಂದೆಂದುಕೊಂಡು ಬಹಳಮಟ್ಟಿಗೆ ಸಮಾಧಾನವನ್ನು ಹೊಂದಿದರು. ಆಗ ಸ್ವಲ್ಪ ಧೈರ್ಯವನ್ನು ತಂದುಕೊಂಡು ನಡೆದ ಅನಾಹುತ ಸಂಗತಿಯನ್ನು ವಿವರಿಸಿ ಹೇಳಲಾರಂಭಿಸಿದರು.

ಗಣಗಳು :—

ಮಹಾದೇವ ! ನೀನು ಮಂದರಪರ್ವತದಂತೆ ನಿಶ್ಚೇಷ್ಟನಾಗಿ ಧ್ಯಾನದಲ್ಲಿ ಕುಳಿತಿದ್ದಾಗ ||೪೦||

ಸಾಕ್ಷಾತ್ ಯಮನಂತೆ ಭಯಂಕರಾಕಾರನಾಗಿ ತೋರಿಬರುವ ದೈತ್ಯವರನೊಬ್ಬನು ಗಿರಿಯ ತಪ್ಪಲಿಗೆ ಬಂದನು. ಅವನ ಶ್ವಾಸೋಚ್ಛ್ವಾಸದ ಗಾಳಿಯ ಬಿರುಸಿಗೆ ಅಚಲಗಳೆನಿಸಿದ ಪರ್ವತಗಳು ಸಹ ಚಲಿಸಿಹೋದವು. ||೪೧||

ದೇವತೆಗಳೆಲ್ಲ ಅವನನ್ನು ನೋಡಿದ ಕೂಡಲೇ ಭ್ರಾಂತರಾಗಿ ಹೋದರು. ಭಗವನ್, ಭಗವನ್ ! ಅನಂತರ ಮಹಾ ಬಲಿಷ್ಠನಾದ ಆ ದೈತ್ಯಾಧಮನು ಜಗದಂಬೆ; ಗಿರಿಜೆಯ ಮುಡಿಯನ್ನು ಹಿಡಿದು ||೪೨||

ಮೇಲಕ್ಕೆ ಹಾರಿ, ವ್ಯೋಮ ಮಾರ್ಗದಿಂದ ಎಳೆದುಕೊಂಡು ಹೋಗಿಬಿಟ್ಟನು, ನಮ್ಮ ತಾಯಿಯನ್ನು ಪಾಪಿ ಎತ್ತಿಕೊಂಡು ಹೋದನು. ಆ ಪಾತಕಿಯ ಎಳೆತಕ್ಕೆ ಸಿಕ್ಕಿದ ಪರಶಿವೆ 'ಬೇಗನೆ ಓಡಿ ಬನ್ನಿ. ಓಡಿ ಬಂದು ನನ್ನನ್ನು ಬಿಡಿಸಿ' ಎಂದು ಕೂಗಿಕೊಂಡಳು. ||೪೩||

ಮತ್ತು ಹಾಗೆಯೇ ಮೂರ್ಛೆಯನ್ನೂ ಹೊಂದಿದಳು. ಅತ್ಯಂತ ದಾರುಣವಾದ

ತಥಾವಿಧಾಂ ಸಮಾದಾಯ ಯಯೌ ಸ ದುಷ್ಟಮಾನಸಃ ||೪೪||

ಕ ಉವಾಚ :—

ಶ್ರುತ್ವಾ ತೇಷಾಂ ವಚಃ ಶಂಭುರ್ಜಜ್ವಾಲ ಪರಮಂ ರುಷಾ |
ಕುರ್ವನ್ ಭಸ್ಮೇವ ಲೋಕಾನಾಮಾರುರೋಹ ವೃಷಂ ನಿಜಮ್ ||೪೫||

ತ್ರಿಶೂಲಾದೀನಿ ಶಸ್ತ್ರಾಣಿ ದಧಾನೋ ದಶಭಿರ್ಭುಜೈಃ |
ನಭೋಮಾರ್ಗೇಣ ಪ್ರಯಯೌ ಗರ್ಜಯನ್ ವಿದಿಶೋ ದಿಶಃ ||೪೬||

ಯತ್ರಾಸೀತ್ಸಿಂದುರೋ ದೈತ್ಯಸ್ತಂ ದೇಶಮಗಮತ್ ಕ್ಷಣಾತ್ |
ಅಹನತ್ಪೃಷ್ಠದೇಶೇ ತಂ ತಸ್ಥೌ ಸ ಸಮ್ಮುಖಂ ತದಾ ||೪೭||

---

ಆ ದೃಶ್ಯವನ್ನು ಕಂಡು ನಾವೂ ಮೂರ್ಛಿತರಾಗಿ ನೆಲಕ್ಕುರುಳಿ ಬಿದ್ದೆವು. ದುಷ್ಟ ಮನಸ್ಸಿನ ಆ ದೈತ್ಯನು ಅಂತಹ ವಿಪತ್ಸ್ಥಿತಿಯಲ್ಲಿರುವ ದೇವಿಯನ್ನು ಸ್ವಲ್ಪವೂ ಕರುಣೆ ಇಲ್ಲದೆ ಬಲಾತ್ಕಾರದಿಂದ ಎಳೆದೊಯ್ದನು. ||೪೪||

ಬ್ರಹ್ಮ :—

ಅಷ್ಟು ದೀರ್ಘ ವರ್ಣನೆಯನ್ನು ಕೇಳುವವರೆಗೂ ದೇವನು ಸಹನೆಯಿಂದಿದ್ದುದೇ ಬಹಳ ಅಪರೂಪ. ಇದನ್ನು ಕೇಳಿದ ಮೇಲಂತೂ ಅಭವನಿಗೆ ಮಿತಿಮೀರಿ ಕೋಪವುಂಟಾಯಿತು. ಅವನು ಪ್ರಳಯಾಗ್ನಿಯಂತೆ ಜ್ವಲಿಸಿದನು. ನೋಡಿದವರಿಗೆ ಸಮಸ್ತ ಲೋಕಗಳನ್ನೂ ಒಮ್ಮೆಲೆ ದಹಿಸಿ ಭಸ್ಮಮಾಡಿಬಿಡುವನೋ ಎಂಬಂತೆ ತೋರುತ್ತಿದ್ದನು. ಯಾವ ಮಾತನ್ನೂ ಆಡದೆ, ತನ್ನ ವಾಹನವಾದ ವೃಷಭವನ್ನೇರಿದನು. ||೪೫||

ತ್ರಿಶೂಲ, ಪಿನಾಕ ಮೊದಲಾದ ದಿವ್ಯಾಯುಧಗಳನ್ನು ತನ್ನ ಹತ್ತು ಕೈಗಳಲ್ಲೂ ಧರಿಸಿದನು. ಸಿಂದೂರ ದೈತ್ಯನು ಹೇಗೆ ವ್ಯೋಮಮಾರ್ಗದಿಂದ ನಡೆದು ಹೋದನೋ, ಅದರಂತೆ ಸ್ಮರಹರನೂ ಅದೇ ಮಾರ್ಗದಿಂದ ಹೊರಟುಬಿಟ್ಟನು. ನಡೆವ ರಭಸದಿಂದ ದಿಗ್ವಿದಿಕ್ಕುಗಳಲ್ಲೆಲ್ಲ ಪ್ರತಿಧ್ವನಿಯುಂಟಾಗುವಂತೆ ಮಾಡಿದನು. ||೪೬||

ವೇಗದಿಂದ ಹೊರಟ ವ್ಯೋಮಕೇಶನು ಸಿಂದೂರನು ನಡೆಯುತ್ತಲಿದ್ದ ಸ್ಥಳವನ್ನು ಒಂದು ಕ್ಷಣದೊಳಗಾಗಿಯೇ ತಲುಪಿದನು. ಅಸುರನನ್ನು ಸಮೀಪಿಸಿದ ಕೂಡಲೇ ಅವನ ಬೆನ್ನಿಗೊಂದು ಬಲವಾದ ಗುದ್ದನ್ನು ಹೊಡೆದನು. ಆಗ ರಾಕ್ಷಸನು 'ನನ್ನ ಬೆನ್ನಿನ ಮೇಲೆ ಕೈಯಾಡಿಸಿದವರಾರು ?' ಎಂಬುದನ್ನು ತಿಳಿಯಲು ಹಿಂದಿರುಗಿ ನೋಡಿ ಮಹಾದೇವನಿಗೆ ಎದುರಾಗಿ ನಿಂತನು. ||೪೭||

**ಹರ ಉವಾಚ :—**

**ಮುಂಚ ಭಾರ್ಯಾಂ ಮಹಾದುಷ್ಟ ! ದೃಷ್ಟಃ ಸನ್ ಕ್ವ ಗಮಿಷ್ಯಸಿ ? ।**

**ಕ ಉವಾಚ :—**

**ಇತ್ಯುಕ್ತಸ್ಸ ರುಷಾವಿಷ್ಟಃ ತ್ರಿಲೋಕೀಂ ಭಸ್ಮತಾಂ ನಯನ್ ॥೪೮॥**

**ಬಾಹುಭ್ಯಾಂ ಮಾರಯನ್ನೇವ ಪ್ರಯಯೌ ಶಿವಸನ್ನಿಧೌ ।**

**ಉವಾಚ ಚ ಮಹಾ ದೈತ್ಯೋ ಗರ್ವೇಣ ಪರಿಮೋಹಿತಃ ॥೪೯॥**

**ಸಿಂದೂರ ಉವಾಚ :—**

**ನಾಹಂ ಮಶಕವಾಕ್ಯೇನ ಬಿಭೇಮಿ ಭುವನಾಧಿಪಃ ।**

**ಯಸ್ಯ ಶ್ವಾಸಾನಿಲೇನಾಶು ಕಂಪತೇ ಮೇರುಪರ್ವತಃ ॥೫೦॥**

---

ಹರ :—

ಎಲವೋ, ಮಹಾದುಷ್ಟ ! ಮೊದಲು ನನ್ನ ಹೆಂಡತಿಯನ್ನು ಬಿಡು. ನನ್ನ ಕಣ್ಣಿಗೆ ಕಂಡಮೇಲೆ ನೀನು ಎಲ್ಲಿಗೆ ತಪ್ಪಿಸಿಕೊಂಡು ಓಡಿಹೋಗಬಲ್ಲೆ ?

ಬ್ರಹ್ಮಾ :—

ಈ ರೀತಿಯ ಗದುರಿಕೆಯ ಮಾತನ್ನು ಕೇಳಿದಕೂಡಲೇ ರಾಕ್ಷಸನು ಕೋಪದಿಂದ ಸಿಡಿದೆದ್ದು, ತ್ರಿಲೋಕಗಳನ್ನೂ ಸುಟ್ಟು ಬೂದಿ ಮಾಡಿಬಿಡುವನೋ ಎಂಬಂತೆ ನೋಡುತ್ತ ನಿಂತನು. ॥೪೮॥

ನೀಳವೂ, ಪರಿಪುಷ್ಟವೂ ಆದ ತನ್ನ ಬಾಹುಯುಗ್ಮವನ್ನೇ ಆಯುಧದಂತೆ ಉಪಯೋಗಿಸಿ ಎದುರಾಳಿಗಳನ್ನು ಕೊಂದುಬಿಡುವನೋ, ಎಂಬಂತೆ ಬಾಹುಗಳನ್ನು ತಿರುಗಿಸುತ್ತ ಶಿವನ ಸಮೀಪಕ್ಕೆ ನುಗ್ಗಿ ಬಂದನು. ಬಂದು ಶಿವನನ್ನು ನೋಡಿದಕೂಡಲೇ 'ಇವನೆಷ್ಟರವನು?' ಎಂದು ತಿರಸ್ಕರಿಸುತ್ತ, ಗರ್ವಮೋಹಿತನಾಗಿ ದೈತ್ಯನು ಇಂತೆಂದು ನುಡಿದನು. ॥೪೯॥

ಸಿಂದೂರ :—

ಏಯ್ ! ಯಾರೋ ನೀನು ? ಎಲ್ಲೊ ಸೊಳ್ಳೆಯಂತೆ ತೋರುವೆ ? ಅದೆಷ್ಟೋ ಮಾತನಾಡುವುದು ? ನಾನಾರು ಗೊತ್ತೆ ? ಸಕಲ ಭುವನಗಳಿಗೂ ನಾನು ಅಧೀಶ್ವರ. ನಿನ್ನಂತಹ ಅತ್ಯಲ್ಪನಿಗೆ ನಾನು ಹೆದರುವೆನೇ ? ನನ್ನ ಸ್ವಾಭಾವಿಕವಾದ ಶ್ವಾಸಾನಿಲದಿಂದಲೇ ಮೇರುಪರ್ವತವು ಸಹ ಕಂಪಿಸಿಬಿಡುವುದು. ॥೫೦॥

ತಸ್ಯ ಮೇ ಗಣನಾ ನಾಸ್ತಿ ಮುಖಂ ಮಾಂ ಮಾ ಪ್ರದರ್ಶಯ ।
ಯದಿ ಶಕ್ತಿರ್ಮಯಾ ಸಾರ್ಧಂ ಯುದ್ಧಂ ಕರ್ತುಂ ತದಾ ಕುರು ॥೫೧॥

ನೋ ಚೇದನ್ಯಾಂ ಪರಿಣಯ ತತಸ್ಸೌಖ್ಯಮವಾಪ್ಸ್ಯಸಿ ।
ಕಿಂ ಮಯಾ ಸಹ ಯೋದ್ಧವ್ಯಂ ಮಶಕೇನ ತ್ವಯಾ ಲಘೋ ! ॥೫೨॥

ಕ ಉವಾಚ :—

ಏವಮುಕ್ತ್ವಾ ಬಾಹುಯುದ್ಧಂ ಕರ್ತುಂ ಶಂಕರಮಾಯಯೌ ।
ದುರ್ಗಾದೇವೀ ತು ಸಸ್ಮಾರ ಮಯೂರೇಶಂ ಸ್ವ-ಚೇತಸಿ ॥೫೩॥

ದ್ವಿಜರೂಪಧರೋ ದೇವೋ ಮಯೂರೇಶಸ್ತತಸ್ತಯೋಃ ।
ಅಂತರಾಲೇ ಪ್ರಾದುರಾಸೀತ್ಕೋಟಿಸೂರ್ಯನಿಭಃ ಕ್ಷಣಾತ್ ॥೫೪॥

ಇಂತಹ ಬಲಿಷ್ಠನಾದ ನನಗೆ ನಿನ್ನ ಗಣನೆ ಇದ್ದೀತೇನೋ ? ನನಗೆ ನಿನ್ನ ಈ ನಿರ್ವೀರ್ಯವಾದ ಮುಖವನ್ನು ತೋರಿಸಬೇಡ. ಸುಮ್ಮನೆ ಅತ್ತ ಹೊರಟುಹೋಗು. ನಿನಗೇನಾದರೂ ಅಂತಹ ಶಕ್ತಿ ಇದ್ದರೆ ಬಾ, ನನ್ನೊಂದಿಗೆ ಯುದ್ಧವನ್ನು ಮಾಡು. ॥೫೧॥

ನಿನಗೆ ಸಾಮರ್ಥ್ಯವಿಲ್ಲವೋ, ಆಗ ಯುದ್ಧದ ಗೊಡವೆಗೆ ಹೋಗದೆ, ಬೇರೊಬ್ಬಳನ್ನು ವಿವಾಹವಾಗು. ಸುಖವಾಗಿದ್ದುಕೋ. ನನ್ನದೇನೂ ಅಭ್ಯಂತರವಿರುವುದಿಲ್ಲ. ನೀನೋ, ಸೊಳ್ಳೆಯಂತೆ ಅತ್ಯಲ್ಪನಾದವನು. ನಿನ್ನೊಂದಿಗೆ ನಾನು ಏನೆಂದು ಯುದ್ಧವನ್ನು ಮಾಡಲಿ ? ॥೫೨॥

ಬ್ರಹ್ಮಾ : —

ಹೀಗೆ ನುಡಿದು, ಪ್ರತ್ಯುತ್ತರಕ್ಕೂ ಕಾಯದೇ ಬಾಹುಯುದ್ಧವನ್ನು ಮಾಡುವುದಕ್ಕೋಸ್ಕರ ಶಂಕರನ ಬಳಿಗೆ ಬಂದನು. ಆಗ ದುರ್ಗಾದೇವಿಗೇನೆನಿಸಿತೋ ತಿಳಿಯದು. ಇದ್ದಕ್ಕಿದ್ದಂತೆಯೇ ಮಯೂರೇಶ್ವರನ ನೆನಪಾಗಲು, ಮನಸ್ಸಿನಲ್ಲೇ ಅವನನ್ನು ಸ್ಮರಿಸಿಕೊಂಡಳು. ॥೫೩॥

ದೇವಿಯು ಸ್ಮರಿಸಿದುದೇ ತಡ, ಮಯೂರೇಶಾವತಾರವನ್ನು ಉಪಸಂಹರಿಸುವಾಗ ತಾಯಿಗೆ ತಾನು ಕೊಟ್ಟಿದ್ದ ವಚನದಂತೆ ನಡೆಯಲು ನಿಶ್ಚಯಿಸಿ. ದೇವನು ಬ್ರಾಹ್ಮಣನಂತೆ ರೂಪವನ್ನು ಧರಿಸಿ ಶಿವ-ಸಿಂದೂರರ ನಡುವೆ ಒಂದು ಕ್ಷಣದೊಳಗಾಗಿಯೇ ಬಂದು ನಿಂತುಬಿಟ್ಟನು. ಬ್ರಾಹ್ಮಣರೂಪಿಯಾದ ಮಯೂರೇಶ್ವರನ ಆಗಿನ ತೇಜಸ್ಸು ಕೋಟಿಸೂರ್ಯರು ಒಂದೇ ಕಾಲದಲ್ಲಿ ಬೆಳಗಿದಷ್ಟಿದ್ದಿತು. ॥೫೪॥

**ಸರ್ವಾಂಗಸುಂದರೋ ನಾನಾಭೂಷಣೈರುಪಶೋಭಿತಃ ।**
**ಪರಶುಂ ಮಧ್ಯತಃ ಕೃತ್ವಾ ವಾರಯಾಮಾಸ ದೈತ್ಯಪಮ್ ॥೫೫॥**
**ಉವಾಚ ಶ್ಲಕ್ಷ್ಣಯಾ ವಾಚಾ ಸಿಂದೂರಂ ತಂ ದ್ವಿಜೋತ್ತಮಃ ।**
**ಮಯೂರೇಶ ಉವಾಚ :—**
**ತ್ರೈಲೋಕ್ಯಜನನೀಂ ಗೌರೀಂ ಸ್ಥಾಪಯಾಶು ಮಮಾಂತಿಕೇ ॥೫೬॥**
**ಯುಧ್ಯಸ್ವ ಶಂಕರೇಣ ತ್ವಂ ಯಾವಜ್ಜಯ-ಪರಾಜಯೌ ।**
**ಜಯೋ ಯಸ್ಯ ಭವೇತ್ತೇನ ಗ್ರಾಹ್ಯೇತಿ ನಾನ್ಯಥಾ ವಚಃ ॥೫೭॥**
**ಕ ಉವಾಚ :—**
**ದ್ವಿಜವಾಕ್ಯಂ ಸಮಾಕರ್ಣ್ಯ ಸಿಂದೂರೋ ಹೃಷ್ಟಮಾನಸಃ ॥**
**ಸ್ಥಾಪಯಾಮಾಸ ಗಿರಿಜಾಂ ಯುದ್ಧಾಯ ಬಹುಲಾಲಸಃ ॥೫೮॥**

ಸರ್ವಾಂಗಸುಂದರನು, ಮತ್ತು ನಾನಾ ಭೂಷಣಗಳನ್ನು ಆಯಾ ಅವಯವಗಳಿಗೆ ಧರಿಸಿದ್ದರಿಂದ ಬಹಳ ಶೋಭಾಯಮಾನನಾಗಿದ್ದನು. ಮಧ್ಯೇ ನಿಂತಿದ್ದ ದೇವನು ತನ್ನ ನಿಶಿತಾಯುಧವಾದ ಪರಶುವನ್ನು ನಡುವೆ ಹಿಡಿದು ಪರಶಿವನನ್ನಾಲಿಂಗಿಸಲು ಬಂದಿದ್ದ ದೈತ್ಯನನ್ನು ಹಿಂದಕ್ಕೆ ಸರಿಸಿದನು. ॥೫೫॥

ಅವನು ಹಿಂದಕ್ಕೆ ಸರಿದ ಬಳಿಕ " ಈಗಲೇ ಇವನೊಂದಿಗೆ ಕದನವಾಡುವುದು ಸರಿಯಲ್ಲವಾದ್ದರಿಂದ ಉಪಾಯಾಂತರವನ್ನು ಹೂಡಿ, ಅವನನ್ನು ಸೋಲಿಸಿ ಕಳಿಸಬೇಕೆಂದು ನಿಶ್ಚಯಿಸಿ, ದ್ವಿಜೋತ್ತಮನು ಮೃದು-ಮಧುರವಾಗಿ ಸಿಂದೂರನನ್ನು ಕುರಿತು ಹೀಗೆಂದನು.

ಮಯೂರೇಶ್ವರ : -—

ದೈತ್ಯೇಶ್ವರ! ನಿಮ್ಮ ನಿಮ್ಮ ವಿವಾದ-ಜಗಳಗಳು ಬೇಡ. ಈಗ ನಾವೆಲ್ಲರೂ ಸೇರಿ ಒಂದು ತೀರ್ಮಾನಕ್ಕೆ ಬರೋಣ. ತ್ರಿಲೋಕಜನನಿಯಾದ ಮಹಾದೇವಿಯನ್ನು ಮೊದಲು ನನ್ನ ಬಳಿ ಇರಿಸು. ॥೫೬॥

ಜಯ-ಪರಾಜಯಗಳು ನಿರ್ಣಯವಾಗುವ ವರೆಗೂ ನೀವಿಬ್ಬರೂ ಹೋರಾಡಿರಿ. ನಿಮ್ಮಿಬ್ಬರ ಪೈಕಿ ಯಾರು ಜಯವನ್ನು ಸಂಪಾದಿಸುವರೋ, ಅವರು ಈ ಮಹಾದೇವಿಯನ್ನು ತೆಗೆದುಕೊಳ್ಳಿರಿ. ಈ ನಿಯಮವನ್ನು ಯಾರೊಬ್ಬರೂ ಮೀರಬಾರದು. ಗೆದ್ದವನಿಗೆ ನಾನು ಇವಳನ್ನು ಒಪ್ಪಿಸುತ್ತೇನೆ. ॥೫೭॥

ಬ್ರಹ್ಮಾ :—

ಬ್ರಾಹ್ಮಣರೂಪಿಯಾದ ಮಯೂರೇಶ್ವರನ ಮಾತಿನ ಮರ್ಮವನ್ನರಿಯದವನೂ, ವರಪ್ರಭಾವದಲ್ಲೂ, ಅವನ್ನು ಪಡೆದ ತನ್ನ ಭುಜ-ಬಲ ಪರಾಕ್ರಮಗಳಲ್ಲಿ ದೃಢ ವಿಶ್ವಾಸ

**ತಯೋಸ್ತು ಪಶ್ಯತೋರೇವ ತಾವುಭಾವಪ್ಯಯುದ್ಧ್ಯತಾಮ್ ||**
**ಸಿಂದೂರಶ್ಚ ಮಹೇಶಶ್ಚ ನಾನಾಯುದ್ಧವಿಶಾರದೌ ||೫೯||**
**ಕ್ರೋಧಸಂರಕ್ತನಯನೌ ತುಲ್ಯತೇಜಃಪರಾಕ್ರಮೌ ।**
**ಬಾಹುಭ್ಯಾಂ ವೇಷ್ಟಿತುಂ ಯಾವದಿಯೇಷ ಸೋಽಸುರೋ ಹರಮ್ ||೬೦||**
**ಅದೃಶ್ಯ ಏವ ಪರಶುರಸ್ಯ ಜಘ್ನೇ ಬಲಾದುರಃ ।**
**ಕ್ಷೀಣಶಕ್ತಿಂ ತತೋ ದೈತ್ಯಂ ತ್ರಿಶೂಲೇನಾಹನದ್ಧರಃ ||೬೧||**
**ತತೋಽಶಕ್ತಂ ದ್ವಿಜವರೋ ವದತಿ ಸ್ಮ ಹಿತಂ ವಚಃ ।**

ವುಳ್ಳವನೂ, ಎದುರಾಳಿಯ ವಿಷಯದಲ್ಲಿ ತಿರಸ್ಕಾರಭಾವವುಳ್ಳವನೂ ಆದುದರಿಂದ ರಾಕ್ಷಸನು ಈ ನಿಯಮಕ್ಕೆ ಸಂತೋಷದಿಂದ ಒಮ್ಮೆಲೇ ಒಪ್ಪಿಬಿಟ್ಟನು. ಮತ್ತು ಗಿರಿಜೆಯನ್ನು ಬ್ರಾಹ್ಮಣನ ವಶಕ್ಕೆ ಒಪ್ಪಿಸಿ, ಯುದ್ಧಮಾಡಲು ಬಹಳ ಲಾಲಸನಾಗಿ ಮುನ್ನುಗ್ಗಿದನು. ||೫೮||

ಬ್ರಾಹ್ಮಣ-ಭವಾನಿ ಇವರಿಬ್ಬರೂ ನೋಡುತ್ತಿದ್ದಂತೆಯೇ ಸಿಂದೂರ, ಸ್ಮರಹರರು ಬಹಳ ಕೆಚ್ಚಿನಿಂದ ಯುದ್ಧಮಾಡತೊಡಗಿದರು. ಅವರಿಬ್ಬರೂ ಯುದ್ಧ ಕುಶಲರಾಗಿದ್ದುದರಿಂದ ನಾನಾ ಬಗೆಯಾಗಿದ್ದಿತು, ಅವರ ಹೋರಾಟ. ||೫೯||

ಅವರಿಬ್ಬರೂ ಸಮಬಲರು, ಒಬ್ಬರ ಮೇಲೊಬ್ಬರು ದ್ವೇಷವನ್ನು ಸಾಧಿಸತಕ್ಕವರು. ಅವರ ಕಣ್ಣುಗಳು ಕ್ರೋಧಾತಿಶಯದಿಂದ ಬಹಳ ಕೆಂಪಾಗಿದ್ದವು. ಅಷ್ಟರಲ್ಲಿ ಅಸುರನು ತನ್ನ ಬಾಹುಗಳಿಂದ ಭವನನ್ನು ಬಿಗಿದಪ್ಪಿ ಒಮ್ಮೆಲೇ ಕೊಂದು ಬಿಡೋಣ ಎಂದು ಪ್ರಯತ್ನಿಸಿದನು. ಅಷ್ಟರಲ್ಲಿ ||೬೦||

ಮಯೂರೇಶ್ವರನು ತನ್ನ ಪರಶುವನ್ನು ಅಸುರನ ಕಡೆ ಮುಖಮಾಡಿ ಅವರಿಬ್ಬರ ನಡುವೆ ಅದೃಶ್ಯವಾಗಿ ನಿಂದಿರುವಂತೆ ಪ್ರೇರಿಸಿ ನಿಯೋಜಿಸಿದನು. ಇದನ್ನರಿಯದ ಹುಂಬ ರಾಕ್ಷಸನು ಶಿವನನ್ನು ಬಿಗಿದಪ್ಪಿಬಿಟ್ಟನು. ಆಗ ಮಧ್ಯೇ ಇದ್ದ ಪರಶು ಅಸುರನ ಉರಸ್ಸಿನ ಭಾಗಕ್ಕೆ ಬಲವಾಗಿ ಬಡಿಯಿತು. ಆ ಏಟಿನಿಂದ ಸಿಂದೂರನ ಶಕ್ತಿಯು ಬಹಳಮಟ್ಟಿಗೆ ಕುಂಠಿತವಾಯಿತು. ಇಂತಹ ಸಂಧಿಯನ್ನು ಸಾಧಿಸಿ ಶಂಕರನು ತನ್ನ ತ್ರಿಶೂಲದಿಂದ ಅಸುರನನ್ನು ಬಲವಾಗಿ ತಿವಿದನು. ||೬೧||

ಆಗ ಸಿಂದೂರನ ಶಕ್ತಿ ಮತ್ತಷ್ಟು ಕುಂದಿಹೋಯಿತು. ಅದನ್ನು ನೋಡಿ ಬ್ರಾಹ್ಮಣರೂಪೀ ಮಯೂರರಾಜನು ಅವನನ್ನು ಕುರಿತು ಕೆಲವು ಹಿತವಚನಗಳನ್ನು ನುಡಿದನು.

ಮಯೂರೇಶ ಉವಾಚ :—

ತ್ರೈಲೋಕ್ಯನಾಯಕೇನ ತ್ವಂ ನ ಯುದ್ಧಂ ಕರ್ತುಮರ್ಹಸಿ ||೬೨||

ಗಿರಿಜಾಶಾಂ ವಿಹಾಯಾಶು ವ್ರಜಸ್ವ ನಿಜಮಂದಿರಮ್ ।
ನೋ ಚೇದಯಂ ಶಿವೋ ಭಸ್ಮ ಕರಿಷ್ಯತಿ ತವಾಧುನಾ ||೬೩||

ಕ ಉವಾಚ :—

ಏವಮುಕ್ತೋ ದ್ವಿಜೇನಾಸೌ ವಾಂಛಾಂ ತ್ಯಕ್ತ್ವಾ ಭುವಂ ಯಯೌ ।
ತತಸ್ಸಾ ಪಾರ್ವತೀ ಪ್ರಾಹ ದ್ವಿಜಂ ಪ್ರಾಪ್ತೇ ಜಯಂ ಶಿವೇ ||೬೪||

ಗಿರಿಜೋವಾಚ :—

ಕೋಽಸಿ ತ್ವಂ ಮುನಿಶಾರ್ದೂಲ ! ಯೇನಾಹಂ ಮೋಚಿತಾ ಖಲಾತ್ ।

ದ್ವಿಜ :—

ರಾಕ್ಷಸ ! ಪರಶಿವನು ತ್ರಿಲೋಕಗಳಿಗೂ ನಾಯಕನಾದವನು. ಅವನೊಂದಿಗೆ ನೀನು ಯುದ್ಧವನ್ನು ಮಾಡಲರ್ಹನಲ್ಲ. ||೬೨||

ಇದೋ, ನಿನಗೆ ಒಂದು ಹಿತೋಕ್ತಿಯನ್ನು ಹೇಳುವೆನು, ಕೇಳು. ಗಿರಿಜೆಯ ಮೇಲಿನ ಆಶೆಯನ್ನು ಬಿಟ್ಟುಬಿಡು. ನೆಟ್ಟಗೆ ಬೇಗ ನಿನ್ನ ಮಂದಿರಕ್ಕೆ ಹೊರಟು ಹೋಗು. ಇಲ್ಲವಾದರೆ, ಪರಶಿವನು ನಿನ್ನನ್ನು ಸುಟ್ಟು ಭಸ್ಮಮಾಡಿಬಿಡುವನು. ನನ್ನ ಮಾತನ್ನು ಕೇಳು ||೬೩||

ಬ್ರಹ್ಮಾ :—

ಸಿಂದೂರನಿಗೂ ಅಷ್ಟೇ ಬೇಕಾಗಿದ್ದಿತು. ದ್ವಿಜನ ಮಾತಿನಂತೆ ಗಿರಿಜೆಯ ಮೇಲಿನ ವ್ಯಾಮೋಹವನ್ನು ಮನಸಾ ತ್ಯಜಿಸಿಬಿಟ್ಟನು. ಮತ್ತು ವೇಗಗತಿಯಿಂದ ಭೂಲೋಕಕ್ಕೆ ಓಡಿ ನಡೆದನು. ಆಗ ಪಾರ್ವತಿಯು ಶಿವನಿಗೆ ಜಯ ದೊರೆತುದನ್ನು ನೋಡಿ, ದ್ವಿಜನನ್ನು ಕುರಿತು ಹೀಗೆಂದು ಮಾತನಾಡಿದಳು. ||೬೪||

ಗಿರಿಜೆ :—

ಮುನಿವರ್ಯ! ಅನಿಮಿತ್ತ ಬಂಧುವಾಗಿ ಬಂದು ಆ ಖಲನ ಹಿಡಿತದಿಂದ ನನ್ನನ್ನು ಬಿಡುಗಡೆ ಮಾಡಿದ ನಿನ್ನ ಪರಿಚಯವನ್ನು ಪಡೆಯುವ ತವಕ ನನಗುಂಟಾಗಿದೆ. ನೀನು ಯಾರು? ನಿನ್ನನ್ನು ನೋಡಿದರೆ, ಈಗ ತೋರುತ್ತಿರುವ ಮುನಿಯ

ನಿಜಂ ಮೇ ದರ್ಶಯ ಸ್ವೀಯಂ ರೂಪಂ ನೇದಂ ಸ್ವಭಾವಜಮ್ ||೬೫||
ಮಮ ಪ್ರಾಣಾಧಿಕೋಽಸಿ ತ್ವಂ ಸಖಾ ಪ್ರಾಣಪ್ರದೋ ಯತಃ |
ನ ಭವೇದುಪಕಾರಸ್ತೇ ಪ್ರಾಣೇ ತ್ಯಕ್ತೇ ದ್ವಿಜೋತ್ತಮ ! ||೬೬||
ಕ ಉವಾಚ :—
ಏವಮಾಶ್ರುತ್ಯ ತಾಂ ವಾಚಮುವಾಚ ಸ ಮುನೀಶ್ವರಃ |
ಮಯೂರೇಶ ಉವಾಚ :—
ನಚ ಮಾತರ್ಮಯಾಕಾರಿ, ಕಿಂಚಿದತ್ರ ಮಹೇಶ್ವರಃ ||೬೭||
ಅಜಯತ್ಸಿಂದುರಂ ದೈತ್ಯಂ ಮೋಚಿತಾ ತ್ವಂ ಶಿವೇನ ಹ |
ಕ ಉವಾಚ :—
ಇತ್ಯುಕ್ತ್ವಾ ಪೂರ್ವರೂಪಂ ಸ ಆವಿಶ್ಚಕ್ರೇ ವಿನಾಯಕಃ ||೬೮||

---

ರೂಪ ಸ್ವಾಭಾವಿಕವಲ್ಲವೆಂದು ಕಾಣುತ್ತದೆ. ಹಾಗಿದ್ದರೆ, ನಿನ್ನ ನಿಜವಾದ ರೂಪವನ್ನು ನನಗೆ ತೋರಿಸು. ||೬೫||

ನನ್ನ ಪ್ರಾಣಗಳನ್ನು ಉಳಿಸಿರುವೆಯಾದ ಕಾರಣ ನನ್ನ ಪ್ರಾಣಗಳಿಗಿಂತಲೂ ಅತ್ಯಧಿಕನಾದ ಸಖನೆಂದು ನಾನು ನಿನ್ನನ್ನು ತಿಳಿಯುತ್ತೇನೆ. ದ್ವಿಜೋತ್ತಮ! ಸಕಾಲದಲ್ಲಿ ಇಂದು ನನಗೆ ನಿನ್ನಿಂದ ಉಪಕಾರ ಲಭಿಸದೆ ಹೋಗಿದ್ದರೆ, ಈ ವೇಳೆಗಾಗಲೇ ನಾನು ಪ್ರಾಣವಿಯುಕ್ತೆಯಾಗುತ್ತಲಿದ್ದೆನು. ||೬೬||

ಬ್ರಹ್ಮ :—

ದೇವಿಯಾಡಿದ ಈ ಸರಳ ಮಾತುಗಳನ್ನು ಕೇಳಿ ಮುನಿರೂಪದ ಮಯೂರೇಶನು ಹೀಗೆಂದು ನುಡಿದನು.

ದ್ವಿಜ :—

ತಾಯೇ! ನಾನು ಖಂಡಿತವಾಗಿಯೂ ಯಾವ ವಿಧವಾದ ಉಪಕಾರವನ್ನೂ ಮಾಡಿದವನಲ್ಲ. ಏನಾದರೂ ಉಪಕಾರವಾಗಿದೆ ಎಂದು ನೀನು ಭಾವಿಸುವುದಾದರೆ, ಅದು ನಿನ್ನ ಪತಿ ; ಪರಮೇಶ್ವರನಿಂದ ಆಗಿದೆ ಎಂದು ತಿಳಿ. ||೬೭||

ಸಿಂದೂರ ದೈತ್ಯನೊಂದಿಗೆ ಯುದ್ಧವನ್ನಾಡಿ, ಅವನನ್ನು ಪರಾಜಯಗೊಳಿಸಿದವನು ಮಹಾದೇವನಷ್ಟೇ? ಇದರಲ್ಲಿ ಮುಚ್ಚು, ಮರೆ ಯಾವುದೂ ಇಲ್ಲವಲ್ಲವೇ? ಅವನನ್ನು ಶಿವನು ಜಯಿಸಿದ್ದರಿಂದಲ್ಲವೇ, ನಿನಗೆ ಬಿಡುಗಡೆ ಲಭಿಸಿದುದು?

ಬ್ರಹ್ಮ :—

ಹೀಗೆಂದು ವಿನಾಯಕನು ಹೇಳಿ ದ್ವಿಜನ ರೂಪವನ್ನು ತ್ಯಜಿಸಿ ಮೊದಲಿನಂತೆ

ದಶದೋರ್ದಂಡರುಚಿರಂ ಕರ್ಣಕುಂಡಲಮಂಡಿತಮ್ ।
ಕಸ್ತೂರೀತಿಲಕಂ ರತ್ನ-ಮುಕ್ತಾಮಾಲಾವಿಭೂಷಿತಮ್ ॥೬೯॥
ನಾನಾಲಂಕಾರರುಚಿರಂ ಶೇಷಕಂಠಮಣಿಪ್ರಭಮ್ ।
ದೃಷ್ಟ್ವೈವಂ ಪರಮಾತ್ಮಾನಂ ನನಂದ ಗಿರಿಜಾ ತದಾ ॥೭೦॥
ನನಾಮ ಪಾದಯೋಸ್ತಸ್ಯ ಸ ಉತ್ಥಾಪ್ಯ ಚ ತಾಂ ಜಗೌ ।
ವಿನಾಯಕ ಉವಾಚ : -
ತ್ರೇತಾಯುಗೇ ಪ್ರಾಬ್ರುವಂಸ್ತ್ವಾಂ ದಾಸ್ಯಾಮಿ ದರ್ಶನಂ ಪುನಃ ॥೭೧॥
ಅವತೀರ್ಯ ದ್ವಾಪರೇ ತೇ ಗೃಹೇ ನಾಮ್ನಾ ಗಜಾನನಃ !
ಭವಿಷ್ಯಾಮಿ ಹನಿಷ್ಯಾಮಿ ಸಿಂದೂರಂ ದೈತ್ಯಮೋಜಸಾ ॥೭೨॥

---

ಮಯೂರೇಶ್ವರನ ದಿವ್ಯ ರೂಪವನ್ನು ಧರಿಸಿ ಆವಿರ್ಭವಿಸಿದನು. ॥೬೮॥

ಆ ರೂಪಕ್ಕೆ ನೀಳವಾದ ಹತ್ತು ಭುಜಗಳಿದ್ದವು. ರತ್ನಖಚಿತ ಕರ್ಣಕುಂಡಲ ಗಳು ,ಕಿವಿಗಳಲ್ಲಿ ಇಳಿ ಬಿದ್ದಿದ್ದವು. ಫಾಲದಲ್ಲಿ ಕಸ್ತೂರೀತಿಲಕವನ್ನು ತಿದ್ದಿದ್ದನು. ರತ್ನ-ಮುಕ್ತಾಫಲಗಳಿಂದ ಅಂದವಾಗಿ ಕಾಣುವಂತೆ ನಿರ್ಮಿಸಿದ್ದ ಸುವರ್ಣಮಾಲಿಕೆ ಯನ್ನು ಕೊರಳಿನಲ್ಲಿ ಧರಿಸಿದ್ದನು. ॥೬೯॥

ಅನೇಕ ಬಗೆಯ ದಿವ್ಯಾಭರಣಗಳನ್ನು ಆಯಾ ಅವಯವಗಳಲ್ಲಿ ಒಪ್ಪುವಂತೆ ಅಲಂಕರಿಸಿಕೊಂಡಿದ್ದನು. ಆದಿಶೇಷನನ್ನು ಕಂಠದಲ್ಲಿ ಧರಿಸಿದ್ದರಿಂದ ಅವನ ಶಿರೋ ರತ್ನವು ತನ್ನ ಪ್ರಭೆಯಿಂದ ದೇವನ ದೇಹವನ್ನು ಅತಿಯಾಗಿ ಬೆಳಗುತ್ತಲಿದ್ದಿತು. ಪರಮಾತ್ಮನ ಆ ರೂಪವನ್ನು ನೋಡಿದ ಕೂಡಲೇ ಗಿರಿಜೆಯು ಬಹಳ ಸಂತೋಷ ಪಟ್ಟಳು. ॥೭೦॥

ಅವನ ಪಾದಕಮಲಗಳಿಗೆ ಭಕ್ತಿಯಿಂದ ನಮಸ್ಕರಿಸಿದಳು. ಆಗ ವಿನಾಯಕನು ತಾಯಿಯನ್ನು ತನ್ನ ಕೈಗಳಿಂದ ಹಿಡಿದೆಬ್ಬಿಸಿ ಹೀಗೆಂದು ನುಡಿದನು.

ವಿನಾಯಕ - -

ತ್ರೇತಾಯುಗದಲ್ಲಿ " ನಾನು ನಿನಗೆ ಮಗನಾಗಿ ಜನಿಸಿದ್ದಾಗ ನಿನಗೆ ಇದೇ ರೂಪದಿಂದ ಮತ್ತೊಮ್ಮೆ ದರ್ಶನವನ್ನು ಕೊಡುವೆನೆಂ"ದು ಹೇಳಿದ್ದೆ. ॥೭೧॥

ಮತ್ತು " ದ್ವಾಪರಯುಗದಲ್ಲಿ ತಿರುಗಿ ನಿನ್ನ ಮಗನಾಗಿ ಹುಟ್ಟಿ ' ಗಜಾನನ' ಎಂಬ ಹೆಸರುಳ್ಳವನಾಗುವೆ"ನೆಂದೂ, "ಉನ್ಮತ್ತನಾಗಿ ಜಗವನ್ನು ಪೀಡಿಸುವ ಸಿಂದೂರ ನನ್ನು ನನ್ನ ಸಾಮರ್ಥ್ಯದಿಂದ ನಿಗ್ರಹಿಸುವೆನೆ"ಂದೂ ತಿಳಿಸಿದ್ದೆನು. ಅದರಂತೆಯೇ ಈಗ ನಿನಗೆ ದರ್ಶನವನ್ನಿತ್ತಿರುವೆನು. ॥೭೨॥

**ಕ ಉವಾಚ :—**

**ಮುನಿರೂಪಧರೋ ದೇವ ಉಕ್ತ್ವಾಚಾಂತರಧೀಯತ ।**
**ತತಃ ಶುಶೋಚ ಗಿರಿಜಾ ಮೂರ್ಛಾಂ ಸಾ ಪರಮಾಂ ಯಯೌ ॥೭೩॥**
**ತತ ಊಚೇ ವಿಶ್ವನಾಥೋ**

**ಶಿವ ಉವಾಚ :—**

**ಮನಃ ಸ್ವಸ್ಥಂ ಕುರು ಪ್ರಿಯೇ ! ।**
**ಪಶ್ಯ ತ್ವಂ ಹೃದಿ ತಂ ದೇವಂ ವಿನಾಯಕಮನಾಮಯಮ್ ॥೭೪॥**
**ನ ಮಿಥ್ಯಾ ಭಾಷಿತಂ ತಸ್ಯ ಯದುಕ್ತಂ ತತ್ಕರಿಷ್ಯತಿ ।**

**ಕ ಉವಾಚ :—**

**ಏವಮುಕ್ತ್ವಾ ಮಹಾದೇವೋ ವೃಷಾರೂಢಸ್ತಯಾ ಸಹ ॥೭೫॥**
**ಅಯಯೌ ಪರಮಂ ಪ್ರೀತಃ ಕೈಲಾಸಂ ಪರ್ವತೇಶ್ವರಮ್ ॥೭೬॥**

ಬ್ರಹ್ಮಾ:—

ಮುನಿರೂಪದಿಂದ ಬಂದಿದ್ದ ದೇವರ ದೇವ; ವಿನಾಯಕನು ಪಾರ್ವತೀದೇವಿಯ ಪ್ರಶ್ನೆಗೆಹೀಗೆಂದು ಸಮಂಜಸವಾಗಿ ಉತ್ತರವನ್ನುಹೇಳಿ, ಅಂತರ್ಹಿತನಾದನು. 'ಅವನು ಮಯೂರೇಶ್ವರ' 'ಎಂದು ತಿಳಿದ ಮೇಲೆ,' ಹೆಚ್ಚುಕಾಲ ಅವನನ್ನು ನೋಡಲವಕಾಶವಾಗ ಲಿಲ್ಲವಲ್ಲ, ಎಂದು ಗಿರಿಜೆಯು ಅತಿಯಾಗಿ ಶೋಕಿಸಲಾರಂಭಿಸಿದಳು ॥೭೩॥

ಆಗ ವಿಶ್ವನಾಥನು ಮುಂದೆ ಬಂದು ಹೀಗೆಂದು ಸಮಾಧಾನಪಡಿಸಿದನು.

ಶಿವ :—

ಪ್ರಿಯೇ! ಮನಸ್ಸನ್ನು ಸಮಾಧಾನಗೊಳಿಸು. ಅನಾಮಯನಾದ ವಿನಾಯಕನು ಸರ್ವದಾ ನಿನ್ನ ಹೃದಯದಲ್ಲೇ ಇದ್ದಾನೆ. ಅವನನ್ನು ಧ್ಯಾನಿಸುತ್ತಲಿರು. ॥೭೪॥

ಅವನಾಡಿದ ಮಾತುಗಳು ಎಂದಿಗೂ ಸುಳ್ಳಾಗುವುದಿಲ್ಲ. ಅವನು ಏನೆಂದೆಲ್ಲ ಆಶ್ವಾಸನವನ್ನಿತ್ತಿದ್ದಾನೋ, ಅದರಲ್ಲಿ ಸ್ವಲ್ಪವೂ ವ್ಯತ್ಯಾಸವಾಗದಂತೆ ನೆರವೇರಿಸಿ ಬಿಡುವನು. ಇದರಲ್ಲಿ ಸಂಶಯವೇ ಇಲ್ಲ.

ಬ್ರ .—

ಹೀಗೆ ನುಡಿದು, ಮಹಾದೇವನು ಪಾರ್ವತಿಯೊಡನೆ ತನ್ನ ವಾಹನವಾದ ವೃಷಭ ವನ್ನೇರಿದನು. ॥೭೫॥

ಸಿಂದೂರನೊಡನೆ ಆಕಸ್ಮಾತ್ತಾಗಿ ತನಗೊದಗಿದ್ದ ಯುದ್ಧದ ಸಂದರ್ಭದಲ್ಲಿ ಪರಮಾತ್ಮನು ದರ್ಶನವನ್ನಿತ್ತು, ತನಗೆ ಜಯವನ್ನು ಸಾಧಿಸಿಕೊಟ್ಟ ಸನ್ನಿವೇಶವನು

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ " ಗಿರಿಜಾನಯನಂ" ನಾಮ ಅಷ್ಟಾವಿಂಶದುತ್ತರ ಶತತಮೋಽಧ್ಯಾಯಸ್ಸಮಾಪ್ತಃ**

ಸ್ಮರಿಸಿದಂತೆಲ್ಲ ಅಭವನಿಗೆ ಹರ್ಷವು ಉಕ್ಕಿ ಬಂದಿತು. ಹಾಗೆಯೇ ಮಾರ್ಗವನ್ನು ಕ್ರಮಿಸುತ್ತ ಪರ್ವತೇಶ್ವರನಾದ ಕೈಲಾಸಪರ್ವತಕ್ಕೆ ಮರಳಿ ಬಂದನು. ||೭೬||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಾರ್ಧದಲ್ಲಿ " ಗಿರಿಜಾನಯನ " ಎಂಬಲ್ಲಿಗೆ ನೂರ ಇಪ್ಪತ್ತೆಂಟನೆಯ ಅಧ್ಯಾಯಾನುವಾದವು ಮುಗಿದುದು.

॥ ಶ್ರೀ ಗಣೇಶಾಯ ನಮಃ

# ಅಥೈಕೋನ ತ್ರಿಂಶದುತ್ತರ ಶತತಮೋಽಧ್ಯಾಯಃ

ಕ ಉವಾಚ :—

ತತೋ ದೈತ್ಯೋ ಮೃತ್ಯುಲೋಕಂ ಗತೋ ಗರ್ವಾದಗರ್ಜತ ।
ಕಂಪಿತಾಃ ಪರ್ವತಾಸ್ಸರ್ವೇ ವೃಕ್ಷಾ ನಿಪತಿತಾ ಭುವಿ ॥೧॥

ಪಕ್ಷಿ-ಸಿಂಹಾಃ ಶ್ವಾಪದಾನಿ ಬಭ್ರಮುಃ ಕಾನನೇ ತದಾ ।
ತತೋ ಜಿಗಾಯ ನೃಪತೀನ್ ಸರ್ವಾನ್ ವೀರಾಂಶ್ಚ ದಾನವಃ ॥೨॥

ವ್ಯಾಸ ಉವಾಚ :—

ಬ್ರಹ್ಮಾದಯೋ ಜಿತಾ ಯೇನ ತೇನಾಯುಧ್ಯನ್ ಕಥಂ ನೃಪಾಃ? ।

ಶ್ರೀ ಮಂಗಲಮೂರ್ತಯೇ ನಮಃ ।

## ೧೨೯ ನೆಯ ಅಧ್ಯಾಯ

ಬ್ರಹ್ಮಾ :—

ಕೈಗೊಂಡ ಕಾರ್ಯ ವಿಫಲವಾಗಲು "ಮತ್ತೊಮ್ಮೆ ಇವನನ್ನು ನೋಡಿಕೊಳ್ಳೋಣ" ಎಂದು ನಿಶ್ಚಯಿಸಿಕೊಂಡ ದೈತ್ಯ; ಸಿಂದೂರನು ನೆಟ್ಟಗೆ ಮರ್ತ್ಯಲೋಕಕ್ಕೆ ಬಂದನು ಮತ್ತು ಮಹಾಗರ್ವದಿಂದೊಮ್ಮೆ ಘಟ್ಟಿಯಾಗಿ ಗರ್ಜಿಸಿದನು. ಆ ಶಬ್ದಕ್ಕೆ ಪರ್ವತ, ವೃಕ್ಷ ಇವೆಲ್ಲ ನಡುಗಿ ಬುಡಮೇಲಾಗಿ ಉರುಳಿ ಬಿದ್ದವು- ॥೧॥

ಕಾಡಿನಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ನಾನಾ ಜಾತಿಯ ಪಕ್ಷಿಗಳು ಚಿಲಿಪಿಲಿ ಗುಟ್ಟುತ್ತ ದಿಕ್ಕೆಟ್ಟು ಹಾರಾಡಿದವು. ಸಿಂಹ ಮೊದಲಾದ ಶ್ವಾಪದಗಳು ಆ ಧ್ವನಿಗೆ ಹೆದರಿ, ಕಾನನದಲ್ಲಿ ಒಂದೇ ಸಮ ಅತ್ತಿತ್ತ ಸುತ್ತಾಡಲಾರಂಭಿಸಿದವು. ಅನಂತರ ದಾನವನು ಆಯಾ ರಾಜ್ಯಗಳಿಗೆ ಹೋಗಿ, ಅಲ್ಲಿನ ಎಲ್ಲ ರಾಜರನ್ನೂ, ಇತರ ವೀರರೆನಿಸಿದವರನ್ನೂ ಯುದ್ಧದಲ್ಲಿ ಸೋಲಿಸಿದನು. ॥೨॥

ವ್ಯಾಸ :—

ಪರಮೇಷ್ಠಿನ್! ಬ್ರಹ್ಮಾದಿ ದೇವತೆಗಳು ಸಹ ಸಿಂದೂರನ ಸಂಗಡ ಸಮರವಾಡಲು ಹೆದರಿ ಸೋತು, ಹೋದರೆಂದಲ್ಲವೇ ನೀನು ಹೇಳಿದ್ದು ? ಹೀಗಿರುವಾಗ, ದುರ್ಬಲ

ಕ ಉವಾಚ :—
ಕೇಚಿದ್ದ್ವಿಧಾಕೃತಾಸ್ತೇನ ಕೇಚಿನ್ನಭಸಿ ಬಭ್ರಮುಃ ||೩||
ಕೇಚಿಚ್ಚ ಸಂಮುಖೇ ಯುದ್ಧಂ ಕೃತ್ವಾ ಸ್ವರ್ಗಂ ಗತಾ ನೃಪಾಃ ।
ಕೇಚಿಚ್ಚ ಶರಣಂ ಯಾತಾಃ ಸೇವಕತ್ವಮುಪಾಗತಾಃ ||೪||
ಕೇಚಿದ್ಭ್ರಷ್ಟಪದಾ ಜಗ್ಮುರಭಿಮಾನೇನ ಕಾನನಮ್ ।
ಏವಂ ಜಿತ್ವಾ ನೃಪಾನ್ ಸರ್ವಾನ್ ಮುನೀನಾಮಾಕ್ರಮೇ ಮತಿಮ್ ||೫||
ಅಕರೋದ್ದುಷ್ಟಬುದ್ಧಿಸ್ಸ ಬಬಂಧ ಸಹಸಾ ಚ ತಾನ್ ।
ತದಾ ಕೇಚಿನ್ಮುನಿಗಣಾಃ ತ್ಯಕ್ತ್ವಾ ದೇಹಂ ದಿವಂ ಗತಾಃ ||೬||

ರಾದ ರಾಜರು ಅವನೊಡನೆ ಯುದ್ಧಕ್ಕಾದರೂ ಹೇಗೆ ನಿಂತರು? ನನ್ನ ಈ ಸಂಶಯವನ್ನು ಪರಿಹರಿಸಬೇಕು.

ಬ್ರಹ್ಮ:—

ಪ್ರತಿಸ್ಪರ್ಧಿಯಾಗಿ ರಕ್ಕಸನು ಎದುರಿಗೆ ಬಂದು ನಿಂತು ಯುದ್ಧ ಮಾಡಲಿಕ್ಕೆ ಕರೆದರೆ, ಕ್ಷತ್ರಿಯರು ಕದನಕ್ಕೆ ಹೋಗದಿರಲು ಸಾಧ್ಯವೇ? ಕ್ಷತ್ರಿಯರು ಸಿಂದೂರನನ್ನು ಸೋಲಿಸಿದರೆಂದೇನೂ ನಾನು ಹೇಳಿಲ್ಲವಲ್ಲ? ಅಷ್ಟರಲ್ಲೇ ಏಕೆ ನಿನಗೆ ಸಂಶಯ? ಪರಿಣಾಮವೇನಾಯಿತೆಂಬುದನ್ನು ಕೇಳು. ರಾಕ್ಷಸನು ಎಮರಾಳಿಗಳ ಪೈಕಿ ಕೆಲವರನ್ನು ತೂರಿ ಅಂತರಿಕ್ಷಕ್ಕೆಸೆದು ಎಂಜಲು ಹಾಳೆಗಳ ಹಾಗೆ ಹಾರಾಡುವಂತೆ ಮಾಡಿದನು. ||೩||

ಸ್ವಾಭಿಮಾನಿಗಳಾದ ಕೆಲವು ರಾಜರು ತಮ್ಮ ದೇಹದಲ್ಲಿ ಬಲವಿರುವ ವರೆಗೂ ಅಸುರನೊಂದಿಗೆ ಕಾದಾಡಿ ಕೊನೆಗೆ ಸತ್ತು ಸ್ವರ್ಗಕ್ಕೆ ತೆರಳಿದರು. ಕೈಯಲ್ಲಿ ಹರಿಯದವರು ವಿಧಿ ಇಲ್ಲದೆ, ಶರಣು ಹೋಗಿ ಅವನ ದಾಸ್ಯವನ್ನು ಮಾಡಲು ಒಪ್ಪಿಕೊಂಡರು. ||೪||

ಮತ್ತೆ ಕೆಲವು ಸ್ವಾಭಿಮಾನಿಗಳು ರಾಜಪದವಿಗಳನ್ನು ಕಳೆದುಕೊಂಡು ಅರಣ್ಯಕ್ಕೆ ಹೋಗಿ ಕಷ್ಟದಿಂದ ಜೀವಿಸುತ್ತ ತಿರುಗಾಡಿದರು. ಕ್ಷತ್ರಿಯರನ್ನೆಲ್ಲ ಈರೀತಿಯಾಗಿ ಶಾಸನಮಾಡಿದ ಬಳಿಕ ಅಸುರನು "ಇನ್ನು ಮೇಲೆ ಮುನಿಗಳನ್ನು ಆಕ್ರಮಿಸೋಣ" ಎಂದು ಚಿಂತಿಸಿದನು. ||೫||

ಮಹಾ ದುಷ್ಟಬುದ್ಧಿಯಾದ ಸಿಂದೂರನು ಕೂಡಲೇ ಅವರಿದ್ದ ಕಡೆಗೆ ಧಾವಿಸಿ ನಡೆದು, ಎಲ್ಲರನ್ನೂ ಬಲಾತ್ಕಾರದಿಂದ ಬಂಧಿಸಿಟ್ಟನು. ಅಸುರನ ಉಪಟಳವನ್ನು ತಡೆಯಲಾರದೇ ಅನೇಕ ಮಂದಿ ಮುನಿಗಳು ಯೋಗಶಕ್ತಿಯಿಂದ ತಮ್ಮ ದೇಹಗಳನ್ನು ವಿಸರ್ಜಿಸಿ, ಸ್ವರ್ಗಲೋಕಕ್ಕೆ ತೆರಳಿದರು. ||೬||

ಕೇಚಿಚ್ಚ ಮೇರುಕಂದರ್ಯಾಂ ಸ್ಯವರ್ಸ ವಿಗತಜ್ವರಾಃ ।
ಕೇಚಿಚ್ಚ ನಿಹತಾಸ್ತೇನ ಕೇಚಿಚ್ಚ ತಾಡಿತಾ ಭೃಶಮ್ ॥೭॥

ಪ್ರಾಸಾದಾಸ್ಸಕಲಾಸ್ತೇನ ವಿಧ್ವಸ್ತಾ ದೇವತಾ ಅಪಿ ।
ಏವಂ ತು ಪ್ರಲಯೇ ಜಾತೇಲುಪ್ತ್ಯ ಕ್ರಿಯಾಶ್ಚ ವೈದಿಕಾಃ ॥೮॥

ಸ್ವಾಹಾ ಸ್ವಧಾ ವಷಟ್ಕಾರಾ ಹಾಹಾಕಾರೋಽಪ್ಯಜಾಯತ ।
ದೇವಾ ಗಿರಿಗುಹಾಸ್ಥಾಸ್ತೇ ಮುನಯೋ ಯಕ್ಷ-ಕಿನ್ನರಾಃ ॥೯॥

ಸ್ಯಮಂತ್ರಯಂತ ಕಾರ್ಯಾರ್ಥಂ ತತ್ರ ಪ್ರಾಹ ಬೃಹಸ್ಪತಿಃ ।

---

'ತಮ್ಮನ್ನು ಆಕ್ರಮಿಸಿ ಬಂಧಿಸಿಡಲು ಸಿಂದೂರನು ಬರುತ್ತಿರುವನೆ'ಂಬ ಸಂಗತಿಯನ್ನು ದೂರದಿಂದಲೇ ಅರಿತ ಅನೇಕ ಋಷಿಗಳು ಮೇರುಪರ್ವತದ ಕಮರಿಗಳಲ್ಲಿ ಹೋಗಿ ಅಡಗಿ ನಿಶ್ಚಿಂತೆಯಿಂದ ಕುಳಿತರು. ಕೆಲವರು ಅವನ ಕೈಗೆ ಸಿಲುಕಿ, ಏಟುತಿಂದು ಮೃತಿಯನ್ನೈದಿದರು. ಮತ್ತೂ ಕೆಲವರು ಅವನ ಕೈಯಿಂದ ಹೊಡೆತ-ಒದೆತಗಳನ್ನು ತಿನ್ನುತ್ತ, ಚಿತ್ರವಿಚಿತ್ರ ಹಿಂಸೆಗಳಿಗೆ ಗುರಿಯಾದರು. ॥೭॥

ಅನೇಕ ಭವ್ಯ ಮಂದಿರಗಳು, ದೇವತಾಯತನಗಳು ಎಲ್ಲವೂ ಅಸುರನ ಆಕ್ರಮಣಕ್ಕೆ ಒಳಪಟ್ಟು ಧ್ವಂಸವಾಗಿ ಹೋದವು. ಪ್ರಪಂಚಕ್ಕೆ ಪ್ರಳಯವನ್ನೇ ತಂದೊಡ್ಡಿದಂತೆ ಅಸುರನು ಹಾವಳಿಯನ್ನು ಮಾಡಿದನು. ಹೇಳತಕ್ಕವರೂ, ಕೇಳತಕ್ಕವರೂ ಯಾರೂ ಇಲ್ಲದಂತಾಗಲು, ಎಲ್ಲೂ ನೀತಿ-ನಿಯಮಗಳು ಉಳಿಯದೆ, ವೇದೋಕ್ತ ಕರ್ಮಗಳಾವೂ ನಡೆಯದಂತಾದವು. ॥೮॥

ದೇವರ್ಷಿ-ಪಿತೃಕಾರ್ಯಗಳೆಲ್ಲ ಸಂಪೂರ್ಣವಾಗಿ ನಿಂತುಹೋದುದರಿಂದಲೂ ಸಿಂದೂರನನ್ನಾಶ್ರಯಿಸಿದವರು ಅವನ ಒತ್ತಾಯಕ್ಕೊಳಗಾಗಿ ಇಷ್ಟವಿಲ್ಲದಿದ್ದರೂ ದುರಾಚಾರಪ್ರವೃತ್ತರಾಗಲಾರಂಭಿಸಿದುದರಿಂದಲೂ ಕಾಲಕಾಲಕ್ಕೆಮಳೆ-ಬೆಳೆಗಳಾಗದೆ, ನೀರಕ್ಷಾಮವು ತಾಂಡವವಾಡತೊಡಗಿತು. ಜನರು ಹಸಿವಿನಿಂದ ಕಂಗೆಟ್ಟು ಹಾಹಾಕಾರವನ್ನು ಮಾಡಿದರು. ಗಿರಿ-ಗುಹೆಗಳಲ್ಲಿ ಅಡಗಿದ್ದ ದೇವತೆಗಳೂ, ಮುನಿಗಳೂ, ಯಕ್ಷ-ಕಿನ್ನರರೂ

ಒಂದೆಡೆ ನೆರೆದು, ಈ ವಿಪತ್ತನ್ನು ಪರಿಹರಿಸಿಕೊಳ್ಳಲಿಕ್ಕೆ ಯಾವ ಉಪಾಯವನ್ನು ಮಾಡಬೇಕೆಂಬುವ ವಿಷಯವನ್ನು ತಿಳಿಯಲು ದೇವಗುರುವಾದ ಬೃಹಸ್ಪತಿಯನ್ನು ಪ್ರಶ್ನಿಸಿದರು. ಆಗ ಗುರು ತನ್ನ ಮನೋಗತವನ್ನು ಹೀಗೆಂದುಸುರಿದನು.

ಬೃಹಸ್ಪತಿರುವಾಚ :—

ವಿದ್ಯಮಾನೇಭ್ಯೋ ದೇವೇಭ್ಯಸ್ತೇಭ್ಯಸ್ಸರ್ವೇಭ್ಯ ಏವ ಚ ||೧೦||

ನ ಭಯಂ ವಿದ್ಯತೇ ತಸ್ಯ ತಸ್ಮಾದ್ದೇವಂ ವಿನಾಯಕಮ್ ।

ಪ್ರಾರ್ಥಯಧ್ವಂ ಯದಾ ವಿಪ್ರಾಃ ಪ್ರಾದುರ್ಭಾವಂ ಶಿವಾಲಯೇ ||೧೧||

"ಗಜಾನನೇತಿ" ನಾಮ್ನಾ ಸ ಕರಿಷ್ಯತಿ ಚ ಸಾಂಪ್ರತಮ್ ।

ಹನಿಷ್ಯತಿ ಬಲಾದ್ದೈತ್ಯಂ ಸಿಂದೂರಂ ನಾತ್ರ ಸಂಶಯಃ ||೧೨||

ನಿರಾಬಾಧಂ ಜಗತ್ಸರ್ವಂ ಭವಿಷ್ಯತಿ ತದಾ ಸುರಾಃ ! ।

ಕ ಉವಾಚ :—

ಏವಮುಕ್ತಾಸ್ತು ಜೀವೇನ ತಂ ತು ದೇವಾದಯೋಽಖಿಲಾಃ ||೧೩||

---

ಬೃಹಸ್ಪತಿ :—

ಇಲ್ಲಿ ವಾಸಿಸತಕ್ಕ ದೇವತೆಗಳು, ಮುನಿಗಳು ಮೊದಲಾದವರೆಲ್ಲರಿಗೂ ಕ್ಷೇಮ ಉಂಟಾಗಬೇಕಾದರೆ ಪರಮಾತ್ಮನ ಅನುಗ್ರಹವಿರಬೇಕು. ಅದನ್ನು ನಾವು ಮೊದಲು ಸಂಪಾದಿಸಿಕೊಂಡರೆ, ಯಾರೊಬ್ಬರೂ ಯಾವ ಚಿಂತೆಗೂ ಒಳಗಾಗದೆ, ನಿರ್ಭಯ ವಾಗಿರಬಹುದು. ||೧೦||

ಅದುದರಿಂದ ದೇವದೇವನಾದ ವಿನಾಯಕನನ್ನು ಈ ಸದ್ಬ್ರಾಹ್ಮಣರೂ, ದೇವ ಗಂಧರ್ವ ಕಿನ್ನರ ಕಿಂಪುರುಷರೂ ಸೇರಿ ಒಮ್ಮನಸ್ಸಿನಿಂದ ಪ್ರಾರ್ಥಿಸಿರಿ. ಆಗ ಅವನು ಪ್ರಸನ್ನನಾಗಿ ಪರಶಿವನ ಮನೆಯಲ್ಲಿ ಅವತರಿಸುವನು. ||೧೧||

ದೇವನು ಈಗಿನ ಈ ಅವತಾರದಲ್ಲಿ 'ಗಜಾನನ' ಎಂಬ ಶುಭನಾಮದಿಂದ ಪ್ರಸಿದ್ಧಿಯನ್ನು ಪಡೆಯುತ್ತಾನೆ. ಹಾಗೂ ಬಲಾತ್ಕಾರದಿಂದ ಸಿಂದೂರ ದೈತ್ಯನನ್ನು ನಿಗ್ರಹಿಸುತ್ತಾನೆ. ಈ ವಿಷಯದಲ್ಲಿ ನೀವಾರೂ ಸ್ವಲ್ಪ ಕೂಡ ಸಂದೇಹಪಡ ಬೇಕಾಗಿಲ್ಲ. ||೧೨||

ಅಸುರನು ಮೃತಿಯನ್ನೈದಿದನೆಂದ ಬಳಿಕ, ಜಗವೆಲ್ಲವೂ ನಿರ್ಭೀತವಾಗುವುದು. ದೇವತೆಗಳೇ ! ಆಗ ನೀವು ಮೊದಲಿನಂತೆ ಹವಿರ್ಭಾಗಿಗಳಾಗುವಿರಿ.

ಬ್ರ

ಜೀವನು (ಗುರು) ಹೀಗೆಂದು ಯುಕ್ತಿಯನ್ನು ಹೇಳಲು ಎಲ್ಲ ದೇವತೆಗಳೂ ಏಕೀಭವಿಸಿ, ದೇವರ ದೇವ ; ||೧೩||

**ಭಕ್ತ್ಯಾ ಪರಮಯಾ ಯುಕ್ತಾಃ ತುಷ್ಟುವುಸ್ತಂ ವಿನಾಯಕಮ್ ।**
**ದೇವಾ ಊಚುಃ :—**
**ಜಗತಃ ಕಾರಣಂ ಯೋऽಸೌ ರವಿನಕ್ಷತ್ರಸಂಭವಃ ॥೧೪॥**

**ಸಿದ್ಧ-ಸಾಧ್ಯಗಣಾಃ ಸರ್ವೇ ಯತ ಏವ ಚ ಸಿಂಧವಃ ।**
**ಗಂಧರ್ವಾಃ ಕಿನ್ನರಾ ಯಕ್ಷಾ ಮನುಷ್ಯೋऽರಗ-ರಾಕ್ಷಸಾಃ ॥೧೫॥**

**ಯತಶ್ಚರಾಚರಂ ವಿಶ್ವಂ ತಂ ನಮಾಮ ವಿನಾಯಕಮ್ ।**
**ಯತೋ ಬ್ರಹ್ಮಾದಯೋ ದೇವಾ ಮುನಯಶ್ಚ ಮಹರ್ಷಯಃ ॥೧೬॥**

**ಯತೋ ಗುಣಾಸ್ತ್ರಯೋ ಜಾತಾಸ್ತಂ ನಮಾಮ ವಿನಾಯಕಮ್ ।**

---

ವಿನಾಯಕನನ್ನು ಪರಮ ಭಕ್ತಿಯಿಂದ ಹೀಗೆ ಸ್ತುತಿಸಲಾರಂಭಿಸಿದರು.

ದೇವತೆಗಳು :—

ಭಗವನ್ ! ಚರಾಚರಾತ್ಮಕವಾದ ಈ ಜಗತ್ತಿಗೆ ನೀನು ಮೂಲಕಾರಣನಾಗಿರುವೆ. ಜಗತ್ತನ್ನು ಬೆಳಗುತ್ತಿರುವ ರವಿ, ನಕ್ಷತ್ರ ಮೊದಲಾದ ತೇಜೋಧಾತುಗಳಿಗೆ ನೀನು ಉತ್ಪತ್ತಿಸ್ಥಾನನಾಗಿರುವೆ. ॥೧೪॥

ಸಿದ್ಧರೂ, ಸಾಧ್ಯರೂ, ಎಲ್ಲರೂ ನಿನ್ನಿಂದಲೇ ಜನಿಸಿದವರು. ಯಾರಿಂದಲೂ ಅಳೆದು ನೋಡಲಸಾಧ್ಯವಾದ ಈ ಸರಿತ್ಪತಿ (ಸಮುದ್ರ) ಗಳು ನಿನ್ನಿಂದ ನಿರ್ಮಿತವಾಗಿರುತ್ತವೆ. ದೇವಗಾಯಕರಾದ ಈ ಗಂಧರ್ವರು, ಇತ್ತ ಕಡೆ ನಿಂದಿರುವ ಈ ಕಿನ್ನರರು ಯಕ್ಷರು, ಮನುಷ್ಯರು, ಸರ್ಪರೂಪ ಪ್ರಾಣಿಗಳು, ಮಾಂಸಾಹಾರಿಗಳಾದ ರಾಕ್ಷಸರು ಎಲ್ಲರಿಗೂ ನೀನು ಜನಕನು. ॥೧೫॥

ಏವಮಾದಿ ಸಕಲ ಚರಾಚರಾತ್ಮಕವಾದ ಈ ವಿಶ್ವವು ಯಾವ ಮಹಾತ್ಮನ ಮನಸ್ಸಂಕಲ್ಪಮಾತ್ರದಿಂದಲೇ ಉದಿಸಿ ಬಂದಿದೆಯೋ, ಅಂತಹ ವಿಶ್ವಂಭರ ಮೂರ್ತಿ ; ವಿನಾಯಕನನ್ನು ನಾವು ನಮಸ್ಕರಿಸುವೆವು. 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' ಎಂದು ಶ್ರುತಿಶಿರವು ಸಾರುತ್ತಿರುವಂತೆ ಈ ಪ್ರಪಂಚವನ್ನು ನಿರ್ಮಿಸಿದ ಆದಿಜೀವ, ಸೃಷ್ಟಿಕರ್ತಾ ; ಚತುರ್ಮುಖನನ್ನು ಸಹ ನೀನು ಸೃಜಿಸಿರುವೆ. ವಸಿಷ್ಠ, ವಾಮನ, ಗೌತಮ, ಸನಕ ಸನಂದನಾದಿ ಮುನಿಗಳೂ, ವಿಶ್ವಾಮಿತ್ರಾದಿ ಮಂತ್ರದ್ರಷ್ಟೃ ಋಷಿಗಳೂ ನಿನ್ನಿಂದಲೇ ಸೃಷ್ಟರಾಗಿದ್ದಾರೆ. ॥೧೬॥

ಜಗತ್ತಿನ ಉತ್ಪತ್ತಿಗೆ ಮೂಲಕಾರಣಗಳಾದ ಸತ್ತ್ವ, ರಜಸ್ಸು ಹಾಗೂ ತಮಸ್ಸು ಈ ಮೂರು ಗುಣಗಳೂ ನಿನ್ನಿಂದ ಉತ್ಪನ್ನವಾಗಿ ಬಂದಿವೆ. ಸರ್ವಾಧಾರನಾದ

**ಯತೋ ನಾನಾವತಾರಾಶ್ಚ ಯಶ್ಚ ಸರ್ವಹೃದಿ ಸ್ಥಿತಃ ||೧೭||**

**ಯಂ ಸ್ತೋತುಂ ನೈವ ಶಕ್ನೋತಿ ಶೇಷಸ್ತಂ ಗಣಪಂ ಭಜೇತ್ ।**
**ಸಿಂದೂರೋ ನಿರ್ಮಿತಃ ಕೇನ, ವಿಶ್ವಸಂಹಾರಕಾರಕಃ ? ||೧೮||**

**ತೇನಾರ್ತಿಂ ಪ್ರಾಪಿತಂ ವಿಶ್ವಂ ತ್ವಯಿ ಸ್ವಾಮಿನಿ ಜಾಗ್ರತಿ ।**
**ಅನ್ಯಂ ಕಂ ಶರಣಂ ಯಾಮಃ ಕೋ ನು ಪಾಸ್ಯತಿ ನೋಽಖಿಲಾನ್ ? ||೧೯||**

**ಜಹ್ಯೇನಂ ದುಷ್ಟಬುದ್ಧಿಂ ತ್ವಮವತೀರ್ಯ ಶಿವಾಲಯೇ ।**

**ಕ ಉವಾಚ :—**

**ಇತ್ಯುಕ್ತ್ವಾ ಪರಿತೇಪುಸ್ತೇ ನಾನಾನುಷ್ಠಾನತತ್ಪರಾಃ ||೨೦||**

---

ವಿನಾಯಕ ! ನಿನಗೆ ವಂದಿಸುವೆವು ಅವತಾರಿಕ ಪುರುಷರೆನಿಸುವ ಮಹಾಮಹಿಮರೆಲ್ಲರೂ ನಿನ್ನ ಪ್ರಭಾವದ ಹಿನ್ನೆಲೆಯಿಂದಲೇ ಅನೇಕಾದ್ಭುತ ಪವಾಡಗಳನ್ನು ತೋರಿಸಿದ್ದಾರೆ. ಸಕಲ ಪ್ರಾಣಿಗಳ ಹೃದಯಕುಹರಗಳಲ್ಲೂ ಅಂತರ್ಯಾಮಿಯಾಗಿ ನೀನು ನೆಲೆಸಿರುವೆ. ||೧೭||

ಸಹಸ್ರ ಫಣನಾದ ಆದಿಶೇಷನಿಗೆ ಯಾರ ಗುಣಗಣವನ್ನು ವರ್ಣಿಸಲಿಕ್ಕೆ ಶಕ್ತಿ ಸಾಲದೋ, ಅಂತಹ ಗಣಪತಿಯನ್ನು ಸರ್ವದಾ ಭಯ–ಭಕ್ತಿಗಳಿಂದ ಭಜಿಸತಕ್ಕದ್ದು. ಭಗವನ್ ! 'ಸಿಂದೂರ' ಎಂಬ ಬಲಿಷ್ಠ ದೈತ್ಯನೊಬ್ಬನು ಉದಿಸಿ ಬಂದಿದ್ದಾನೆ. ಅಂತಹ ದುಷ್ಟಾತ್ಮನನ್ನು ಯಾರು ಸೃಜಿಸಿದರೋ, ಗೊತ್ತಾಗಲೊಲ್ಲದು. ಅವನು ಈ ವಿಶ್ವವನ್ನೆಲ್ಲ ಸಂಹರಿಸುತ್ತಲಿದ್ದಾನೆ. ||೧೮||

ಪರಮೇಶ್ವರ ! ನಿನ್ನಿಂದ ಸೃಷ್ಟವಾದ ಈ ವಿಶ್ವ, ನೀನು ಜಾಗರೂಕನಾಗಿರುವಾಗಲು ಸಹ ಆ ಪಾಪಿಯ ಪೀಡೆಗೆ ಸಿಕ್ಕು ಹೋಗಿದೆ. ನಿನ್ನನ್ನಲ್ಲದೇ ನಾವು ಮತ್ತಾರನ್ನು ಶರಣು ಹೊಂದೋಣ ? ನಮ್ಮನ್ನು ಈ ವಿಪತ್ತಿನಿಂದ ಪಾರುಮಾಡಿ, ಸಂರಕ್ಷಿಸತಕ್ಕವರು ಬೇರೆ ಯಾರಿದ್ದಾರೆ ? ||೧೯||

ದೇವ ! ವಿಲಂಬಿಸಬೇಡ. ಶಿವಾಲಯದಲ್ಲಿ ಬೇಗನೆ ಅವತರಿಸು. ಈ ದುಷ್ಟಬುದ್ಧಿ ; ರಾಕ್ಷಸನನ್ನು ಕೊಂದುಬಿಡು.

ಬ್ರಹ್ಮ :—

ಹೀಗೆಂದು ಹಲುಬಿ, ನಾನಾಬಗೆಯ ಅನುಷ್ಠಾನಗಳಲ್ಲಿ ನಿರತರಾಗಿ ಬಹಳ ಕಠಿಣ ರೀತ್ಯಾ ತಪಿಸಲಾರಂಭಿಸಿದರು. ||೨೦||

ನಿರಾಹಾರಾ ಯತಾಹಾರಾಃ ಪ್ರಾಣಾಯಾಮಪರಾಯಣಾಃ ।
ಏಕಪಾದಸ್ಥಿತಾಃ ಕೇಚಿಜ್ಜಲಮಧ್ಯೇ ಸ್ಥಿತಾಃ ಪರೇ ॥೨೧॥

ಧೂಮಪಾನರತಾಃ ಕೇಚಿತ್ಕೇಚಿಚ್ಚ ಮೌನಮಾಸ್ಥಿತಾಃ ।
ಊರ್ಧ್ವಬಾಹುತಯಾ ಕೇಚಿತ್ಕೇಚಿಚ್ಚ ಯೋಗಮಾಸ್ಥಿತಾಃ ॥೨೨॥

ಕೇಚಿಚ್ಚ ಕರ್ತರ್ಸ್ವಾನ್ ಕೇಶಾನ್ ಕೇಚಿಚ್ಚ ಮಸ್ತಕಾನಪಿ ।
ಏವಂ ತೇಷಾಂ ನಿರೀಕ್ಷ್ಯೈವ ತಪಾಂಸಿ ಗಣರಾಟ್ತದಾ ॥೨೩॥

ಆವಿರಾಸೀತ್ಕೋಟಿಸೂರ್ಯಪ್ರಲಯಾನಿಲಸನ್ನಿಭಃ ।

---

ಕೆಲವು ಕಾಲ ಯಾವ ರೀತಿಯ ಆಹಾರವನ್ನೂ ಸೇವಿಸಲಿಲ್ಲ. ಪ್ರಾಣಾಯಾಮಾನುಷ್ಠಾನ ಪರರಾಗಿ ಕುಳಿತಾಗ, ಆಹಾರ ಸೇವನೆಯನ್ನು ಬಹು ಮಟ್ಟಿಗೆ ಮಿತಿಗೊಳಿಸಿಕೊಂಡರು. ಕೆಲವರು ಒಂದೇ ಕಾಲಿನ ಮೇಲೆ ತಮ್ಮ ದೇಹದ ಭಾರವನ್ನೆಲ್ಲ ಇರಿಸಿ ನಿಂತು ತಪಸ್ಸನ್ನು ಮಾಡಿದರು. ಕೆಲವರಂತೂ ನಡುವಿನವರೆಗೆ ನೀರಿನಲ್ಲಿಳಿದು ನಿಂತು ತಪಶ್ಚರಿಸಿದರು. ॥೨೧॥

ಕೆಲವರು ತಮ್ಮ ತಪಸ್ಸನ್ನು ಮತ್ತೂ ಕಠಿಣಗೊಳಿಸಿ ಉಸಿರು ಕಟ್ಟಿಹೋಗುವಂತಹ ಹೊಗೆಯ ನಡುವೆ ಕುಳಿತು ದೇವನನ್ನು ಧ್ಯಾನಿಸಿದರು. ಕೆಲವರು ವಾಗ್ವ್ಯಾಪಾರವನ್ನು ಸಂಪೂರ್ಣವಾಗಿ ನಿಲ್ಲಿಸಿ ತಪಿಸಿದರು. ಕೆಲವರು ತಮ್ಮ ಬಾಹುಗಳೆರಡನ್ನೂ ಮೇಲಕ್ಕೆತ್ತಿ ನಿಂತು ತಪವನ್ನನುಷ್ಠಿಸಿದರು. ಕೆಲವರು ತಮ್ಮ ಚಿತ್ತವೃತ್ತಿಯನ್ನು ಅತ್ತಿತ್ತ ಚಲಿಸದಂತೆ ಬಿಗಿಹಿಡಿದು ಧ್ಯಾನಮಗ್ನರಾಗಿ ಕುಳಿತರು. (ಅಥವಾ ಯೋಗಶಾಸ್ತ್ರೋಕ್ತರೀತ್ಯಾ ತಮ್ಮ ಅವಯವಗಳನ್ನು ವಿನ್ಯಾಸಗೊಳಿಸಿಕೊಂಡು ಧ್ಯಾನಿಸಿದರು-) ॥೨೨॥

ಕೆಲವರು ತಮ್ಮ ತಪಸ್ಸು ಕೆಲವೊಂದವಧಿಯವರೆಗೂ ನಡೆದ ಬಳಿಕ ಸ್ವಲ್ಪ ಸ್ವಲ್ಪವಾಗಿ ತಲೆಗೂದಲುಗಳನ್ನು ಕತ್ತರಿಸಿ ದೇವನಿಗೆ ಸಮರ್ಪಿಸುತ್ತ ಬಹು ಕಠಿಣವಾಗಿ ತಪಿಸಿದರು. ಉಳಿದವರು ಆಚರಿಸಿದ ತಪಸ್ಸಿನ ಕಾಠಿಣ್ಯವನ್ನಂತೂ ವರ್ಣಿಸುವುದು ಅಸಾಧ್ಯದ ಕೆಲಸ. ಅವರು ಮೇಲ್ಕಂಡವರಂತೆ ತಪಸ್ಸಿನ ಒಂದು ಅವಧಿಯು ಮುಗಿದ ಕೂಡಲೆ, ತಮ್ಮ ತಲೆಗಳನ್ನು ಕಲ್ಲಿಗೆ ಅಪ್ಪಳಿಸಿ ಅದರಿಂದ ಹೊರ ಹೊರಟ ರಕ್ತದಿಂದ ತರ್ಪಣವನ್ನು ಕೊಟ್ಟರು. (ಈ ಬಗೆಯ ತಪಸ್ಸಿಗೆ " ಹಠಯೋಗ " ಎಂದು ಹೆಸರು.) ಇವರ ಉಗ್ರವಾದ ತಪಸ್ಸನ್ನು ನೋಡಿ ಆಗ ಗಣರಾಜನು ॥೨೩॥

ಒಡನೆಯೇ ಆವಿರ್ಭವಿಸಿ ಬಂದು ಇವರೆದುರು ನಿಂತನು. ದೇವನ ದೇಹದ ದಿವ್ಯ ತೇಜಸ್ಸು ಕೋಟಿಗಟ್ಟಲೆ ಸೂರ್ಯರ, ಹಾಗೂ ಪ್ರಳಯಕಾಲದ ಜ್ವಲನನ

ದೃಷ್ಟ್ವಾ ತೇಜೋಮಯಂ ರೂಪಂ ಜಹೃಷುಸ್ತೇ ಸುರಾಸ್ತದಾ ॥೨೪॥
ದೇವಾ ಊಚುಃ :—
ಯಶ್ಚಿಂತಿತಸ್ಸ ಏವಾಯಮಾವಿರ್ಭೂತೋಽಖಿಲೇಶ್ವರಃ ।
ಅಪನೇಷ್ಯತಿ ನೋ ದುಃಖಂ ನಾತ್ರ ಕಾರ್ಯಾ ವಿಚಾರಣಾ ॥೨೫॥
ಕ ಉವಾಚ :—
ತತ ಊಚೇ ಸ ಭಗವಾನ್ ತಾನ್ ಸುರಾಂಶ್ಚಿಂತಯಾಯುತಾನ್
ದೇವ ಉವಾಚ :—
ಹನಿಷ್ಯೇ ಸಿಂದುರಂ ದೇವಾ ! ಮಾಂ ಚಿಂತಾಂ ಕರ್ತುಮರ್ಹಥ ॥೨೬॥
" ದುಃಖಪ್ರಶಮನಂ " ನಾಮ ಸ್ತೋತ್ರಂ ವಃ ಖ್ಯಾತಿಮೇಷ್ಯತಿ ।
ಅತೋ ದುಃಖವಿನಾಶೋ ವೋ ಜಾತೋಽಸ್ಮನ್ಮದನುಗ್ರಹಾತ್ ॥೨೭॥

ತೇಜವನ್ನು ಹೋಲುತ್ತಲಿದ್ದಿತು. ತೇಜೋಮಯವಾದ ದೇವನ ಮೂರ್ತಿಯನ್ನು ಕಂಡಕೂಡಲೇ ದೇವತೆಗಳು ಬಹಳ ಹರ್ಷಿಸಿದರು. ॥೨೪॥

ದೇವತೆಗಳು :—

ನಾವು ಯಾರ ಸಾಕ್ಷಾತ್ಕಾರಕ್ಕಾಗಿ ಇದುವರೆಗೂ ಈ ಪರಿಯ ಕಠಿಣ ರೀತಿಯಾದ ತಪವನ್ನನುಷ್ಠಿಸಿದೆವೋ, ಅಖಿಲಾಂಡಕೋಟಿ ಬ್ರಹ್ಮಾಂಡನಾಯಕನಾದ ಆ ಪರಮೇಶ್ವರನೇ ಈಗ ಆವಿರ್ಭವಿಸಿ ಬಂದಿದ್ದಾನೆ. ನಮ್ಮ ದುಃಖವನ್ನು ಈತನು ಪರಿಹರಿಸಿಬಿಡುವನು. ಈ ವಿಷಯದಲ್ಲಿ ನಾವು ಸ್ವಲ್ಪವೂ ವಿಚಾರವನ್ನು ಮಾಡಬೇಕಾಗಿರುವುದಿಲ್ಲ. ॥೨೫॥

ಬ್ರಹ್ಮಾ :—

ದೇವತೆಗಳಾಡಿಕೊಂಡ ಮಾತುಗಳನ್ನು ಕೇಳಿ, ಭಗವಂತನು ಹೀಗೆ ಮಾರ್ನುಡಿದು ಅವರ ಮಾನಸಿಕ ಚಿಂತೆಯನ್ನು ಕಡಿಮೆ ಮಾಡಿದನು.

ದೇವ :—

ದೇವತೆಗಳೇ ! ಆ ಸಿಂದೂರ ದೈತ್ಯನನ್ನು ನಾನು ಕೊಲ್ಲುವೆನು. ನೀವು ಚಿಂತೆಯನ್ನು ಮಾಡಬೇಕಾಗಿಲ್ಲ. ॥೨೬॥

ನೀವು ನನ್ನನ್ನು ಕುರಿತು ಸ್ತುತಿಸಿದ ಈ ಸ್ತೋತ್ರವು 'ದುಃಖಪ್ರಶಮನ ಸ್ತೋತ್ರ' ಎಂಬ ಹೆಸರಿನಿಂದ ಖ್ಯಾತಿಯನ್ನು ಪಡೆಯುತ್ತದೆ. ಇದನ್ನು ನೀವು ಭಕ್ತಿಯಿಂದ ರಚಿಸಿ ಸ್ತುತಿಸುತ್ತಿರುವಿರಿ. ನನ್ನ ಅನುಗ್ರಹ ವಿಶೇಷದಿಂದ ಇಂದೇ ನಿಮ್ಮ ದುಃಖವೆಲ್ಲ ನಾಶಹೊಂದಿತೆಂದು ತಿಳಿಯಿರಿ. ॥೨೭॥

ಏಕಕಾಲಂ ದ್ವಿ-ಕಾಲಂ ವಾ ತ್ರಿಕಾಲಂ ವಾಪಿ ಯಃ ಪಠೇತ್ ।
ಕದಾಚಿನ್ನ ಭವೇದಸ್ಯ ದುಃಖಂ ತ್ರಿವಿಧಮಣ್ವಪಿ ।।೨೮।।
ಅಹಂ ತು ಸಾಂಪ್ರತಂ ದೇವಾ ಅವತೀರ್ಯ ಶಿವಾಲಯೇ ।
ನಾಮ್ನಾ "ಗಜಾನನ" ಇತಿ ಖ್ಯಾತಃ ಸರ್ವಾರ್ಥಸಾಧನಃ ।।೨೯।।
ಭವಿಷ್ಯಾಮಿ ಹನಿಷ್ಯಾಮಿ ಸಿಂದೂರಾದೀನ್ ಮಹಾಸುರಾನ್ ।
ಕರಿಷ್ಯಾಮಿ ಶಿವಾದಾಸ್ಯಂ ಕೌತುಕಾನಿ ಪ್ರದರ್ಶಯನ್ ।।೩೦।।

ಕ ಉವಾಚ :—

ಏವಮುಕ್ತ್ವಾ ತತೋ ದೇವಾಂಸ್ತತ್ರೈವಾಂತರಧೀಯತ ।
ತತೋಽಕಸ್ಮಾದ್ಧೈಮವತೀ ಶಿವಾನುಗ್ರಹತೋ ದಧೌ ।।೩೧।।

---

ಈ ಸ್ತೋತ್ರವನ್ನು ಪ್ರತಿದಿವಸ ಒಂದು ಕಾಲ, ಎಂದರೆ ಪ್ರಭಾತದಲ್ಲಿ, ಎರಡು ಕಾಲ ಎಂದರೆ ಪ್ರಾತಃ ಸಾಯಂಕಾಲಗಳಲ್ಲಿ ಅಥವಾ ತ್ರಿಕಾಲ ಎಂದರೆ ಪ್ರಾತರ್ಮಾಧ್ಯಾಹ್ನಿಕ ಸಾಯಂಕಾಲಗಳಲ್ಲಿ ಯಾರು ಶ್ರದ್ಧಾ-ಭಕ್ತಿಗಳುಳ್ಳವರಾಗಿ ಪಠಿಸುವರೋ ಅಂಥವರಿಗೆ ಆಧ್ಯಾತ್ಮಿಕ, ಆಧಿದೈವಿಕ ಹಾಗೂ ಆಧಿಭೌತಿಕ ಈ ಮೂರು ವಿಧ ದುಃಖಗಳು ಎಂದೆಂದಿಗೂ ಉಂಟಾಗುವುದಿಲ್ಲ ।।೨೮।।

ದೇವತೆಗಳೇ! ಪ್ರಕೃತ ನಾನು ನಿಮ್ಮ ಕಾರ್ಯವನ್ನು ಸಾಧಿಸಿಕೊಡುವುದಕ್ಕಾಗಿಯೂ, ದುಷ್ಟನಿಗ್ರಹ, ಶಿಷ್ಟ ಪರಿಪಾಲನಾರೂಪವಾದ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿಯೂ ಪರಶಿವನ ಗೃಹದಲ್ಲಿ ಮತ್ತೆ ಅವತಾರವನ್ನು ಎತ್ತುತ್ತೇನೆ. ಸಕಲ ಭಕ್ತರ ಅಭಿಲಾಷೆಗಳನ್ನೂ ಈಡೇರಿಸಿ ಕೊಡುತ್ತೇನೆ. 'ಗಜಾನನ' ಎಂಬ ಶುಭ ನಾಮದಿಂದ ಖ್ಯಾತಿಗೊಳ್ಳುತ್ತೇನೆ. ।।೨೯।।

ಮಹಾಬಲಿಷ್ಠರಾದ ಸಿಂದೂರಾದಿ ಅಸುರವೀರರನ್ನೆಲ್ಲ ಕೊಲ್ಲುವೆನು. ಅನೇಕ ವಿಧ ಚಮತ್ಕಾರ ಲೀಲೆಗಳನ್ನು ತೋರಿಸುತ್ತ, ನನಗೆ ಜನನಿಯಾಗಲಿರುವ ಸರ್ವಮಂಗಳೆಯ ಪಾದಸೇವೆಯನ್ನು ಮಾಡುವೆನು. ।।೩೦।।

ಬ್ರಹ್ಮಾ :—

ದೇವತೆಗಳಿಗೆ ದೇವನು ಹೀಗೆಂದು ಆಶ್ವಾಸನವನ್ನು ಕೊಟ್ಟು, ಇದ್ದಕ್ಕಿದ್ದಂತೆ ತಾನು ಆವಿರ್ಭವಿಸಿದ ಸ್ಥಳದಲ್ಲಿಯೇ ಅಂತರ್ಹಿತನಾದನು. ಕೆಲವು ಸಮಯ ಹೀಗೆಯೇ ದಾಟಿದ ಬಳಿಕ, ಕಾಲ–ಕರ್ಮ, ಧರ್ಮಗಳು ಒಂದುಗೂಡಿದ ಸು–ಸಮಯದಲ್ಲಿ ಹೈಮವತಿಯು ಭೂತಾಧಿನಾಥ, ಮಹೇಶ್ವರನ ಅನುಗ್ರಹದಿಂದ ವಿಶ್ವಗರ್ಭನನ್ನು ತನ್ನ ಗರ್ಭದಲ್ಲಿ ಧರಿಸಿದಳು. ।।೩೧।।

ಗರ್ಭಂ ಸ ವವೃಧೇಽತ್ಯಂತಂ ದಿನೇ ದಿನೇ ಯಥಾ ಶಶೀ ।
ತತಸ್ತತ್ತೇಜಸಾ ತಪ್ತಾ ನಾನಾ ದೋಹದಕಾಂಕ್ಷಿಣೀ ॥೩೨॥
ಉವಾಚ ಶಂಕರಂ ಗೌರೀ ಸಂತಪ್ತಾ ಗರ್ಭತೇಜಸಾ ।

ಪಾರ್ವತ್ಯುವಾಚ : –
ಅತಿ ಶೀತಸ್ಥಲಂ ಯತ್ರ ತತ್ರ ಮಾಂ ನಯ ಶಂಕರ ! ॥೩೩॥

ಕ ಉವಾಚ :—
ತತೋಽಸೌ ವೃಷಭಾರೂಢಃ ಪೃಷ್ಠೇ ತಾಮುಪವೇಶ್ಯ ಹ ।
ಭಾಸಯಂತೀಂ ಮಹಾತೇಜಃಪುಂಜೇನ ವಿದಿಶೋ ದಿಶಃ ॥೩೪॥

---

ಸರ್ವೇಶ್ವರ; ಮಹಾಗಣಪತಿಯ ಸಾಕ್ಷಾತ್ಸನ್ನಿಧಿಯಿಂದ ಪರಿಪೂರಿತವಾದ ಮಾಹೇಶ್ವರ ಗರ್ಭವು ಶುಕ್ಲಪಕ್ಷದ ಚಂದ್ರಮನಂತೆ ದಿನ–ದಿನಕ್ಕೂ ಅಭಿವೃದ್ಧಿಯನ್ನು ಹೊಂದಲಾರಂಭಿಸಿತು. ಮೊದಲೇ ತೇಜೋಧಾತುವಿನಂತಿರುವ ಹರನ ವೀರ್ಯ. ವಿಶ್ವಂಭರ ಮೂರ್ತಿ, ಗಣಪತಿಯು ಅದರಲ್ಲಿ ಸನ್ನಿಹಿತನಾಗಿದ್ದಾನೆ ಎಂದಮೇಲೆ ತೇಜೋದ್ವಯಗಳ ಸಮ್ಮೇಳನದಿಂದುಂಟಾದ ಮಹಾ ತಾಪವನ್ನು ತಡೆದುಕೊಳ್ಳುವುದು ಆದಿಮಾಯಾ ಸ್ವರೂಪಳಾದ ಜಗನ್ಮಾತೆ, ಹಿಮವಂತನ ಮಗಳಿಗೂ ಕ್ಲೇಶವೆನಿಸಿತು. ಬಗೆಬಗೆಯ ಬಯಕೆಗಳು ಬರತೊಡಗಿದವು. ॥೩೨॥

ತೇಜಃಪುಂಜಗರ್ಭದಿಂದ ಪರಿತಪ್ತೆ ಪಾರ್ವತೀದೇವಿಯು ತನ್ನ ಪತಿಯ ಎದುರು ತನಗುಂಟಾಗುತ್ತಿರುವ ವಿಚಿತ್ರ ಸಂಕಟವನ್ನು ಪರ್ಯಾಯವಾಗಿ ಹೇಳಿಕೊಂಡಳು.

ಪಾರ್ವತೀ :—

ಪ್ರಿಯತಮ, ಲೋಕಶಂಕರ! ಯಾವ ಸ್ಥಳ ಅತಿ ತಂಪಾಗಿದೆಯೋ, ಅಂತಹ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗು ॥೩೩॥

ಬ್ರಹ್ಮಾ :—

ಹೆಂಡತಿಯಾಡಿದ ಮಾತುಗಳನ್ನು ಕೇಳಿದ ಕೂಡಲೆ ಪರಮೇಶ್ವರನು ತನ್ನ ವೃಷಭವನ್ನೇರಿ ಪಾರ್ವತಿಯನ್ನು ಹಿಂದುಗಡೆ ಕುಳ್ಳಿರಿಸಿಕೊಂಡು ನಡೆದನು. ಮೊದಲೇ ತ್ರಿಪುರಸುಂದರಿ; ಮೇಲಾಗಿ ಪ್ರಕೃತಿಯ ತೇಜಸ್ಸಿಗೂ ತೇಜಸ್ಸಾದ ಸಚ್ಚಿದಾನಂದನನ್ನು ಉದರದಲ್ಲಿರಿಸಿಕೊಂಡಿದ್ದಾಳೆ ಎಂದಮೇಲೆ ಅವಳ ಅಪ್ರತಿಮ ತೇಜಸ್ಸನ್ನು ವರ್ಣಿಸಲಿಕ್ಕೆ ಸಾಧ್ಯವೇ? ತನ್ನ ದೇಹದ ಕಾಂತಿಯಿಂದ ಕಾತ್ಯಾಯನಿಯು ದಿಗ್ವಿದಿಕ್ಕುಗಳನ್ನು ಬೆಳಗಿದಳು. ॥೩೪॥

ವಾದ್ಯತ್ಸು ಸರ್ವವಾದ್ಯೇಷು ಯಯೌ ಸ ಕ್ಷಿತಿಮಂಡಲಮ್ ।
ನಾನಾಗಣೈಃ ಸಮಾಯುಕ್ತೋ ಬಭ್ರಾಮ ಕಾನನಾನಿ ಸಃ ॥೩೫॥

ಭ್ರಮತಾ ತೇನ ದೃಷ್ಟಂ ಹಿ ಪರ್ಯಲೀಕಾನನಂ ಮಹತ್ ।
ತತ್ರ ವಿಶ್ರಾಂತಿಮಕರೋತ್ಪಾರ್ವತ್ಯಾನುವೃತೇ ತದಾ ॥೩೬॥

ನಾನಾಪುಷ್ಪಸಮಾಕೀರ್ಣಂ ನಾನಾದ್ರುಮ-ಫಲಾನ್ವಿತಮ್ ।
ಸರೋ-ವಾಪೀಯುತಂ ಸಾಂದ್ರತರುಚ್ಛಾಯಂ ಮನೋರಮಮ್ ॥೩೭॥

ಯತ್ರೋಸ್ರಾಣಾಂ ನ ಪ್ರವೇಶಃ ಕೈಲಾಸಶಿಖರೋಪಮಮ್ ।

---

ಸಕಲವಿಧ ಮಂಗಲವಾದ್ಯಗಳೂ ಮೊಳಗುತ್ತಿರುವಲ್ಲಿ ಮಹಾದೇವನು ಮಹೀಧರನ ಮಗಳೊಂದಿಗೆ ಮಹೀಮಂಡಲಕ್ಕೆ ಬಂದಿಳಿದನು. ಸಂಗಡ ಪ್ರಮಥ ಗಣದವರು ಬಂದಿದ್ದರೆಂದು ಪ್ರತ್ಯೇಕವಾಗಿ ಹೇಳಬೇಕಿಲ್ಲವಷ್ಟೆ? ಅವರೊಂದಿಗೆ ದೇವನು ಕಾನನಗಳನ್ನು ಸುತ್ತಾಡತೊಡಗಿದನು ॥೩೫॥

ಹೀಗೆಯೇ ಸುತ್ತುತ್ತಿರುವಾಗ ಅವರಿಗೆ ಬಹು ವಿಸ್ತಾರವೂ, ನಿಬಿಡವೂ ಆದ ಗೊಂಡಾರಣ್ಯ ಒಂದು ದೃಗ್ಗೋಚರಿಸಿತು. ಅದನ್ನು ಪಾರ್ವತಿಯು ಬಹುಮಟ್ಟಿಗೆ ಮೆಚ್ಚಿದ್ದರಿಂದ ದೇವನು ದೇವಿಯೊಡನೆ ಅಲ್ಲಿ ವಿಶ್ರಾಂತಿಯನ್ನು ಪಡೆದನು. ॥೩೬॥

ನಾನಾಜಾತಿಯ ಸುಗಂಧ ಕುಸುಮಸಮಾಕೀರ್ಣವಾದ ದ್ರುಮ-ಲತೆಗಳೂ, ನಾನಾಫಲಭರಿತ ವೃಕ್ಷಗಳೂ ತಾವೇ ತಾವಾಗಿ ಅಲ್ಲಿ ಬೆಳೆದು ನಿಂದಿದ್ದವು. ಅಚ್ಛೋದಕದಿಂದ ಪರಿಪೂರ್ಣವಾದ ಸರೋವರ, ಇಳಿಯುವ ಭಾವಿ ಇವು ಅಲ್ಲಲ್ಲಿ ಕಂಗೊಳಿಸುತ್ತಿದ್ದವು. ಗಗನಚುಂಬಿಗಳಾದ ವೃಕ್ಷಗಳು ನಿಬಿಡವಾಗಿ ಬೆಳೆದು ಕೈಗಳಂತಿರುವ ಕೊಂಬೆಗಳನ್ನು ಸುತ್ತಲೂ ಚಾಚಿ ದಟ್ಟವಾದ ನೆರಳನ್ನು ಬೀರಿದ್ದವು. ಈ ಬಗೆಯ ನೈಸರ್ಗಿಕ ರಾಮಣೀಯಕತೆಯಿಂದ ಕೂಡಿದ ಆ ಕಾನನ ನೋಡತಕ್ಕವರ ಕಣ್ಮನಗಳನ್ನು ಸೂರೆಗೊಳ್ಳುತ್ತಿದ್ದಿತು. ॥೩೭॥

ಕೈಲಾಸಗಿರಿ ಶಿಖರವನ್ನು ಹೋಲುವಂತೆ ವೃಕ್ಷಗಳು ಸಾಂದ್ರವಾಗಿ ಬೆಳೆದು ನಿಂದಿದ್ದರಿಂದ ಉಷ್ಣರಶ್ಮಿ (ಸೂರ್ಯ)ಯ ಉಸ್ರ (ಕಿರಣ)ಗಳಿಗೆ ಪ್ರವೇಶಕ್ಕೆ ಅಲ್ಲಿ ಅವಕಾಶ

ನಂದನಾದಧಿಶೋಭಂ ತದ್ವನಂ ಚೈತ್ರರಥಾದಪಿ ||೩೮||
ತದ್ವೀಕ್ಷ್ಯ ಗಿರಿಜಾ ಪ್ರೋಚ
ಪಾರ್ವತ್ಯುವಾಚ :—
ಇಚ್ಛಯಾ ಸದೃಶಂ ಶಿವ ! ।
ವನಂ ಪ್ರಾಪ್ತಂ ಮಹಾದೇವ ! ಕ್ರೀಡಾವೋಽತ್ರ ಚಿರಂ ವಿಭೋ ! ||೩೯||
ಕ ಉವಾಚ :—
ಗಣಾನಾಮಪಿ ಸರ್ವೇಷಾಂ ಪ್ರೀತಿಸ್ತತ್ರ ಹ್ಯಭೂತ್ತದಾ ।
ತತೋ ಗಣಾ ಮಂಡಪಂ ತೇ ಚಕ್ರುಸ್ತತ್ಪ್ರಿಯಕಾಮ್ಯಯಾ ||೪೦||
ನಾನಾವೇದೀಗೃಹಯುತಂ ನಾನೋಪಸ್ಕರಸಂಯುತಮ್ ।
ತತ ಊಚೇ ಶಿವೋ ದೇವೀಂ

---

ವಿರಲಿಲ್ಲ. ದೇವರಾಜ, ಧನಾಧ್ಯಕ್ಷ ಇವರ ಉದ್ಯಾನವನಗಳೆನಿಸಿದ 'ನಂದನ, ಚೈತ್ರ ರಥ' ಗಳಿಗಿಂತಲೂ ಇದು ಅಧಿಕ ರಾಮಣೀಯಕತೆಯಿಂದ ಕೂಡಿದ್ದಿತು. ||೩೮||

ಸುಂದರವಾದ ಇಂತಹ ವನವನ್ನು ನೋಡಿ ಗಿರಿಜಾಮಾತೆಯು ಗಂಗಾಧರನನ್ನು ಕುರಿತು ಹೀಗೆಂದು ನುಡಿದಳು.

ಪಾರ್ವತೀ :—

ಪರಶಿವ ! ಈ ಕಾಲದಲ್ಲಿ ಎಲ್ಲಿ ವಾಸಿಸಬೇಕೆಂಬ ಇಚ್ಛೆ ನನಗೆ ಇದ್ದಿತೋ, ಅದಕ್ಕನುಗುಣವಾದ ಪ್ರದೇಶವೇ ದೈವಯೋಗದಿಂದ ದೊರಕಿದೆ. ವಿಭೋ, ಮಹಾದೇವ ! ಇಲ್ಲಿ ನಾವಿಬ್ಬರೂ ಯಥೇಷ್ಟವಾಗಿ ಕ್ರೀಡಿಸೋಣ. ||೩೯||

ಬ್ರಹ್ಮಾ :

ಪ್ರಮಥಗಣಗಳಿಗೆ ಸಹ ಆ ವನದ ಸಿರಿಯನ್ನು ನೋಡಿ ಬಹಳ ಸೊಗಸೆನಿಸಿತು. ಆಗ ಅವರು ಜಗನ್ಮಾತಾಪಿತೃಗಳಿಗೆ ಸಂತೋಷವನ್ನುಂಟುಮಾಡಲಿಕ್ಕಾಗಿ ಆ ವನದಲ್ಲೆಲ್ಲ ಸುತ್ತಾಡಿ ಬಂದು ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಂಡು ಅವರಿಗೊಂದು ಸುಂದರವಾದ ಮಂಡಪವನ್ನು ಕಟ್ಟಿಕೊಟ್ಟರು. ||೪೦||

ಆ ಮಂಡಪದಲ್ಲಿ ಅನೇಕ ಒಳ ಮನೆಗಳು (ಕೊಠಡಿ) ಜಗುಲಿ, ಪಡಸಾಲೆಗಳು ಇವನ್ನೆಲ್ಲ ಪರಿಷ್ಕಾರವಾಗಿ ನಿರ್ಮಿಸಿದರು. ಆಹಾರೋಪಯೋಗಿಗಳಾದ ಸಕಲವಿಧ ಸಾಮಗ್ರಿಗಳನ್ನೂ ಅಲ್ಲಿ ತಂದು ಒದಗಿಸಿಟ್ಟರು. ಆಗ ಪರಶಿವನು ಪಾರ್ವತೀದೇವಿಯನ್ನು ಕುರಿತು ಹೀಗೆಂದು ನುಡಿದನು.

**ಶಿವ ಉವಾಚ :—**

**ವಸಾತ್ರ ತ್ವಂ ಗಣೈರ್ಯುತಾ ||೪೧||**

**ಯದ್ಯತ್ತೇ ಪ್ರಾರ್ಥಿತಂ ತತ್ತೇ ದಾಸ್ಯಂತಿ ಮದನುಗ್ರಹಾತ್ ।**

**ಕ ಉವಾಚ :—**

**ತತಃ ಸ್ವಯಂ ಜಗಾಮಾಶು ಧ್ಯಾನಸ್ಥೋಽಭೂದ್ಧಿಮಾಲಯೇ ||೪೨||**

**ಸಖೀಭಿಃ ಪಾರ್ವತೀ ತತ್ರ ಚಿಕ್ರೀಡೇ ಸಾ ಯಥಾರುಚಿ ।**

**ಅರಕ್ಷಂಸ್ತಾಂ ಕೋಟಿಗಣಾಃ ಸಮಂತಾದಾವೃತಾಸ್ತದಾ ||೪೩||**

**ತದಾಜ್ಞಾವಶಗಾಃ ಸರ್ವೇ ಕಂದಮೂಲಫಲಾಶಿನಃ ||೪೪||**

ಶಿವ :—

ಪ್ರಿಯೇ, ಪಾರ್ವತಿ ! ಈ ಗಣಗಳೆಲ್ಲ ಇಲ್ಲಿಯೇ ಇರುತ್ತಾರೆ. ಇವರೊಂದಿಗೆ ನೀನು ಇಲ್ಲಿಯೇ ವಾಸಿಸು. ||೪೧||

ನೀನು ಯಾವ ಯಾವ ವಸ್ತುಗಳನ್ನು ಬೇಕೆಂದು ಬಯಸುವೆಯೋ, ಅವನ್ನೆಲ್ಲ ತತ್ಕ್ಷಣವೇ ಒದಗಿಸಿಕೊಡುವಂತಹ ಸಾಮರ್ಥ್ಯ-ಮಹಿಮೆಗಳನ್ನು ನಾನು ಈ ಗಣಗಳಿಗೆ ಅನುಗ್ರಹಿಸಿರುವೆನು ಅವರು ಎಲ್ಲ ಪದಾರ್ಥಗಳನ್ನೂ ನಿನಗೆ ಒದಗಿಸಿಕೊಡುವರು.

ಬ್ರಹ್ಮಾ :—

ಎಂದು ಸಮಾಧಾನಪಡಿಸಿ ತಾನು ಅಲ್ಲಿಂದ ಬೇಗನೆ ಹೊರಟು ಹಿಮಾಲಯ ಗಿರಿಯ ತಪ್ಪಲಿಗೆ ತಲುಪಿ, ಸ್ವ-ಸ್ವರೂಪಾನುಸಂಧಾನಕ್ಕಾಗಿ ಕುಳಿತನು. ||೪೨||

ಜಗನ್ಮಾತೆ ಪಾರ್ವತೀದೇವಿಯು ಪ್ರಿಯಸಖಿಯರಿಂದೊಡಗೂಡಿ, ತನ್ನ ಸೃಷ್ಟಿ ಚಮತ್ಕಾರಗಳನ್ನು ಮತ್ತೊಮ್ಮೆ ಗಮನಿಸುತ್ತ, ಮನಸ್ಸಿಗೆ ಬೇಸರವಾಗದಂತೆ ಕ್ರೀಡಿಸುತ್ತ ಆನಂದದಿಂದ ವಿಹರಿಸಿದಳು. ಕೋಟಿಗಟ್ಟಲೆ ಇದ್ದ ಪ್ರಮಥಗಳು ಆ ವನವನ್ನು ಸುತ್ತುವರಿದು ನಿಂದು, ದೇವಿಗೆ ಯಾವ ವಿಧವಾದ ಉಪದ್ರವವೂ ಉಂಟಾಗದಂತೆ ಸಂರಕ್ಷಿಸುತ್ತಿದ್ದರು. ||೪೩||

ಅನ್ನಪೂರ್ಣೆಯ ದಿವ್ಯ ಸಾನ್ನಿಧ್ಯದಲ್ಲಿ ಯಾವುದಕ್ಕೂ ಕೊರತೆ ಇಲ್ಲದಿದ್ದಾಗ್ಯೂ ಆಹಾರಕ್ಕೆ ಸಹ ಅವಳನ್ನು ಬೇಡದೆ, ಅಲ್ಲೇ ಸಮೃದ್ಧಿಯಾಗಿ ಬೆಳೆದಿರತಕ್ಕ ಗೆಡ್ಡೆ-ಗೆಣಸು ಹಣ್ಣು ಇವನ್ನು ಭುಂಜಿಸಿ ತೃಪ್ತಿಪಡುತ್ತ ದೇವಿಯ ಆಜ್ಞಾವಶವರ್ತಿಗಳಾಗಿದ್ದರು. ||೪೪||

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ “ಗೌರೀದೋಹದವರ್ಣನಂ” ನಾಮ್ನೈಕೋನ ತ್ರಿಂಶದುತ್ತರ ಶತತಮೋಽಧ್ಯಾಯಸ್ಸಮಾಪ್ತಃ**

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ ‘ಗೌರೀ ದೋಹದ (ಬಯಕೆಯ) ವರ್ಣನೆ’ ಎಂಬಲ್ಲಿಗೆ ನೂರ ಇಪ್ಪತ್ತೊಂಭತ್ತನೆಯ ಅಧ್ಯಾಯಾನುವಾದವು ಮುಕ್ತಾಯವಾಯಿತು.

॥ ಶ್ರೀ ಗಣೇಶಾಯ ನಮಃ

# ಅಥ ತ್ರಿಂಶದಧಿಕ ಶತತಮೋಽಧ್ಯಾಯಃ

**ಕ ಉವಾಚ :—**

**ತತಸ್ತು ನವಮೇ ಮಾಸಿ ಪೂರ್ಣೇ ಸಾಸೂತ ಬಾಲಕಮ್ ।**
**ಚಾರುಚಂದ್ರಾನನಂ ಪದ್ಮಶೋಭಾಜಿನ್ನಯನಂ ಶುಭಮ್ ॥೧॥**
**ಕಿರೀಟ-ಕೇಯೂರಧರಂ ಕೋಟಿಸೂರ್ಯಸಮಪ್ರಭಮ್ ।**
**ಪ್ರವಾಲಾಧರಶೋಭಾಢ್ಯಂ ಚತುರ್ಬಾಹುವಿರಾಜಿತಮ್ ॥೨॥**
**ಮುಕ್ತಾಹಾರಧರಂ ಚಾರು ಕಂಕಣೈರುಪಶೋಭಿತಮ್ ।**
**ಪರಶುಂ ಕಮಲಂ ಮಾಲಾಂ ಮೋದಕಾಂಶ್ಚ ಕರೈರ್ದಧತ್ ॥೩॥**

---

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೩೦ ನೆಯ ಅಧ್ಯಾಯ

ಬ್ರಹ್ಮಾ:—

ಹೀಗೆಯೇ ಕಾಲವು ಉರುಳುತ್ತಿರಲು, ಪಾರ್ವತೀ ದೇವಿಯು ಧರಿಸಿದ ಗರ್ಭಕ್ಕೆ ಒಂಭತ್ತು ತಿಂಗಳು ಕಳೆದವು. ಆಗ ದೇವಿಯು ಒಂದು ಪುಂಪ್ರಜೆಯನ್ನು ಪ್ರಸವಿಸಿದಳು. ಆ ಬಾಲಕನ ಮುಖ ಪೂರ್ಣ ಚಂದ್ರಮನಂತೆ ಸುಂದರವಾಗಿಯೂ ಹೃದಯಾಹ್ಲಾದಕರವಾಗಿಯೂ ಇದ್ದಿತು. ಅವನ ಕಣ್ಣುಗಳು ವಿಸ್ತೃತ ಕಮಲ ಪುಷ್ಪಗಳಂತೆ ಶೋಭಿಸುತ್ತಲಿದ್ದವು. ॥೧॥

ಕಿರೀಟ-ಕೇಯೂರಗಳನ್ನು ಧರಿಸಿಯೇ ಬಾಲಕನು ಜನಿಸಿದನು. ಅವನ ದೇಹದ ಕಾಂತಿಯು ಕೋಟಿ ಸೂರ್ಯರು ಒಮ್ಮೆಲೇ ಉದಿಸಿದಷ್ಟು ಪ್ರಕಾಶಮಾನವಾಗಿದ್ದಿತು. ಹವಳದಂತೆ ಬಾಲಕನ ತುಟಿಗಳು ಕೆಂಪಾಗಿ ಹೊಳೆಯುತ್ತಿದ್ದವು. ಬಾಲಕನು ನಾಲ್ಕು ಸುಂದರ ಭುಜಗಳಿಂದ ವಿರಾಜಮಾನನಾಗಿದ್ದನು. ॥೨॥

ಹೊಳೆವ ಮುತ್ತಿನ ಹಾರವನ್ನು ಕಂಬು ಕಂಠದಲ್ಲಿ ಧರಿಸಿದ್ದನು. ಮುಂಗೈಗಳಿಗೆ ಒಪ್ಪುವ ರತ್ನಖಚಿತ ಸ್ವರ್ಣ ಕಂಕಣಗಳನ್ನು ಹಾಕಿಕೊಂಡಿದ್ದನು. ಪರಶು, ಕಮಲ ಪುಷ್ಪ, ಮಾಲಾ ಹಾಗೂ ಮೋದಕ ಇವನ್ನು ತನ್ನ ಒಂದೊಂದು ಕೈಯಲ್ಲಿ ಧರಿಸಿದ್ದನು. ॥೩॥

ಧ್ವಜಾಂಕುಶಾಬ್ಜ ವಿಲಸತ್ಪಾದಪದ್ಮಸಮನ್ವಿತಮ್
ಕಿಂಕಿಣೀಜಾಲವಿಲಸಚ್ಚಾರುಗುಲ್ಫಯುತಂ ಶುಭಮ್ ||೪||

ಭಾಲಚಂದ್ರಂ ಕೋಟಿಚಂದ್ರನಿಭಂ ವಹ್ನಿಸಮಪ್ರಭಮ್
ಏವಂ ದೃಷ್ಟ್ವಾ ಸ್ವರೂಪಂ ಸಾ ಚಕಂಪೇ ಹರ್ಷನಿರ್ಭರಾ ||೫||

ಪಾರ್ವತ್ಯುವಾಚ :—
ಕಿಮಿದಂ ತೇಜ ಉದಿತಂ ನಯನಾಚ್ಛಾದಕಂ ಮಹತ್ ।
ಕೋಽಸಿ ತ್ವಂ ವದ ಮೇ ಚೇತೋ ನಂದಯಸ್ವ ಕೃಪಾಂ ಕುರು ||೬||

ಕ ಉವಾಚ :—
ಇತ್ಯುಕ್ತ್ವಾ ತಂ ನಮಶ್ಚಕ್ರೇ ಸ್ಮರಂತೀ ಪೂರ್ವಕಂ ವಚಃ ।

---

ಕಮಲದಂತೆ ನಸುಗೆಂಪಾಗಿ ಹೊಳೆವ ಅವನ ಅಂಗಾಲುಗಳಲ್ಲಿ ಧ್ವಜ, ಅಂಕುಶ ಕಮಲ ಮೊದಲಾದುವನ್ನು ಸೂಚಿಸುವ ಶುಭ ಚಿನ್ಹೆಗಳು ಇದ್ದು, ಮಹಾ ಪುರುಷನ ಲಕ್ಷಣಗಳನ್ನು ಸಾರುತ್ತಿದ್ದವು. ಕಾಲುಗಳಿಗೆ ಗೆಜ್ಜೆ, ಕಿರುಗಂಟೆಗಳುಳ್ಳ ಕಾಲಂದಿಗೆ ಗಳನ್ನು ಧರಿಸಿದ್ದರಿಂದ ಬಾಲಕನು ಬಹಳ ಮುದ್ದಾಗಿ ಕಾಣುತ್ತಲಿದ್ದನು. ||೪||

ವಿಸ್ತೃತವಾದ ಲಲಾಟದಲ್ಲಿ ಚಂದ್ರನನ್ನು ಧರಿಸಿದ್ದನು. ಅವನ ಮುಖ ಕಮಲವು ಕೋಟಿ ಚಂದ್ರರಷ್ಟು ಆಹ್ಲಾದಕರ ಕಾಂತಿಯಿಂದ ಹೊಳೆಯುತ್ತಲಿದ್ದಿತು. ಅವನ ದೇಹದ ಪ್ರಭೆ ಜ್ವಲಿಸುವ ಜ್ವಲನ (ಅಗ್ನಿ) ನಂತೆ ಕೆಂಪಾಗಿದ್ದಿತು. ದೇವನ ಇಂತಹ ದಿವ್ಯ ಸ್ವರೂಪವನ್ನು ನೋಡಿ ದೇವಿಯು ಹರ್ಷಭರಿತಳಾದಳು. ಸಂತೋಷಾತಿರೇಕದಿಂದ ಅವಳ ದೇಹ ಕಂಪಿಸಿತು. ||೫||

ದೇವೀ :—

ಈಗ ಜನಿಸಿದ ಈ ದಿವ್ಯ ತೇಜಸ್ಸು ಯಾವುದಿರಬಹುದು ? ಅತ್ಯದ್ಭುತವಾಗಿದೆಯಲ್ಲ! ಕಣ್ಣನ್ನು ಕೋರೈಸುತ್ತಲಿದೆ. ಇರಲಿ, ಇದನ್ನೇ ವಿಚಾರಿಸುವೆನು. 'ನೀನು ಯಾರು' ಎಂಬುದನ್ನು ದಯೆಯಿಟ್ಟು ತಿಳಿಸಿ ನನ್ನ ಹೃದಯಕ್ಕೆ ಆನಂದವನ್ನುಂಟು ಮಾಡು. ||೬||

ಬ್ರಹ್ಮಾ :—

ಎಂದು ನುಡಿದು ಅಪ್ರಾಕೃತವಾದ ಆ ತೇಜಸ್ಸಿಗೆ ನಮಸ್ಕರಿಸಿದಳು. ಅವಳಿಗೆ ಹಿಂದೆ ಮಯೂರೇಶನು ಹೇಳಿದ ಮಾತುಗಳು ಮಸಕು ಮಸಕಾಗಿ ಸ್ಫುರಿಸಿದವು. ಹಾಗೆಯೇ ಅದನ್ನು ನೆನಪುಮಾಡಿಕೊಳ್ಳಲಾರಂಭಿಸಿದಳು. ಆಗ ಇವಳ ಪರದಾಟ

ತತ ಊಚೇ ಮಹೋಮೂರ್ತಿಃ
ವಿನಾಯಕ ಉವಾಚ :—

ಮಾ ಮಾತರ್ವಿಮನಾಭವ ||೭||
ಗುಣೇಶೋಽಹಮನೇಕಾನಾಂ ಬ್ರಹ್ಮಾಂಡಾನಾಂ ವಿನಾಯಕಃ । :
ಅಸಂಖ್ಯಾತಾ ಮೇಽವತಾರಾ ನ ಜ್ಞಾಯಂತೇಽಮರೈರಪಿ ||೮||
ಇಚ್ಛಯಾ ಸೃಷ್ಟಿ-ಸಂಹಾರ-ಪಾಲನಾನಿ ಕರೋಮ್ಯಹಮ್ ।
ತ್ರಿಧಾ ರೂಪಂ ವಿಧಾಯಾಹಂ ವಿಶ್ವಸ್ಯ ಶಿವನಂದಿನಿ ! ||೯||
ತ್ರೇತಾಯುಗೇಽವತೀರ್ಯಾಹಂ ತ್ವದ್ಗೃಹೇ ಲೀಲಾಯಾ ಪುರಾ ।
ಅನೇಕಾನಿ ವಿಚಿತ್ರಾಣಿ ಕೃತಾನಿ ಸಿಂಧುನಾಶನಮ್ ||೧೦||

ವನ್ನು ಕಂಡ ತೇಜೋಮೂರ್ತಿ; ದೇವನು ತನ್ನ ಪರಿಚಯವನ್ನು ಅವಳಿಗೆ ಮಾಡಿ ಕೊಡಲಾರಂಭಿಸಿದನು.

ವಿನಾಯಕ :—

ತಾಯೇ! ನೀನು ಮನಸ್ಸಿನಲ್ಲಿ ವ್ಯಾಕುಲವನ್ನು ಪಡಬೇಡ. ||೭||

ನಾನು ಮತ್ತೆಯಾರೂ ಅಲ್ಲ. ನಾನೇ ಗುಣೇಶ್ವರ. ಅನೇಕ ಬ್ರಹ್ಮಾಂಡ ಗಳನ್ನು ಸೃಜಿಸಿದ ನಾನು ವಿನಾಯಕನೆಂದು ಪ್ರಸಿದ್ಧಿಯನ್ನು ಪಡೆದವನು. ನಾನು ಅನೇಕ ಬಗೆಯ ರೂಪಗಳನ್ನು ತೆಗೆದುಕೊಂಡು ಅವತರಿಸುತ್ತಲೇ ಇರುವೆನು. ನನ್ನ ಅವತಾರಗಳೆಷ್ಟು ಎಂಬುದನ್ನು ತಿಳಿಯಲಿಕ್ಕೆ ದೇವತೆಗಳಿಗೆ ಸಹ ಸಾಮರ್ಥ್ಯವಿರುವುದಿಲ್ಲ. ||೮||

ಈ ಬ್ರಹ್ಮಾಂಡಗಳ ಸರ್ಜನ, ಪರಿಪಾಲನ ಹಾಗೂ ವಿಲಯ ಇವನ್ನು ನಾನು ಕೇವಲ ನನ್ನ ಸಂಕಲ್ಪದಿಂದಲೇ ಮಾಡತಕ್ಕವನು. ಈ ಕೆಲಸಗಳನ್ನು ನಿರ್ವಹಿಸಲಿಕ್ಕಾಗಿ ನನಗೆ ಅಧೀನವಾದ ಆದಿಮಾಯೆಯಲ್ಲಿ ಬ್ರಹ್ಮಾ, ವಿಷ್ಣು ಮತ್ತು ಮಹೇಶ್ವರ ಎಂಬ ಮೂರು ರೂಪಗಳಿಂದ ಪ್ರತಿಫಲಿಸಿರುವೆನು. ಪರಶಿವನ ಪ್ರೇಮಭೂಮಿಯೇ! ಆ ಮೂರು ರೂಪಗಳಿಂದ ತೋರುತ್ತಿರುವವನೂ ನಾನೇ. ||೯||

ಕಳೆದ ತ್ರೇತಾಯುಗದಲ್ಲಿ ನಾನು ನಿನಗೆ ಮಗನಾಗಿ ಅವತರಿಸಿದ್ದೆ. ಆಗ ನಿನ್ನ ಮನೆಯಲ್ಲಿ ಅನೇಕ ಬಗೆಯ ಲೀಲಾವಿನೋದಗಳನ್ನು ಪ್ರದರ್ಶಿಸಿರುವೆನು. ನಾನು ತೋರಿದ ವಿಚಿತ್ರ ತರಹದ ಲೀಲೆಗಳನ್ನು ನೀನೂ ನೋಡಿರುವೆ. ಆಗ 'ಸಿಂಧು' ಎಂಬ ಬಲಿಷ್ಠ ದೈತ್ಯನೊಬ್ಬ ಯಾರೊಬ್ಬರಿಗೂ ಮಣಿಯದೆ ಸಾಧುಗಳನ್ನು ಹಿಂಸಿಸುತ್ತಲಿದ್ದನು. ಅವನನ್ನು ನಾನು ನಾಶಗೊಳಿಸಿದೆ. ||೧೦||

ಮಯೂರೇಶ್ವರನಾಮಾಹಂ ಷಡ್ಭುಜೋsರ್ಜುನವರ್ಣಕಃ ।
ತದಾ ಮಯಾ ವಚೋ ದತ್ತಂ "ದ್ವಾಪರೇ ತೇ ಸುತಃ ಪುನಃ ॥೧೧॥
ಭವೇಯಂ" ಸೇವಕಶ್ಚಾಹಂ ಸಿಂದೂರಾನ್ಮೋಚಿತಾ ಮಯಾ ।
ದ್ವಿಜರೂಪೇಣ ಸಹಸಾ ಸ್ಮರ ಸರ್ವಂ ಶುಚಿಸ್ಮಿತೇ ! ॥೧೨॥
ತದಾಪಿ ತನಯಸ್ತೇsಹಂ ಭವಿಷ್ಯಾಮೀತ್ಯಥಾಬ್ರುವಮ್ ।
ತದಿದಂ ಸತ್ಯವಚನಂ ಮಯಾ ಸಂಪಾದಿ ಪಾರ್ವತಿ ! ॥೧೩॥
ಭೂ-ಭಾರಂ ಚ ಹರಿಷ್ಯಾಮಿ ಸಿಂದೂರಂ ಚ ಮಹಾಬಲಮ್ ।
ಸೇವನಂ ಚ ಕರಿಷ್ಯಾಮಿ ತವ ಮಾತರ್ಗಜಾನನಃ ॥೧೪॥

ಆಗಿನ ಅವತಾರದಲ್ಲಿ ನನ್ನನ್ನು 'ಮಯೂರೇಶ್ವರ' ಎಂಬ ನಾಮಧೇಯದಿಂದ ಎಲ್ಲರೂ ಕರೆಯುತ್ತಿದ್ದರು. ಆಗ ನನಗೆ ಆರು ಭುಜಗಳಿದ್ದವು. ಆಗಿದ್ದ ನನ್ನ ದೇಹ ಅರ್ಜುನ (ಭಾಸ್ವರ, ಶುಭ್ರ, colour of the Lightning) ವರ್ಣವುಳ್ಳದ್ದಾಗಿದ್ದಿತು. ಆ ಅವತಾರವನ್ನು ಉಪಸಂಹರಿಸುವ ಕಾಲದಲ್ಲಿ "ದ್ವಾಪರ ಯುಗದಲ್ಲಿ, ನಾನು ನಿನಗೆ ಮತ್ತೆ ಮಗನಾಗಿ ಜನಿಸುವೆನು ॥೧೧॥

ನಿನ್ನ ಚರಣಕಮಲಗಳನ್ನು ಸೇವಿಸುವೆನು, ಸಿಂದೂರಾದಿ ಸಮಸ್ತ ಸುರ ವಿದ್ವೇಷಿಗಳನ್ನೂ ನಿಗ್ರಹಿಸುವೆನು." ಎಂದು ದುಃಖಿಸುತ್ತಲಿದ್ದ ನಿನಗೆ ವಚನವನ್ನು ಕೊಟ್ಟಿದ್ದೆ. ಅಲ್ಲದೆ ಆ ಸಿಂದುರನು ನಿನ್ನನ್ನು ಕೊಂಡೊಯ್ಯುತ್ತಿದ್ದಾಗ ಪರಶಿವನು ಅವನೊಂದಿಗೆ ಹೋರಾಡಿದನಷ್ಟೇ! ಅಗ ನೀನು ನನ್ನನ್ನು ಮನಸಾ ಸ್ಮರಿಸಿದೆ. ನಾನು ಸ್ವಲ್ಪವೂ ವಿಲಂಬಮಾಡದೆ, ಬ್ರಾಹ್ಮಣನ ರೂಪದಿಂದ ಬಂದು ನಿನಗೆ ದರ್ಶನವನ್ನು ಕೊಟ್ಟಿದ್ದೆ. ಆಗಲೂ ನಿನಗೆ ಮಗನಾಗಿ ಅವತರಿಸಲಿರುವ ಸಂಗತಿಯನ್ನು ಸೂಚಿಸಿದ್ದೆ. ಶುಚಿಸ್ಮಿತೇ! ಅವೆಲ್ಲವನ್ನೂ ನೆನಪು ಮಾಡಿಕೋ. ॥೧೨॥

ಆಗ ನಾನು ನಿನಗೆ ಕೊಟ್ಟಿದ್ದ ವಚನವು ಅಸತ್ಯವಾಗದೆ ನಡೆಯಲೇಬೇಕಷ್ಟೆ! ಅದಕ್ಕಾಗಿ ಪಾರ್ವತೀದೇವಿ! ಈಗ ಈ ರೂಪದಿಂದ ನಿನಗೆ ಮಗನಾಗಿ ಅವತರಿಸಿರುವೆನು. ॥೧೩॥

ಈ ಅವತಾರದಲ್ಲಿ ನಾನು ನಿರ್ವಹಿಸಲಿರುವ ಮಹತ್ಕಾರ್ಯಗಳನ್ನು ಸೂಚಿಸುವೆನು, ಕೇಳು. ಮಹಾ ಬಲಿಷ್ಠನಾದ ಸಿಂದೂರನೆಂಬ ದೈತ್ಯನನ್ನು ನಿಗ್ರಹಿಸುವೆನು. ಅವನನ್ನನುಸರಿಸುವವರು ಅವನಂತೆಯೇ ದುಷ್ಟರಾಗಿದ್ದಾರೆ. ಅವರೂ ಅಸಂಖ್ಯಾತರಾಗಿರುವುದರಿಂದ ಅವರ ಭಾರವನ್ನು ಭೂಮಿಯು ಹೊರಲಾರದವಳಾಗಿದ್ದಾಳೆ. ಅದನ್ನು ಇಳುಹುವುದು ನನ್ನ ಕರ್ತವ್ಯ. ಆದುದರಿಂದ ಅದನ್ನೂ ಮಾಡುವೆನು. ಈ

**ವಿಖ್ಯಾತೋಽಹಂ ಭವಿಷ್ಯಾಮಿ ಭಕ್ತಾನಾಂ ಕಾಮಪೂರಕಃ ।**
**ಕ ಉವಾಚ :—**
**ಏವಂ ಶ್ರುತ್ವಾ ವಚೋ ಗೌರೀ ಸ್ಮೃತ್ವಾ ಸರ್ವಂ ಪುರಾತನಮ್ ॥೧೫॥**
**ನತ್ವಾ ತುಷ್ಟಾವ ದೇವೇಶಂ ವಿಶ್ವೇಶಂ ವಿಘ್ನನಾಶಕಮ್ ।**
**ಗೌರ್ಯುವಾಚ :—**
**ನಿರ್ವಿಕಲ್ಪಚಿದಾನಂದಘನಂ ಬ್ರಹ್ಮಸ್ವರೂಪಿಣಮ್ ॥೧೬॥**
**ಭಕ್ತಪ್ರಿಯಂ ನಿರಾಕಾರಂ ಸಾಕಾರಂ ಗುಣಭೇದತಃ ।**
**ನಮಾಮ್ಯಹಮಆಸ್ಥೂಲಮಣುಭ್ಯೋಽಣುತರಂ ವಿಭುಮ್ ॥೧೭॥**

---

ಅವತಾರಕ್ಕೆ ಪವಿತ್ರ ಕ್ಷೇತ್ರಳಾಗಿರುವ ನೀನು, ನನ್ನ ತಾಯಿ, ನಿನ್ನ ಚರಣಕಮಲಗಳನ್ನು ಸೇವಿಸುವೆನು. ಈ ಅವತಾರದಲ್ಲಿ ನನ್ನನ್ನು ಎಲ್ಲರೂ 'ಗಜಾನನ' ಎಂಬ ಹೆಸರಿನಿಂದ ಕರೆಯುತ್ತಾರೆ. ॥೧೪॥

ಆ ಹೆಸರನ್ನು ನಾನು ಒಪ್ಪಿಕೊಂಡು ಅದರಿಂದಲೇ ಪ್ರಸಿದ್ಧನಾಗುವೆನು. ನನ್ನನ್ನು ಭಕ್ತಿಯಿಂದ ಭಜಿಸುವವರ ಇಷ್ಟಾರ್ಥಗಳನ್ನೆಲ್ಲ ನೆರವೇರಿಸಿಕೊಡುವೆನು.

ಬ್ರಹ್ಮಾ:—

ಬಾಲಕನಾಡಿದ ಈ ಮಾತುಗಳನ್ನು ಕೇಳಿ ಗೌರಿಯು ಬಹು ಹಿಂದೆ ಅವನು ತನ್ನೆದುರು ಆಡಿದ ಮಾತುಗಳನ್ನೆಲ್ಲ ಸ್ಮರಿಸಿಕೊಂಡಳು. ॥೧೫॥

ಭಕ್ತಿರಸವು ಅಗಜೆಯ ಅಂತಃಕರಣದಲ್ಲಿ ಉಕ್ಕಿ ಬಂದಿತು. ಎದ್ದು ಆ ಬಾಲಕನಿಗೆ ನಮಸ್ಕರಿಸಿದಳು. ದೇವೇಶ್ವರ, ವಿಶ್ವದೊಡೆಯ ; ವಿಘ್ನನಾಶಕನನ್ನು ಹೀಗೆಂದು ಸ್ತುತಿಸಲಾರಂಭಿಸಿದಳು.

ಗೌರೀ :—

ಸಂಕಲ್ಪ–ವಿಕಲ್ಪಾದಿ ಚಂಚಲ ವೃತ್ತಿಶೂನ್ಯ ಜ್ಞಾನಾನಂದಗಳ ಘನ ನೀನು. ಅರ್ಥಾತ್ ಪರಬ್ರಹ್ಮಸ್ವರೂಪಿ. ॥೧೬॥

ಭಕ್ತರನ್ನು ಕಂಡರೆ ನಿನಗೆ ಬಹಳ ಪ್ರೀತಿ. ಸ್ವಭಾವತಃ ನಿನಗೆ ಯಾವ ವಿಧವಾದ ಆಕಾರವೂ ಇರುವುದಿಲ್ಲ. ಆದರೂ ಪ್ರಪಂಚದ ರೀತಿ-ನಿಯಮಗಳನ್ನು ನಿರ್ವಹಿಸುವುದಕ್ಕಾಗಿ ಸತ್ತ್ವರಜಸ್ತಮೋಗುಣಗಳಲ್ಲಿ ಪ್ರತಿಫಲಿಸಿ, ಸಾಕಾರನಾಗಿ ಕಾಣುವೆ. 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದರೆ ಸೂಕ್ಷ್ಮ ವಸ್ತುವಿಗಿಂತಲೂ ಸೂಕ್ಷ್ಮತಮನು. ಹಿರಿದಾದ ವಸ್ತುವಿಗಿಂತಲೂ, ನೀನು ಹಿರಿಯನು,

ಅವ್ಯಕ್ತಂ ವ್ಯಕ್ತಿಮಾಪನ್ನಂ ರಜಃಸತ್ತ್ವತಮೋಗುಣಮ್ ।
ಮಾಯಾವಿನಂ ಮಾಯಿನಂ ಚ ಸರ್ವಮಾಯಾವಿದಂ ಪ್ರಭುಮ್ ॥೧೮॥
ಸರ್ವಾಂತರ್ಯಾಮಿಣಂ ನಿತ್ಯಂ ಸರ್ವಾಧಾರಂ ಪರಾತ್ಪರಮ್ ।
ಚತುರ್ಣಾಮಪಿ ವೇದಾನಾಂ ಮಾನಸಸ್ಯಾಪ್ಯಗೋಚರಮ್ ॥೧೯॥
ಮಹದ್ಭಾಗ್ಯಂ ಮಮ ವಿಭೋ ! ಪ್ರತ್ಯಕ್ಷಂ ದರ್ಶನಂಗತಃ ।
ಪ್ರತೀಕ್ಷಂತ್ಯಾ ಮಮ ವಿಭೋ ! ಪ್ರತ್ಯಕ್ಷಂ ದರ್ಶನಂ ಗತಃ ॥೨೦॥
ಇದಾನೀಂ ತ್ವದ್ವಿಯೋಗೋ ಮೇ ನ ಸ್ಯಾದ್ದೇವ । ತಥಾ ಕುರು ।

---

ಅರ್ಥಾತ್ ಸರ್ವತ್ರ ವ್ಯಾಪಕನಾಗಿರುವೆ. ಪ್ರಭೋ ! ನಿನಗೆ ನಾನು ವಂದಿಸುವೆನು. ॥೧೭॥

ದರ್ಶನಸಾಧನಗಳಾದ ಇಂದ್ರಿಯ, ಮನಸ್ಸುಗಳಿಗೆ ಗೋಚರಿಸತಕ್ಕವನಲ್ಲವಾದ್ದರಿಂದ ನೀನು ಅವ್ಯಕ್ತನೆನಿಸುವೆ. ಜನರನ್ನು ಉದ್ಧರಿಸಲಿಕ್ಕಾಗಿ ಜನರಂತೆ ಜನಿಸಿ ಗೋಚರನೂ ಆಗಿರುವೆ. ರಜಸ್ಸತ್ತ್ವ ತಮೋಗುಣಗಳೂ ನಿನ್ನ ಸ್ವರೂಪವೇ ಆಗಿವೆ. ಮೂಲ ಮಾಯೆಯನ್ನು ನೀನು ಅಧೀನದಲ್ಲಿರಿಸಿಕೊಂಡವನು. ಸಾಕ್ಷಾನ್ಮಾಯಾ ಸ್ವರೂಪನೂ ಆಗಿರುವೆ. ಸಕಲ ವಿಧ ಮಾಯಾ ವಿದ್ಯೆಗಳನ್ನು ಪ್ರಭೋ ! ನೀನು ಬಲ್ಲವನು. ॥೧೮॥

ಎಲ್ಲರ ಅಂತರಂಗದಲ್ಲೂ ನೆಲೆಸಿ ನೀನು ಅವರನ್ನು ಅವರವರ ಪ್ರಾರಬ್ಧಕರ್ಮಗಳಿಗನುಸರಿಸಿ ಪ್ರೇರಿಸುವೆ. ನೀನು ವಿನಾಶರಹಿತನಾದವನು. ಸಕಲಜಗತ್ತಿಗೂ ಆಧಾರನಾದವನು. ಶ್ರೇಷ್ಠವೆನಿಸಿದ ವಸ್ತುಗಳೆಲ್ಲೆಲ್ಲ ಪರಮ ಶ್ರೇಷ್ಠನಾದವನು. ಸಕಲ ವಿಧ ಶಬ್ದ ಪ್ರಪಂಚಕ್ಕೂ ಆಶ್ರಯವೆನಿಸಿದ ನಾಲ್ಕು ವೇದಗಳಿಗಾಗಲಿ, ಅತ್ಯದ್ಭುತ ಸನ್ನಿವೇಶಗಳನ್ನೆಲ್ಲ ಮತ್ತಾವ ವಿಧವಾದ ಸಾಧನಗಳನ್ನೂ ನಿರೀಕ್ಷಿಸದೆ ಬಹು ಸುಲಭವಾಗಿ ಕಲ್ಪಿಸಬಲ್ಲ ಮನಸ್ಸಿಗಾಗಲಿ ನಿನ್ನನ್ನರಿವ ಸಾಮರ್ಥ್ಯವಿರುವುದಿಲ್ಲ ॥೧೯॥

ವಿಭೋ ! ಇಂತಹ ಮಹಿಮಾಶಾಲಿಯಾದ ನಿನ್ನನ್ನು ಪುತ್ರನನ್ನಾಗಿ ಪಡೆದಿರುವ ನನ್ನ ಭಾಗ್ಯ ಎಷ್ಟು ಮಹತ್ತಾದುದೋ ಅದನ್ನು ನಾನಂತೂ ಅರಿಯಲಾರೆ. ಪ್ರಭೋ ! ಎಂದಿಗೆ ನಿನ್ನ ಸಂದರ್ಶನ ನನಗೆ ಒದಗಬಹುದೋ ಎಂದು ನಾನು ಅನವರತ ನಿರೀಕ್ಷಿಸುತ್ತಲೇ ಇದ್ದೆ. ದೇವ ! ನೀನು ನನಗೆ ಪ್ರತ್ಯಕ್ಷನಾಗಿ ಇಂದು ದರ್ಶನವನ್ನು ಅನುಗ್ರಹಿಸಿದೆ. ॥೨೦॥

ಕಳೆದ ಯುಗದಲ್ಲಿ ಇದೇ ರೀತಿಯ ಎಂದರೆ ನಿನ್ನನ್ನು ಮಗನನ್ನಾಗಿ ಪಡೆವ ಭಾಗ್ಯ ನನಗೆ ದೊರೆತಿದ್ದಿತಾದರೂ, ನನಗೆ ತೃಪ್ತಿಯಾಗುವವರೆಗೂ ನೀನು ನನ್ನ ಬಳಿ ಇರದೆ, ಅಷ್ಟರಲ್ಲೇ ಆ ಅವತಾರವನ್ನು ಉಪಸಂಹರಿಸಿಬಿಟ್ಟೆ. ನಿನ್ನ ವಿಯೋಗವನ್ನು ತಾಳ

**ಕ ಉವಾಚ :—**

**ಏವಂ ವದಂತ್ಯಾಂ ತಸ್ಯಾಂ ತು ದೇವೋ ರೂಪಾಂತರಂ ದಧೌ ॥೨೧॥**
**ಚತುರ್ಭುಜಂ ಭಾಲಚಂದ್ರಂ ಶುಂಡಾದಂಡವಿರಾಜಿತಮ್ ।**
**ಅನೇಕಭೂಷಣಯುತಂ ಚಿಂತಾಮಣಿಯುತಂ ಹೃದಿ ॥೨೨॥**
**ದಿವ್ಯಾಂಬರಂ ದಿವ್ಯಗಂಧಂ ಸಿದ್ಧಿ-ಬುದ್ಧಿಯುತಂ ತದಾ ।**
**ರುರೋದ ಬಾಲವಚ್ಚಾಜ್ಞೋ ದದೃಶೇ ಗಿರಿಜಾ ತು ತಮ್ ॥೨೩॥**
**ಶುಶೋಚ ಬಹುಧಾ ತನ್ವೀ**

ಲಾರದೆ ನಾನು ಬಹಳ ಸಂಕಟಕ್ಕೆ ಒಳಗಾಗಿದ್ದೆ. ಆದರೆ ಈಗಲೂ ಹಾಗೆಯೇ ಮಾಡಿಬಿಡಬೇಡ ಪ್ರಭೋ ! ನೀನು ನನ್ನನ್ನು ತೊರೆದು ಎಲ್ಲಿಗೂ ಹೋಗಬಾರದು. ಆ ರೀತಿಯಾಗಿ ನೀನು ವರ್ತಿಸು.

ಬ್ರಹ್ಮಾ :—

ದೇವಿಯು ಈ ರೀತಿಯಾಗಿ ಪ್ರಾರ್ಥಿಸುತ್ತಿರುವಷ್ಟರಲ್ಲಿ ದೇವನು ತನ್ನ ರೂಪವನ್ನು ಮುಂದಿನ ಅವತಾರಿಕ ರೂಪಕ್ಕೆ ಕೂಡಲೆ ಮಾರ್ಪಡಿಸಿದನು. ॥೨೧॥

ದೇವನು ಮಾರ್ಪಡಿಸಿಕೊಂಡ ರೂಪಕ್ಕೆ ನಾಲ್ಕು ಭುಜಗಳಿದ್ದವು. ಹಣೆಯಲ್ಲಿ ಚಂದ್ರನು ಹೊಳೆಯುತ್ತಿದ್ದನು. ಸುಂದರವಾದ ಸೊಂಡಿಲಿನಿಂದ ವಿರಾಜಿತ ಮುಖಕಮಲನಾಗಿದ್ದನು. ತನ್ನ ಅವಯವಗಳಿಗೆ ಒಪ್ಪವಾಗಿರುವಂತಹ ಅನೇಕ ಭೂಷಣಗಳಿಂದ ಭೂಷಿತನಾಗಿದ್ದನು. ಕಾಮಿತಾರ್ಥಪ್ರದವಾದ ಚಿಂತಾಮಣಿ (Thought Gem. a fabulolus Gem supposed to yield its possessor all desires) ಎಂಬ ರತ್ನವನ್ನು ಉರಃಸ್ಥಳದಲ್ಲಿ ಧರಿಸಿದ್ದನು. ॥೨೨॥

ದಿವ್ಯವಾದ ವಸ್ತ್ರವನ್ನು ಧರಿಸಿದ್ದನು. ದೇಹಕ್ಕೆ ದಿವ್ಯ ಚಂದನವನ್ನು ಚರ್ಚಿಸಿಕೊಂಡಿದ್ದನು. ತನ್ನ ಪ್ರಿಯತಮೆಯರಾದ ಸಿದ್ಧಿ-ಬುದ್ಧಿಯರನ್ನು ಅಕ್ಕ-ಪಕ್ಕಗಳಲ್ಲಿ ಕುಳ್ಳಿರಿಸಿಕೊಂಡಿದ್ದನು. ಏನನ್ನೂ ಅರಿಯದ ಎಳೆಗೂಸಿನಂತೆ ಅಳಲಾರಂಭಿಸಿದನು. ಇದನ್ನು ಗಿರಿಜೆಯು ಗಮನಿಸಿದಳು. ॥೨೩॥

ತಾನು ಇದುವರೆಗೂ ನೋಡುತ್ತಲಿದ್ದ ದೇವನ ರೂಪವು ಇದ್ದಕ್ಕಿದ್ದಂತೆ ಮಾಯವಾಗಿ ಬೇರಾವುದೋ ಒಂದು ಶಿಶು ತನ್ನೆದುರು ಅಳುತ್ತ ಕುಳಿತಿರುವುದನ್ನು ಕಂಡು 'ನಾನು ಪ್ರಸವಿಸಿದ ಆ ಆಕಾರದ ಶಿಶು ಎಲ್ಲಿಗೆ ಹೋಯಿತೆ'ಂದು ಅತಿಯಾಗಿ ಶೋಕಿಸಿದಳು.

ಗಿರಿಜೋವಾಚ :—

ನಿಧಿಃ ಕೇನ ಹೃತೋ ಮಮ ।

ನ ಬಾಲಸ್ತ್ರಿಷು ಲೋಕೇಷು ದೃಷ್ಟಃ ಶುಂಡಾವಿರಾಜಿತಃ ॥೨೪॥

ಬ್ರಹ್ಮಾದಯೋ ಹಸಿಷ್ಯಂತಿ ಲೋಕಾಶ್ಚೇಕ್ಷ್ಯೇದೃಶಂ ಶಿಶುಮ್

ಕ ಉವಾಚ :

ಸಗಣಸ್ತಂ ಶಿಶುಂ ಗೃಹ್ಯ ಪ್ರಾಹ ತಾಂ

ಶಿವ ಉವಾಚ :

ಶೃಣು ಮೇ ಪ್ರಿಯೇ ! ॥೨೫॥

ಅನಾದಿನಿಧನೋ ದೇವಃ ಶುಂಡಾದಂಡವಿರಾಜಿತಃ ।

ಯತ್ರ ಕುಂಠಾಶ್ಚತುರ್ವೇದಾಃ ಶಾಸ್ತ್ರಾಣಿ ಮುನಯೋಽಮರಾಃ ॥೨೬॥

---

ಗಿರಿಜೆ :—

ಅಖಂಡ ನಿಧಿಯಂತಿದ್ದ ನನ್ನ ಮುದ್ದುಕುವರನನ್ನು ಯಾರು ಅಪಹರಿಸಿ ಕೊಂಡು ಹೋದರು? ಮಕ್ಕಳಿಗೆಲ್ಲಾದರೂ ಸೊಂಡಿಲಿರುವುದುಂಟೆ? ತ್ರಿಭುವನಗಳಲ್ಲಿಲ್ಲೂ ಈ ತರಹದ ಮಗುವನ್ನು ಕಂಡಿರುವುದಿಲ್ಲವಲ್ಲ ! ॥೨೪॥

' ಎಂತಹ ಶಿಶುವನ್ನು ಪ್ರಸವಿಸಿವೆ ' ಎಂದು ಈ ಶಿಶುವನ್ನು ಕಂಡ ಬ್ರಹ್ಮಾದಿಗಳು ನಕ್ಕು, ಜಗವೂ ನನ್ನನ್ನು ನೋಡಿ ನಗುವಂತೆ ಹಾಸ್ಯಕ್ಕೆ ಗುರಿಮಾಡುವರಲ್ಲ ?

ಬ್ರಹ್ಮಾ :—

ಈ ರೀತಿ ಬಹುಪರಿಯಿಂದ ಪರಿಶೋಚಿಸುತ್ತಲಿದ್ದ ಪಾರ್ವತೀದೇವಿಯ ಅಳುವನ್ನು ಕೇಳಿ ಶಂಕರನು ಮನೆಗೆ ಬಂದನು. ॥೨೫॥

ಗಣವೆಲ್ಲ ಅವನನ್ನು ಆದರಿಸಿ ಅವನ ಸುತ್ತಲೂ ನಿಂದರು. ಸರ್ವಜ್ಞನಾದ ಪರಮೇಶ್ವರನಿಗೆ ಆಗಿನ ಸನ್ನಿವೇಶವೆಲ್ಲ ಸ್ಪಷ್ಟವಾಗಿ ಅರಿವಾಯಿತು. ಪಾರ್ವತಿಯ ಶೋಕವನ್ನು ಸಮಾಧಾನಪಡಿಸುವುದಕ್ಕಾಗಿ ಆ ಶಿಶುವನ್ನು ಕೈಗೆ ಎತ್ತಿಕೊಂಡು ಅವಳಿಗೆ ತೋರಿಸುತ್ತ ಹೀಗೆಂದು ನುಡಿದನು.

ಶಿವ :—

ಪ್ರಿಯೇ! ನಾನು ಹೇಳುವುದನ್ನು ಗಮನವಿಟ್ಟು ಕೇಳು. ಈ ಶಿಶು ಯಾರೆಂಬುದು ನಿನಗೆ ಗೊತ್ತಿದೆಯೇ ? ಶುಂಡಾದಂಡದಿಂದ ವಿರಾಜಿತನಾಗಿ ತೋರುತ್ತಿರುವ ಈ ಬಾಲಕನು ದೇವನು. ಆದ್ಯಂತರಹಿತನಾದವನು. ॥೨೬॥

ಯಾವನ ಸ್ವಾಭಾವಿಕ ಸ್ವರೂಪವನ್ನು ನಿರೂಪಿಸಲು ಯತ್ನಿಸಿದಾಗ ನಾಲ್ಕು

ಪ್ರಪಂಚೋ ಗುಂಫಿತೋಯೇನ ನಾನಾಕಾರ್ಯವತಾ ಪ್ರಿಯೇ ! ||೨೭||
ಸರ್ವಾಂತರ್ಯಾಮ್ಯನೇಕಾನಾಂ ಬ್ರಹ್ಮಾಂಡಾನಾಂ ಚ ಕಾರಕಃ |
ಚತ್ವಾರ್ಯಸ್ಯ ಚ ರೂಪಾಣಿ ಚತುರ್ಷು ಚ ಯುಗೇಷು ಚ ||೨೮||
ಕೃತೇ ದಶಭುಜೋ ನಾಮ್ನಾ 'ವಿನಾಯಕ' ಇತಿ ಶ್ರುತಃ |
ತ್ರೇತಾಯುಗೇ ಶುಕ್ಲವರ್ಣಃ ಷಡ್ಭುಜೋಽಸೌ ಮಯೂರರಾಟ್ ||೨೯||
ಸಿಂಧುಂ ಹತ್ವಾಪಾಲಯತ್ಸೋಽವತೀರ್ಯ ಸ್ವಾಲಯೇ ಪ್ರಿಯೇ ! |
ಸ ಏವಾಯಂ ರಕ್ತವರ್ಣಶ್ಚತುರ್ಬಾಹುವಿರಾಜಿತಃ ||೩೦||
ಅವತೀರ್ಣೋ ಗೃಹೇಽಸೌ ಹಿ ಸಿಂದೂರಂ ನಿಹನಿಷ್ಯತಿ |
ಆರುಹ್ಯ ಮೂಷಕಂ ದೇವೋ ಭೂ-ಭಾರಂ ಚ ಹರಿಷ್ಯತಿ ||೩೧||

---

ವೇದಗಳೂ, ಆರು ಶಾಸ್ತ್ರಗಳೂ, ತಪಸ್ಸಿದ್ಧರಾದ ಮುನಿಗಳೂ, ಅಜರಾಮರರೆನಿಸಿದ ಅಮರರೂ ಕುಂಠಿತರಾಗಿ ಹೋದರೋ, ಅಂತಹ ಜಗತ್ಪ್ರಭು ; ಈ ಬಾಲಕ.

ಇವನು ಸರ್ವಾಂತರ್ಯಾಮಿಯಾದವನು. ಅನೇಕ ಬ್ರಹ್ಮಾಂಡಗಳನ್ನು ನಿರ್ಮಿಸಿದವನು. ಆಯಾ ಯುಗಧರ್ಮ, ಕಾರ್ಯ ಹಾಗೂ ಸನ್ನಿವೇಶಗಳಿಗನುಸರಿಸಿ ಇವನು ನಾಲ್ಕು ಬಗೆಯ ರೂಪಗಳನ್ನು ಧರಿಸುತ್ತಾನೆ. ಅದನ್ನೇ ವಿಸ್ತರಿಸಿ ಹೇಳುವೆನು ಕೇಳು. ||೨೮||

ಮೊದಲನೆಯದೇ ಕೃತಯುಗ. ಆಗ ದೇವನು ದಶಬಾಹುಗಳುಳ್ಳವನಾಗಿರುವನು. ಆ ಯುಗದಲ್ಲಿ ದೇವನಿಗೆ 'ವಿನಾಯಕ' ಎಂಬ ಹೆಸರು ಪ್ರಖ್ಯಾತವಾಗಿರುವುದು. ತ್ರೇತಾಯುಗದಲ್ಲಿ ಶುಭ್ರ ವರ್ಣದಿಂದ ಕೂಡಿರುತ್ತಾನೆ. ಆರು ಭುಜಗಳಿರುವವು. ಮಯೂರವನ್ನು ತನ್ನ ವಾಹನವನ್ನಾಗಿ ಮಾಡಿಕೊಳ್ಳುತ್ತಾನೆ. ||೨೯||

ಇದೇನು, ಇಷ್ಟರಲ್ಲೇ ಮರತೆಯ ? ಪ್ರಿಯೇ ! ಕಳೆದ ಯುಗದಲ್ಲಿ ಇವನು ನಮಗೆ ಮಗನಾಗಿ ನಮ್ಮ ಮನೆಯಲ್ಲಿಯೇ ಜನಿಸಿರಲಿಲ್ಲವೇ ? ಸಿಂಧು ದೈತ್ಯನನ್ನು ಕೊಂದು ಜಗತ್ತನ್ನು ಪರಿಪಾಲಿಸಲಿಲ್ಲವೇ? ಆ ದೇವನೇ ಈ ಯುಗದಲ್ಲಿ ಇಂದು ನಮ್ಮೆದುರು ರಕ್ತವರ್ಣದಿಂದಲೂ, ಚತುರ್ಬಾಹುಗಳಿಂದಲೂ, ವಿರಾಜಿತನಾಗಿರುವನು. ||೩೦||

ಈಗ ನಮ್ಮ ಮನೆಯಲ್ಲಿ ಅವತಾರವನ್ನೆತ್ತಿದ ಈ ಭಗವಂತನು ಸಿಂದೂರ ದೈತ್ಯನನ್ನು ಸಂಹರಿಸುವನು. ಈ ಅವತಾರದಲ್ಲಿ ಇವನಿಗೆ ಇಲಿ ವಾಹನವಾಗಿರುತ್ತದೆ. ಅದನ್ನೇರಿಕೊಂಡು ಭೂಮಿಯನ್ನೆಲ್ಲ ಸುತ್ತಿ, ಅಲ್ಲಲ್ಲಿ ಅಡಗಿರುವ ದುಷ್ಟ ದಾನವರನ್ನು ನಿಗ್ರಹಿಸಿ, ಭೂ-ಭಾರವನ್ನು ಇಳಿಸುತ್ತಾನೆ. ||೩೧||

ನಾಮ್ನಾ ' ಗಜಾನನ ' ಇತಿ ತ್ರೈಲೋಕ್ಯೇ ಖ್ಯಾತಿಮೇಷ್ಯತಿ ।
ಅಯಂ ಕಲಿಯುಗೇ ದೇವಿ ! ' ಧೂಮ್ರಕೇತುರಿ'ತಿ ಪ್ರಥಾಮ್ ॥೩೨॥
ಚತುರ್ಬಾಹುಶ್ಚಾರುನೇತ್ರೋ ಯಾಸ್ಯತೇ ರುಚಿರಾಂ ಭುವಿ ।

ಕ ಉವಾಚ :—

ನಿಶಮ್ಯ ಶಿವವಾಕ್ಯಂ ಸ ಉವಾಚ ಬಾಲಕಃ ಸ್ಫುಟಮ್ ॥೩೩॥

ಬಾಲಕ ಉವಾಚ :—

ಸಮ್ಯಗ್ಬುದ್ಧಂ ಸ್ವರೂಪಂ ಮೇ ಸಮ್ಯಗುಕ್ತಂ ತ್ವಯಾ ಶಿವ ! ।
ಅವತೀರ್ಣಸ್ತವ ಗೃಹೇ ಸೇವಾಂ ಕರ್ತುಂ ಚ, ಸಿಂದುರಮ್ ॥೩೪॥
ನಿಹಂತುಂ ಚ, ನಿಹಂತಾರಂ ದೇವಾನಾಂ ಸರ್ವಭೂಭುಜಾಮ್ ।

ದೇವನಿಗೆ ಈ ಯುಗದಲ್ಲಿ ' ಗಜಾನನ ' ಎಂದು ಹೆಸರು. ಇದು ಮೂರು ಲೋಕಗಳಲ್ಲೂ ಪ್ರಖ್ಯಾತವಾಗುವುದು. ದೇವಿ! ಇವನೇ ಮುಂದೆ ಕಲಿಯುಗದಲ್ಲಿ ' ಧೂಮ್ರಕೇತು ' ಎಂಬ ಹೆಸರಿನಿಂದ ಅವತರಿಸಿ ಲೋಕಗಳಲ್ಲೆಲ್ಲ ಖ್ಯಾತಿಗೊಳ್ಳುವನು. ॥೩೨॥

ಆಗಿನ ಅವತಾರದಲ್ಲೂ ಇಂದಿನಂತೆ ಇವನಿಗೆ ನಾಲ್ಕು ಬಾಹುಗಳಿರುವುವು. ಸುಂದರ ನೇತ್ರಗಳುಳ್ಳವನಾಗಿ ಜಗದಲ್ಲಿ ಮೆರೆಯುವನು.

ಬ್ರಹ್ಮಾ :—

ಶಿವನಾಡಿದ ತಾತ್ತ್ವಿಕ ಮಾತುಗಳನ್ನು ಕೇಳಿ ಅವನ್ನು ಅನುಮೋದಿಸುತ್ತ, ಬಾಲಕನ ರೂಪದಲ್ಲಿದ್ದ ದೇವನು ಸ್ಪಷ್ಟವಾಣಿಯಿಂದ ಹೀಗೆ ನುಡಿದನು. ॥೩೩॥

ಬಾಲಕ :—

ಪರಶಿವ ! ನೀನು ನನ್ನ ಸ್ವರೂಪವನ್ನು ತತ್ತ್ವತಃ ತಿಳಿದುಕೊಂಡಿರುವೆ ಮತ್ತು ಅದರಂತೆಯೇ ವರ್ಣಿಸಿರುವೆ. ಪ್ರಕೃತ ನಾನು ನಿನ್ನ ಮನೆಯಲ್ಲಿ ಅವತರಿಸಿದುದಕ್ಕೆ ಎರಡು ನಿಮಿತ್ತಗಳಿವೆ. ನೀವಿಬ್ಬರೂ ನನಗೆ ಕಳೆದ ಯುಗದಲ್ಲಿ ಜನನೀ-ಜನಕರಾದುದರಿಂದ ನಿಮ್ಮ ಚರಣಕಮಲಗಳನ್ನು ಮನಮುಟ್ಟಿ ಸೇವಿಸುವುದು ಆ ಕಾರಣಗಳ ಪೈಕಿ ಮೊದಲನೆಯದು. ಎರಡನೆಯದಾಗಿ ಮಹಾದುಷ್ಟನಾದ ಸಿಂದೂರನನ್ನು ॥೩೪॥

ನಿಗ್ರಹಿಸುವುದು. ಸಿಂದೂರನು ನಡೆಸಿದ ಹಾಗೂ ನಡೆಸುತ್ತಿರುವ ಪುಂಡುತನ ಸಾಮಾನ್ಯವಾದುದೇನೂ ಅಲ್ಲ. ಎಲ್ಲ ದೇವತೆಗಳನ್ನೂ ಸದೆಬಡಿದಿದ್ದಾನೆ. ಆಯಾ ದೇಶಗಳಲ್ಲಿದ್ದ ರಾಜ ಮಹಾರಾಜರಂತೂ ಇವನ ಭುಜಬಲ-ಪರಾಕ್ರಮಗಳಿಗೆ ಬಲಿಯಾಗಿ

ಮರ್ದನಂ ಭೂ-ಧರಾಣಾಂ ಚ ತ್ರೈಲೋಕ್ಯಜಯಶಾಲಿನಮ್ ||೩೫||
ಹತ್ವಾ ತಂ ವಿಶ್ವಸಂತೋಷಂ ಕರಿಷ್ಯಾಮಿ ಚ ಶಂಕರ ! |
ಭಕ್ತಾನಾಂ ಕಾಮಪೂರಶ್ಚ ದೇವಕರ್ಮಪ್ರವರ್ತಕಃ ||೩೬||
ಭವಿಷ್ಯಾಮಿ ವರೇಣ್ಯಸ್ಯ ವರದೋ ಜ್ಞಾನದಾಯಕಃ |
ಮಯಿ ಭಕ್ತಿರ್ಭವೇತ್ತಸ್ಯ ಮಮ ಧ್ಯಾನಪರಾಯಣಃ ||೩೭||
ದೇವ-ದ್ವಿಜಾತಿಥೀನಾಂ ಚ ಪೂಜಕಃ [1] ಪಂಚಯಜ್ಞಕೃತ್ |
ಪುರಾಣಶ್ರವಣೇ ಸಕ್ತಃ ಸ್ವಾಚಾರಃ ಸತ್ಯವಾಕ್ ಶುಚಿಃ ||೩೮||
" ಪುಷ್ಪಿಕಾ "ನಾಮ ಯಸ್ಯಾಪಿ ಪತ್ನೀ ಧರ್ಮಪರಾಯಣಾ |

ನಿರ್ನಾಮವಾಗಿಹೋದರು. ಭೂಮಿಯ ಭಾರವನ್ನು ತಲೆಯ ಮೇಲೆ ಹೊತ್ತುಕೊಂಡು ನಿಂದಿರುವ ಆದಿಶೇಷ, ತದೀಯರು, ದಿಗ್ಗಜಗಳು ಹೆಚ್ಚೇನು ಮೂರು ಲೋಕದವರನ್ನೂ ಸೋಲಿಸಿಬಿಟ್ಟಿದ್ದಾನೆ. ||೩೫||

ಇಂಥವನನ್ನು ಕೊಂದು ಶಂಕರ! ವಿಶ್ವಕ್ಕೆ ಶಾಂತಿ, ಸಂತೋಷಗಳನ್ನುಂಟು ಮಾಡುವೆನು. ಭಕ್ತರು ಬೇಡುವ ಬಯಕೆಗಳನ್ನು ಈಡೇರಿಸಿಕೊಡುತ್ತ 'ಭಕ್ತ ಕಾಮಪ್ರಪೂರಕ, ಎಂಬ ಶುಭ ನಾಮದಿಂದ ಮೆರೆಯುವೆನು. ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ ವೇದೋಕ್ತ ಅಗ್ನಿಹೋತ್ರಾದಿ ಕರ್ಮಗಳು ಮತ್ತೆ ನಿರ್ಬಾಧಕವಾಗಿ ನಡೆದುಕೊಂಡು ಬರುವಂತೆ ಮಾಡುವೆನು ||೩೬||

ಸಾಧು-ಸತ್ಪುರುಷರಿಗೆಲ್ಲ ಅನೇಕ ವರಗಳನ್ನು ದಯೆಪಾಲಿಸುವೆನು. ಮುಮುಕ್ಷುಗಳಿಗೆ ತತ್ತ್ವಜ್ಞಾನವನ್ನು ಉಪದೇಶಿಸುವೆನು. ವರೇಣ್ಯನೆಂಬ ಒಬ್ಬ ಮಹಾರಾಜನಿದ್ದಾನೆ. ಅವನ ಇಷ್ಟಾರ್ಥವನ್ನು ಪ್ರಕೃತ ನಾನು ನೆರವೇರಿಸಬೇಕಾಗಿದೆ. ಅವನಿಗೆ ತತ್ತ್ವವನ್ನೂ ಉಪದೇಶಿಸಬೇಕಾಗಿದೆ. ನನ್ನ ವಿಷಯದಲ್ಲಿ ಅವನು ಭಕ್ತಿ-ಭಾವ ಉಳ್ಳವನಾಗಿದ್ದಾನೆ. ನನ್ನನ್ನೇ ಸರ್ವದಾ ಧ್ಯಾನಿಸುತ್ತಲಿರುವನು. ||೩೭||

ದೇವ, ಬ್ರಾಹ್ಮಣ, ಅತಿಥ್ಯಭ್ಯಾಗತರು ಇವರನ್ನು ಅತ್ಯಾದರದಿಂದ ಪೂಜಿಸತಕ್ಕವನವನು. ಪಂಚಮಹಾಯಜ್ಞಗಳನ್ನು ಪ್ರತಿದಿನವೂ ತಪ್ಪದೆ ಶ್ರದ್ಧೆಯಿಂದ ಆಚರಿಸುವನು. ಪುರಾಣ ಶ್ರವಣದಲ್ಲಿ ಬಹಳ ಆಸಕ್ತಿ ಅವನಿಗೆ. ಎಂತಹ ದುರ್ಧರ ಪ್ರಸಂಗ ಒದಗಿದಾಗ್ಯೂ ತನ್ನ ಸದಾಚರಣೆಯನ್ನು ವ್ಯತ್ಯಾಸಗೊಳಿಸುವವನಲ್ಲ. ಅವನ ಆಯುಷ್ಯದಲ್ಲೇ ಸುಳ್ಳನ್ನಾಡಿಲ್ಲ. ಅವನ ಬಾಹ್ಯಾಭ್ಯಂತರಗಳಲ್ಲಿ ಸ್ವಲ್ಪವೂ ಕಲ್ಮಷವಿರುವುದಿಲ್ಲ. ||೩೮||

ಅವನ ಹೆಂಡಿತಿಯ ಹೆಸರು 'ಪುಷ್ಪಿಕೆ'. ಬಹಳ ಧರ್ಮಿಷ್ಠಳು. ಪಾತಿವ್ರತ್ಯ

ವಿವರಣೆಗೆ ಪರಿಶಿಷ್ಟವನ್ನು ನೋಡಿರಿ.

ಪತಿವ್ರತಾ ಪತಿಪ್ರಾಣಾ ಪತಿವಾಕ್ಯಪರಾಯಣಾ ||೩೯||
ತಾಭ್ಯಾಂ ದ್ವಾದಶವರ್ಷಾಣಿ ತಪಸ್ತಪ್ತಂ ಸು-ದಾರುಣಮ್ ।
ತತೋ ಮಯಾ ವರೋ ದತ್ತ "ಏಷ್ಯೇ ವಾಂ ಪುತ್ರತಾಂ ಧ್ರುವಮ್" ||೪೦||
ಪುಷ್ಪಿಕಾಯಾಂ ಪ್ರಸೂತಾಯಾಮದ್ಯೈವ ರಾಕ್ಷಸೈಃ ಶಿಶುಃ ।
ನೀತಶ್ಚ ತ್ಯಕ್ಷ್ಯತೇ ಪ್ರಾಣಾಂಸ್ತಸ್ಮಾನ್ಮಾಂ ನಯ ತತ್ರ ಹ ||೪೧||

ಕ ಉವಾಚ :—

ಏವಮಾಕರ್ಣ್ಯ ತದ್ವಾಕ್ಯಂ ಶಿವೋ ಹರ್ಷಸಮನ್ವಿತಃ ।
ನಾನಾವಾಙ್ಮಯಪುಷ್ಪೈಸ್ತಂ ಪೂಜಯಾಮಾಸ ಭಕ್ತಿತಃ ||೪೨||

ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ 'ಗಜಾನನಾವಿರ್ಭಾವೋ'
ನಾಮ ತ್ರಿಂಶದಧಿಕ ಶತತಮೋಽಧ್ಯಾಯಃ

ಧರ್ಮವನ್ನು ಅಕ್ಷರಶಃ ಪರಿಪಾಲಿಸತಕ್ಕವಳು ಪತಿದೇವನನ್ನು ತನ್ನ ಪ್ರಾಣದಂತೆ ಪ್ರೀತಿಸತಕ್ಕವಳು. ಪತಿಯ ಮಾತಿನಲ್ಲಿ ವೇದವಾಕ್ಯಗಳಲ್ಲಿರಬೇಕಾದ ಗೌರವವನ್ನು ಅವಳಿಟ್ಟಿದ್ದಾಳೆ. ||೩೯||

ವರೇಣ್ಯ-ಪುಷ್ಪಿಕೆಯರು ಪುತ್ರಾರ್ಥಿಗಳಾಗಿ ಬಹು ಹಿಂದೆ ಹನ್ನೆರಡು ವರ್ಷಗಳ ವರೆಗೂ ಅತ್ಯಂತ ದಾರುಣವಾದ ತಪಸ್ಸನ್ನಾಚರಿಸಿದ್ದರು. ಆಗ ನಾನು ಅವರಿಗೆ ಪ್ರಸನ್ನನಾಗಿ 'ನಿಮಗೆ ನಾನು ಮಗನಾಗಿ ಜನಿಸುವೆನು' ಎಂದು ಆಶ್ವಾಸನವನ್ನು ಕೊಟ್ಟಿದ್ದೆ. ಅದನ್ನು ಸತ್ಯವನ್ನಾಗಿ ಮಾಡಬೇಕಷ್ಟೆ ? ||೪೦||

ಪುಷ್ಪಿಕೆಯು ಇಂದೇ ಪ್ರಸವಿಸಿದ್ದಾಳೆ. ಕೇಡಿಗರಾದ ರಾಕ್ಷಸರು ಆ ಶಿಶುವನ್ನು ಕೂಡಲೇ ಕದ್ದೊಯ್ದಿದ್ದಾರೆ. ಅದು ಕೂಡಲೇ ಪ್ರಾಣಗಳನ್ನು ಬಿಡತಕ್ಕದ್ದಾಗಿದೆ. ಆದುದರಿಂದ ಈಗಲೇ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು. ||೪೧||

ಬ್ರಹ್ಮ :—

ಈ ಮಾತುಗಳನ್ನು ಕೇಳಿದ ಕೂಡಲೇ ಪರಶಿವನು ಹೃಷ್ಟಾಂತರಂಗನಾದನು ನಾನಾವಿಧ ವೇದಮಂತ್ರಗಳನ್ನುಚ್ಚರಿಸುತ್ತ ಅವನ್ನೇ ಪುಷ್ಪಗಳಂತೆ ದೇವನಿಗೆ ಸಮರ್ಪಿಸಿದನು. ಹಾಗೂ ಬಹಳ ಭಕ್ತಿಯಿಂದ ಪೂಜಿಸಿದನು. ||೪೨||

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ 'ಗಜಾನನಾವಿರ್ಭಾವ'
ಎಂಬಲ್ಲಿಗೆ ನೂರ ಮೂವತ್ತನೆಯ ಅಧ್ಯಾಯಾನುವಾದವು
ಮುಕ್ತಾಯವಾಯಿತು.

ಶ್ರೀ ಗಣೇಶಾಯ ನಮಃ

# ಅಥೈಕತ್ರಿಂಶದುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ತತಶ್ಚಿಂತಾಂ ಚಕಾರಾಸೌ ತತ್ರ ನೇತುಂ ತು ಬಾಲಕಮ್ ।**

**ತಜ್ಜ್ಞಾತ್ವಾ ಪ್ರಾಹ ತಂ ನಂದೀ**

**ನಂದ್ಯುವಾಚ :—**

**ಸ್ವಾಮಿನ್ ! ಯುಷ್ಮತ್ಪ್ರಸಾದತಃ ॥೧॥**

**ಶೋಷಯಿಷ್ಯೇ ಸಮುದ್ರಾಂಸ್ತು ಚೂರ್ಣಯಿಷ್ಯೇ ಗಿರೀನಪಿ ।**
**ಆಜ್ಞಾಪಯ ತತೋ ಮಹ್ಯಂ ಭರ್ವಾ ಕಾರ್ಯಂ ಹೃದಿ ಸ್ಥಿತಮ್ ॥೨॥**

॥ ಶ್ರೀ ಮಂಗಲಮೂರ್ತಯೇ ನಮಃ ॥

## ೧೩೧ ನೆಯ ಅಧ್ಯಾಯ

ಬ್ರಹ್ಮಾ :—

ಪರಮಾತ್ಮಾ ಗಜಾನನನು ನುಡಿದ ನುಡಿಯನ್ನು ಕೇಳಿ ನೀಲಕಂಠನು 'ಎಳೆಗೂಸಾದ ಇವನನ್ನು ಅಷ್ಟು ದೂರ ಪ್ರದೇಶಕ್ಕೆ ಕರೆದೊಯ್ಯುವುದು ಹೇಗೆ?' ಎಂದು ಚಿಂತಿಸಲಾರಂಭಿಸಿದನು. ಇದರ ಸೂಕ್ಷ್ಮವನ್ನರಿತ ನಂದಿಯು ಮುಂದೆ ಬಂದು ಪರಮೇಶ್ವರನನ್ನು ಕುರಿತು ಹೀಗೆಂದನು.

ನಂದೀ :—

ಸ್ವಾಮಿನ್, ಶಂಕರ! ತಮ್ಮ ಅನುಗ್ರಹ ವಿಶೇಷದಿಂದ ॥೧॥

ಸಪ್ತ ಸಮುದ್ರಗಳನ್ನು ಬೇಕಾದರೂ ಒಡನೆಯೇ ಶೋಷಿಸಿಹೋಗುವಂತೆ ಮಾಡಿಬಿಡುವೆನು- ಕುಲಪರ್ವತಗಳನ್ನೆಲ್ಲ ಪುಡಿ ಪುಡಿ ಮಾಡಿಬಿಡುತ್ತೇನೆ. ಆದುದರಿಂದ ಯಾವ ಕೆಲಸವನ್ನು ಮಾಡಬೇಕೆಂದು ದೇವ! ನೀನು ನಿನ್ನ ಮನಸ್ಸಿನಲ್ಲಿ ಸಂಕಲ್ಪಿಸಿರುವೆಯೋ, ಅದನ್ನು ಮಾಡುವಂತೆ ನನ್ನನ್ನು ಆಜ್ಞಾಪಿಸು. ॥೨॥

**ಕ ಉವಾಚ :—**

**ಭಣಿತಂ ತಸ್ಯ ತಚ್ಛ್ರುತ್ವಾ ತುಷ್ಟಃ ಪ್ರಾಹ ಹರಃ ಸ ತವ್ ।**

**ಹರ ಉವಾಚ :—**

**ಸಾಧು, ಸಾಧು, ತ್ವಯಾ ಪ್ರೋಕ್ತಮಾಶಯಂ ಮೇ ವಿವೃಣ್ವತಾ ॥೩॥**

**ಪೌರುಷಂ ತೇ ಮಯಾ ಜ್ಞಾತಂ ಶತಶೋ ನಂದಿಕೇಶ್ವರ! ।**

**ಇದಾನೀಮಥ ಯತ್ಕಾರ್ಯಂ ವದಾಮಿ ತತ್ಕುರುಷ್ವ ಭೋಃ! ॥೪॥**

**ಮಾಹಿಷ್ಮತ್ಯಾಂ ಮಹಾಪುರ್ಯಾಮಾಸ್ತೇ ರಾಜಾ ಮಹಾಬಲಃ ।**

**"ವರೇಣ್ಯ" ಇತಿ ವಿಖ್ಯಾತೋ ನಾನಾ ಧರ್ಮಪರಾಯಣಃ ॥೫॥**

**ಯಸ್ಯ ಪತ್ನೀ ಮಹಾಭಾಗಾ "ಪುಷ್ಪಿಕಾ" ನಾಮ ನಾಮತಃ ।**

ಬ್ರಹ್ಮಾ :—

ನಂದಿ ನುಡಿದ ವೀರನುಡಿಗಳನ್ನು ಕೇಳಿ ನೀಲಲೋಹಿತನು ಬಹಳ ಸಂತೋಷ ಪಟ್ಟನು. ಮತ್ತು ಅವನ ಧೈರ್ಯೋತ್ಸಾಹಗಳನ್ನು ಶ್ಲಾಘಿಸುತ್ತ ಹೀಗೆಂದು ನುಡಿದನು.

ಹರ :—

ವತ್ಸ, ನಂದೀ! ನನ್ನ ಹೃದ್ಗತಸಂಗತಿಯನ್ನು ಅರಿತು, ಅದನ್ನು ಸಾಧಿಸಿ ಕೊಂಡು ಬರಲು ಅನುಜ್ಞೆಯನ್ನೀಯಬೇಕೆಂದು ಬೇಡುತ್ತಿರುವುದು ನಿನ್ನ ಬಲ-ಪರಾಕ್ರಮ, ಸ್ವಾಮಿನಿಷ್ಠೆಗಳಿಗೆ ಬಹಳಮಟ್ಟಿಗೆ ಒಪ್ಪುತ್ತದೆ. ॥೩॥

ನಂದಿಕೇಶ್ವರ! ನಿನ್ನ ಪೌರುಷವೆಷ್ಟಿದೆ ಎಂಬುದನ್ನು ನಾನು ನೂರಾರು ಸಲ ಪರಿಶೀಲಿಸಿ ನೋಡಿ ತಿಳಿದಿದ್ದೇನೆ. ಭೋಃ! ಪ್ರಕೃತ ಯಾವ ಕೆಲಸವನ್ನು ಸಾಧಿಸ ಬೇಕಾಗಿದೆಯೋ, ಅದನ್ನು ವಿವರಿಸುವೆನು, ಕೇಳು. ಮತ್ತು ಅದನ್ನು ಸಾಧಿಸಿ ಕೊಂಡು ಬಾ. ॥೪॥

ಮಾಹಿಷ್ಮತೀ ಎಂಬುದೊಂದು ರಾಜಧಾನಿ ಇದೆ. ಆ ರಾಜ್ಯಕ್ಕೆ ಒಡೆಯ ನಾದವನ ಹೆಸರು "ವರೇಣ್ಯ" ಅವನು ಮಹಾ ಬಲಶಾಲಿಯಾದವನು. ಸರ್ವದಾ ಧರ್ಮಕಾರ್ಯಗಳನ್ನಾಚರಿಸುವುದರಲ್ಲೇ ನಿರತನಾದವನು. ಇವನ ಪ್ರಖ್ಯಾತಿ ಸರ್ವತ್ರ ಹರಡಿದೆ. ॥೫॥

ಮಹಾ ಭಾಗ್ಯಶಾಲಿನಿಯಾದ ಅವನ ಹೆಂಡತಿಯ ಹೆಸರು "ಪುಷ್ಪಿಕೆ"

ತಸ್ಯಾಂ ಸದ್ಯಃ ಪ್ರಸೂತಾಯಾಂ ಸುಪ್ತಾಯಾಂ ಕಾಪಿ ರಾಕ್ಷಸೀ ||೬||

ನಿನ್ಯೇ ಬಾಲಂ ತತ್ಪುರತೋ ನೇಯೋ ಬಾಲಸ್ತ್ವಯಾ ಲಘು |
ನೀತ್ವಾ ಸ್ಥಾಪ್ಯ ತತ್ಪುರತೋ ಯಾವನ್ನಿದ್ರಾತಿ ಸಾ ಶುಭಾ ||೭||

ಕ ಉವಾಚ :—

ಏವಮಾಜ್ಞಾಂ ಸಮಾಕರ್ಣ್ಯ ಶಂಕರೇಣ ಸಮೀರಿತಾಮ್ |
ಶೀಘ್ರಂ ಬಾಲಂ ಸಮಾದಾಯ ನಭೋಮಾರ್ಗೇಣ ಸತ್ವರಃ ||೮||

ಪ್ರಾಕ್ಷಿಪತ್ಪುರತೋ ಬಾಲಂ ಸಾ ನ ಸುಪ್ತಾವಬೋಧ ತಮ್ |
ಶೀಘ್ರಮುಡ್ಡೀಯ ಸಂಪ್ರಾಯಾನ್ನಂದಿಕೇಶೋ ಮಹೇಶ್ವರಮ್ ||೯||

ಉವಾಚ ನಿಜವೃತ್ತಾಂತಂ ಮಾರ್ಗೇ ಸ್ವಯಮನುಷ್ಠಿತಮ್ |

---

ಅವಳು ಈಗಿನ್ನೂ ಪ್ರಸವಿಸಿದ್ದಾಳೆ. ಅತಿಶ್ರಾಂತಳಾದ ಅವಳಿಗೆ ಗಾಢನಿದ್ರೆ ಬಂದಿದೆ. ಈ ಸಂಧಿಯನ್ನು ಸಾಧಿಸಿ ಒಬ್ಬ ರಕ್ಕಸಿಯು ||೬||

ಪುಷ್ಪಿಕೆಯ ಬಾಲಕನನ್ನು ಅಪಹರಿಸಿಕೊಂಡು ಹೋಗಿಬಿಟ್ಟಿದ್ದಾಳೆ. ಆ ಮಂಗಳಾಂಗಿಯು ಎಚ್ಚರಗೊಳ್ಳುವುದರ ಒಳಗಾಗಿಯೇ ಈ ಬಾಲಕನನ್ನು ಅಲ್ಲಿಗೆ ಕರೆದೊಯ್ದು ಅವಳ ಸಮೀಪದಲ್ಲಿ ಇರಿಸಿ ಬರಬೇಕು. ||೭||

ಬ್ರಹ್ಮ:—

ಶಂಕರನು ವಿಧಿಸಿದ ಆ ಆಜ್ಞಾ ವಚನಗಳನ್ನು ಕೇಳಿದಕೂಡಲೇ ನಂದಿಯು ಅದನ್ನು ಶಿರಸಾ ಸ್ವೀಕರಿಸಿ, ಬಾಲಕನನ್ನು ಕರೆದುಕೊಂಡು ನಭೋಮಾರ್ಗದಿಂದಲೇ ಹಾರುತ್ತ ವೇಗವಾಗಿ ಮಾಹಿಸ್ಮತೀ ನಗರವನ್ನು ಕುರಿತು ಪ್ರಯಾಣ ಬೆಳೆಸಿದನು. ||೮||

ಅನಂತರ ನಂದಿಯು ಶಿಶುವನ್ನು ಪುಷ್ಪಿಕೆಯ ಮಗ್ಗುಲಲ್ಲಿ ಯಾರಿಗೂ ಅರಿವಾಗ ದಂತೆ ಮಲಗಿಸಿ, ತನ್ನ ಪಾಡಿಗೆ ಏನನ್ನೂ ಅರಿಯದವನಂತೆ ಅಂತರಿಕ್ಷಕ್ಕೆ ನೆಗೆದು ಹಾರುತ್ತ ಮತ್ತೆ ಪರಶಿವನ ಸನ್ನಿಧಿಗೆ ಹಿಂದಿರುಗಿ ಬಂದುಬಿಟ್ಟನು. ಮೈಮರೆತು ನಿದ್ರೆ ಯನ್ನು ಮಾಡುತ್ತಲಿದ್ದ ಪುಷ್ಪಿಕೆಗೆ ತನ್ನ ಶಿಶುವನ್ನು ರಾಕ್ಷಸಿಯು ಕೊಂಡೊಯ್ದು ದಾಗಲೀ ಅಥವಾ ನಂದಿಯು ಶಿಶುವಿನ ರೂಪದಲ್ಲಿರುವ ಶ್ರೀ ಗಜಾನನನನ್ನು ತನ್ನ ಪಕ್ಕದಲ್ಲಿ ಇರಿಸಿ ಹೋದುದಾಗಲೀ ಯಾವುದೂ ಗೊತ್ತಾಗಲಿಲ್ಲ. ||೯||

ನಂದಿಯು ಶಿವನ ಸಮೀಪಕ್ಕೆ ಬಂದಕೂಡಲೇ ಮಾರ್ಗಮಧ್ಯದಲ್ಲಿ ತಾನು

ನಂದ್ಯುವಾಚ :—

ಅಕಸ್ಮಾದ್ಗಗನಾದ್ದೇವ ! ರಾಕ್ಷಸೀ ಘೋರದರ್ಶನಾ ॥೧೦॥

ಭಕ್ಷಯಂತೀ ಬಾಲಮಾಂಸಂ ಮಾಮಾಕ್ರಮ್ಯ ಸ್ಥಿತಾ ವಿಭೋ ! ।

ತವ ಪ್ರಸಾದಾತ್ಪುಚ್ಛೇನ ವೇಷ್ಟಿತಾ ರಾಕ್ಷಸೀ ಮಯಾ ॥೧೧॥

ಭ್ರಾಮಯಿತ್ವಾ ವಿನಿಕ್ಷಿಪ್ತಾ ಮಹಾಪರ್ವತಮಸ್ತಕೇ ।

ಶತಧಾ ಖಂಡಿತಾ ಸಾ ತು ತ್ವನ್ನಾಮೋಚ್ಚಾರಣಾತ್ಪ್ರಭೋ ! ॥೧೨॥

ತತೋಽಪಶ್ಯಂ ಮಹಾವ್ರಾತಂ ಗಂಧರ್ವಾಣಾಂ ದುರಾತ್ಮನಾಮ್ ।

" ಕಥಂ ಮಯಾ ಹಿ ಯೋದ್ಧವ್ಯಂ ರಕ್ಷಿತವ್ಯಃ ಕಥಂ ಶಿಶುಃ " ॥೧೩॥

ಮಾಡಿದ ಸಾಹಸ ಕೆಲಸವನ್ನೂ, ದೇವನ ಆಜ್ಞೆಯಂತೆ ಪುಷ್ಪಿಕೆಯ ಬಳಿ ಶಿಶುವನ್ನು ಇರಿಸಿ ಬಂದುದನ್ನೂ ವಿವರಿಸಿ ಹೀಗೆಂದು ಹೇಳಿದನು.

ನಂದೀ :—

ದೇವ ! ನಾನು ಆಕಾಶಮಾರ್ಗದಲ್ಲಿ ಶಿಶುವಿನೊಡನೆ ಹಾರಿಹೋಗುತ್ತಿರುವಾಗ ಬಹಳ ಭಯಂಕರಾಕಾರಳಾದ ರಾಕ್ಷಸಿಯೊಬ್ಬಳು ನನಗೆ ಗೋಚರಿಸಿದಳು. ॥೧೦॥

ಪ್ರಾಯಃ ಅವಳು ಪುಷ್ಪಿಕೆಯ ಪುತ್ರನನ್ನು ಅಪಹರಿಸಿ ತಂದವಳೇ ಇರಬಹುದು. ಅವಳು ಆಗಿನ್ನು ಜನಿಸಿದ್ದ ಒಂದು ಶಿಶುವಿನ ಹಸಿ ಮಾಂಸವನ್ನು ತಿನ್ನುತ್ತಿದ್ದಳು. ಆ ರಾಕ್ಷಸಿಯು ನಾನು ಹಾರಿ ಹೋಗುತ್ತಿರುವುದನ್ನು ಕಂಡು ನನ್ನನ್ನು ಆಕ್ರಮಿಸಿ ಎದುರಿಗೆ ಬಂದು ನಿಂತಳು. ನಿನ್ನ ಅನುಗ್ರಹ ವಿಶೇಷದಿಂದ ನಾನು ಅವಳಿಗೆ ಹೆದರಲಿಲ್ಲ. ಅವಳನ್ನು ನನ್ನ ಬಾಲದಿಂದ ಕಟ್ಟಿದೆನು. ॥೧೧॥

ಮತ್ತು ನಾನು ಅಲ್ಲಿಯೇ ; ಅಂತರಾಳದಲ್ಲೇ ನಿಂತು ಗಿರಿಗಿರಿ ತಿರುಗಿಸಿ ದೊಡ್ಡ ಪರ್ವತ ಒಂದರ ಶಿಖರಕ್ಕೆ ಅವಳನ್ನು ಅಪ್ಪಳಿಸಿದೆನು. ಆಗ ಅವಳ ದೇಹ ನೂರಾರು ಚೂರುಗಳಾಗಿ ,ಹೋಯಿತು. ಪ್ರಭೋ! ಅವಳು ಸಜೀವ ಶಿಶುವನ್ನು ತಿನ್ನುವಷ್ಟು ನಿರ್ಘೃಣಳಾದರೂ ಪ್ರಾಣೋತ್ಕ್ರಾಂತಿಯ ಸಮಯದಲ್ಲಿ ನಿನ್ನ ಶುಭ ನಾಮವನ್ನು ಸ್ಪಷ್ಟವಾಗಿ ಉಚ್ಚರಿಸಿದಳು. ॥೧೨॥

ಅನಂತರ ನಾನು ಮುಂದೆ ಹೋಗುತ್ತಿರುವಷ್ಟರಲ್ಲಿ ದುರಾತ್ಮರಾದ ಗಂಧರ್ವರ ತಂಡ ಒಂದು ನನ್ನೆದುರು ಬಂದು ಯುದ್ಧಕ್ಕೆ ನಿಂತಿತು. " ಇವರೊಡನೆ ಹೇಗೆ ಯುದ್ಧವನ್ನು ಮಾಡಲಿ ? ಮತ್ತು ಈ ಶಿಶುವನ್ನು ಹೇಗೆ ಸಂರಕ್ಷಿಸಲಿ ? " ॥೧೩॥

**ಇತಿ ಚಿಂತಾಕುಲತಯಾ ಸ್ಮೃತಸ್ತ್ವಂ ಹೃದಿ ಶಂಕರ ! ।**
**ತತಃ ಪುಚ್ಛೇನ ಶೃಂಗಾಭ್ಯಾಂ ಕ್ರೋಧೋಚ್ಛ್ವಸೈಶ್ಚ ಲತ್ತಯಾ ॥೧೪॥**
**ಹುಂಕಾರೇಣ ಚ ತಾನ್ ಸರ್ವಾನ್ ನಿವಾರ್ಯ ಬಲವತ್ತರಾನ್ ।**
**ಮೃತಾಃ ಕೇಚಿದ್ದ್ರುತಾಃ ಕೇಚಿತ್ಕೇಚಿದ್ಭಗ್ನಶಿರೋಽಂಘ್ರಯಃ ॥೧೫॥**
**ಪತಿತಾಃ ಶತಧಾ ಭೂಮೌ ಪುಷ್ಪವೃಷ್ಟಿಸ್ತತೋಽಪತತ್ ।**
**ತತೋಽಹಮಂಗಮಂದೇವ । ಕೃತ್ವಾ ಕಾರ್ಯಂ ತ್ವಯೇರಿತಮ್ ॥೧೬॥**
**ತವೇಚ್ಛಾವಿಷಯಂ ಕೋನು ? ಹನ್ಯಾತ್ತ್ರೈಲೋಕ್ಯಮಂಡಲೇ ।**
**ಅತಸ್ತ್ವನ್ನಾಮತೋ ದೇವ ! ಜಯಂ ಪ್ರಾಪ್ತಃ ಸಬಾಲಕಃ ॥೧೭॥**
**ಕ ಉವಾಚ :—**
**ತತಃ ಶಿವೋ ಹರ್ಷಯುತೋಽಲಿಲಿಂಗ ನಂದಿಕೇಶ್ವರಮ್ ।**

---

ಎಂಬ ಚಿಂತೆಯು ನನ್ನನ್ನು ಬಹಳ ಮಟ್ಟಿಗೆ ವ್ಯಾಕುಲಗೊಳಿಸಿತು. ಭಗವನ್, ಶಂಕರ! ನನ್ನ ಮನಸ್ಸಿನಲ್ಲೇ ಒಮ್ಮೆ ನಿನ್ನನ್ನು ಸ್ಮರಿಸಿಕೊಂಡೆನು. ಕೂಡಲೇ ನನ್ನಲ್ಲಿ ಒಂದು ಬಗೆಯ ಸ್ಫೂರ್ತಿಯುಂಟಾಗಲು, ನನ್ನ ಬಾಲ, ಕೊಂಬು, ಕೋಪದಿಂದ ಭುಸುಗುಟ್ಟುವಿಕೆ, ಮುಂಗಾಲಿನ ಒದೆತ ಇತ್ಯಾದಿಗಳಿಂದಲೂ, ॥೧೪॥

"ಹುಂ" ಎಂದು ಗುಟುರು ಧ್ವನಿಯಿಂದಲೂ ಬಲಿಷ್ಠರಾದ ಗಂಧರ್ವರ ಪಡೆಯನ್ನೆಲ್ಲ ನಿಗ್ರಹಿಸಿ ತಳ್ಳಿಹಾಕಿದೆನು. ಆ ಪೈಕಿ ಕೆಲವರು ಮೃತರೇ ಆದರು. ಕೆಲವರು ಓಡಿ ನಡೆದರು, ಕೆಲವರಂತೂ ತಲೆ, ಕೈ–ಕಾಲು ಇವನ್ನು ಮುರಿದುಕೊಂಡು ಒದೆದಾಡುತ್ತ ಅಲ್ಲಿಯೇ ಬಿದ್ದರು. ॥೧೫॥

ಭೂಮಿಗುರುಳಿದವರೆಷ್ಟೋ ಜನರ ದೇಹಗಳು ನೂರಾರು ಚೂರುಗಳಾಗಿ ಹೋದವು. ಗಂಧರ್ವರು ಪರಾಜಿತರಾದ ಕೂಡಲೇ, ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ದೇವ! ಅನಂತರ ನಾನು ಮಾಹಿಷ್ಮತೀ ನಗರಕ್ಕೆ ಹೋಗಿ, ನೀನು ನಿರ್ದೇಶಿಸಿದ ಕಾರ್ಯವನ್ನು ಸಾಧಿಸಿದೆನು. ॥೧೬॥

ದೇವರ ದೇವ! ಯಾವುದಾದರೊಂದು ಕಾರ್ಯವನ್ನು ಸಾಧಿಸಬೇಕೆಂದು ನಿನಗೆ ಸಂಕಲ್ಪ ಉಂಟಾಯಿತೆಂದರೆ, ಅದನ್ನು ಕೆಡಿಸಲಿಕ್ಕೆ ಸಮರ್ಥರಾದವರು ಈ ಮೂರು ಲೋಕಗಳಲ್ಲಿ ಯಾರಾದರೂ ಇರುವರೇ? ಯಾರೂ ಇರುವುದಿಲ್ಲ. ದೇವ! ನಿನ್ನ ಶುಭ ನಾಮವನ್ನು ಸ್ಮರಿಸಿದ್ದರಿಂದಲೇ ಬಾಲಕನಾದರೂ ನಾನು ಇಂತಹ ಅದ್ಭುತ ಕೆಲಸವನ್ನು ಸಾಧಿಸಿಕೊಂಡು ಬಂದಿದ್ದೇನೆ. ॥೧೭॥

ಬ್ರಹ್ಮಾ:

ಇದನ್ನು ಕೇಳಿದ ಪರಮೇಶ್ವರನು ಬಹಳ ಸಂತುಷ್ಟನಾದನು ಮತ್ತು ನಂದಿಕೇ

ಉವಾಚ ಚ ಪ್ರಸನ್ನಾತ್ಮಾ
ಹರ ಉವಾಚ :—
ಜ್ಞಾತಂ ತೇ ಪೌರುಷಂ ದೃಢಮ್ ॥೧೮॥
ನಾಸ್ತಿ ತ್ರಿಭುವನೇ ಕೋಽಪಿ ತ್ವತ್ಸಮೋ ನಂದಿಕೇಶ್ವರ ।
ಕ ಉವಾಚ :—
ತತಃ ಪ್ರಣಮ್ಯ ವಿಶ್ವೇಶಂ ಪಾರ್ವತೀಮಗಮಚ್ಚ ಸಃ ॥೧೯॥
ಪ್ರಣಮ್ಯ ತಾಂ ಯೋಜ್ಯ ಹಸ್ತೇ ಪ್ರೋಚೇ ಮಧುರಯಾ ಗಿರಾ ।
ನಂದಿರುವಾಚ :—
ಮಾತಃ ! ಶಿವಾಜ್ಞಯಾ ಬಾಲೋ ನೀತೋ ಮಾಹಿಷ್ಮತೀಂ ಪುರೀಮ್ ॥೨೦॥
ವರೇಣ್ಯಪತ್ನ್ಯಾಃ ಪುರತಃ ಪುಷ್ಪಿಕಾಯಾ ನ್ಯಧಾಯಿ ಸಃ ।

---

ಶ್ವರನನ್ನು ಕುರಿತು ಪ್ರಸನ್ನಾತ್ಮನಾಗಿ ಹೀಗೆಂದು ನುಡಿದನು.

ಹರ :—

ನಿನ್ನ ಪೌರುಷವೆಷ್ಟಿದೆ ಎಂಬುದನ್ನು ನಾನು ದೃಢವಾಗಿ ಅರಿತಿದ್ದೇನೆ. ॥೧೮॥

ನಂದಿಕೇಶ್ವರ! ನಿನಗೆ ಸಮನೆನಿಸಿದ ಸಮರ್ಥನು ತ್ರಿಭುವನಗಳಲ್ಲಿ ಹುಡುಕಿದರೂ ಸಿಕ್ಕಲಾರನು.

ಬ್ರಹ್ಮಾ :—

ಅನಂತರ ನಂದಿಕೇಶ್ವರನು ಪರಮೇಶ್ವರನಿಗೆ ವಂದಿಸಿ, ಪಾರ್ವತೀದೇವಿಯ ಸನ್ನಿಧಿಗೆ ಬಂದನು. ॥೧೯॥

ದೇವಿಯನ್ನು ಸಂದರ್ಶಿಸಿದ ಕೂಡಲೇ ಭಕ್ತಿಯಿಂದ ಅವಳಿಗೆ ಪ್ರಣಮಿಸಿದನು ಮತ್ತು ಕೈಗಳನ್ನು ಜೋಡಿಸಿಕೊಂಡು ನಿಂತು, ವಿನಯಾನ್ವಿತ ಸ್ವರದಿಂದಲೂ, ಮರ್ಯಾದೆಗೆ ಮೀರದಂತೆಯೂ ಹೀಗೆಂದು ಮಾತನಾಡಿದನು

ನಂದೀ :—

ತಾಯೇ! ಪರಶಿವನ ಆಜ್ಞೆಯಂತೆ ಬಾಲಕನನ್ನು ಮಾಹಿಷ್ಮತೀ ನಗರಕ್ಕೆ ಕರೆದುಕೊಂಡು ಹೋದೆನು. ॥೨೦॥

ಅಲ್ಲಿಯ ರಾಜ; ವರೇಣ್ಯನ ರಾಣಿಯಾದ ಪುಷ್ಪಿಕೆಯ ಶಯನೀಯದ ಎದುರುಗಡೆ ಅವಳಿಗೆ ಸುಲಭವಾಗಿ ಗೋಚರವಾಗುವಂತೆ ಇರಿಸಿದೆನು. ಮಯೂ-

**ಯತಸ್ತೇನ ಪುರಾ ದತ್ತೋ ವರಸ್ತಸ್ಯ ಬಭೂವ ಹ ||೨೧||**
**" ಅಹಂ ಪುತ್ರತ್ವಮೇಷ್ಯಾಮಿ ಬ್ರಹ್ಮಜ್ಞಾನಪ್ರಕಾಶಕಃ" |**
**ಕೆ ಉವಾಚ :—**
**ನಿಶಮ್ಯ ವಚನಂ ತಸ್ಯ ಸರ್ವಜ್ಞಾ ಪಾರ್ವತೀ ತದಾ ||೨೨||**
**ಜಹರ್ಷ ಜನನೀ ತಸ್ಯ ಶಿಶೋರ್ವಿರ್ೀರ್ಯಮನಂತಕಮ್ |**
**ಉವಾಚ ಪರಯಾ ಭಕ್ತ್ಯಾ**
**ಗಿರಿಜೋವಾಚ :—**
**ಜ್ಞಾತಂ ತೇ ಪೌರುಷಂ ಸುತ ! ||೨೩||**
**ಹತಾ ತ್ವಯಾ ಮಹಾ ಘೋರಾ ರಾಕ್ಷಸೀ ಘೋರನಿಃಸ್ವನಾ |**

ರೇಶನು ನಿನಗೆ ವರವನ್ನು ಅನುಗ್ರಹಿಸಿದ್ದಂತೆ ವರೇಣ್ಯನಿಗೂ ಅವನ ಹೆಂಡತಿಗೂ ವರವನ್ನು ಕೊಟ್ಟಿದ್ದನಂತೆ. ||೨೧||

ಪುತ್ರಾರ್ಥಿಯಾಗಿದ್ದ ರಾಜನು ಬೇರಾವ ವರವನ್ನೂ ಅಪೇಕ್ಷಿಸದೆ " ನಿನ್ನಂತಹ ಪುತ್ರನು ಬೇಕು " ಎಂದು ಬೇಡಿದಾಗ " ನಾನೇ ನಿನಗೆ ಮಗನಾಗಿ ಜನಿಸುವೆನು. ನನ್ನನ್ನು ಸಾಮಾನ್ಯನಾದವನೆಂದು ಭಾವಿಸಬೇಡ. ಪರಬ್ರಹ್ಮಸ್ವರೂಪಿಯಾದ ನಾನು ಎಲ್ಲರ ಹೃದಯದಲ್ಲೂ ಅಭಿವ್ಯಕ್ತನಾಗಿ ಅವರವರ ಜ್ಞಾನಸಂಪತ್ತಿಯನ್ನು ಬೆಳಗತಕ್ಕವನು." ಎಂದನಂತೆ.

ಬ್ರಹ್ಮಾ :—

ನಂದಿಕೇಶ್ವರನಾಡಿದ ಆ ಮಾತುಗಳನ್ನು ಕೇಳಿ, ಸರ್ವಜ್ಞಳಾದ ಮಹೇಶ್ವರಿಯು ||೨೨||

ಬಹಳ ಹರ್ಷಿಸಿದಳು. " ಆಗಿನ್ನೂ ಜನಿಸಿದ ತನ್ನ ಶಿಶು ಅನಂತ ವೀರ್ಯಶಾಲಿಯಾದ ಸಾಕ್ಷಾತ್ ಭಗವಂತ" ಎಂದು ಅರಿವಾದರೆ, ಯಾವ ತಾಯಿಗೆ ತಾನೆ ಸಂತೋಷ ಉಂಟಾಗಲಾರದು ? ಸಂತೋಷದ ಜೊತೆಗೆ ದೇವನ ವಿಷಯದಲ್ಲಿ ಭಕ್ತಿಭಾವವೂ ಉತ್ಪನ್ನವಾಯಿತಾದುದರಿಂದ ನಂದಿಕೇಶ್ವರನನ್ನು ಕುರಿತು ಹೀಗೆಂದು ನುಡಿದಳು-

ಗಿರಿಜೆ :—

ವತ್ಸ, ನಂದಿಕೇಶ್ವರ! ನಿನ್ನ ಪೌರುಷವೆಷ್ಟರಮಟ್ಟಿಗಿದೆ ಎಂಬುದು ಅರಿವಾಯಿತು. ||೨೩||

ನೀನು ಬಲಿಷ್ಠನಾಗಿರದಿದ್ದರೆ, ಸರ್ವಜ್ಞನಾದ ಪಶುಪತಿಯು ಇಂತಹ ಹೊಣೆಗಾರಿಕೆಯ ಕೆಲಸವನ್ನು ನಿನಗೆ ವಹಿಸುತ್ತಲಿರಲಿಲ್ಲ. ಅಲ್ಲದೆ ವಿಕಾರವದನ, ಸ್ವರಳಾದ

**ಗಂಧರ್ವಾಶ್ಚ ಹತಾ ದುಷ್ಟಾ ರಕ್ಷಿತಶ್ಚೈವ ಬಾಲಕಃ ||೨೪||**
**ಅಜ್ಞಾತಃ ಸ್ಥಾಪಿತಸ್ತತ್ರ ಮಹತ್ಕಾರ್ಯಮಿದಂ ಕೃತಮ್ ।**
**ಕ ಉವಾಚ :—**
**ಇತ್ಯುಕ್ತ್ವಾ ವಿಸಸರ್ಜಾಮುಂ ವಿಶ್ರಾಂತಿಂ ಚಾಕರೋತ್ತದಾ ||೨೫||**

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ಗಂಧರ್ವಪರಾಜಯೋ" ನಾಮ್ನೈಕತ್ರಿಂಶದುತ್ತರಶತತಮೋಽಧ್ಯಾಯಸ್ಸಮಾಪ್ತಃ**

---

ಭಯಂಕರಾಕಾರದ ಆ ರಾಕ್ಷಸಿಯನ್ನು ಕೊಲ್ಲಲೂ ನಿನ್ನಿಂದ ಆಗುತ್ತಿರಲಿಲ್ಲ. ಅತಿ ದುಷ್ಟ ಸ್ವಭಾವದವರಾದ ಅಂತಹ ಗಂಧರ್ವರನ್ನೂ ನೀನು ನಿಗ್ರಹಿಸಿರುವೆ. ನನ್ನ ಮುದ್ದು ಕುವರನನ್ನೂ ಸಂರಕ್ಷಿಸಿರುವೆ, ||೨೪||

ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ, ಯಾರಿಗೂ ಅರಿವಾಗದಂತೆ ಪುಷ್ಪಿಕೆಯ ಪಕ್ಕದಲ್ಲಿ ಶಿಶುವನ್ನಿರಿಸಿ ಬಂದಿರುವೆ. ಈ ಎಲ್ಲ ಮಹತ್ಕಾರ್ಯಗಳು ನಿನ್ನಿಂದಲ್ಲದೇ ಮತ್ತಾರಿಂದ ಸಾಧ್ಯವಾಗುತ್ತಲಿದ್ದಿತು, ನಂದೀ !

ಬ್ರಹ್ಮಾ:—

ಈ ರೀತಿಯಾಗಿ ಮನಃಪೂರ್ವಕವಾಗಿ ಅಭಿನಂದಿಸಿ, ಅವನನ್ನು ಕಳಿಸಿಕೊಟ್ಟಳು ಮತ್ತು ತಾನು ವಿಶ್ರಾಂತಿಯನ್ನು ಪಡೆಯುವುದಕ್ಕಾಗಿ ಅಂತರ್ಗೃಹಕ್ಕೆ ತೆರಳಿ ಪವಡಿಸಿದಳು. ||೨೫||

ಇಲ್ಲಿಗೆ ಶ್ರೀ ಗಣೇಶಪುರಾಣ ಉತ್ತರಖಂಡದಲ್ಲಿ "ಗಂಧರ್ವಪರಾಜಯ" ಎಂಬಲ್ಲಿಗೆ ನೂರಮುವ್ವತ್ತೊಂದನೆಯ ಅಧ್ಯಾಯಾನುವಾದವು ಮುಗಿದುದು.

|| ಶ್ರೀ ಗಣೇಶಾಯ ನಮಃ ||

# ಅಥ ದ್ವಾತ್ರಿಂಶದುತ್ತರ ಶತತಮೋಽಧ್ಯಾಯಃ

**ಕ ಉವಾಚ :—**

**ತತಃ ಕದಾಚಿದ್ದೈತ್ಯೇಂದ್ರಃ ಸಿಂದೂರೋ ಮದಗರ್ವಿತಃ ।**
**ಸಭಾಸನಗತಃ ಪ್ರಾಹ**

**ಸಿಂದೂರ ಉವಾಚ :—**

**ವೃಥಾ ಮೇ ಪೌರುಷಂ ಕೃತಮ್ ||೧||**

**ಇಂದ್ರಾದಯೋ ನ ಮೇ ಯುದ್ಧಂ ದದುರ್ಬ್ರಹ್ಮಾದಯೋ ಹರಿಃ ।**
**ರಾಜ್ಞಾಂ ತು ಗಣನಾ ನೈವ ಮೃತ್ಯುಲೋಕನಿವಾಸಿನಾಮ್ ||೨||**

---

|| ಶ್ರೀ ಮಂಗಲಮೂರ್ತಯೇ ನಮಃ ||

## ೧೩೨ ನೆಯ ಅಧ್ಯಾಯ

ಬ್ರಹ್ಮಾ:—

ವತ್ಸ, ವ್ಯಾಸ! ಮುಂದಿನ ಕಥೆಯನ್ನು ಅವಧರಿಸು. ಹೀಗೆಯೇ ಕಾಲ ಕಳೆಯುತ್ತಿರಲು, ಒಮ್ಮೆ ಒಂದು ಚಮತ್ಕಾರ ನಡೆಯಿತು. ಸಿಂದುರನು ತನ್ನ ಆಸ್ಥಾನ ಮಂಟಪದ ಉನ್ನತ ಸಿಂಹಾಸನದ ಮೇಲೆ ಏರಿ ಕುಳಿತಿದ್ದನು. ದುರ್ಮದವು ಅಸುರನ ದೇಹದ ಪ್ರತಿಯೊಂದು ರಕ್ತ ಧಮನಿಯಲ್ಲೂ ಉಕ್ಕಿ ಹರಿಯುತ್ತಲಿದ್ದಿತು. ಆಗ ಅಸುರನು ಸಭಾಸದರನ್ನು ಕುರಿತು

ಸಿಂದೂರ :—

ಸರಿಯಾದವನೊಬ್ಬನು ಎದುರಾಳಿ ಎನಿಸಿದವನಿಲ್ಲದ್ದರಿಂದ ನನಗಿರತಕ್ಕ ಪೌರುಷವು ವ್ಯರ್ಥವಾಗಿ ಹೋಯಿತು. ||೧||

ಇಂದ್ರಾದ್ಯಷ್ಟದಿಕ್ಪಾಲಕರೆನಿಸಿದವರು ನನ್ನೊಂದಿಗೆ ಕದನವಾಡಲಸಮರ್ಥರಾಗಿ ಸುಮ್ಮನಾದರು. ಚತುರಾನನಾದಿಗಳು ಸಹ ಯುದ್ಧದ ಪ್ರಸಕ್ತಿಯನ್ನೇ

ಕುಲೀನಾಯಾ ಯಥಾ ನಾರ್ಯಾ ಯೌವನಂ ಹಿ ಪತಿಂ ವಿನಾ ।
ತಥಾ ಮೇ ಪೌರುಷಂ ವ್ಯರ್ಥಂ ಯೋದ್ಧೃಭಿರ್ಹಿ ವಿನಾಽಭವತ್ ॥೩॥

ಕ ಉವಾಚ :—

ತತೋಽಂತರಿಕ್ಷೇ ವಾಣೀಂ ಸ ಶುಶ್ರಾವ ಪರಮಾದ್ಭುತಾಮ್ ।

ಆಕಾಶವಾಣೀ :—

ಕಿಮರ್ಥಂ ವಲ್ಗಸೇ ಮೂಢ ! ಜಾತೋಽಸ್ತಿ ತವ ಯುದ್ಧದಃ ॥೪॥

ಪಾರ್ವತ್ಯಾ ಉದರಾದ್ಗರ್ಭೋ ವರೇಣ್ಯಗೃಹಗೋಽಧುನಾ ।
ವರ್ಧತೇಽನಂತಲೀಲೋಽಸೌ ಯಥೇಂದುಃ ಶುಕ್ಲಪಕ್ಷಗಃ ॥೫॥

ಬಿಟ್ಟುಬಿಟ್ಟರು. ಶ್ರೀಹರಿಯಂತೂ ತಾನು ಸಾತ್ತ್ವಿಕನೆಂಬ ನೆಪವನ್ನು ಮುಂದೆ ಮಾಡಿದನು. ಇಂಥವರ ಸ್ಥಿತಿಯೇ ಹೀಗಾಗಿ ಹೋದ ಮೇಲೆ ಮೃತ್ಯುಭೂಯಿಷ್ಠ ಲೋಕವಾಸಿಗಳಾದ ಈ ರಾಜರನ್ನು ಕೇಳುವರಾರು ? ಅವರ ಗಣನೆಯೇ ನನಗಿರುವುದಿಲ್ಲ ॥೨॥

ಪತಿವಿಹೀನಳಾದ ಕುಲಯುವತಿಯ ಯೌವನವು ಹೇಗೆ ವ್ಯರ್ಥವೋ, ವೀರರಾದ ಯೋಧರಿಲ್ಲದ್ದರಿಂದ ನನ್ನ ಪೌರುಷವೂ ಹಾಗೆಯೇ ವ್ಯರ್ಥವಾಗಿ ಹೋಯಿತು. ॥೩॥

ಬ್ರಹ್ಮಾ :—

ಸೊಕ್ಕಿನಿಂದ ಇಷ್ಟು ಮಾತುಗಳನ್ನಾಡುತ್ತಿರುವಲ್ಲಿ ಪರಮಾದ್ಭುತವಾದ ವಾಣಿಯೊಂದು ಅಂತರಿಕ್ಷದಿಂದ ಅಭಿವ್ಯಕ್ತವಾದುದನ್ನು ಅಸುರನು ಕೇಳಿದನು.

ಆಕಾಶವಾಣೀ :—

ಏಯ್, ಮೂಢ! ಇದೇಕೆ, ವ್ಯರ್ಥವಾಗಿ ಹೀಗೆ ಆತ್ಮಸ್ತುತಿಯನ್ನು ಮಾಡಿಕೊಳ್ಳುತ್ತಿರುವೆ ? 'ನನ್ನೊಂದಿಗೆ ಯುದ್ಧವನ್ನಾಡುವವರಾರೂ ಇಲ್ಲ' ಎಂದಲ್ಲವೇ, ನೀನು ಇದುವರೆಗೂ ಹೇಳುತ್ತಲಿದ್ದುದು ? ಅವಸರಪಡಬೇಡ. ನಿನಗೆ ಸಾಕು, ಸಾಕು ಎನಿಸುವವರೆಗೂ ಯುದ್ಧವನ್ನು ಕೊಡುವ ಧೀರನೊಬ್ಬನು ಜನಿಸಿದ್ದಾನೆ. ॥೪॥

ಪಾರ್ವತೀದೇವಿಯ ಗರ್ಭದಲ್ಲಿ ಜನಿಸಿ ಪ್ರಕೃತ ವರೇಣ್ಯಮಹಾರಾಜನ ಅರಮನೆಯಲ್ಲಿದ್ದಾನೆ. ಶುಕ್ಲಪಕ್ಷದ ಚಂದ್ರಮನಂತೆ ಕ್ಷಣಕ್ಷಣಕ್ಕೂ ಅಭಿವೃದ್ಧಿಗೊಳ್ಳುತ್ತಲಿದ್ದಾನೆ. ಅನಂತ ಲೀಲೆಗಳನ್ನೂ ತೋರಿಸುತ್ತಲಿದ್ದಾನೆ. ॥೫॥

ಕ ಉವಾಚ :—

ಶ್ರುತ್ವೇತ್ಥಂ ಸಹಸಾ ವಾಣೀಂ ಮುಮೂರ್ಚ್ಛ ಸಿಂದುರಸ್ತದಾ ।
ವಿಹರ್ಷಶ್ಚಿಂತಯಾಮಾಸ
ಸಿಂದುರ ಉವಾಚ :—
ಕಿಮಿದಂ, ಕೇನ ಭಾಷಿತಮ್ ? ॥೬॥
ಯದಿ ದೃಶ್ಯೋ ಭವೇನ್ಮಹ್ಯಂ ಖಾದೇಯಂ ತಂ ಸಮಸ್ತಕಮ್ ।
ಕಾಲಸ್ಯ ಮೇ ಕಥಂ ಮೃತ್ಯುಃ ? ಪಶ್ಚಾತ್ಸೂರ್ಯೋದಯೋ ಯಥಾ ॥೭॥
ಕ ಉವಾಚ :—
ಏವಮುಕ್ತ್ವೋದತಿಷ್ಠತ್ಸ ಗರ್ಜಯನ್ ವಿದಿಶೋ ದಿಶಃ ।
ಉಡ್ಡೀಯ ಸಹಸಾ ಪ್ರಾಯಾತ್ಕೈಲಾಸಂ ಗಿರಿಜಾಲಯಮ್ ॥೮॥

---

ಬ್ರಹ್ಮಾ :—

ಅದೃಶ್ಯ ವ್ಯಕ್ತಿಯೊಂದಾಡಿದ ಇಂತಹ ಅಪಶಕುನದ ವಾಣಿಯನ್ನು ಕೇಳಿದ ಕೂಡಲೇ ಸಿಂದುರ ದೈತ್ಯನು ಬೆಚ್ಚಿಬಿದ್ದನು. ಅವನಿಗೆ ಮೂರ್ಛೆಯೇ ಬಂದು ಬಿಟ್ಟಿತು. ಇದುವರೆಗೂ ಅವನ ತಲೆಯಲ್ಲಿ ತಾಂಡವವಾಡುತ್ತಲಿದ್ದ ಉತ್ಸಾಹೋತ್ಸಾಹಾದಿಗಳು ಝುರ್ರನೆ ಇಳಿದುಹೋದವು. ವ್ಯಗ್ರಮನಸ್ಸಿನಿಂದ ಹೀಗೆಂದು ಚಿಂತಿಸಿದನು.

ಸಿಂದೂರ :—

ಏನಿದು ? ಯಾರು ಹೀಗೆ ಮಾತನಾಡಿದವರು ? ॥೬॥

ಹಿಂದೆ ನಿಂತು ಹೀಗೆ ಮಾತನಾಡಿದ ವ್ಯಕ್ತಿ ನನಗೆ ದೃಗ್ಗೋಚರನಾಗುವುದಾದರೆ, ಸ್ವಲ್ಪವೂ ವಿಲಂಬಿಸದೆ ಅವನನ್ನು ತಲೆಯೊಂದಿಗೆ ನುಂಗಿ ತಿಂದುಬಿಟ್ಟೇನು. ಎಲ್ಲರಿಗೂ ನಾನೇ ಯಮನಾಗಿರುವಾಗ ನನ್ನಂತಹಧೀರ ವೀರನಿಗೆ ಮೃತ್ಯು ಬಂದೀತೆಂದರೇನರ್ಥ? ಪಶ್ಚಿಮ ದಿಕ್ಕಿನಲ್ಲಿ ದಿನಮಣಿಯುದಿಸುವುದು ಹೇಗೆ ಅಸಂಭವವೋ, ನನಗೆ ಮೃತ್ಯು ಬರುವುದೆಂಬುದೂ ಅಷ್ಟೇ ಅಸಂಭವ. ॥೭॥

ಬ್ರಹ್ಮಾ :—

ಹೀಗೆ ಹೇಳಿ ಆಸನದಿಂದ ಧಿಗ್ಗನೆ ಮೇಲಕ್ಕೆದ್ದ ಸಿಂದೂರನು ಒಮ್ಮೆಲೆ ಘಟ್ಟಿಯಾಗಿ ಗರ್ಜಿಸಿ, ದಿಗ್ವಿದಿಕ್ಕುಗಳಲ್ಲೆಲ್ಲ ಪ್ರತಿಧ್ವನಿಯಾಗುವಂತೆ ಮಾಡಿದನು. ಹಾಗೆಯೇ ಅಂತರಿಕ್ಷಕ್ಕೆ ನೆಗೆದು ಪಕ್ಷಿಗಳಂತೆ ಹಾರಾಡುತ್ತ ನೆಟ್ಟಗೆ ಕೈಲಾಸಗಿರಿಗೆ ಬಂದು, ಗಿರಿಜಾಮಾತೆಯು ವಾಸವಾಗಿದ್ದ ಮಂದಿರದ ಒಳಭಾಗವನ್ನು ಹೊಕ್ಕನು. ॥೮॥

ಚೂರ್ಣಯನ್ ಪರ್ವತಾನ್ ವೃಕ್ಷಾನ್ ಪಾತಯನ್ ಸ್ವಾಂಗಮಾರುತಾತ್ ।
ಚೇಲತುಃ ಕೂರ್ಮ-ಶೇಷೌ ಚ ಚಕಂಪೇ ಚ ವಸುಂಧರಾ ॥೯॥

ನ ದದರ್ಶ ಶಿವಂ ತತ್ರ ಪುನಃ [1]ಸರ್ವಸಹಾಂ ಯಯೌ ।
ಬಭ್ರಾಮ ವಸುಧಾಂ ಸರ್ವಾಂ ಶಿವಂ ವೇಗಾದನ್ವೇಷಯನ್ ॥೧೦॥

ಪರ್ಯಲ್ಯಾಖ್ಯಂ ಮಹಾರಣ್ಯಮಾಜಗಾಮ ರುಷಾನ್ವಿತಃ ।
ದದರ್ಶ ದೂರತೋ ಗೌರೀಸಹಿತಂ ಶಂಕರಂ ತದಾ ॥೧೧॥

ಮಂಡಪಂ ಚ ಗಣಾಂಶ್ಚೈವ ಸರಾಂಸಿ ಚೋತ್ಪಲಾನಿ ಚ ।
ತತೋ ಜಗಾಮ ಸಹಸಾ [2]ರಿಷ್ಟಂ ಗೌರ್ಯೈ ಪ್ರಕಲ್ಪಿತಮ್ ॥೧೨॥

---

ಹಾರಿಬಂದ ರಭಸಕ್ಕೆ ಅವನ ದೇಹದ ಗಾಳಿಯು ಭರ್ರೆಂದು ಬೀಸಿ ಪರ್ವತಗಳನ್ನು ಪುಡಿಪುಡಿ ಮಾಡಿತು ವೃಕ್ಷಗಳು ಬೇರುಸಹಿತ ಮೇಲೆದ್ದೆದ್ದು ಹಾರಾಡಿದವು. ಭೂಮಿಯ ಭಾರವನ್ನು ಹೊತ್ತು ನಿಂದಿರುವ ಆದಿಕೂರ್ಮ-ಶೇಷರು ಚಲಿಸಿಹೋದರು ಭೂಮಿ ಥರ ಥರ ನಡುಗಿತು. ॥೯॥

ರಾಕ್ಷಸರಾಜನು ಗಿರಿಜಾಲಯದ ಒಳಕ್ಕೆ ನುಗ್ಗಿ ನೋಡುವಾಗ ಅಲ್ಲಿ ನೀಲಲೋಹಿತ (ಶಿವ) ನಿದ್ದಂತೆ ಕಂಡುಬರಲಿಲ್ಲ. ಎಲ್ಲಿಗೆ ಹೋದನೋ ಏನೋ, ಎಂದು ಚಿಂತಿಸುತ್ತ ಪುನಃ ಭೂಲೋಕಕ್ಕೆ ಬಂದನು. ಸಂದಿ ಮೂಲೆಗಳನ್ನೂ ಬಿಡದೆ, ಭೂಮಿಯನ್ನೆಲ್ಲ ವೇಗವಾಗಿ ಸುತ್ತಿ ನೋಡಿದನು. ಎಷ್ಟು ಹುಡುಕಿದರೂ ಪರಶಿವನು ಬೇರೆ ಇವನಿಗೆ ದೊರೆಯಲಿಲ್ಲ. ॥೧೦॥

ಹೀಗೆಯೇ ಸುತ್ತಾಡುತ್ತಿರುವಾಗ "ಪರ್ಯಲಿ" ಎಂಬ ಗೊಂಡಾರಣ್ಯಕ್ಕೆ ಬಂದನು. ಇದುವರೆಗೂ ಎಲ್ಲೆಲ್ಲಿ ಸುತ್ತಿ ನೋಡಿದರೂ ಪರಶಿವನು ಸಿಕ್ಕದಿದ್ದುದಕ್ಕೆ ಅಸುರನಿಗೆ ಮಿತಿಮೀರಿ ಕೋಪ ಬಂದುಬಿಟ್ಟಿದ್ದಿತು. ಒಂದೆಡೆ ನಿಂತು ಸುತ್ತಲೂ ದಿಟ್ಟಿಸಿ ನೋಡಿದನು. ಬಹು ದೂರದಲ್ಲಿ ಪಾರ್ವತಿಯೊಂದಿಗೆ ಪರಶಿವನು ಇರುವುದನ್ನು ಕಂಡನು ॥೧೧॥

ಅಲ್ಲಿ ಶಿವ-ಪಾರ್ವತಿಯರ ವಾಸಕ್ಕಾಗಿ ದೊಡ್ಡದೊಂದು ಮಂಟಪವೂ, ಅದರಲ್ಲಿ ಪಾರ್ವತೀದೇವಿಗಾಗಿ ಒಂದು ಸೂತಿಕಾಗೃಹವೂ ಏರ್ಪಟ್ಟಿದ್ದವು. ಆ ಸ್ಥಳವನ್ನು ಕಾವಲು ಕಾಯುವುದಕ್ಕೋಸ್ಕರ ಪ್ರಮಥ ಗಣಗಳು ಆ ಪ್ರದೇಶದ ಸುತ್ತಲೂ ಬಹಳ ಜಾಗರೂಕತೆಯಿಂದ ಪಹರೆ ಕೊಡುತ್ತಲಿದ್ದರು- ಆ ಪ್ರದೇಶದಲ್ಲಿ ತಿಳಿನೀರಿನ ಅನೇಕ ಸರಸ್ಸುಗಳಿದ್ದವು. ಇದನ್ನೆಲ್ಲ ನೋಡಿದ ಕೂಡಲೇ ಅಸುರನು ಒಮ್ಮೆಲೆ ಧಾವಿಸಿ ಅಲ್ಲಿಗೆ ಬಂದು ನಿಂತನು. ॥೧೨॥

---

ಸಂಖ್ಯಾಚಿನ್ಹಿತಗಳಿಗೆ ವಿವರಣೆಯನ್ನು ಪರಿಶಿಷ್ಟದಿಂದ ತಿಳಿಯಬಹುದು.

**ಅದೃಷ್ಟ್ವಾ ತತ್ರ ಬಾಲಂ ಸ ಚುಕೋಪಾಗ್ನಿರಿವ ಜ್ವಲನ್ ।**
**ತತಃ ಸ ತರ್ಕಯಾಮಾಸ**
**ಸಿಂದುರ ಉವಾಚ :—**

**ನ ವಾಣೀ ನಭಸೋ ಮೃಷಾ ॥೧೩॥**

**ಅಸ್ಯಾಃ ಸುತೋ ಮಾಂ ಹಿ ಹನ್ಯಾನ್ನ ಜಾತಶ್ಚೇದ್ಭವಿಷ್ಯತಿ ।**
**ತಸ್ಮಾದೇನಾಂ ನಿಹನ್ಮ್ಯದ್ಯ ಮೂಲಚ್ಛೇದಸ್ತತೋ ಭವೇತ್ ॥೧೪॥**

**ಕ ಉವಾಚ :—**
**ಏವಂ ನಿಶ್ಚಿತ್ಯ ಮನಸಾ ತತಃ ಶಸ್ತ್ರಮುಪಾದದೇ ।**
**ಯಾವದುಮಾಂ ಹಂತಿ ದುಷ್ಟಃ ತಾವದ್ದೃಷ್ಟಃ ಶಿಶುಃ ಪುರಃ ॥೧೫॥**

ಅಲ್ಲಿಗೆ ಬಂದ ಬಳಿಕ ಸಂದಿ-ಮೂಲೆಗಳಲ್ಲೆಲ್ಲ ಸೂಕ್ಷ್ಮವಾಗಿ ಹುಡುಕಿ ನೋಡಿದನು. ಎಲ್ಲೂ ಬಾಲಕನು ಅವನಿಗೆ ಕಂಡುಬರಲಿಲ್ಲ, ಅತಿಯಾಗಿ ಕೋಪ ಬಂದಿತು ಅಗ್ನಿಯಂತೆ ಉರಿದನು. ಆದರೆ ಅದರಿಂದ ಪ್ರಯೋಜನವೇನು ? ಸ್ವಲ್ಪಮಟ್ಟಿಗೆ ಮನಸ್ಸು ಸ್ಥಿಮಿತಕ್ಕೆ ಬಂದ ಬಳಿಕ ಮನಸ್ಸಿನಲ್ಲೇ ಹೀಗೆಂದು ಆಲೋಚಿಸಿದನು.

ಸಿಂದೂರ :—

ಆಕಾಶವಾಣಿ ನುಡಿದುದು ಎಂದೆಂದಿಗೂ ಸುಳ್ಳಾಗುವುದಿಲ್ಲ. ॥೧೩॥

ಈ ಪಾರ್ವತಿಗೆ ಪುತ್ರನೇನಾದರೂ ಜನಿಸುವುದಾದರೆ, ಅವನು ನನ್ನನ್ನು ಕೊಲ್ಲಬಹುದು. ಅವಳಿಗೆ ಮಗನೇ ಹುಟ್ಟದಂತೆ ಮೊದಲೇ ನಾನು ಮಾಡಿಬಿಟ್ಟರೆ, ಆಗ ಯಾರು ನನ್ನನ್ನು ಕೊಲ್ಲುವರು ? ಆದುದರಿಂದ ಇವಳನ್ನು ಈಗಲೇ ಕೊಂದುಬಿಡುವೆನು. ಬೇರನ್ನು ಛೇದಿಸಿಬಿಟ್ಟರೆ ಅದರಲ್ಲಿ ಫಲ-ಪುಷ್ಪಾದಿಗಳು ಹೇಗೆ ಹುಟ್ಟುವುವು ? ॥೧೪॥

ಬ್ರಹ್ಮಾ: —

ಹೀಗೆಂದು ಮನಸ್ಸಿನಲ್ಲಿ ದೃಢವಾಗಿ ನಿಶ್ಚಯಿಸಿ ನಿಶಿತವಾದ ಶಸ್ತ್ರವನ್ನು ಕೈಗೆ ತೆಗೆದುಕೊಂಡನು. ಇನ್ನೇನು, ಆ ದುಷ್ಟನು ಉಮಾದೇವಿಯನ್ನು ಕೊಂದುಬಿಡಬೇಕು ಎನ್ನುವಷ್ಟರಲ್ಲೇ ಇವನು ಹುಡುಕುತ್ತಲಿದ್ದ ಶಿಶು ಇವನ ಎದುರಿಗೇ ಗೋಚರವಾಯಿತು. ॥೧೫॥

**ಚತುರ್ಭುಜೋಽತಿರುಚಿರೋ ಮುಕುಟಾಂಗದಭೂಷಿತಃ |**
**ಪರಶುಂ ಕಮಲಂ ಮಾಲಾಂ ದಧಂತಂ ಚ ತದದ್ಭುತಮ್ ||೧೬||**

**ಕಟೌ ಶೇಷಂ ಗಲೇ ಹಾರಂ ನೂಪುರೌ ಚಾಂಘ್ರಿಯುಗ್ಮಯೋಃ |**
**ನಿವೃತ್ತಸ್ತದ್ವಧಾತ್ಸದ್ಯಸ್ತಾಂ ಚ ಸುಪ್ತಾಮಮನ್ಯತ ||೧೭||**

**ದಧಾರ ಬಾಲಕಂ ಹಸ್ತೇ ಕಾಂಕ್ಷನ್ಕ್ಷೇಪ್ತುಂ ಮಹೋದಧೌ |**
**ಏವಂ ನಿಶ್ಚಿತಸಂಕಲ್ಪಸ್ತತೋಽಸೌ ಚಕಿತಃ ಪುರಾ ||೧೮||**

**ತತಸ್ಸ ಬಾಲೋ ವವೃಧೇ ಹಿಮಾಚಲ ಇವಾಪರಃ |**

---

ಆ ಶಿಶುವಿಗೆ ನಾಲ್ಕು ಭುಜಗಳಿದ್ದವು. ಬಹಳ ಸುಂದರವಾಗಿದ್ದಿತು, ಆ ಶಿಶುವಿನ ರೂಪ. ಕಿರೀಟ, ಭುಜಕೀರ್ತಿ ಇತ್ಯಾದ್ಯಮೋಘಾಲಂಕರಣವಸ್ತುಗಳಿಂದ ಅಲಂಕೃತವಾಗಿದ್ದಿತು. ಪರಶು, ಕಮಲ ಇವನ್ನು ಕೈಗಳಲ್ಲಿ ಹಿಡಿದಿದ್ದನು. ಸುಗಂಧ ಪುಷ್ಪಗಳಿಂದ ನಿರ್ಮಿತವಾದ ಮಾಲಿಕೆಯನ್ನು ಕೊರಳಿನಲ್ಲಿ ಧರಿಸಿದ್ದನು. ಬಾಲಕನ ಆ ರೂಪವು ಅತ್ಯದ್ಭುತವಾಗಿ ತೋರುತ್ತಲಿದ್ದಿತು. ||೧೬||

ಕಟಿಪ್ರದೇಶಕ್ಕೆ ಮೇಖಲೆಯಂತೆ ಆದಿಶೇಷನನ್ನು ಬಿಗಿದಿದ್ದನು. ಕತ್ತಿನಲ್ಲಿ ಮಣಿಮಯ ಹಾರ, ಕಾಲುಗಳಲ್ಲಿ ಕಾಲಂದಿಗೆಗಳು ಮಾಟಾಗಿ ತೋರುತ್ತಲಿದ್ದವು. ಅಕಸ್ಮಾತ್ತಾಗಿ ಈ ಶಿಶು ಅಸುರನಿಗೆ ಗೋಚರಿಸಿದ ಕೂಡಲೇ ಅವನ ಮನಸ್ಸು ಚಲಿಸಿ ಆ ಬಾಲಕನನ್ನು ನೋಡುವುದರಲ್ಲೇ ಆಸಕ್ತವಾಯಿತಾಗಿ ಪಾರ್ವತಿಯನ್ನು ಕೊಲ್ಲ ಬೇಕೆಂದಿದ್ದ ಅಸುರನ ನಿಶ್ಚಯ ಅಷ್ಟಕ್ಕೇ ನಿಂತುಹೋಯಿತು. ' ಈ ಬಾಲಕನನು ಇಲ್ಲದಂತೆ ಮಾಡಿಬಿಡುವೆನು. ನನ್ನ ಇಷ್ಟ ಶತ್ರುವನ್ನು ಕೊಲ್ಲುವುದು, ಅದು ಸಾಧಿಸಿದರೆ ನಾಕು, ನಿದ್ರಿತಳಾಗಿರುವ ಇವಳನ್ನೇಕೆ ಕೊಲ್ಲಲಿ ? ' ಎಂದು ನಿಶ್ಚಯಿಸಿ ತನ್ನ ಉದ್ಯಮದಿಂದ ನಿವೃತ್ತನಾದನು. ||೧೭||

ಆ ಬಾಲಕನನ್ನು ಸಮುದ್ರದಲ್ಲಿ ಬಿಸುಟುಬಿಡೋಣವೆಂದು ಅಂದುಕೊಂಡು ಅವನನ್ನು ಭದ್ರವಾಗಿ ಕೈಯಲ್ಲಿ ಹಿಡಿದುಕೊಂಡನು. ತಾನು ಇಷ್ಟು ನಿಶ್ಚಿತಸಂಕಲ್ಪನಾಗಿದ್ದರೂ, ಏಕೋ, ಏನೋ ಒಮ್ಮೆಲೆ ಬೆಚ್ಚಿಬಿದ್ದನು. ತನ್ನ ಸ್ಥಿತಿಯನ್ನು ಆಲೋಚಿಸಿಕೊಂಡು ತಾನೇ ಆಶ್ಚರ್ಯವನ್ನು ಪಡಲಾರಂಭಿಸಿದನು. ||೧೮||

ಅವನು ಬಾಲಕನನ್ನು ಹಿಡಿದುದೇ ತಡ, ಚಿಕ್ಕ ಕೂಸಾಗಿದ್ದ ಆ ಬಾಲಕನು 'ಇವನೊಂದು ಹಿಮಾಚಲಪರ್ವತವೋ' ಎಂದು ಭ್ರಮೆಯುಂಟಾಗುವಷ್ಟು ದೀರ್ಘಾಕಾರನಾಗಿ ಬೆಳೆದನು. ಎಳೆಯ ಬಾಲಕನಂತಿದ್ದ ಆ ಶಿಶು ಇದ್ದಕ್ಕಿದ್ದಂತೆಯೇ ಹಿಮವಂತ

ಸಿಂದೂರೋಽಪಿ ಚಕಂಪೇಽಸೌ ಮಹಾಭಾರಾತುರಃ ಕ್ಷಣಾತ್ ||೧೯||

ಶ್ವಾಸಾಕುಲಃ ಪುರೋ ಗಂತುಂ ನ ಶಶಾಕ ಸ್ವ-ಶಕ್ತಿತಃ |
ತತಸ್ತತ್ಯಾಜ ತಂ ಬಾಲಂ ದೈತ್ಯೋ ವಿಹ್ವಲತಾಂಗತಃ ||೨೦||

ಬಾಲೇ ತು ಪತಿತೇ ಭೂಮೌ ಮಹಾರಾವವಿರಾವಿಣಿ |
ಚೇಲುಶ್ಚ ಪರ್ವತಾ ನಾದ್ಯೈಶ್ಚಕಂಪೇ ಚ ವಸುಂಧರಾ ||೨೧||

ಬಭ್ರಮುರ್ವಿಹಗಾ ವ್ಯೋಮ್ನಿ ನಾನಾರಾವವಿರಾವಿಣಃ |
ಅರ್ಣವಾಃ ಕ್ಷೋಭಿತಾಃ ಸಪ್ತ ಬ್ರಹ್ಮಾಂಡಮಪಿ ಪುಸ್ಫುಟೇ ||೨೨||

ಸ ಬಾಲಃ ಪತಿತೋ 'ರೇವಾಜಲಾಂತೇ ಮುನಿಸನ್ನಿಧೌ |

---

ನಂತೆ ಬೆಳೆದುದನ್ನು ನೋಡಿ ಸಿಂದೂರನಂತಹ ಎಸೆಗಾರನಿಗೂ ಎದೆ ನಡುಗಿ ಹೋಯಿತು. ಅವನ ಭಾರವನ್ನು ಒಂದು ಕ್ಷಣ ಕೂಡ ತಡೆಯದಾದನು. ||೧೯||

ಮೇಲುಸಿರು ಮೇಲ್ಮೇಲೆ ಬರತೊಡಗಿತು. ಓಡಿಹೋಗೋಣವೆಂದರೆ, ಒಂದು ಹೆಜ್ಜೆಯನ್ನು ಸಹ ಮುಂದಕ್ಕಿಡುವಷ್ಟು ಶಕ್ತಿ ಅವನ ದೇಹದಲ್ಲಿ ಉಳಿದಿರಲಿಲ್ಲ. ಹೆಚ್ಚು ಕಾಲ ಆ ಬಾಲಕನನ್ನು ತನ್ನ ಕೈಯಿಂದ ಹಿಡಿದಿರುವುದು ಸಹ ಬಹಳ ಅಪಾಯ ಎಂಬುದು ಅಸುರನಿಗೆ ಅರಿವಾದೊಡನೆಯೇ ಮುಕ್ಕರಿಯುತ್ತ ಹಾಗೂ ಹೀಗೂ ಅವನನ್ನು ಕೆಳಕ್ಕೆ ಎತ್ತಿಹಾಕಿಬಿಟ್ಟನು. ಇದರಿಂದಲಂತೂ ಅಸುರನಿಗೆ ಅತಿಯಾಗಿ ಶ್ರಮವೆನಿಸಿತಾದ್ದರಿಂದ ಬಹಳ ಮಟ್ಟಿಗೆ ವಿಹ್ವಲನಾದನು. ||೨೦||

ಬಹಳ ಭಯಂಕರವಾಗಿ ಗರ್ಜಿಸುತ್ತಲಿದ್ದ ಬಾಲಕನು ಭೂಮಿಗೆ ಬಿದ್ದ ಕೂಡಲೇ ಭೂಧರಗಳೆನಿಸಿದ ಕುಲಪರ್ವತಗಳು ಚಲಿಸಿದವು. ಭೂಮಿಯು ಸಹ ಥರ ಥರ ನಡುಗಿತು. ||೨೧||

ಅಲ್ಲಿದ್ದ ನಾನಾಜಾತಿಯ ಪಕ್ಷಿಗಳು ಭಯಾರ್ತವಾಗಿ ಚಿಲಿಪಿಲಿಗುಟ್ಟುತ್ತ ತಮ್ಮ ನೀಡಗಳನ್ನು ಬಿಟ್ಟು ಹೊರಕ್ಕೆ ಬಂದು ಅಂತರಿಕ್ಷದಲ್ಲಿ ರಪ ರಪ ರೆಕ್ಕೆಗಳನ್ನು ಬಡಿಯುತ್ತ ಅತ್ತಿತ್ತ ಹಾರಾಡಿದವು. ಸಪ್ತ ಸಮುದ್ರಗಳೂ ಅಲ್ಲೋಲ-ಕಲ್ಲೋಲಗೊಂಡು ಒಮ್ಮೆಲೆ ಬುರು ಬುರು ಉಕ್ಕಿದವು. ಬ್ರಹ್ಮಾಂಡವು ಆಸ್ಫೋಟಿಸಿತು.||೨೨||

ಭೂಮಿಗೆ ಬಿದ್ದ ಬಾಲಕನು ಉರುಳುತ್ತ ಮುನಿಗಳು ತಪೋನಿರತರಾಗಿ ಕುಳಿತಿದ್ದ ರೇವಾನದೀ ತೀರದ ಸಮೀಪಕ್ಕೆ ಬಂದು ಕೊನೆಗೆ ನದಿಯ ಜಲದ ಮಧ್ಯೇ ಬಿದ್ದುಬಿಟ್ಟನು. ಬಾಲಕನು ಜಲದಲ್ಲಿ ಅಂತರ್ಗತನಾದ ದಿನದಿಂದ ಅದೊಂದು ಪರಮ

---

ಸಂಖ್ಯಾಚಿಸ್ಥತಕ್ಕೆ ವಿವರಣೆಯನ್ನು ಪರಿಶಿಷ್ಟದಿಂದ ತಿಳಿಯಬಹುದು.

ತತ್ರ ತೀರ್ಥಮಭೂಚ್ಛ್ರೇಷ್ಠಂ 'ಗಣೇಶಕುಂಡಮಿ'ತ್ಯತ ||೨೩||

ಅಸ್ಯಾ ಆಜನ್ಮತಃ ಪಾಪಂ ನಾಶಮೇತಿ ಸ್ಮೃತೇಃ ಕ್ಷಣಾತ್ |
ದರ್ಶನಾದ್ದಶಜನ್ಮೀಯಂ ಸ್ನಾನಾಚ್ಚ ಶತಜನ್ಮಜಮ್ ||೨೪||

ಸೇವನಂ ಮೋಕ್ಷದಂ ಯಸ್ಯಾ ಅನುಷ್ಠಾನವತಾಂ ನೃಣಾಮ್ |
ತದ್ದೇಹರುಧಿರಾತ್ತತ್ರ ಪ್ರಸ್ತರಾ ರಕ್ತತಾಂಗತಾಃ ||೨೫||

ತಾ ಏವ ನಾರ್ಮದಾಃ ಖ್ಯಾತಾ ಗಾಣೇಶಾಃ ಪಾಪನಾಶನಾಃ |
ದರ್ಶನಾತ್ಪೂಜನಾತ್ಸರ್ವಕಾಮದಾ ಭಕ್ತಿಕಾರಿಣಾಮ್ ||೨೬||

[1] ನರ್ಮದಾಮಹಿಮಾ ಸರ್ವೋ ವರ್ಣಿತುಂ ನೈವ ಶಕ್ಯತೇ |

ಪಾವನವಾದ ತೀರ್ಥವೆಂದು ಮಾರ್ಪಟ್ಟಿತು. ಅಂದು ಮೊದಲ್ಗೊಂಡು ಅದನ್ನು ಎಲ್ಲರೂ 'ಗಣೇಶಕುಂಡ' ಎಂಬ ಶುಭನಾಮದಿಂದ ಕರೆದರು. ||೨೩||

ರೇವಾ ನದಿಯು ಅಂದಿನಿಂದ ಬಹಳ ಖ್ಯಾತಿಯನ್ನು ಪಡೆಯಿತು. ಆ ನದಿಯನ್ನು ಯಾರು ಸ್ಮರಿಸುವರೋ, ಅವರು ಜನ್ಮಾರಭ್ಯ ಅದುವರೆಗೂ (ಸ್ಮರಣ ಮಾಡುವವರೆಗೂ) ಆಚರಿಸಿದ ಪಾತಕ ಕರ್ಮಗಳೆಲ್ಲ ತತ್ಕ್ಷಣ ನಾಶವನ್ನು ಹೊಂದುವವು. ಆ ನದಿಯನ್ನು ಪ್ರತ್ಯಕ್ಷ ದರ್ಶನ ಮಾಡುವುದಾದರೆ, ಹತ್ತು ಜನ್ಮಗಳಿಂದ ಆಚರಿಸಿ ಸಂಗ್ರಹಿಸಿರಬಹುದಾದ ಪಾತಕಗಳು ನಾಶವಾಗುವುವು. ಅದರಲ್ಲಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡುವುದರಿಂದ ನೂರು ಜನ್ಮಗಳಲ್ಲಿ ಮಾಡಿದ ಪಾತಕಗಳು ನಾಶವನ್ನು ಹೊಂದುವವು. ||೨೪||

ಅನುಷ್ಠಾನರತರಾದ ಪುಣ್ಯಶೀಲ ಮಾನವರು ಆ ನದಿಯ ತೀರದಲ್ಲೇ ವಾಸವಾಗಿದ್ದು ಸರ್ವದಾ ಅದನ್ನು ಸೇವಿಸುತ್ತಿದ್ದರೆ, ಅವರು ಮೋಕ್ಷಸಾಮ್ರಾಜ್ಯಲಕ್ಷ್ಮಿಯನ್ನೇ ಹೊಂದುತ್ತಾರೆ. ಬಾಲರೂಪೀ ದೇವನು ಅದರಲ್ಲಿ ಬೀಳುವಾಗ ಅವನ ದೇಹದಿಂದ ರಕ್ತವು ಚಿಮ್ಮಿ ಸುತ್ತಲೂ ಬಿದ್ದುದರಿಂದ ಆ ನದಿಯ ತೀರದಲ್ಲಿದ್ದ ಕಲ್ಲುಗಳೆಲ್ಲ ಕೆಂಪು ವರ್ಣವುಳ್ಳವಾದವು. ||೨೫||

ಈ ಕಲ್ಲುಗಳಿಗೆ 'ನರ್ಮದಾಬಾಣ' ಎಂದು ಹೆಸರು. ಇವೇ 'ಗಣೇಶ ಪ್ರತೀಕ' ಎಂದು ಪ್ರಖ್ಯಾತಿಯನ್ನು ಪಡೆದವು. ಇವು ಪಾಪನಾಶಕವಾಗಿವೆ ಇವನ್ನು ದರ್ಶನ ಮಾಡುವುದರಿಂದ, ಭಕ್ತಿಯಿಂದ ಪೂಜಿಸುವುದರಿಂದ ಕುಹಕಿಗಳಲ್ಲದ ಭಕ್ತರಿಗೆ ಸಕಲ ಕಾಮನೆಗಳನ್ನೂ ಈಡೇರಿಸಿಕೊಡತಕ್ಕವು. ||೨೬||

ನರ್ಮದಾ ನದಿಯ ಮಹಿಮೆಯನ್ನು ಸಂಪೂರ್ಣವಾಗಿ ವರ್ಣಿಸಲಿಕ್ಕೆ

ಸಂಖ್ಯಾಚಿಹ್ನಿತಕ್ಕೆ ವಿವರಣೆಯನ್ನು ಪರಿಶಿಷ್ಟದಿಂದ ತಿಳಿಯಬಹುದು.

ತತಃ ಸ ಜಹೃಷೇ ದೈತ್ಯೋ " ರಿಪುರ್ಮೇ ನಾಶತಾಂಗತಃ " ॥೨೭॥
ತಾವತ್ಕುಂಡಾತ್ಸಮುದ್ಭೂತೋ ಭೀಷಣಃ ಪುರುಷೋ ಮಹಾನ್ ।
ಜಟಾಭರೇಣ ಸಂಛನ್ನೋ ವಲ್ಲೀಚ್ಛನ್ನೋ [1]ಧರೋ ಯಥಾ ॥೨೮॥
ದಂಷ್ಟ್ರಾಕರಾಲವದನೋ ಜಿಹ್ವಾವ್ಯಾಲೀಸಮಾವೃತಃ ।
ದೀರ್ಘಪಾಣ್ಯಂಘ್ರಿಯುಗಲಃ ಶ್ವಾಸವ್ಯಾಕುಲಲೋಚನಃ ॥೨೯॥
ದೃಷ್ಟ್ವಾ ತಥಾವಿಧಂ ತಂ ತು ಕ್ರೋಧವ್ಯಾಕುಲಲೋಚನಃ ।
ಉವಾಚ ದೈತ್ಯಃ ಸಿಂದೂರೋ
ಸಿಂದೂರ ಉವಾಚ :—
ನ ಚಾಸ್ಯ ಗಣನಾ ಮಮ ॥೩೦॥

ಯಾರಿಂದಲೂ ಸಾಧ್ಯವಿಲ್ಲ. ಇರಲಿ, ಮುಂದಿನ ಕಥೆಯನ್ನು ಕೇಳು. 'ನನ್ನ ಶತ್ರು' ನೀರಿಗೆ ಬಿದ್ದು ಆತ್ಯಂತಿಕವಾಗಿ ನಾಶವನ್ನು ಹೊಂದಿದನು. ಎಂದು ದೃಢವಾಗಿ ನಂಬಿದ ಸಿಂದೂರದೈತ್ಯನು ಬಹಳ ಹರ್ಷವನ್ನು ಹೊಂದಿದನು. ॥೨೭॥

ಇಷ್ಟರಲ್ಲಿ ಮತ್ತೊಂದು ಅದ್ಭುತವಾದ ಪ್ರಸಂಗ ನಡೆಯಿತು. ನದಿಯ ಯಾವ ಸ್ಥಳದಲ್ಲಿ ಬಾಲಕನು ಬಿದ್ದನೋ, ಮತ್ತು ಯಾವುದಕ್ಕೆ 'ಗಣೇಶ ಕುಂಡ ಎಂಬ ಹೆಸರು ಪ್ರಖ್ಯಾತಿಗೆ ಬಂದಿದೆಯೋ, ಅದರೊಳಗಿಂದ ಭೀಷಣಾಕೃತಿಯುಳ್ಳ ಮಹಾಪುರುಷನೊಬ್ಬನು ಉದಿಸಿ ಬಂದನು. ಅವನ ಜಟೆಯು ಕೆದರಿ ದೇಹವನ್ನೆಲ್ಲ ಮುಚ್ಚಿದ್ದರಿಂದ ಬಳ್ಳಿ ಬೆಳೆದು ಪರ್ವತವನ್ನೆಲ್ಲ ಆವರಿಸಿದ್ದರೆ. ಆಗ ಆ ಗುಡ್ಡ ಹೇಗೆ ಕಾಣುವುದೋ, ಅದರಂತೆ ಆ ಮಹಾಪುರುಷನು ಕಾಣುತ್ತಿದ್ದನು. ॥೨೮॥

ಸೀಳವೂ, ನಿಶಿತವೂ ಆದ ಕೋರೆಯ ಹಲ್ಲುಗಳು ಸ್ವಭಾವತಃ ಭೀಕರವಾದ ಆ ಪುರುಷನ ಮುಖವನ್ನು ಮತ್ತಷ್ಟು ಭಯಂಕರಗೊಳಿಸಿದ್ದವು. ಅವನ ನಾಲಿಗೆಯು ಹೆಡೆ ತೆರೆದ ಹಾವಿನಂತೆ ಚಂಚಲವಾಗಿದ್ದಿತು. ಅವನ ಕೈ-ಕಾಲುಗಳು ಅಳತೆ ಮೀರಿ ಉದ್ದವಾಗಿದ್ದವು. ಏದುಸಿರು ಬಿಡುತ್ತಲಿದ್ದುದರಿಂದ ಅವನ ಕಣ್ಣುಗಳು ಕೆರಳಿದ್ದವು. ॥೨೯॥

ಅಂತಹ ವ್ಯಕ್ತಿಯನ್ನು ನೋಡಿದ ಕೂಡಲೇ ಸಿಂದುರನಿಗೆ ಅತಿಯಾಗಿ ಕೋಪ ಬಂದುಬಿಟ್ಟಿತು. ಕೆಂಡದಂತೆ ಕಣ್ಣುಗಳು ಕೆಂಪಾದವು. ಮತ್ತು ಒಂದೆಡೆ ನಿಂದಿರದೆ ಅತ್ತಿತ್ತ ಚಲಿಸಿದವು. ಆಗ ತನ್ನಷ್ಟಕ್ಕೆ ತಾನೇ ಹೀಗೆ ಮಾತನಾಡಿಕೊಂಡನು.

ಸಿಂದುರ :—

ನನ್ನಂತಹ ವೀರನಿಗೆ ಇವನ ಗಣನೆ ಇದ್ದೀತೇ? ॥೩೦॥

[1] 'ಮಹೀಧ್ರೇ ಶಿಖರಿ ಕ್ಷ್ಮಾಭೃದಹಾರ್ಯ ಧರ ಪರ್ವತಾಃ' ಶೈಲವರ್ಗ;

**ಕ ಉವಾಚ :—**

**ಏವಮುಕ್ತ್ವಾ ಖಡ್ಗಹಸ್ತೋ ಯಯೌ ಹಂತುಂ ತು ತಂ ರುಷಾ ।**
**ಖಡ್ಗೇನ ಹಂತಿ ತಂ ಯಾವತ್ತಾವತ್ಸ ದದೃಶೇಽಂಬರೇ ॥೩೦॥**
**ಉವಾಚ ದೈತ್ಯಂ**

**ಪುರುಷ ಉವಾಚ :—**

**ರೇ, ದೈತ್ಯ ! ವೃಥಾ ಮಾಂ ತ್ಯಕ್ತ್ವಾರ್ ಕ್ಷಿತೌ ।**
**ತವಾಂತಕಸ್ತು ರೇ, ಮೂಢ ! ವರ್ಧಿತಃ ಕ್ವಚಿದೇವ ಹಿ ॥೩೧॥**
**ಹನಿಷ್ಯತ್ಯೇವ ನೂನಂ ತ್ವಾಂ ಸಾಧುರಕ್ಷಣತತ್ಪರಃ ।**

**ಕ ಉವಾಚ :—**

**ಅಂತರ್ದಧೇ ತತೋ ಭೀಮ ಏವಮುಕ್ತ್ವಾ ಸ ಪೂರುಷಃ ॥೩೩॥**

ಬ್ರಹ್ಮ:—

ಹೀಗೆ ನುಡಿದು ತನ್ನ ಖಡ್ಗವನ್ನು ವರೆಯಿಂದ ಹಿರಿದು ಬಹಳ ಕೋಪದಿಂದ ಆ ಪುರುಷನನ್ನು ಹನನ ಮಾಡುವುದಕ್ಕೆ ಮುಂದೊರಿದು ಹೋದನು. ಖಡ್ಗವನ್ನು ಅವನ ಮೇಲೆ ಬೀಸುವುದರ ಒಳಗೇ ಆ ಪುರುಷನು ಅಲ್ಲಿಂದ ಅಂತರಿಕ್ಷಕ್ಕೆ ನೆಗೆದು ಅಲ್ಲಿ ಕಾಣಿಸಿಕೊಂಡನು. ॥೩೦॥

ಮತ್ತು ದೈತ್ಯನನ್ನು ಅಣಕಿಸಿ ಗದರಿಸುತ್ತ ಹೀಗೆಂದು ನುಡಿದನು.

ಪುರುಷ:—

ರೇ, ದೈತ್ಯಾಧಮ! ನನ್ನನ್ನು ವ್ಯರ್ಥವಾಗಿ ಭೂಮಿಗೆ ಬಿಸುಟುಬಿಟ್ಟೆ. ನಾನೇ ನಿನ್ನ ಶತ್ರುವಾದ 'ಗಜಾನನ' ಎಂದು ತಿಳಿದಿದ್ದೆಯಲ್ಲವೇ ? ಕೇಳು, ಹೇಳುವೆನು. ನಿನ್ನ ಭಾಗಕ್ಕೆ ಯಮನಂತಿರುವ ನಿನ್ನ ಶತ್ರು; ಗಜಾನನನನ್ನು ಮೂಢ! ಯಾರೋ ಎಲ್ಲಿಯೋ ಬೆಳೆಸುತ್ತಿದ್ದಾರೆ. ॥೩೨॥

ಅವನು ಸಾಮಾನ್ಯನಾದವನಲ್ಲ. ದುಷ್ಟರಾದ ನಿನ್ನಂಥವರನ್ನು ಶಿಕ್ಷಿಸಿ, ಸಾಧು ಸಜ್ಜನರನ್ನು ಪರಿರಕ್ಷಿಸತಕ್ಕ ಪರಮ ಪುರುಷನು. ಅವನು ಸ್ವಲ್ಪ ದೊಡ್ಡವನಾದ ಕೂಡಲೇ ನಿನ್ನನ್ನು ನಿಶ್ಚಯವಾಗಿಯೂ ಹನನ ಮಾಡಿಬಿಡುತ್ತಾನೆ.

ಬ್ರಹ್ಮ:—

ಹೀಗೆ ಹೇಳಿದ ಕೂಡಲೇ ಭೀಷಣಾಕೃತಿಯ ಆ ಮಹಾಪುರುಷನು ಅಂತರಿಕ್ಷದಲ್ಲೇ ಅಂತರ್ಹಿತನಾದನು. ॥೩೩॥

**ತತೋ ದೈತ್ಯೋ ಮಹಾರೋಷಾದುವಾಚ ನಿಜಸೇವಕಾನ್ ।**
**ಸಿಂದೂರ ಉವಾಚ :—**
**ಧ್ರಿಯತಾಂ ಧ್ರಿಯತಾಮೇಷ ಯೇನೋಕ್ತಂ ಪರುಷಂ ವಚಃ ॥೩೪॥**
**ಕ ಉವಾಚ :—**
**ಯದಾ ತಂ ಕ್ವಾಪಿ ನಾಪಶ್ಯತ್ತದಾ ಸ್ವ-ಸ್ಥಾನಮಾಗಮತ್ ।**
**"ಪ್ರಕ್ಷ್ಯಾಮಿ ತಂ ಯದಾ ಶತ್ರುಂ ಜಯಿಷ್ಯ" ಇತ್ಯಮನ್ಯತ ॥೩೫॥**
**ಏತಾವಚ್ಚರಿತಂ ತಸ್ಯ ಪಾರ್ವತ್ಯಾ ಜ್ಞಾಯಿ ನೈವ ತತ್ ।**
**ತಸ್ಯೈವ ಮಾಯಯಾಮೋಹೇನ ಪ್ರಾಪ್ತಯಾ ಮೋಹಮುತ್ತಮಮ್ ॥೩೬॥**
**ತತಃ ಪ್ರೋವಾಚ ಗಿರಿಶಂ ಪಾರ್ವತೀ ವಿನಯಾನ್ವಿತಾ ।**

ಆಗ ಸಿಂದೂರ ದೈತ್ಯನಿಗೆ ಮಿತಿಮೀರಿ ಕೋಪ ಉಂಟಾಯಿತು. ಕೂಡಲೇ ತನ್ನ ಸೇವಕ ಜನರನ್ನು ಕುರಿತು ಹೀಗೆ ನುಡಿದನು.

ಸಿಂದೂರ :—

ಹಿಡಿದುಕೊಳ್ಳಿರೋ ಅವನನ್ನು, ಬಿಡಬೇಡಿ, ಹಿಡಿಯಿರಿ. ಏನೇನೋ ಕಟು ವಾಗಿ ಮಾತನಾಡುತ್ತಲಿದ್ದಾನೆ. ॥೩೪॥

ಬ್ರಹ್ಮಾ :—

ಎಲ್ಲೆಲ್ಲಿ ಹುಡುಕಿ ನೋಡಿದರೂ ಆ ದಂಷ್ಟ್ರಾಕರಾಳನು ಕಣ್ಣಿಗೆ ಕಾಣಿಸದಿರಲು ಮುಂದೆ ಏನನ್ನು ಮಾಡಲೂ ತಿಳಿಯದೆ, ನೆಟ್ಟಗೆ ತನ್ನ ಸ್ಥಳಕ್ಕೆ ಹೊರಟುಬಿಟ್ಟನು. ಆದರೆ ಅಸುರನಿಗೆ ಒಗರು ಇನ್ನೂ ಹೋಗಿರಲಿಲ್ಲ. 'ನನ್ನ ಶತ್ರುವನ್ನು ಸೋಲಿಸಿದ ಬಳಿಕ ಈ ಹೊಲಸು ಮಾತಿನ ಮಲ್ಲನನ್ನು ನೋಡಿಕೊಳ್ಳುತ್ತೇನೆ.' ಎಂದು ಗೊಣ ಗುಟ್ಟುತ್ತ ನಿರ್ಧರಿಸಿಕೊಂಡನು. ॥೩೫॥

ಇಷ್ಟೆಲ್ಲ ಭೀಕರ ಘಟನೆಗಳು ಅಲ್ಲೀ ನಡೆದಿದ್ದಾಗ್ಯೂ ಈ ಪೈಕಿ ಯಾವುದೊಂದು ಸುದ್ದಿಯೂ ಸಿದ್ರಿತಳಾಗಿದ್ದ ಪಾರ್ವತೀದೇವಿಗೆ ಅರಿವಾಗಲಿಲ್ಲ. ಇದಾವುದೂ ಅರಿಯ ದಂತಾದುದೂ ಭಗವಾನ್ ಗಜಾನನನ ಮಾಯೆ ಅವಳನ್ನು ಮುಸುಕಿದುದೇ ಕಾರಣ. ದೇವನು ಬೇಕೆಂತಲೇ ಅವಳನ್ನು ಆ ರೀತಿ ಮುಗ್ಧಳನ್ನಾಗಿ ಮಾಡಿದ್ದನು. ॥೩೬॥

ಸಿಂದೂರನು ಇದ್ದಲ್ಲಿಗೆ ಬಂದುದು, ಮುಂದೆ ನಡೆದ ಘಟನೆ ಇತ್ಯಾದಿ ಗಳಿಂದಾಗಿ ಆ ಸ್ಥಳದ ವಾತಾವರಣವೆಲ್ಲ ಒಂದು ರೀತಿಯಿಂದ ಕಲುಷಿತವಾಗಿದ್ದಿತು. ವಿಷಯವೇನೆಂಬುದು ಹೈಮವತಿಗೆ ಸ್ಪಷ್ಟವಾಗಿ ಗೊತ್ತಾಗದಿದ್ದರೂ ಪ್ರದೇಶದ ಪಾವಿ ತ್ರ್ಯಕ್ಕೆ ಏನೋ ಒಂದು ಬಗೆಯ ಉಪಹತಿಯುಂಟಾಗಿದೆ ಎಂಬುದು ಅವಳು ನಿದ್ರೆಯಿಂ

ಪಾರ್ವತ್ಯುವಾಚ :—

ಅತ್ರ ಪೀಡಾ ದೈತ್ಯಕೃತಾ ಸ್ಯಾರಬ್ಧಾ ಜಗದೀಶ್ವರ ! ||೩೭||

ಕೈಲಾಸಂ ಗಂತುಮಿಚ್ಛಾಮಿ ತವೇಚ್ಛಾ ಚೇನ್ನಯಸ್ವ ಮಾಮ್ ।

ಕ ಉವಾಚ :—

ಏವಮಾಕರ್ಣ್ಯ ತದ್ವಾಕ್ಯಂ ಜಹೃಷೇ ಶಂಕರೋಽಪಿ ಚ ||೩೮||

ಆರುಹ್ಯ ನಂದಿನಂ ಸದ್ಯಃ ಪಾರ್ವತ್ಯಾ ಸಹ ಶಂಕರಃ ।
ಸಪ್ತಕೋಟಿಗಣಾಕೀರ್ಣಃ ಕೈಲಾಸಂ ಪ್ರಾಪ ತತ್ಕ್ಷಣಾತ್ ||೩೯||

ಪ್ರವಿಶ್ಯ ಸ್ವಾಲಯಂ ಗೌರೀ ಪರಮಂ ಹರ್ಷಮಾಯಯೌ ||೪೦||

---

ದೆಚ್ಚರಗೊಂಡ ಕೂಡಲೇ ಭಾಸವಾಯಿತು. "ಇದು ರಾಕ್ಷಸರ ಕಾಟದ ಪ್ರಾರಂಭ ದೃಶ್ಯವಿರಬಹುದೆಂ"ದು ಊಹಿಸಿದಳು. ಆಗ ತನ್ನ ಪತಿಯನ್ನು ಕುರಿತು ವಿನಯಸ್ವರ, ಶಬ್ದಗಳಿಂದ ಹೀಗೆಂದು ನುಡಿದಳು.

ಪಾರ್ವತೀ :—

ಜಗದೀಶ್ವರ! ಈ ಪ್ರದೇಶವೂ ದೈತ್ಯರ ಕಾಟಕ್ಕೆ ಬಲಿಯಾಗಲಿದೆ ಎಂಬ ಸೂಚನೆ ಕಂಡುಬರುತ್ತಲಿದೆ, ||೩೭||

ಆದುದರಿಂದ ಇನ್ನು ಮುಂದೆ ಇಲ್ಲಿ ವಾಸವಾಗಿರಲು ನನಗೇಕೋ ಬೇಡ ಎನಿಸಿದೆ. ಕೈಲಾಸಕ್ಕೆ ಹೋಗೋಣವೆಂದು ಬಯಸುತ್ತೇನೆ. ಇದು ನಿನಗೂ ಸಮ್ಮತವೆನಿಸಿದರೆ, ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗು

ಬ್ರಹ್ಮಾ :—

ಈ ಮಾತುಗಳನ್ನು ಕೇಳಿದ ಕೂಡಲೇ ಪರಮೇಶ್ವರನು ಪರಮ ಹರ್ಷಿತನಾದನು. ||೩೮||

ಒಡನೆಯೇ ನಂದಿಯನ್ನು ತನ್ನ ಬಳಿಗೆ ಬರಮಾಡಿಕೊಂಡು, ಪಾರ್ವತಿಯೊಡನೆ ಅದರ ಮೇಲೆ ಹತ್ತಿ ಕುಳಿತನು. ಏಳು ಕೋಟಿ ಪ್ರಮಥ ಗಣದವರನ್ನೂ ಸಂಗಡ ಕರೆದುಕೊಂಡು ಪ್ರಯಾಣ ಹೊರಟು, ಒಂದು ಕ್ಷಣದೊಳಗಾಗಿಯೇ ಕೈಲಾಸಗಿರಿಯನ್ನು ತಲುಪಿದನು. ||೩೯||

ತನ್ನ ಮನೆಯನ್ನು ಪ್ರವೇಶಿಸಿದ ಬಳಿಕ ಗೌರೀದೇವಿಗೆ ಬಹಳ ಮಟ್ಟಿಗೆ ನೆಮ್ಮದಿ ಎನಿಸಿತು. ಅತಿಯಾಗಿ ಹರ್ಷಿತಳಾದಳು. ||೪೦||

**ಇತಿ ಶ್ರೀ ಗಣೇಶಪುರಾಣೇ ಉತ್ತರಖಂಡೇ "ಶಿವ ಪಾರ್ವತ್ಯೋಃ ಕೈಲಾಸಾಭಿಗಮನಂ" ನಾಮ ದ್ವಾತ್ರಿಂಶದುತ್ತರ ಶತತಮೋಽಧ್ಯಾಯಃ**

ಇಲ್ಲಿಗೆ ಶ್ರೀ ಗಣೇಶಪುರಾಣದ ಉತ್ತರಖಂಡದಲ್ಲಿ "ಶಿವ-ಪಾರ್ವತಿಯರು ಕೈಲಾಸ ಗಿರಿಗೆ ಹಿಂದಿರುಗಿ ಬಂದುದು" ಎಂಬಲ್ಲಿಗೆ ನೂರ ಮೂವತ್ತೆರಡನೆಯ ಅಧ್ಯಾಯಾನುವಾದವು ಮುಗಿದುದು.

ಮುಂದಿನ ಸಂಪುಟದ ಆದಿಮ ಶ್ಲೋಕ :

**ವ್ಯಾಸ ಉವಾಚ :—**

**ಪುಷ್ಪಿಕಾನಿಕಟೇ ತ್ಯಕ್ತ್ವೋ ವರೇಣ್ಯಸ್ಯ ಗೃಹೇ ಸ ಕಿಮ್ ।**
**ಚಕಾರ ತನ್ಮಮಾಚಕ್ಷ್ವ ಕಾರ್ಯಂ ವಿಸ್ತರತೋಽಬ್ಜಜ ! ॥೧॥**

॥ ಶ್ರೀ ಗಣೇಶಾಯ ನಮಃ ॥

**೭ನೆಯ ಸಂಪುಟ**

# ಪರಿಶಿಷ್ಟ

ಪುಟ ೧೨೪ :—

**ಪರಾಶರ :—**

ವಸಿಷ್ಠ ಪುತ್ರನಾದ 'ಶಕ್ತಿ' ಮಹರ್ಷಿಯಿಂದ 'ಅದೃಶ್ಯಂತೀ' ಎಂಬಾಕೆಯಲ್ಲಿ ಜನಿಸಿದವ. ಈತನು ಮಾತೃಗರ್ಭದಲ್ಲಿರುವಾಗ ಇವನ ತಂದೆ ಶಕ್ತಿಯನ್ನು ಒಬ್ಬ ರಾಕ್ಷಸನು ಕೊಂದು ತಿಂದ. ಇವನು ಗರ್ಭದಲ್ಲಿರುವಾಗಲೇ ವೇದವನ್ನು ಪಠಿಸುತ್ತಿದ್ದನು. ವಸಿಷ್ಠನು ಇದನ್ನರಿತು ಇವನಿಗೆ 'ಪರಾಶರ' ಎಂದು ಅನ್ವರ್ಥವಾದ ಹೆಸರನ್ನಿಟ್ಟನು. ಎಂದರೆ ಸಂತತಿ ವಿಚ್ಛೇದವಾಯಿತೆಂದು ಜೀವಿತದ ಆಶೆಯನ್ನೇ ತ್ಯಜಿಸಿದ್ದ ತನಗೆ ಆಶ್ವಾಸನವನ್ನಿತ್ತವನಾದುದರಿಂದ ಈ ಹೆಸರನ್ನಿಟ್ಟು ತನ್ನ ಪೌತ್ರನನ್ನು ಮಹರ್ಷಿಯು ಕರೆದನು.

**ಪರಾಶಸ್ಸ ಯತಸ್ತೇನ ವಸಿಷ್ಠಃ ಸ್ಥಾಪಿತೋ ಮುನಿಃ ।**
**ಗರ್ಭಸ್ಥೇನ ತತೋ ಲೋಕೇ 'ಪರಾಶರ' ಇತಿ ಸ್ಮೃತಃ ॥**

(ಭಾರತ, ಆದಿ ; ೧೯೪, ಸಭಾ ; ೭)

ಪರಾಸ್ತಾ-ಆಶಾ, ಯಸ್ಯ-ಸಃ = ಪರಾಶಃ (ಯಾವನಿಂದ ಆಶೆಗಳೆಲ್ಲ ದೂರವಾಗಿವೆಯೋ, ಅಂಥವನಿಗೆ ಪರಾಶರ ಎಂದು ಹೆಸರು) ಅಥವಾ ಪರಾಶಂ ರಾತಿ, ಸ್ವಕಾರ್ಯ ತತ್ಪರಂ ಕರೋತೀತಿ ಪರಾಶಃ (ಅಥವಾ ಯಾರು ಪರರನ್ನು ಕಾರ್ಯ ತತ್ಪರರನ್ನಾಗಿ ಮಾಡುವನೋ ಅಂಥವನಿಗೆ ಪರಾಶರನೆಂದು ಹೆಸರು.)

ತನ್ನ ತಂದೆಯಾದ ಶಕ್ತಿಯನ್ನು ರಾಕ್ಷಸನು ನುಂಗಿದನೆಂಬ ಸಿಟ್ಟಿನಿಂದ ಪರಾಶರನು ಲೋಕವಿನಾಶಾರ್ಥವಾಗಿ ಯಜ್ಞವನ್ನು ಮಾಡಲಾರಂಭಿಸಲು ಇವನ ಅಜ್ಜ ವಸಿಷ್ಠನು ಬಂದು 'ಯತ್ರಾಪರಾಧಃ ಖಲು ತತ್ರ ದಂಡಃ', ಎಂದು ನೀತಿಯನ್ನು ಬೋಧಿಸಲು, ಅದರಂತೆ ಇವನು ರಾಕ್ಷಸರ ನಾಶಕ್ಕಾಗಿ ಯಜ್ಞವನ್ನು ಮಾಡಲು ಆರಂಭಿಸಿದುದು. ಶಿವ

ಮಾಹಾತ್ಮ್ಯ, ಬ್ರಾಹ್ಮಣಾದಿ ಚಾತುರ್ವರ್ಣಿಗಳಿಗೂ, ಬ್ರಹ್ಮಚರ್ಯಾದ್ಯಾಶ್ರಮಿಗಳಿಗೂ ಅನುಷ್ಠೇಯ ಧರ್ಮಗಳು, ಯತಿಶುಶ್ರೂಷೆಯ ಪ್ರಶಂಸೆ, ಮರಣ ಸೂಚಕ ಚಿಹ್ನೆಗಳು, ಪುಣ್ಯ-ಪಾಪಗಳಿಗೆ ಅನುರೂಪಲೋಕಪ್ರಾಪ್ತಿ, ಮೋಕ್ಷಸಾಧನ ಪ್ರಯತ್ನ ಇತ್ಯಾದಿಗಳನ್ನೆಲ್ಲ ವಿವರಿಸಿದ್ದು. ಈ ಮೇಲ್ಕಂಡ ಅಂಶಗಳನ್ನು ಭಾರತದ ಆದಿಪರ್ವ ೧೯೪-೧೯೭ ಆನುಶಾಸನಿಕಪರ್ವ ೪೯, ೧೪೬ ೧೪೯, ೧೫೦-೧೫೨. ; ಲಿಂಗಪುರಾಣ ೬೪; ವಿಷ್ಣುಪುರಾಣಗಳಿಂದ ತಿಳಿಯಬಹುದಾಗಿದೆ.

ಜನಕ ಮಹಾರಾಜನೊಂದಿಗೆ ಶ್ರೇಯಃಸಾಧನೆಯ ವಿಷಯವಾಗಿ ವಾದಮಾಡಿ ತಪಸ್ಸು, ಧರ್ಮ, ಮನುಷ್ಯ ಜನ್ಮ ಸಾರ್ಥಕ್ಯ ಇತ್ಯಾದಿಗಳನ್ನು ಪ್ರಶಂಸಿಸಿದುದು. ಈ ಅಂಶಗಳು ಭಾರತದ ಶಾಂತಿ ಪರ್ವದ ೨೯೬–೩೦೪ರ ವರೆಗಿನ ಅಧ್ಯಾಯಗಳಿಂದ ಅರಿಯಬಹುದು. ಈ ಭಾಗವನ್ನೇ 'ಪರಾಶರ ಗೀತೆ' ಎಂದು ಕರೆಯುತ್ತಾರೆ.

ಇವನು ತೀರ್ಥಯಾತ್ರಾ ವ್ಯಾಜದಿಂದ ಭೂ-ಮಂಡಲವನ್ನೆಲ್ಲ ಸುತ್ತುತ್ತ ಯಮುನಾನದಿಯ ಬಳಿಗೆ ಬರುವಲ್ಲಿ ಅಂಬಿಗನು ಊಟಕ್ಕೆ ಕುಳಿತಿದ್ದನು. ನದಿಯನ್ನು ದಾಟಿಸಲು ವಿಲಂಬವಾದರೆ ಋಷಿ ಶಾಪವನ್ನು ಕೊಟ್ಟಾನೆಂದು ಹೆದರಿ, ಆ ಕೆಲಸವನ್ನು ತನ್ನ ಮಗಳಾದ 'ಮತ್ಸ್ಯಗಂಧಿ'ಗೆ ವಹಿಸಲು, ಅವಳು ಋಷಿಯನ್ನು ದಾಟಿಸುತ್ತಿದ್ದಾಗ ಮಹಾಪುರುಷನೊಬ್ಬನು ತನ್ನಿಂದ ಹುಟ್ಟಬೇಕಾದ ಸುಮುಹೂರ್ತವು ಸನ್ನಿಹಿತವಾದುದನ್ನರಿತು ಮುನಿಯು ತನ್ನ ತಪೋಮಹಿಮೆಯಿಂದ ಮತ್ಸ್ಯಗಂಧಿಯನ್ನು 'ಯೋಜನಗಂಧಿ'ಯನ್ನಾಗಿಯೂ, ಅವಳ ಕನ್ಯಾತ್ವಕ್ಕೆ ಭಂಗಬರದಂತೆಯೂ, ಸರ್ವಾಭರಣಭೂಷಿತೆಯಾಗಿರುವಂತೆಯೂ ಮಾರ್ಪಡಿಸಿ, ಆಕೆಯಲ್ಲಿ ಸದ್ಯೋಗರ್ಭದಿಂದ ನದಿಯ ಮಧ್ಯೆ ಪುತ್ರನನ್ನು ಪಡೆದನು. ಇವನೇ 'ದ್ವೈಪಾಯನ ಅಥವಾ ವೇದವ್ಯಾಸ' ಎಂದು ಪ್ರಸಿದ್ಧನಾದನು. ಪರಾಶರನು ಗೋತ್ರಪ್ರವರ್ತಕ ಮಹರ್ಷಿಗಳ ಪೈಕಿ ಒಬ್ಬನು. ಈ ಅಂಶಗಳನ್ನು ಭಾರತದ ಆದಿಪರ್ವದ ೬೪; ಮತ್ಸ್ಯಪುರಾಣ ೨೦೦ ನೆಯ ಅಧ್ಯಾಯಗಳಿಂದ ತಿಳಿಯಬಹುದಾಗಿದೆ.

ಪುಟ ೧೮೦ :

**ಬೃಂದೆ :—**

ಇವಳು 'ಕಾಲನೇಮಿ' ಎಂಬ ರಾಕ್ಷಸನ ಮಗಳು. 'ಜಲಂಧರ' ಎಂಬ ರಾಕ್ಷಸರಾಜನ ಹೆಂಡತಿ. ಪರಮ ಪತಿವ್ರತಾ ಶಿರೋಮಣಿ. ಇವಳ ಪತಿಯೂ, ಕಾಮರೂಪಿಯೂ ಆದ ಜಲಂಧರನು ಒಮ್ಮೆ ಪಾರ್ವತೀದೇವಿಯ ಸೌಂದರ್ಯಕ್ಕೆ ಮರುಳಾಗಿ ಪರಶಿವನಂತೆ ರೂಪವನ್ನುಧರಿಸಿ, ದೇವಿಯ ಮಾನವನ್ನುಭಂಗಪಡಿಸಲು ಯತ್ನಿಸಿದಾಗ

ಸರ್ವಜ್ಞಳಾದ ಸರ್ವಮಂಗಳೆಗೆ ಈ ವಿಷಯವು ತಿಳಿದು, ಅವನನ್ನು ಹುಂಕಾರದಿಂದ ಹಿಂದಕ್ಕಟ್ಟಿ 'ಇಂತಹ ದುಷ್ಟರಿದ್ದರೆ ಪ್ರಾಣಿಗಳ ಮಾನಕ್ಕೆತುಂಬ ಧಕ್ಕೆಯುಂಟಾಗುವುದೆ'ಂದು ನಿಶ್ಚಯಿಸಿ, ಇವನು ಸಾಯುವಂತಾಗಬೇಕಾದರೆ ಇವನ ಹೆಂಡತಿಯು ಪರಪುರುಷಾಸಕ್ತಳಾಗುವಂತೆ ಮಾಡಬೇಕೆಂದು ಮಹಾವಿಷ್ಣುವನ್ನು ಪ್ರಾರ್ಥಿಸಲು, ಇದಕ್ಕೆ ತಕ್ಕ ಸಮಯವನ್ನು ದೇವನು ನಿರೀಕ್ಷಿಸುತ್ತಲಿದ್ದನು. ಉನ್ಮತ್ತನಾದ ಜಲಂಧರನು ಎಲ್ಲರೊಂದಿಗೆ ಯುದ್ಧಮಾಡಿದಂತೆ ಪರಶಿವನ ಮೇಲೆಯೂ ಯುದ್ಧವನ್ನುಮಾಡಲಾರಂಭಿಸಿದಾಗ, ಒಂದು ರಾತ್ರಿ, ಅವನ ಹೆಂಡತಿ ಬೃಂದೆಯು 'ತನ್ನ ಗಂಡನು ಕೋಣದ ಮೇಲೆ ಕುಳಿತು ದಕ್ಷಿಣದಿಗಭಿಮುಖನಾಗಿ ಪ್ರಯಾಣ ಹೊರಟಂತೆಯೂ, ಅವನ ರಾಜಧಾನಿ ದಹಿಸಿಹೋದಂತೆಯೂ ದುಸ್ಸ್ವಪ್ನವನ್ನು ಕಂಡು ಭೀತಳಾಗಿ, ವ್ಯಥೆಯಿಂದ ಕಾಡಿಗೆ ಹೋಗಿ ಹುಚ್ಚಿಯ ಹಾಗೆ ಸಂಚರಿಸುತ್ತಿದ್ದಾಗ ' ಇದೇ ತಕ್ಕ ಸಮಯವೆಂ'ದು ಭಾವಿಸಿ ಮಹಾವಿಷ್ಣು ವೃದ್ಧ ತಾಪಸನಂತೆ ವೇಷವನ್ನು ಧರಿಸಿ, ಇವಳು ತಿರುಗಾಡುತ್ತಿದ್ದ ಕಾಡಿನಲ್ಲಿ ದೊಡ್ಡ ಮರ ಒಂದರ ಕೆಳಗೆ ಕುಳಿತನು. ಸರಳ ಸ್ವಭಾವದವಳೂ, ದುಶ್ಶಕುನ ದೂಯಿತಮಾನಸಳೂ ಆದ ಬೃಂದೆಯು ಆ ವೃದ್ಧ ತಾಪಸನ ಸಮೀಪಕ್ಕೆ ಬಂದು ' ನನ್ನ ಪತಿ ಕ್ಷೇಮದಿಂದಿರುವನೇ? ಹೇಳಬೇಕು ' ಎಂದು ಪ್ರಶ್ನಿಸಲು, ಸ್ವಲ್ಪ ಕಾಲ ಚಿಂತಿಸಿದಂತೆ ನಟಿಸಿದ ವೃದ್ಧ ತಪಸ್ವಿಯು ' ನಿನ್ನ ರಮಣನು ಮರಣವನ್ನು ಹೊಂದಿದನು ' ಎಂದು ನುಡಿಯಲು, ಅವಳು ಮೂರ್ಛೆಗೊಂಡುದು. ಆಗ ಋಷಿಯು ಶೈತ್ಯೋಪಚಾರಗಳಿಂದ ಅವಳನ್ನು ಎಚ್ಚರಗೊಳಿಸಲು ' ತಾವು ಮಹಾಮಹಿಮರು. ಹೇಗಾದರೂ ಪ್ರಯತ್ನಿಸಿ, ನನ್ನ ಪತಿಯನ್ನು ಬದುಕಿ ಬರುವಂತೆ ಮಾಡಲಾರಿರಾ ? ಎಂದು ಅಂಗಲಾಚಿ ಬೇಡಿದಳು. ' ಹಾಗೆಯೇ ಆಗಲಿ ' ಎಂದು ವಿಷ್ಣು ಹೇಳಿ, ಅಲ್ಲಿದ್ದ ಕೊಳ ಒಂದರಲ್ಲಿ ಸ್ನಾನವನ್ನು ಮಾಡಿ, ಮೇಲೇಳುವಾಗ ಜಲಂಧರನ ರೂಪವನ್ನು ಧರಿಸಿ ಬೃಂದೆಯೊಂದಿಗೆ ರಮಿಸಿ ಅವಳ ಪಾತಿವ್ರತ್ಯವನ್ನು ಭಂಗಪಡಿಸಿದನು. ಕೂಡಲೇ ಜಲಂಧರನು ಮೃತನಾಗಲು ಅವನ ಶಿರಸ್ಸು ಇವಳ ಮುಂದೆ ಬಂದು ಬಿದ್ದಿತು. ಆಗ ಮರ್ಮವನ್ನರಿತ ಬೃಂದೆಯು ' ನೀನೂ ಭಾರ್ಯಾವಿಯೋಗದಿಂದ ದುಃಖಿಸು 'ಎಂದು ವಿಷ್ಣುವನ್ನು ಶಪಿಸಿ, ತಾನು ಹುತಾಶನನಿಗಾಹುತಿಯಾದಳು ಎಂಬ ಕಥೆಯು ಶಿವಪುರಾಣದ ಯುದ್ಧಖಂಡದ ೧೪ನೆಯ ಅಧ್ಯಾಯದಲ್ಲಿ ಬಂದಿದೆ. ಆದರೆ ಬೃಂದೆಯು ಗಿಡವಾಗಿ ಮಾರ್ಪಟ್ಟ ಸಂಗತಿ ಈ ಪ್ರಕರಣದಲ್ಲಿರುವುದಿಲ್ಲ. ಈ ಚರಿತ್ರೆಯು ಪುರಾಣಾಂತರದಲ್ಲಿ ಎಂದರೆ ದೇವೀ ಭಾಗವತ ೯, ೧೭–೨೫ ರಲ್ಲಿ ಮತ್ತೊಂದು ಬಗೆಯಾಗಿ ನಿರೂಪಿತವಾದುದನ್ನು ಈ ಕೆಳಗೆ ವಿವರಿಸಿದೆ.

ಮಹಾಲಕ್ಷ್ಮಿಯು ಕಾರಣಾಂತರದಿಂದ ಹಂಸಧ್ವಜನ ಮಗನಾದ ಧರ್ಮಧ್ವಜನಿಗೆ ಅವನ ಹೆಂಡತಿ ಮಾಧವಿಯಲ್ಲಿ ಮಗಳಾಗಿ ಜನಿಸಿದಳು. ಪ್ರಾಕ್ತನ ಸಮ್ಯಜ್ಞಾನ ಮಹಿಮಾವಿಶೇಷದಿಂದ ಮಹಾವಿಷ್ಣುವನ್ನು ಆರಾಧಿಸಬೇಕೆಂಬ ಸದಿಚ್ಛೆ ಅವಳಿಗೆ

ಬಾಲ್ಯದಲ್ಲೇ ಉಂಟಾಗಲು, ಬದರಿಕಾಶ್ರಮಕ್ಕೆ ತೆರಳಿ ಬ್ರಹ್ಮದೇವನನ್ನು ತಪದಿಂದ ಮೆಚ್ಚಿಸಲು, 'ನಿನ್ನ ಕೋರಿಕೆಯಂತೆಯೇ ಆಗುವುದು. ಆದರೆ ನೀನು ಗಿಡವಾಗುವೆ' ಎಂದು ಹೇಳಿದನು. ಇಷ್ಟರಲ್ಲಿ ದಂಭಾಸುರನ ಮಗನಾದ ಶಂಖಚೂಡನು 'ಜೈಗೀಷವ್ಯ' ಮುನಿಯಿಂದ ವಿಷ್ಣುಮಂತ್ರವನ್ನು ಉಪದೇಶ ಪಡೆದು, ಪುಷ್ಕರಕ್ಷೇತ್ರದಲ್ಲಿ ತಪಿಸಿ ಸಿದ್ಧಿಯನ್ನು ಹೊಂದಿದನು. ಶಂಖಚೂಡ, ತುಲಸೀ ಇವರಿಬ್ಬರೂ ಅಕಸ್ಮಾತ್ತಾಗಿ ಸಂಧಿಸಿ ಮಾತನಾಡುತ್ತಿರುವಷ್ಟರಲ್ಲಿ ನಾರದಮುನಿ ಅಲ್ಲಿಗೆ ಬಂದು ತುಲಸಿಯನ್ನು ಕುರಿತು 'ನಿನಗೆ ಶಂಖಚೂಡನೇ ಪತಿಯಾಗಲು ತಕ್ಕ ವರ. ಇವನಿಗೆ ನೀನೇ ಅನುರೂಪಳಾದ ವಧು' ಎಂದು ತಮ್ಮ ಅಭಿಪ್ರಾಯವನ್ನು ಹೇಳಲು, ಇಬ್ಬರೂ ಒಪ್ಪಿ ವಿವಾಹವಾದರು. ತನಗೆ ಲಭಿಸಿದ ಮಂತ್ರಸಿದ್ಧಿಯನ್ನು ದುರ್ವಿನಿಯೋಗಪಡಿಸಲುದ್ಯುಕ್ತನಾದ ಶಂಖಚೂಡನು ದೇವತೆಗಳೊಂದಿಗೆ ಹೋರಾಡಿ ಸತ್ತುಹೋದನು. ಆಗ ಮಹಾವಿಷ್ಣು ಶಂಖಚೂಡನ ರೂಪವನ್ನು ಧರಿಸಿ ತುಲಸಿಯ ಬಳಿಗೆ ಬಂದು 'ದೇವತೆಗಳನ್ನೆಲ್ಲ ಸೋಲಿಸಿ ಬಂದೆ' ಎಂದು ಹೇಳಿ ಅವಳನ್ನು ನಂಬಿಸಿ, ಅವಳೊಡನೆ ರಮಿಸಿದನು. ಕೆಲವೊಂದು ನಡೆವಳಿಕೆಗಳಿಂದ 'ಇವನು ನನ್ನಪತಿಯಲ್ಲ, ನಾನು ಮೋಸಕ್ಕೊಳಗಾದೆ' ಎಂದು ತಿಳಿದು, ತುಲಸಿಯು ದೂರ ಸರಿದು ನಿಲ್ಲಲು, ವಿಷ್ಣು ನಿಜರೂಪವನ್ನು ತೋರಿ, 'ತಾನೇ ಶಂಖಚೂಡನೆಂತಲೂ, 'ತುಲಸಿಯನ್ನು ಮದುವೆಯಾಗುವುದಕ್ಕಾಗಿಯೇ ತಪಿಸಿದೆನೆಂ'ತಲೂ ಹೇಳಿ ಸಮಾಧಾನಪಡಿಸಲು, ಅವಳು ಒಡನೆಯೇ ಗಿಡವಾಗಿ ಮಾರ್ಪಟ್ಟಳು.

ವಿಮರ್ಶಕರು ಇದನ್ನು ವಿಚಾರಮಾಡಿ ಗ್ರಹಿಸಬಹುದಾಗಿದೆ.

ಪುಟ ೩೯೯ :

**1) ಕೃಪಃ :—**

ಗೌತಮ ಮಹರ್ಷಿಯ ವಂಶಜನಾದ ಶರದ್ವಂತ ಎಂಬ ಮುನಿ ತಪೋನಿರತನಾಗಿದ್ದಾಗ, ಇಂದ್ರನು ಅವನ ತಪಃಪ್ರಾಬಲ್ಯವನ್ನು ಕುಗ್ಗಿಸಲು 'ಜಾಲವತೀ' ಅಥವಾ 'ಜಾನಪದೀ' ಎಂಬ ಹೆಸರಿನ ಸುಂದರಳಾದ ಅಪ್ಸರೆಯನ್ನು ಪ್ರೇರಿಸಿ, ಅವನಲ್ಲಿಗೆ ಕಳಿಸಿದನು. ಶರದ್ವಂತನು ಆಕೆಯನ್ನುಕಂಡು ಮೋಹಗೊಳ್ಳಲಾಗಿ ಅವನ ವೀರ್ಯವು ಸ್ಖಲಿಸಿ ಶರವನದಲ್ಲಿ ಬಿದ್ದಿತು. ಮುನಿಗೆ ಕೂಡಲೇ ತನಗುಂಟಾದ ವ್ಯಾಮೋಹ ಅರಿವಾಗಲು ಅವನು ಅದಕ್ಕಾಗಿ ಪಶ್ಚಾತ್ತಾಪಗೊಂಡು ಪ್ರಾಯಶ್ಚಿತ್ತವನ್ನು ಚಿಂತಿಸಲು ಎಲ್ಲಿಯೋ ಹೊರಟು ಹೋದನು. ಋಷಿಯ ವೀರ್ಯದಿಂದ ಒಂದು ಗಂಡು ಹಾಗೂ ಒಂದು ಹೆಣ್ಣು ಹೀಗೆ ಅವಳಿಮಕ್ಕಳುಜನಿಸಿದರು. ಬೇಟೆಯಾಡಲು ಹೊರಟಿದ್ದ ಶಂತನುಚಕ್ರವರ್ತಿಯು ಆವೇಳೆಗೆಸರಿಯಾಗಿ ಅಲ್ಲಿಗೆಬಂದನು. ಆಗಿನ್ನೂಜನಿಸಿ ಪೋಷಕರಿಲ್ಲದೆ ಚಳಿ-ಗಾಳಿಗಳಿಗೆ

ಗುರಿಯಾಗಿದ್ದ ಆ ಮಕ್ಕಳನ್ನು ಕೃಪೆಯಿಂದ ಕರೆದು ತಂದು ತಾನು ಪೋಷಿಸಿದನು. ಗಂಡಿಗೆ "ಕೃಪ" ಎಂದೂ, ಹೆಣ್ಣಿಗೆ "ಕೃಪಿ" ಎಂದೂ ಹೆಸರನ್ನಿಟ್ಟನು. ಕೆಲ ಕಾಲ ಕಳೆದ ಬಳಿಕ ಶರದ್ವಂತನು ಶಂತನು ಚಕ್ರವರ್ತಿಯ ಸಮೀಪಕ್ಕೆ ಬಂದು, ಅವರಿಬ್ಬರೂ ತನ್ನ ಮಕ್ಕಳೆಂದು ಹೇಳಿ ಕೃಪನಿಗೆ ಉಪನಯನಾದಿ ಬ್ರಾಹ್ಮಣೋಚಿತ ಸಂಸ್ಕಾರಗಳನ್ನು ನೆರವೇರಿಸಿ ವೇದವಿದ್ಯೆಯೊಂದಿಗೆ ಧನುರ್ವಿದ್ಯಾ ರಹಸ್ಯಗಳನ್ನೂ ಉಪದೇಶಿಸಿ, ಅಸ್ತ್ರ ವಿದ್ಯಾ ವಿಶಾರದನನ್ನಾಗಿ ಮಾಡಿದನು. ಬಳಿಕ ಕೃಪಾಚಾರ್ಯನು ಪಾಂಡವರಿಗೂ ಕೌರವರಿಗೂ ಧನುರ್ವಿದ್ಯಾಗುರುವಾಗಿದ್ದನು. ಆತನು ರುದ್ರ ಗಣಾಂಶ ಸಂಭೂತನು. ಶಂತನುವಿನ ತರುವಾಯ ಭೀಷ್ಮರ ಆಶ್ರಯದಲ್ಲೇ ಇದ್ದು ಪಾಂಡವರ ವಿಷಯದಲ್ಲಿ ಅಭಿಮಾನಭರಿತನಾಗಿದ್ದರೂ, ಭೀಷ್ಮಾದಿಗಳಂತೆ ಕೌರವರ ಪಕ್ಷದಲ್ಲೇ ಇದ್ದನು. ಉತ್ತರ ಗೋ-ಗ್ರಹಣ ಸಂದರ್ಭದಲ್ಲಿ ಕರ್ಣನನ್ನು ಬಹಳವಾಗಿ ನಿಂದಿಸಿದನು. ಭಾರತ ಯುದ್ಧದಲ್ಲಿ ಕೌರವರ ಪರವಾಗಿ ಯುದ್ಧಮಾಡಿ ಕೌರವನ ಅನ್ನದ ಋಣವನ್ನು ಮುಟ್ಟಿಸಿದನು. ದ್ರೋಣನು ಮಡಿದ ತರುವಾಯ ಕೌರವ ಸೇನಾಧಿಪತ್ಯವನ್ನು ನಿರ್ವಹಿಸಲು ತನ್ನ ಸೋದರಳಿಯ ಅಶ್ವತ್ಥಾಮನೇ ಸಮರ್ಥನೆಂದೂ, ಕರ್ಣನಿಗೆ ಈ ಕಾರ್ಯದಲ್ಲಿ ಸರ್ವಥಾ ಯೋಗ್ಯತೆ ಸಾಲದೆಂದೂ ವಾದಿಸಿದನು. ಮಹಾಭಾರತದ ಯುದ್ಧಾನಂತರ ಯುಧಿಷ್ಠಿರನು ರಾಜ್ಯಾಭಿಷಿಕ್ತನಾದಾಗ ಕೃಪಾಚಾರ್ಯನು ಆತನ ಆಶ್ರಯದಲ್ಲೇ ಇದ್ದನು. ಇತ್ಯಾದಿ ವಿವರಗಳನ್ನು ಭಾರತದ ಆದಿಪರ್ವ ೬೪, ೬೮, ೧೩೯, ೧೪೦; ವಿರಾಟಪರ್ವ ೪೯-೫೦, ದ್ರೋಣಪರ್ವ ೧೪೯ ಮತ್ತು ೧೫೯ ಕರ್ಣಪರ್ವ ೧.೭; ಸೌಪ್ತಿಕಪರ್ವ ೪; ಸ್ತ್ರೀಪರ್ವ ೧೧; ಭಾಗವತ ೯, ೨೧; ಗಳಿಂದ ತಿಳಿಯಬಹುದು.

2) ದ್ರೌಣಿಃ :—

ದ್ರೋಣಾಚಾರ್ಯರಿಂದ "ಕೃಪಿ" ಎಂಬುವಳಲ್ಲಿ ಜನಿಸಿದ ವೀರ. ಮಹಾ ಪ್ರತಾಪಶಾಲಿ, ಕೇವಲ ಚಪಲಚಿತ್ತನೂ ಪರಮಮುಂಗೋಪಿಯೂ, ಹುಂಬನೂ ಆಗಿದ್ದುದರಿಂದ ಭಾರತ ಯುದ್ಧದಲ್ಲಿ ಇವನಿಗೆ ಯಾವ ವಿಧವಾದ ಹೊಣೆಗಾರಿಕೆಯ ಕೆಲಸವೂ ದೊರೆಯಲಿಲ್ಲವಾದರೂ ಕೊನೆಗೆ ಮೃತ್ಯುವಿನ ದವಡೆಯೊಳಗೆ ಸಿಕ್ಕು ನೇಲುಗಣ್ಣಿನಲ್ಲಿದ್ದ ತನ್ನ ಪ್ರಭು ದುರ್ಯೋಧನನು ಕೊಸೆಯುಸಿರೆಳೆಯುತ್ತಿದ್ದಾಗಲೇ ಅವನಿಗೆ ಪ್ರಿಯತರ ಕೆಲಸವನ್ನು ಮಾಡಿ ತೋರಿಸಲು ಯತ್ನಿಸಿದಾಗ ಪಾಂಡವರಿಗೆ ಬದಲಾಗಿ ಅವರ ಮಕ್ಕಳು ಇವನ ಕೋಪಕ್ಕೆ ಬಲಿಯಾಗಲು, ಯಾರು ಎಷ್ಟು ವಿಧದಿಂದ ಉಪದೇಶಿಸಿದರೂ ಕೇಳದೆ ಕೇಡಿಗತನದಿಂದ ಇಷೀಕಾಸ್ತ್ರವನ್ನು ಪ್ರಯೋಗಿಸಿದನು, ಕೊನೆಗೆ ಅರ್ಜುನನಿಂದ ಪರಾಭೂತನಾಗಿ ತನ್ನ ತಲೆಯಲ್ಲಿ ತನ್ನೊಡನೆ ಜನಿಸಿ ಬಂದಿದ್ದ ಶಿರೋರತ್ನವನ್ನು ಕಳೆದುಕೊಂಡು ಭೂ-ಪ್ರದಕ್ಷಿಣೆಗಾಗಿ ಹೊರಟುಹೋದನು. ಅವನು ಚಿರಂಜೀವಿ. ರುದ್ರಾವತಾರಿಯೂ, ಮಹಾ ವೀರಾಗ್ರಣಿಯೂ, ಅತೃಪ್ತಜೀವಿಯೂ ಆದ ಅಶ್ವತ್ಥಾ

ಮಾಚಾರ್ಯರು ಪ್ರಸಂಗದಲ್ಲಿ ಭಾರತ ಪುರಾಣ ಪ್ರವಚನವು ಎಲ್ಲೆಲ್ಲಿ ನಡೆಯುವುದೋ, ಅಲ್ಲೆಲ್ಲ ಸನ್ನಿಹಿತರಾಗಿರುವರೆಂಬ ಪ್ರತೀತಿ ಇಂದಿಗೂ ಇದೆ. ಅವರಿಗಾಗಿ ಪ್ರತ್ಯೇಕ ವಾಗಿ ಆಸನವನ್ನಿರಿಸುವರು. "ಕುಮಾರವ್ಯಾಸ" ಎನಿಸಿದ ಗದುಗಿನ ನಾರಣಪ್ಪನು ಅಶ್ವತ್ಥಾಮರನ್ನು ಸಂದರ್ಶಿಸಿದ್ದನೆಂದೂ, ಅವರ ಅನುಗ್ರಹ ವಿಶೇಷದಿಂದಲೇ ವ್ಯಾಸ ಭಾರತವನ್ನು ಕನ್ನಡ ಪದ್ಯರೂಪವಾಗಿ ರಚಿಸಿದನೆಂದೂ ತಿಳಿದವರು ಹೇಳುತ್ತಾರೆ.

ಪುಟ ೪೮೭.—

**ಪಂಚ ಮಹಾ ಯಜ್ಞಗಳು:—**

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಮ್ ।
ಹೋಮೋ ದೈವೋ ಬಲಿರ್ಭೌತೋ ನೃಯಜ್ಞೋಽತಿಥಿಪೂಜನಂ ॥

(1) ಬ್ರಹ್ಮಯಜ್ಞ (ವೇದವನ್ನು ಅಧ್ಯಯನ ಮಾಡುವುದು ಹಾಗೂ ಅರ್ಹರಾದ ಸು-ಸಂಸ್ಕೃತ ಶಿಷ್ಯರಿಗೆ ಪಾಠ ಹೇಳುವುದು)

(2) ಪಿತೃಯಜ್ಞ (ಅನ್ನದಿಂದಾಗಲಿ, ಅಥವಾ ಜಲದಿಂದಾಗಲಿ ಪಿತೃಗಳಿಗೆ ತೃಪ್ತಿ ಯನ್ನುಂಟುಮಾಡುವುದು.)

(3) ದೈವಯಜ್ಞ (ಅಗ್ನಿಹೋತ್ರಾದಿ ಶ್ರೌತ-ಸ್ಮಾರ್ತ ಕರ್ಮಗಳು.)

(4) ಭೂತಯಜ್ಞ (ಭೂತತೃಪ್ತಿಗಾಗಿ ಕೊಡುವ ಅನ್ನ ಬಲಿ ಅರ್ಥಾತ್ 'ವೈಶ್ವದೇವ')

(5) ನೃಯಜ್ಞ (ಅತಿಥಿಸತ್ಕಾರ.)

ಈ ಐದು ಯಜ್ಞಗಳನ್ನು ಪ್ರತಿಯೊಬ್ಬ ಗೃಹಸ್ಥನೂ ಆಚರಿಸಬೇಕು. ಇವು ಹಿಂಸಾಕೃತ್ಯಕ್ಕೆ ಪ್ರಾಯಶ್ಚಿತ್ತರೂಪವಾದುವು. ಸಸ್ಯಾಹಾರಿಗೆ ಹಿಂಸಾದೋಷ ಸಂಭ ವಿಸುವ ಪ್ರಸಂಗವೇ ಇಲ್ಲ ಎಂಬುದಾಗಿ ಆಕ್ಷೇಪ ಬರಬಹುದು.

ಪಂಚಸೂನಾ ಗೃಹಸ್ಥಸ್ಯ ಚುಲ್ಲೀ ಪೇಷಣ್ಯುಪಸ್ಕರಃ

ಕಂಡನೀ ಚೋದಕುಂಭಶ್ಚ ಬಧ್ಯತೇ ಯಾಸ್ತು ವಾಹಯನ್ ॥

ಒಲೆ ಹೊತ್ತಿಸುವಾಗ, ಪದಾರ್ಥಗಳನ್ನು ಅರೆಯುವಾಗ, ಕಸ ಗುಡಿಸಿ ಮನೆ ಯನ್ನು ಸಾರಿಸುವಾಗ, ಧಾನ್ಯಗಳನ್ನು ಕುಟ್ಟುವಾಗ, ಹಾಗೂ ನೀರನ್ನು ತಂದು ಶೇಖರಿಸುವಾಗ ಕಣ್ಣಿಗೆ ಕಾಣಿಸದಂತಹ ಕೋಟ್ಯವಧಿ ಕ್ರಿಮಿಗಳು ನಮಗೆ ತಿಳಿಯದೇ ಸತ್ತುಹೋಗುವುವು. ಈ ಬಗೆಯ ಪ್ರಾಣಿವಧಾ ರೂಪ ಪಾತಕಗಳಿಗೆ ಪ್ರಾಯಶ್ಚಿತ್ತ ರೂಪವಾಗಿ ಪಂಚ ಮಹಾ ಯಜ್ಞಗಳು ಪ್ರತಿಯೋರ್ವ ಗೃಹಸ್ಥನಿಗೂ ವಿಹಿತವಾಗಿವೆ.

ಪಂಚೈತಾನ್ ಯೋ ಮಹಾಯಜ್ಞಾನ್ ನ ಹಾಪಯತಿ ಶಕ್ತಿತಃ ।

ಸ ಗೃಹೇಽಪಿ ವಸನ್ ನಿತ್ಯಂ ಸೂನಾದೋಷೈರ್ನ ಲಿಪ್ಯತೇ ॥

ಯಥಾಶಕ್ತಿ ಮೇಲ್ಕಂಡ ಪಂಚಮಹಾಯಜ್ಞಗಳನ್ನು ಪ್ರತಿದಿನ ತಪ್ಪದೇ ಮಾಡುತ್ತಲಿದ್ದರೆ, ಅವನಿಗೆ ಈ ಹಿಂಸಾ ದೋಷಗಳ ಲೇಪ ಇರುವುದಿಲ್ಲ.

(ಮನುಸ್ಮೃತಿಃ, ಅಧ್ಯಾಯ ೩, ಶ್ಲೋಕಗಳು ೬೮ ರಿಂದ ೭೧ ರ ವರೆಗೆ)

೫೦೦ ನೆಯ ಪುಟ ;—

**(೧) ಸರ್ವಸಹಾ :—**

"ಸರ್ವಂಸಹಾ" ವಸುಮತೀ ವಸುಧೋರ್ವೀ ವಸುಂಧರಾ (ಭೂವರ್ಗ, ೩ ನೆಯ ಶ್ಲೋಕ) ಭೂಮಿಗೆ ಇರುವ ಇಪ್ಪತ್ತೇಳು ಹೆಸರುಗಳ ಪೈಕಿ ಇದೂ ಒಂದು.

**(೨) ಅರಿಷ್ಟಗೃಹ :—**

' ಗರ್ಭಾಗಾರಂ ವಾಸಗೃಹಮರಿಷ್ಟಂ ಸೂತಿಕಾಗೃಹಮ್ ।

(ಪುರವರ್ಗ ; ೮ ನೆಯ ಶ್ಲೋಕ)

ಪುಟ ೫೦೩ :—

**ರೇವಾ :—**

ನರ್ಮದಾ ನದಿಯ ಮತ್ತೊಂದು ಹೆಸರು.

ಪುಟ ೫೦೪ —

**ನರ್ಮದಾ :—**

ಇದು ಒಂದು ಜೀವನದಿ. ಅಮರಕಂಟಕ ಪರ್ವತದಿಂದ ಹುಟ್ಟುತ್ತದೆ. ಅಮರಕಂಟಕ ಪರ್ವತಕ್ಕೆ "ಮೇಕಲಕ" ಎಂಬುದು ನಾಮಾಂತರ. ಈ ಕಾರಣದಿಂದ ನರ್ಮದೆಗೆ "ಮೇಕಲಕನ್ಯೆ" ಎಂದು ಹೆಸರು ಬಂದಿದೆ. ನರ್ಮದೆ ಎಂಬುದು ಈ ನದಿಯ ಅಭಿಮಾನಿ ದೇವತೆಗೂ ಸಲ್ಲುವುದು. ಇಕ್ಷ್ವಾಕು ವಂಶದ "ದುರ್ಯೋಧನ" ಎಂಬ ಅರಸನಿಗೆ ಶಾಪವಿಶೇಷದಿಂದ ಇವಳು ಹೆಂಡತಿಯಾಗಿದ್ದಳು. ಇದರ ಬಗ್ಗೆ ವಿವರಣೆಯನ್ನು ತಿಳಿಯಲಪೇಕ್ಷಿಸುವವರು, ಭಾರತ ಸಭಾಪರ್ವ ೯, ವನಪರ್ವ ೮೦, ೮೭, ಭೀಷ್ಮಪರ್ವ ೯, ಅನುಶಾಸನಪರ್ವ ೨; ಮತ್ಸ್ಯ ೧೦೩, ೧೮೯ ; ಪದ್ಮ ಪುರಾಣ ೧-೧೩ ಅಧ್ಯಾಯಗಳನ್ನು ಪರಿಶೀಲಿಸಬಹುದು.